ಸಂಚಿಕೆ 2 / ಜುಲೈ 2021
ಚಾತುರ್ಮಾಸಿಕ / ಕನ್ನಡ ಆವೃತ್ತಿ / ಬೆಂಗಳೂರು



Azim Premji University

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

# ಲರ್ನಿಂಗ್ ಕರ್ವ್

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಒಂದು ಪ್ರಕಟಣೆ

## ಪ್ರತಿಯೊಂದು ಮಗುವೂ ಕಲಿಯಬಲ್ಲದು ಭಾಗ 2

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ‘ಲರ್ನಿಂಗ್ ಕರ್ವ್’, ಶಿಕ್ಷಣವನ್ನು ಕುರಿತ ಪ್ರಕಟಣೆಯಾಗಿದ್ದು ಸಾರ್ವಕಾಲಿಕ ಮಹತ್ವವುಳ್ಳ ಮತ್ತು ಮೌಲ್ಯವುಳ್ಳ ಸಾಂದರ್ಭಿಕ ಹಾಗು ನಿರ್ದಿಷ್ಟ ವಿಷಯಾಧಾರಿತ ಚರ್ಚಾ ವಿಷಯಗಳನ್ನು ಶಿಕ್ಷಕರು, ಶಿಕ್ಷಕ ಶಿಕ್ಷಕರು, ಶಾಲಾ ಮುಖ್ಯಸ್ಥರು, ಶಿಕ್ಷಣಾಧಿಕಾರಿಗಳು, ಶಿಕ್ಷಣ ಕಾರ್ಯಕರ್ತರು, ಪೋಷಕರು ಹಾಗು ಸರ್ಕಾರೇತರ ಸಂಸ್ಥೆಗಳಿಗೆ ತಲುಪಿಸುವ ಮಹತ್ತರ ಆಶಯವನ್ನು ಹೊಂದಿದೆ. ಇದು ವಿಭಿನ್ನ ಅಭಿಪ್ರಾಯಗಳನ್ನು ಮತ್ತು ದೃಷ್ಟಿಕೋನಗಳನ್ನು ವ್ಯಕ್ತಪಡಿಸಲು ವೇದಿಕೆಯನ್ನು ಒದಗಿಸುವುದೇ ಅಲ್ಲದೆ ಹೊಸ ಹೊಸ ಮತ್ತು ತಜ್ಞ ವಿಚಾರಧಾರೆಗಳನ್ನು, ಆಲೋಚನೆಯನ್ನು ಪ್ರಚೋದಿಸುವ ದೃಷ್ಟಿಕೋನಗಳನ್ನು ಹಾಗು ನವೀನ ಬೋಧನಾ ವಿಧಾನಗಳ ಕಥನಗಳನ್ನು ಹಂಚಿಕೊಳ್ಳಲು ಉತ್ತೇಜಿಸುತ್ತದೆ. ಶೈಕ್ಷಣಿಕ ರಂಗದ ಈ ವಿಚಾರ ಮಂಥನದಲ್ಲಿ ಶೈಕ್ಷಣಿಕ ಜ್ಞಾನ ಮತ್ತು ಪ್ರಾಯೋಗಿಕ ಅನುಭವಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಯತ್ನ ನಮ್ಮದಾಗಿದೆ.

# ಸಂಪಾದಕರ ಮಾತು



ಹಲವು ಕಾರಣಗಳಿಗೆ ನಮಗೆ ಖುಷಿ ನೀಡಿದ ಸಂಚಿಕೆಯಿದು. ಮೊದಲನೆಯದಾಗಿ 'ಪ್ರತಿ ಮಗುವು ಕೂಡ ಕಲಿಯಬಲ್ಲದು' ಎಂಬ ಹೇಳಿಕೆಗೆ ಅದ್ಭುತವಾದ ಪ್ರತಿಕ್ರಿಯೆಗಳು ಲಭ್ಯವಾಗಿವೆ. ನಮ್ಮ ನಿರೀಕ್ಷೆಗಿಂತ ಹೆಚ್ಚಿನ ಲೇಖನಗಳು ಬಂದಿವೆ. ಇವಕ್ಕೆಲ್ಲ ಪುಷ್ಟಿ ನೀಡುವಂತೆ, ಮಕ್ಕಳಿಗೆ ಕಲಿಕಾ ಪ್ರಕ್ರಿಯೆಯ ಸಂದರ್ಭದಲ್ಲಿ ಮತ್ತು ಬಳಿಕ ತಕ್ಕುದಾದ ಪ್ರೋತ್ಸಾಹ, ಬೆಂಬಲ, ಗೌರವ ಮತ್ತು ಘನತೆಯನ್ನು ನೀಡಿದರೆ ಅವರು ಕಲಿಯಬಲ್ಲರು ಮತ್ತು ನಿಶ್ಚಿತವಾಗಿ ಕಲಿಯುವಂತೆ ಮಾಡಬಹುದು. ಇಂತಹ ಒಂದು ಚಿಂತನೆಯೇ ಭಾಗ-2ರ ಸೃಷ್ಟಿಗೆ ಪ್ರೇರಣೆಯಾಗಿದೆ ಮತ್ತು ಈ ಸಂಚಿಕೆಯನ್ನು ಈ ವಿಷಯಕ್ಕಾಗಿಯೇ ಮೀಸಲಿಡಲಾಗಿದೆ.

ಎರಡನೆಯದಾಗಿ ಮಕ್ಕಳು ಕಲಿಯುತ್ತಿರುವಂತೆ ಅವರಿಗೆ ಕಲಿಸುವ ಹಿರಿಯರು ಕೂಡ ಕಲಿಯುತ್ತ ಹೋಗುತ್ತಾರೆ ಎಂಬುದು ನಮ್ಮ ಶಿಕ್ಷಕರುಗಳು ಕಂಡುಕೊಂಡಿರುವ ವಿಷಯವಾಗಿದೆ. ಒಂದು ಪರಿಕಲ್ಪನೆ ಅಥವಾ ಚಿಂತನೆಯನ್ನು ಹೆಚ್ಚು ಸುಲಭವಾಗಿ ಮತ್ತು ಎಲ್ಲರನ್ನೂ ಒಳಗೊಳ್ಳುವಂತೆ ಹೇಗೆ ಮಾಡಬಹುದು ಎಂಬ ಯೋಚನೆ ಶಿಕ್ಷಕರಿಗೆ ಹೊಸ ಹೊಳಹನ್ನು ನೀಡಿದೆ ಎಂಬುವುದು ಎರಡೂ ಸಂಚಿಕೆಗಳ ಲೇಖನಗಳಲ್ಲಿ ಪದೇಪದೇ ಸಾಬೀತಾಗಿರುವ ಅಂಶವಾಗಿದೆ. ಹಾಗಾಗಿ ಕಲಿಕೆ ಎನ್ನುವುದು ಎರಡೂ ದೃಷ್ಟಿಯಿಂದ ಲಾಭದಾಯಕವೇ ಆಗಿದೆ.

ಮೂರನೆಯದಾಗಿ, ಕಲಿಕೆಯನ್ನು ಸಾದರಪಡಿಸುವ ರೀತಿಯಲ್ಲಿಯೂ ಸಾಮಾನ್ಯದಿಂದ ನಿರ್ದಿಷ್ಟ ಅಂಶದವರೆಗೆ ವೈವಿಧ್ಯತೆಗಳಿರುವುದನ್ನು ನಾವು ಕಾಣಬಹುದು. ಕಲಿಕೆಯನ್ನು ಸಾಧ್ಯವಾಗಿಸಲು ಎಂತಹ ಹಿನ್ನೆಲೆಯ ಅಗತ್ಯವಿದೆ ಎಂಬುದರ ಬಗ್ಗೆ ನಮ್ಮ ಮುಖ್ಯ ಲೇಖನಗಳು ವಿಶಾಲವಾದ ಚಿತ್ರವನ್ನು ನೀಡುತ್ತವೆ. ಇದರಲ್ಲಿ ಬುಡಕಟ್ಟು ಮಕ್ಕಳ ಒಂದು ಗುಂಪು ತಮ್ಮದೇ ಒಂದು ಸಂಸ್ಕೃತಿ ಮತ್ತು ಭಾಷೆಯನ್ನು ಸುಧಾರಿಸಿರುವುದು, ಆ ಕಲಿಕೆಯ ಅತ್ಯಂತ ಮಹತ್ವದ ಭಾಗವಾದ ಆತ್ಮಾಭಿಮಾನದ ಮೌಲ್ಯವನ್ನು ಅರ್ಥ ಮಾಡಿಕೊಳ್ಳುವುದು ತರಗತಿ ಕೊಠಡಿ ಹಾಗೂ ಶಾಲೆಯ ಕಾಠಿಣ್ಯವನ್ನು ದೈಹಿಕವಾಗಿ ನಿಭಾಯಿಸಲು ಮಕ್ಕಳಿಗೆ ಸೂಕ್ತ ಪೌಷ್ಟಿಕಾಂಶವೂ ಲಭ್ಯವಾಗಬೇಕು ಎನ್ನುವುದು ಕೂಡ ಒಳಗೊಂಡಿದೆ. ಈಗಾಗಲೇ ಕಲಿಕೆಯಲ್ಲಿ ಒಂದು ಹಂತವನ್ನು ಮುಗಿಸಿ ಶಾಲೆಗೆ ಬಂದಿರುವ ಮಕ್ಕಳು ಮುಂದಿನ ಕಲಿಕೆಯ ಮಟ್ಟವನ್ನು ಹೇಗೆ ಉನ್ನತಮಟ್ಟಕ್ಕೆ ಏರಿಸಿಕೊಳ್ಳಬಹುದು ಎಂಬುವುದನ್ನು ಇನ್ನೊಂದು ಲೇಖನ ಚರ್ಚಿಸುತ್ತದೆ. ಹೊಸತನವನ್ನು ಹುಟ್ಟುಹಾಕುವುದು ಮತ್ತು ಅದನ್ನು ಸುಸ್ಥಿರಗೊಳಿಸುವುದು ಹಾಗೂ ಸಾರ್ವತ್ರಿಕಗೊಳಿಸುವಲ್ಲಿನ ಕಠಿಣ ಪರಿಶ್ರಮ, ಅದರ 25 ವರ್ಷಗಳ ಅನುಭವ, ಪ್ರಯೋಗಶೀಲತೆ, ಪರ್ಯಾಲೋಚನೆಗಳು, ಬೆಂಬಲ ಹಾಗೂ ವಿಧಾನಕ್ರಮಗಳ ನಿರಂತರ ಬದಲಾವಣೆ- ಇವೆಲ್ಲವನ್ನೂ ಇನ್ನೊಂದು ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯದಾಗಿ ಕಲಿಕಾ ಪ್ರಕ್ರಿಯೆಯಲ್ಲಿ ಮಕ್ಕಳ ದೈಹಿಕ, ಮಾನಸಿಕ ಮತ್ತು ಭಾವನಾತ್ಮಕ ಸಾಮರ್ಥ್ಯಗಳು ನಿಕಶಕ್ಕೆ ಒಡ್ಡಲ್ಪಡುತ್ತವೆ. ಒಟ್ಟಾರೆ ವಿಧಾನದಲ್ಲಿ ವಿಚಾರಪೂರ್ಣವಾದ ಬದಲಾವಣೆಗಳನ್ನು ಮಾಡಿಕೊಳ್ಳುವುದರಿಂದ ಮಕ್ಕಳನ್ನು ತರಗತಿ ಚಟುವಟಿಕೆಗಳಲ್ಲಿ ಭಾಗಿಯಾಗುವಂತೆ ಹೇಗೆ ಮಾಡಬಹುದು ಎಂಬುದನ್ನು ಶಿಕ್ಷಕರು ತಮ್ಮ ಅನುಭವಗಳ ಮೂಲಕ ಹಂಚಿಕೊಂಡಿದ್ದಾರೆ.

ಅತಿಯಾದ ಲಿಂಗ ತಾರತಮ್ಯದ ಸಮಸ್ಯೆಯ ಬಗ್ಗೆ ಚರ್ಚಿಸುವ ಲೇಖನಗಳೂ ಈ ಸಂಚಿಕೆಯಲ್ಲಿವೆ; ಈ ಬಗ್ಗೆ ಮುಕ್ತವಾದ ಚರ್ಚೆ ನಡೆಯದೇ ಹೋದರೆ ಅದು ಯಾರ ಗಮನಕ್ಕೂ ಬಾರದಿರುವ ಸಾಧ್ಯತೆಗಳಿವೆ. ಅಲ್ಪಸಂಖ್ಯಾತ ಗುಂಪುಗಳಿಗೆ ಕಲಿಕೆಯನ್ನು ಲಭ್ಯವಾಗುವಂತೆ ಮಾಡುವಲ್ಲಿ ಪ್ರಯತ್ನಗಳು ನಡೆಯಬೇಕು ಮತ್ತು ಶಾಲೆಯಲ್ಲಿ ಈ ಗುಂಪಿನ ಮಕ್ಕಳಿಗೆ ಹೊಸ ಲೋಕ ತೆರೆದುಕೊಳ್ಳಬೇಕು ಎಂಬುದನ್ನು ಇಲ್ಲಿನ ಲೇಖನಗಳು ಕಣ್ಣು ತೆರೆಸುತ್ತವೆ. ಸಂಪೂರ್ಣ ಸಹಭಾಗಿತ್ವ ಮತ್ತು ವ್ಯಕ್ತಿಗತವಾಗಿ ತೊಡಗಿಸಿಕೊಳ್ಳುವುದರ ಮೂಲಕ ಕಲಿಕೆಯನ್ನು ಲಭ್ಯವಾಗುವಂತೆ ಮಾಡಿದ ಯಶಸ್ವಿ ಪ್ರಯತ್ನಗಳನ್ನು ಕೂಡ ಲೇಖಕರು ಇಲ್ಲಿ ಪ್ರಸ್ತಾಪಿಸಿದ್ದಾರೆ. ಬಲ್ಲವರ ಭಾಷೆ ಎಂದೇ ಬಹಳ ಹಿಂದಿನಿಂದ ಗೌರವಿಸಲಾಗುವ ಇಂಗ್ಲಿಷ್ ಕಲಿಕೆಯೂ ಒಂದು ಕಲೆ ಎನ್ನುವುದು ಸಾಬೀತಾಗಿದ್ದು, ಸಮರ್ಪಕ ಪರಿಕರ ಮತ್ತು ವಿಧಾನಗಳಿದ್ದರೆ ಇದನ್ನು ಸುಲಭವಾಗಿ ಕಲಿಯಬಹುದಾಗಿದೆ. ಓದುವ ಮೂಲಕ ಭಾಷೆಯನ್ನು ಕಲಿಯುವ ಸಂಭ್ರಮವೇ ಬೇರೆ. ಅದು ವಿಭಿನ್ನವಾದ ವಾತಾವರಣವನ್ನೇ ಅನ್ವೇಷಿಸುವ ಉತ್ಸಾಹವನ್ನು ನಮ್ಮ ಮುಂದೆ ತೆರೆದಿಡುತ್ತದೆ ಎಂಬ ಅಭಿಪ್ರಾಯವನ್ನು ಇನ್ನೊಂದು ಲೇಖನ ವ್ಯಕ್ತಪಡಿಸುತ್ತದೆ.

ಈ ಪ್ರಕ್ರಿಯೆಯಲ್ಲಿ ಮಕ್ಕಳು ಔಪಚಾರಿಕ ಶಿಕ್ಷಣವನ್ನು ಪಡೆಯುವ ಬದಲು ಕಲಿಕೆಯಲ್ಲಿ ತಮ್ಮನ್ನು ಸಂತಸದಿಂದ ತೊಡಗಿಸಿ-ಕೊಳ್ಳುತ್ತಾರೆ ಎನ್ನುವುದು ಮೊದಲ ಭಾಗದಲ್ಲಿ ನಾವು ವ್ಯಕ್ತಪಡಿಸಿದಂತೆ ವೇದ್ಯವಾಗುವ ಸಂಗತಿಯಾಗಿದೆ. ಕಲಿಕೆ ಎಂದರೆ ಸ್ವಯಂ-ನಂಬಿಕೆ, ಮೌಲ್ಯವನ್ನು ಪಡೆದುಕೊಳ್ಳುವುದು,

ಅಗತ್ಯವಿರುವ ಬೆಂಬಲವನ್ನು ಪಡೆದುಕೊಳ್ಳುವುದು ಮತ್ತು ಇನ್ನೊಬ್ಬರಲ್ಲಿ ಇರುವ ಯೋಚನೆಗಳನ್ನು, ಚಿಂತನೆಗಳನ್ನು ಪಡೆದುಕೊಳ್ಳುವ ನಿಟ್ಟಿನಲ್ಲಿ ಇಲ್ಲದೇ ಇರುವ ಭರವಸೆಯನ್ನು ತುಂಬುವುದು–ಇವೆಲ್ಲವೂ ಕಲಿಕೆ ಮತ್ತು ಅನುಭವಗಳನ್ನು ಶ್ರೀಮಂತಗೊಳಿಸುವುದೇ ಆಗಿದೆ. ಕಲಿಕೆಯ ಶೈಲಿಗಳು ಕೂಡ ಭಿನ್ನವೇ ಆಗಿರುತ್ತವೆ. ಈ ಹಿನ್ನೆಲೆಯಲ್ಲಿ ಒಬ್ಬನ ವೈಯಕ್ತಿಕವಾದ ಅಭಿರುಚಿಗಳನ್ನು ಕಾಯ್ದುಕೊಳ್ಳುವುದನ್ನು ಒಪ್ಪತಕ್ಕದ್ದೇ ಎಂದು ಹೇಳಬೇಕು.

ಈ ಸಂಚಿಕೆಯಲ್ಲಿ ಖುಷಿಯ ಇನ್ನೊಂದು ವಿಚಾರವೂ ಇದೆ. ಅದೆಂದರೆ ನಾವು ಆರಂಭಿಸಿರುವ ಹೊಸ ಅಂಕಣ – 'ಸಂಪಾದಕರಿಗೆ ಪತ್ರಗಳು'. ಇದರಲ್ಲಿ ನಮ್ಮ ಓದುಗರಿಂದ ಬಂದ ಪತ್ರಗಳಲ್ಲಿ ಕೆಲವನ್ನು ಆಯ್ದು ಇಲ್ಲಿ ಪ್ರಕಟಿಸಿದ್ದೇವೆ. ಇದು ಇನ್ನಷ್ಟು ಓದುಗರಿಗೆ ಬರೆಯಲು ಉತ್ತೇಜನ ನೀಡುತ್ತದೆ ಎಂದು ನಾವು ಭಾವಿಸಿದ್ದೇವೆ.

**ಪ್ರೇಮಾ ರಘುನಾಥ್**
ಮುಖ್ಯ ಸಂಪಾದಕರು

# ಪರಿವಿಡಿ

# ಪರಿವಿಡಿ

# ಆದಿವಾಸಿ ಶಾಲಾ ಪ್ರಕ್ರಿಯೆಯಲ್ಲಿ 'ಸ್ವ'ಪ್ರಜ್ಞೆ ಮತ್ತು ಅಸ್ಮಿತೆಯನ್ನು ಮರುಕಟ್ಟುವುದು

ಅಮ್ಮನ್ ಮದನ್

ತರಗತಿಯಲ್ಲಿ ದೈನಂದಿನ ಜೀವನದ ಅನುಭವಗಳ ಸಮಾಜಶಾಸ್ತ್ರೀಯ ಅಧ್ಯಯನವು ವಿದ್ಯಾರ್ಥಿಗಳು ಹೇಗೆ ಕಲಿಯುತ್ತಾರೆ ಅಥವಾ ಹೇಗೆ ಕಲಿಯುವುದಿಲ್ಲ ಎಂಬುದರ ಬಗ್ಗೆ ನಮ್ಮ ಅರಿವನ್ನು ಹೆಚ್ಚಿಸಿದೆ. ಮಕ್ಕಳು ಯಾಂತ್ರಿಕ ಜೀವಿಗಳಲ್ಲ. ಅವರು ಶಾಲೆಯ ಶಿಕ್ಷಕರು ಮತ್ತು ವಿಷಯಗಳನ್ನು ಕುರಿತ ತಮ್ಮ ಭಾವನೆಗಳನ್ನು ಮತ್ತು ವಿಚಾರಗಳನ್ನು ಹಲವು ಸಾಮಾಜಿಕ ಒಡನಾಟಗಳ ಮೂಲಕ ರೂಪಿಸಿಕೊಳ್ಳುತ್ತಾರೆ. ಸಮಾಜದಲ್ಲಿ ಮಗುವಿಗೆ ದಕ್ಕುವ ಅನುಭವಗಳು, ಭೂಗೋಳಶಾಸ್ತ್ರವು ನೀರಸವಾದ ವಿಷಯವೆಂದೋ, ಇತಿಹಾಸವು ರೋಚಕ-ವಾದುದೆಂದೋ ಭಾವಿಸುವಂತೆ ಮಾಡಬಹುದಾಗಿದೆ. ಶಾಲಾ ಭಾಷೆಯೇ ತನ್ನ ಮನೆಯ ಆಡುಭಾಷೆಯಾಗಿರುವ ಹಾಗೂ ಮನೆಯಲ್ಲಿ ಇತಿಹಾಸದ ವಿಚಾರಗಳ ಬಗ್ಗೆ ಚರ್ಚೆ, ಸಂವಾದಗಳು ಕಿವಿಯ ಮೇಲೆ ಬೀಳುತ್ತಿರುವಂತಹ ಮಗುವಿಗೆ ಶಾಲೆಯಲ್ಲೂ ಆ ವಿಷಯದ ಬಗ್ಗೆ ಆಸಕ್ತಿ ಹುಟ್ಟುವುದನ್ನು ಕಾಣಬಹುದು. ಅಂತಹ ಮಗುವು ಶಿಕ್ಷಕರ ಹಾಗು ತನ್ನ ತರಗತಿಯ ಸಹಪಾಠಿಗಳ ಎದುರು ನಿಂತು ಮಾತನಾಡುತ್ತದೆ ಮತ್ತು ಉಳಿದವರಿಗೆ ತಿಳಿದಿರದ ವಿಷಯಗಳನ್ನು ಹೇಳಿ, ಅವರ ಗೌರವಾದರಗಳನ್ನು ಗಳಿಸಬಹುದು. ಆಗ ಆ ಮಗುವಿನ ಆತ್ಮಾಭಿಮಾನ ಹೆಚ್ಚಾಗುತ್ತದೆ. ಅದೇ, ಮನೆಯ ಆಡುಭಾಷೆ ಶಾಲೆಯ ಭಾಷೆಯಾಗಿರದ ಮಗುವು ತರಗತಿಯಲ್ಲಿ ಹೆಣಗುವುದು ಮತ್ತು ಎಡವುವುದು ಸಾಮಾನ್ಯ. ಒಂದು ಮಗುವಿಗೆ ಆರ್ಯಭಟನ ಬಗ್ಗೆ ಮೊದಲೇ ತಿಳಿದಿರದಿದ್ದರೆ, ಅದು ಮೌನವಾಗಿರಬಹುದು ಮತ್ತು ತರಗತಿಯಲ್ಲಿ ಆರ್ಯಭಟನ ಬಗ್ಗೆ ತಿಳಿದಿರುವ ಉಳಿದವರ ಸಡಗರ, ಕೋಲಾಹಲಗಳಿಂದ ಅವಮಾನಕ್ಕೆ ಗುರಿಯಾದ ಆ ವಿಷಯದ ಭಾವನೆಯನ್ನು ಅನುಭವಿಸಬಹುದು.

ಇಂತಹ ಮುಖಾಮುಖಿಗಳಲ್ಲಿ ರೂಪತಳೆಯುವ ಅರ್ಥಗಳು ಮತ್ತು ಭಾವನೆಗಳು, ನಿಧಾನವಾಗಿ ಒಂದಕ್ಕೊಂದು ಕೂಡಿಕೊಳ್ಳುತ್ತಾ ಶಾಲೆ ಹಾಗು ಶಾಲೆಯ ಜ್ಞಾನಸಂಚಯದ ಕಡೆಗೆ ವಿದ್ಯಾರ್ಥಿಗಳ ದೃಷ್ಟಿಕೋನವನ್ನು ರೂಪಿಸುತ್ತದೆ. ಮಗುವಿನ ಕಲಿಕೆಯನ್ನು ಪ್ರೋತ್ಸಾಹಿಸಿ ಅದನ್ನು ಸಮೃದ್ಧಗೊಳಿಸುವಂತೆ ತರಗತಿಯಲ್ಲಿನ ಪರಸ್ಪರ ಸಂವಾದಗಳನ್ನು ಮತ್ತು ಅಲ್ಲಿ ಹೊರಹೊಮ್ಮುವ ಅರ್ಥಗಳನ್ನು ಕಟ್ಟಿಕೊಡುವುದು ಹೇಗೆ ಎನ್ನುವುದೇ ಇಲ್ಲಿ ಶಿಕ್ಷಕರಿಗೆ ಮತ್ತು ಬೋಧಕರಿಗೆ ಇರುವ ಸವಾಲಾಗಿದೆ. ಜೊತೆ-ಜೊತೆಗೆ, ಮಗುವು ಕುಬ್ಜಗೊಳ್ಳುವಂತೆ ಆಗುವ, ಅದರ ಕಲಿಕೆಗೆ ಗರಬಡಿಸಬಹುದಾದ ಅರ್ಥಗಳನ್ನು, ಪರಸ್ಪರ ಒಡನಾಟಗಳನ್ನು ಕಟ್ಟಿಕೊಡುವ ಸಾಧ್ಯತೆಯ ಬಗ್ಗೆಯೂ ಅವರು ಎಚ್ಚರಿಕೆಯಿಂದ ಇರಬೇಕಾಗುತ್ತದೆ.

ತರಗತಿ ಹಾಗೂ ವಿದ್ಯಾರ್ಥಿಗಳ ದೈನಂದಿನ ಜೀವನವನ್ನು ಅರಿಯಲು ಸಮಾಜಶಾಸ್ತ್ರ ಹಾಗು ಮಾನವಶಾಸ್ತ್ರಗಳು ಅನೇಕ ಸೈದ್ಧಾಂತಿಕ ವಿಧಾನಗಳನ್ನು ಅಭಿವೃದ್ಧಿಗೊಳಿಸಿವೆ. ಸದ್ಯದ ಜಗತ್ತಿನ ಸನ್ನಿವೇಶದಲ್ಲಿ ಏನಾಗುತ್ತಿದೆ ಅಥವಾ ಏನಾಗುತ್ತಿಲ್ಲ ಎಂದು ಕಲ್ಪಿಸಿಕೊಂಡು ವಿಶಿಷ್ಟ ಪರಿಕಲ್ಪನೆಗಳ ಮೂಲಕ ನೋಡುವ ಒಂದು ಬಗೆಯೇ ಸೈದ್ಧಾಂತಿಕ ವಿಧಾನವಾಗಿದೆ. ಸೈದ್ಧಾಂತಿಕ ವಿಧಾನಗಳನ್ನು ಬಳಸಿ, ಈ ಹಿಂದೆ ನಾವು ಗಮನಿಸಿರದ ಸಂಗತಿಗಳನ್ನು ನೋಡಬಹುದಾಗಿದೆ. ಈ ಲೇಖನದಲ್ಲಿ, ಒಂದು ಪ್ರಮುಖ ಸೈದ್ಧಾಂತಿಕ ವಿಧಾನವನ್ನು ವಿವರಿಸಲಾಗಿದೆ. ನೀಲಗಿರಿ ಬೆಟ್ಟಗಳ ಆದಿವಾಸಿ ಮಕ್ಕಳ ನಡುವೆ ಕಾರ್ಯನಿರತವಾಗಿರುವ 'ಆದಿವಾಸಿ ಮುನ್ನೇಟ್ರ ಸಂಗಮ್' (ಎ. ಎಮ್.ಎಸ್)ನ ಕಾರ್ಯವನ್ನು ಇಲ್ಲಿ ವಿವರಿಸಲಾಗಿದ್ದು, ಇವು ಶಿಕ್ಷಣ ಕ್ಷೇತ್ರದ ಸವಾಲುಗಳನ್ನು ಅರಿಯಲು ನಮಗೆ ಹೇಗೆ ನೆರವಾಗುತ್ತದೆ ಎಂದು ಚರ್ಚಿಸಲಾಗಿದೆ.

**ಆದಿವಾಸಿ ಮುನ್ನೇಟ್ರ ಸಂಗಮ್**

**ಹಿನ್ನೆಲೆ ಹಾಗು ಇತಿಹಾಸ**

ಆದಿವಾಸಿ ಮುನ್ನೇಟ್ರ ಸಂಗಮ್ ಕಳೆದ ಹಲವು ದಶಕಗಳಿಂದ ನೀಲಗಿರಿ ಕಾಡುಗಳ ಆಸುಪಾಸಿನಲ್ಲಿ ಬದುಕುತ್ತಿರುವ ಆದಿವಾಸಿಗಳೊಡನೆ ಕಾರ್ಯನಿರತವಾಗಿದೆ. ಈ ಕಾಡುಗಳಲ್ಲಿ ಐದು ಬುಡಕಟ್ಟುಗಳಿವೆ: ಪಣಿಯರು, ಬೆಟ್ಟಕುರುಂಬರು, ಮುಳ್ಳುಕುರುಂಬರು, ಕಟ್ಟುನಾಯಕರು ಹಾಗು ಇರುಳರು. ಇವರು ಜೀವನೋಪಾಯಕ್ಕಾಗಿ ಈ ಮುನ್ನ ಬೇಟೆಯಾಡಿ, ಆಹಾರ ಸಂಗ್ರಹಣೆ ಮಾಡುವ, ಬೇಸಾಯ ಮಾಡುವ ಹಾಗು ಈ ಪ್ರದೇಶದ ತೋಟಗಳಲ್ಲಿ ದುಡಿಮೆಯಂತಹ ಕಸುಬುಗಳಲ್ಲಿ ತೊಡಗಿದ್ದರು. ಕಾಡುಗಳು ಅವರ ಜೀವನಕ್ಕೆ ಅವಿಭಾಜ್ಯವಾಗಿದ್ದು, ಈ ಕಾಡುಗಳಿಂದ ಬದುಕಿಗಾಗಿ ಅವರು ಭೌತಿಕ ಹಾಗು ಆಧ್ಯಾತ್ಮಿಕ ಎರಡೂ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಿದ್ದರು. ಅವರ ಪ್ರದೇಶಕ್ಕೆ ತಮಿಳುನಾಡು, ಕೇರಳ ಹಾಗು ಶ್ರೀಲಂಕಾಗಳಿಂದ ಹೆಚ್ಚು-ಹೆಚ್ಚು ಸಂಖ್ಯೆಯಲ್ಲಿ ಹೊರಗಿನವರು ಬರತೊಡಗಿದ್ದರಿಂದ ಆದಿವಾಸಿಗಳು ಹೆಚ್ಚು-ಹೆಚ್ಚಾಗಿ ಕಾಡುಗಳ ದಟ್ಟಭಾಗವನ್ನು ಆಶ್ರಯಿಸು-ವಂತಾಯಿತು. ಕಾಡುಗಳು ಕ್ಷೀಣಿಸುತ್ತಿದ್ದಂತೆಯೇ ಅವರ ಜೀವನವೂ ಆಶಾರಹಿತವಾಗತೊಡಗಿತು. ಸಾಲದೆಂಬಂತೆ, ಸರ್ಕಾರವೂ ಕಾಡಿನೊಳಕ್ಕೆ ಅವರ ಪ್ರವೇಶವನ್ನು ಸಂಪೂರ್ಣವಾಗಿ ನಿರ್ಬಂಧಿಸಿತು. ಕ್ರಮೇಣ, ಈ ಪ್ರದೇಶದ ಆದಿವಾಸಿಗರಲ್ಲಿ ಪೌಷ್ಟಿಕಾಂಶದ ಕೊರತೆ, ಚಿಂತೆ, ಖಿನ್ನತೆಗಳು ವ್ಯಾಪಕವಾಗಿ ಮನೆಮಾಡಿತು. ಕಳೆದ ಶತಮಾನದ ೮೦ರ ದಶಕದಲ್ಲಿ "ಸಮುದಾಯ ಸಂಘಟನೆ, ಪುನರ್ವಸತಿ ಹಾಗು ಅಭಿವೃದ್ಧಿಗಾಗಿ ಕಾರ್ಯ" (ACCORD) ಎಂಬ ಸಂಘಟನೆಯು ಇಲ್ಲಿ ತನ್ನ ಕಾರ್ಯಾರಂಭಿಸಿತು. ಅದೇ ಸಮಯಕ್ಕೆ ಆದಿವಾಸಿ ಮುನ್ನೇಟ್ರ ಸಂಗಮ್, ಭೂಮಿಯನ್ನು ಮರಳಿ ಪಡೆಯಲು, ಕಾಡುಗಳನ್ನು ಬಳಸಲು ತಮಗಿರುವ ಹಕ್ಕಿಗಾಗಿ ಧ್ವನಿಯೆತ್ತಲು ಆದಿವಾಸಿಗಳನ್ನು ಸಂಘಟಿಸತೊಡಗಿತು. ಹಲವು ವರ್ಷಗಳಿಂದ ಇವು ಆದಿವಾಸಿ ಸಂಸ್ಕೃತಿಯನ್ನು ಬಲಪಡಿಸಿ ಸಮೃದ್ಧಗೊಳಿಸುವ ದಿಕ್ಕಿನಲ್ಲಿ ಕಾರ್ಯನಿರ್ವಹಿಸುತ್ತಾ ಬಂದಿದ್ದು, ಕಾಡುವಾಸಿಗಳು ನಗರವಾಸಿಗ-ಳೊಂದಿಗೆ ಹಾಗು ಸರ್ಕಾರದೊಂದಿಗೆ ಹೊಂದಾಣಿಕೆಯಿಂದ ಬಾಳುವಂತಾಗಲು ಅವರಿಗೆ ಅಗತ್ಯವಿರುವ ಸಹಾಯಹಸ್ತ ಚಾಚಿದೆ.

ಘನತೆ ಹಾಗು ಜೀವನೋಪಾಯಗಳಿಗಾಗಿ ನಡೆಯುತ್ತಿರುವ ಆದಿವಾಸಿ ಹೋರಾಟದ ಹೃದಯಭಾಗದಲ್ಲಿ ಸಂಸ್ಕೃತಿಯ ವಿಚಾರವಿದ್ದು, ಹಾಗಾಗಿ ಈ ಹೋರಾಟದಲ್ಲಿ ಶಿಕ್ಷಣವು ಒಂದು ಮುಖ್ಯ ಕಾಳಜಿಯಾಗಿದೆ ಎಂದು ಆದಿವಾಸಿ ಮುನ್ನೇತ್ರ ಸಂಗಮ್ ಮನಗಂಡಿದೆ. ಆದಿವಾಸಿಗಳು ಬೆಳೆದು ವಯಸ್ಕರಾಗಲು, ಅವರ ಜಗತ್ತಿನಲ್ಲಿ ಪೂರ್ಣಪ್ರಮಾಣದ ಪಾಲುದಾರರಾಗಿ ಬದುಕಲು ಕಲಿಯಲು ಅವರಿಗಿದ್ದ ಹಳೆಯ ವಿಧಾನಗಳ ಮೇಲೆ ಒಂದು ಅತಿ ವಿಭಿನ್ನ ರೀತಿಯ ಜಗತ್ತು ಆಕ್ರಮಣವೆಸಗಿದೆ. ಇವರಿಗಾಗಿ ತಮಿಳುನಾಡು ಸರ್ಕಾರವು ಸ್ಥಾಪಿಸಿರುವ ಶಾಲೆಗಳಲ್ಲಿ ಆದಿವಾಸಿಗಳ ಮಕ್ಕಳು ದಿಕ್ಕುಗೆಟ್ಟು, ಒಂಟಿತನವನ್ನು ಅನುಭವಿಸುತ್ತಿದ್ದರು. ಅವರಲ್ಲಿ ಕೆಲವೇ ಕೆಲವರು ಶಿಕ್ಷಣ ಕ್ಷೇತ್ರದಲ್ಲಿ ಮುಂದುವರಿದು ಪದವೀಧರರಾಗಿದ್ದಾರೆ ಎಂಬುದರಲ್ಲಿ ಅಚ್ಚರಿಯೇನೂ ಇಲ್ಲ.

ಆದಿವಾಸಿ ಮುನ್ನೇತ್ರ ಸಂಗಮ್‌ನ ರಮಾ ಶಾಸ್ತ್ರಿ ಹಾಗು ಬಿ. ರಾಮದಾಸ್ ಎಂಬ ಇಬ್ಬರು ಶಿಕ್ಷಣ ತಜ್ಞರು ಮೊದಲಿಗೆ ತಮ್ಮ ಮಕ್ಕಳಿಗಾಗಿ ಮತ್ತು ಬಳಿಕ ಸಂಗಮ್‌ನ ಕಾರ್ಯಕರ್ತರ ಮಕ್ಕಳಿಗಾಗಿ, ಒಂದು ಪರ್ಯಾಯ ಶಾಲೆಯನ್ನು ತೆರೆದರು. ಈಗ ಆ ಶಾಲೆಯ ಚುಕ್ಕಾಣಿಯನ್ನು ಆದಿವಾಸಿ ಮುನ್ನೇತ್ರ ಸಂಗಮ್ ವಹಿಸಿದ್ದು, ಅದು ಆದಿವಾಸಿಗಳಿಗೆ ಶಕ್ತಿ ಹಾಗು ಗೌರವಗಳನ್ನು ನೀಡುವ ಶಾಲಾ ಕಲಿಕೆಗೆ ಮಾದರಿಯಾಗುವಂತೆ ಈ ಶಾಲೆಯನ್ನು ಪೋಷಿಸುತ್ತಿದೆ. ಈ ಶಾಲೆಯು ಈಗ ಶಿಕ್ಷಕರಿಗೆ ತರಬೇತಿ ನೀಡುತ್ತಿರುವುದಲ್ಲದೆ, ಅಸ್ತಿತ್ವದಲ್ಲಿರುವ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಆದಿವಾಸಿ ಮಕ್ಕಳ ವಿಷಯವಾಗಿ ನೆರವಾಗುತ್ತಿದ್ದು, ಆದಿವಾಸಿ ಮುನ್ನೇತ್ರ ಸಂಗಮ್‌ನ ಪರಿಶ್ರಮಗಳ ಕೇಂದ್ರಬಿಂದುವಾಗಿ ರೂಪುಗೊಂಡಿದೆ.

**ಸಾಂಕೇತಿಕ ಒಡನಾಟವಾದ**

'ಸಾಂಕೇತಿಕ ಒಡನಾಟವಾದ'ವು (Symbolic interactionism) ಮಾನವರೆಲ್ಲರೂ, ಬೆಳೆದು ವಿಕಾಸ ಹೊಂದುವುದು ಜಗತ್ತಿನೊಂದಿಗಿನ ತಮ್ಮ ಪರಸ್ಪರ ಒಡನಾಟದ ಮೂಲಕ ಎನ್ನುತ್ತದೆ. ನಮ್ಮ ತಾಯಿ–ತಂದೆಯರು, ಗೆಳೆಯರು, ಮತ್ತು ಇತರರ ಜೊತೆಗಿನ ಒಡನಾಟದಿಂದ ನಾವು ನಿಧಾನವಾಗಿ ಒಂದು 'ಸ್ವ' ಪ್ರಜ್ಞೆ ಅಥವಾ ಸ್ವಂತಿಕೆಯನ್ನು ರೂಪಿಸಿಕೊಳ್ಳುತ್ತೇವೆ. ನಮ್ಮೊಳಗೆ ಏನಾಗುತ್ತಿದೆ ಎನ್ನುವ ಬಗ್ಗೆ ಗಮನವಹಿಸುತ್ತಾ, ಆ ಕುರಿತು ಜಾಗರೂಕರಾಗುತ್ತೇವೆ. ಈ ಅರಿವು ಹುಟ್ಟಿನೊಂದಿಗೆ ಪೂರ್ಣರೂಪದಲ್ಲಿ ಬರುವುದೂ ಇಲ್ಲ, ತನ್ನಷ್ಟಕ್ಕೆ ಬೆಳೆಯುವುದೂ ಇಲ್ಲ. ಬದಲಿಗೆ, ಅದು ಬದಲಾಗುತ್ತಾ, ಸಾಮಾಜಿಕ ಒಡನಾಟಗಳ ಮೂಲಕ ರೂಪುಗೊಳ್ಳುತ್ತದೆ. ನಮ್ಮ ತಾಯಿ–ತಂದೆಯರ, ನೆರೆಹೊರೆಯವರ, ಗೆಳೆಯ–ಗೆಳತಿಯರ, ಶಿಕ್ಷಕರ ಮತ್ತು ಇತರರ ಜೊತೆಗೆ ಗೌರವಯುತವಾಗಿ ಒಡನಾಡುತ್ತಾ ಆ ಮೂಲಕ ಈ ಜಗತ್ತಿನಲ್ಲಿ ನಮ್ಮ ಸ್ಥಾನವನ್ನು ತಿಳಿಯಲು ತೊಡಗುತ್ತೇವೆ. ಈ ಅರಿವು ಸಾವಕಾಶವಾಗಿ ಅರಳುತ್ತದೆ. ಕುಟುಂಬವೊಂದರಲ್ಲಿ ಬೆಳೆಯುವ ಮಗುವು ನಿಧಾನವಾಗಿ ತನ್ನನ್ನು ತಾನೇ ಒಂದು 'ಹುಡುಗಿ' ಎಂದು ಕಾಣಲು ಪ್ರಾರಂಭಿಸುತ್ತದೆ. ತಾಯಿತಂದೆಯರು ಸ್ವಂತಿಕೆಯತ್ತ ಹೇಗೆ ನೋಡುತ್ತಾರೆ ಮತ್ತು ನಾಮಕರಣ ಮಾಡುತ್ತಾರೆ. ತನ್ನೊಡನೆ ಆಡಲು ಬರುವವರು ಬೊಂಬೆಗಳನ್ನು ಹಿಡಿದು ಬರುತ್ತಾರೆಯೇ ಹೊರತು, ಬಂದೂಕುಗಳನ್ನಲ್ಲ ಎಂಬುದರಿಂದ ಇದು ಹೊರಹೊಮ್ಮುತ್ತದೆ. ನಿಧಾನವಾಗಿ, ತಾನೊಬ್ಬಳು 'ಹುಡುಗಿ' ಎಂಬ ಸ್ವಪ್ರಜ್ಞೆಯು ಹೊರಹೊಮ್ಮುತ್ತದೆ. ಸ್ವಂತಿಕೆಯ ಈ ವ್ಯಾಖ್ಯಾನವು ಮುಂದೆ ಮಗುವಿನ ಇತರ ಒಡನಾಟಗಳನ್ನು, ನಾವು ಇತರರೊಂದಿಗೆ ಹೇಗೆ ವರ್ತಿಸಬೇಕು ಅಥವಾ ವರ್ತಿಸಬಾರದು ಎಂಬ ಆಯ್ಕೆಗಳನ್ನು ರೂಪಿಸುತ್ತದೆ. ನಮ್ಮ ಸ್ವಂತಿಕೆ ಹಾಗು ಗುರುತುಗಳು ಸ್ಥಿರವಲ್ಲ; ಅವು ಸಾಮಾಜಿಕ ಒಡನಾಟಗಳ ಮೂಲಕ ಹೊರಹೊಮ್ಮುತ್ತವೆ.

ವಿಶೇಷವಾಗಿ, ಸ್ವಂತಿಕೆಯು ಸನ್ನಿವೇಶಗಳಿಗೆ ನಾವು ನೀಡುವ ಅರ್ಥಗಳ ಮೂಲಕ ಹೊರಹೊಮ್ಮುತ್ತದೆ. ಉದಾಹರಣೆಗೆ, ಶಿಕ್ಷಕರೊಂದಿಗೆ ವಿದ್ಯಾರ್ಥಿಯ ಸಂಬಂಧವನ್ನೇ ತೆಗೆದುಕೊಳ್ಳೋಣ. ವಿದ್ಯಾರ್ಥಿಗಳಾಗಿ ನಾವು ಶಿಕ್ಷಕರು ನಮ್ಮನ್ನು ಹೇಗೆ ನೋಡುತ್ತಾರೆ ಎಂಬುದನ್ನು ಇಡಿಯಾಗಿ ಅರಿಯಲಾಗುವುದಿಲ್ಲ. ನಾವು ಅವರನ್ನು ಕೆಲವು ಸಂಕೇತಗಳ ಮೂಲಕ ಮಾತ್ರ ನೋಡುತ್ತೇವೆ, ಅಷ್ಟೇ. ಒಂದು ಆದಿವಾಸಿ ಮಗುವು ತಾನು ಅರ್ಥಮಾಡಿಕೊಳ್ಳಬಲ್ಲ ಕೆಲವು ಪರಿಚಿತ ಸಂಕೇತಗಳ ಮೂಲಕ ವಯಸ್ಕರು ತನ್ನೆಡೆಗೆ 'ವಾತ್ಸಲ್ಯ'ದ ನೋಟ ಬೀರುವುದನ್ನು ತಿಳಿಯಬಹುದು. ಈ ವಾತ್ಸಲ್ಯದ ಸಂಕೇತಗಳಲ್ಲಿ ಕೆಲವು ಪದಗಳು, ಹಾವ–ಭಾವಗಳು, ಸ್ಪರ್ಶ ಮತ್ತು ಬೇರಾವುದನ್ನಾದರೂ ಬಳಸಬಹುದು. ಬುಡಕಟ್ಟು ಜನಾಂಗದವರ ನಿಯಂತ್ರಣದಲ್ಲಿ ಇರದೆ ಇತರ ಜಾತಿಗಳ ಸಮಾಜದ ನಿಯಂತ್ರಣದಲ್ಲಿ ಇರುವ ಶಾಲೆಯಲ್ಲಿ ವಿದ್ಯಾರ್ಥಿಯು ಈ ಸಂಕೇತಗಳ ಅಭಾವವನ್ನು ಕಾಣಬಹುದು. ತನ್ನನ್ನು ಶಾಲೆಯಲ್ಲಿ 'ಪ್ರೀತ್ಯಾದರಗಳಿಂದ ಮೆಚ್ಚಿಕೊಳ್ಳು'ವುದಿಲ್ಲ ಎಂಬ ನಿರ್ಧಾರಕ್ಕೆ ಆ ಮಗುವು ಬರಬಹುದು. ಅಂತಹ ಮಗುವು ಶಾಲೆಗೆ ಹೋಗಲು ಹಿಂದೇಟು ಹಾಕಬಹುದು ಅಥವಾ ಶಾಲೆಯಲ್ಲಿರುವಾಗ ತನ್ನ ಪಾಡಿಗೆ ತಾನು ಇರಬಹುದು. ಈ ಪ್ರಕ್ರಿಯೆಯನ್ನು, ಸಿ. ಎಚ್. ಕೂಲೀ ಅವರು, "ದರ್ಶಿಸುವ ಕನ್ನಡಿಯ ಮೂಲಕ ಪ್ರಜ್ಞೆಯ ನಿರ್ಮಾಣವನ್ನು ರೂಪಿಸಿಕೊಳ್ಳುವ ಬಗೆ" ಎಂದು ಬಣ್ಣಿಸುತ್ತಾರೆ. ಇತರರು ನಮ್ಮನ್ನು ಹೇಗೆ ನೋಡುತ್ತಾರೆ ಎಂಬ ಕಲ್ಪನೆಯ ಮೇರೆಗೆ ನಾವು ನಮ್ಮ ಪ್ರತಿಕ್ರಿಯೆಗಳನ್ನು ರೂಢಿಸಿಕೊಳ್ಳುತ್ತೇವೆ. ನಮ್ಮ ಗ್ರಹಿಕೆಗಳು ಸಂಕೇತಗಳನ್ನು ಅವಲಂಬಿಸಿದ್ದು, ಈ ಸಂಕೇತಗಳನ್ನು ಕುರಿತು ನಡೆಯುವ ಪರ್ಯಾಲೋಚನೆಗಳ ಮೂಲಕ ನಾವು ನಮ್ಮ ಭಾವನೆಗಳನ್ನು ಬೆಳೆಸಿಕೊಳ್ಳುವುದು ಮತ್ತು ನಮ್ಮ ಭವಿಷ್ಯದ ವರ್ತನೆಯನ್ನು ಆರಿಸಿಕೊಳ್ಳುವುದನ್ನು ಮಾಡುತ್ತೇವೆ. ಸಂಕೇತಗಳೊಂದಿಗಿನ ಇಂತಹ ಒಡನಾಟಗಳ ಮೂಲಕ ನಮ್ಮ 'ಸ್ವ'ಪ್ರಜ್ಞೆ ಮತ್ತು ಅಸ್ಮಿತೆಯನ್ನು, ನಮ್ಮತನವನ್ನು ರೂಪಿಸಿ–ಕೊಳ್ಳುವುದನ್ನು ಎತ್ತಿತೋರುವ ಸೈದ್ಧಾಂತಿಕ ವಿಧಾನವನ್ನು 'ಸಾಂಕೇತಿಕ ಒಡನಾಟವಾದ' ಎನ್ನುತ್ತೇವೆ.

ಸಾಂಕೇತಿಕ ಒಡನಾಟವಾದದ ಪ್ರತಿಪಾದಕರ ಪ್ರಕಾರ ಒಳ್ಳೆಯ ಶಿಕ್ಷಕನಾಗಲು ಬೇಕಿರುವ, ಕಲಿಕೆಯ ಒಂದು ಮುಖ್ಯ ಲಕ್ಷಣವೆಂದರೆ, ವಿದ್ಯಾರ್ಥಿಗಳಿಗೆ ಪರಿಚಯವಿರುವ ರೀತಿಯಲ್ಲಿ ಮತ್ತು ಅವರು ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತಹ ಸಂಕೇತಗಳನ್ನು ಬಳಸಲು ಕಲಿಯುವುದೇ ಆಗಿದೆ. ಉದಾಹರಣೆಗೆ, ನನ್ನ ವಿದ್ಯಾರ್ಥಿಗಳಿಗೆ ಆ ದಿನದ ತರಗತಿ ಹಾಗು ವಿಷಯಗಳು ಇತರ ಎಲ್ಲದರ ಗ್ರಹಿಕೆಗೆ ಅತ್ಯಗತ್ಯವೆಂದು ನಾನು ತಿಳಿಸಬೇಕೆಂದರೆ, ಅದಕ್ಕಾಗಿ ಸೂಕ್ತ ಸಂಕೇತಗಳನ್ನು, ಅಂದರೆ ಹಾವಭಾವಗಳು, ಧ್ವನಿಯ ಏರಿಳಿತ, ಪದಗಳು, ಕಪ್ಪುಹಲಗೆಯ ಬಳಕೆ ಇತ್ಯಾದಿಯನ್ನು ಕಂಡುಕೊಳ್ಳುವ ಅಗತ್ಯವಿದೆ. ಜೊತೆಗೆ, ಇವೆಲ್ಲವನ್ನೂ ವಿದ್ಯಾರ್ಥಿಗಳಿಗೆ ಅರ್ಥವಾಗುವ ರೀತಿಯಲ್ಲಿ ಬಳಸುವುದೂ ಸೇರಿದೆ. ಇದಕ್ಕಾಗಿ, ನಾನು ಕೂಡ, ಓರ್ವ ಶಿಕ್ಷಕನಾಗಿ, ಅವರ ಸಂಕೇತಗಳನ್ನು ಅರಿತಿರಬೇಕಾಗುತ್ತದೆ. ನಾನು ವಿಷಯವನ್ನು ವಿವರಿಸುವ ರೀತಿಗೆ ವಿದ್ಯಾರ್ಥಿಗಳು ಸ್ಪಂದಿಸದೇ ಹೋಗಬಹುದು; ಆಗ ಅವರ ಗಮನ ನನ್ನ ಕಡೆಗೆ ಇರುವುದಿಲ್ಲ. ಆಗ ನಾನು ವಿದ್ಯಾರ್ಥಿಗಳನ್ನು ಮಂದ ಬುದ್ಧಿಯವರೆಂದೂ

ಮತ್ತು ಬುದ್ಧಿಹೀನರೆಂದೂ ಜರಿಯಬಹುದು. ಆದರೆ, ನಿಜವಾಗಿಯೂ, ಇಲ್ಲಿ ಸೋಲಿಗೆ ಕಾರಣ ನಾನು ಬಳಸಿದ ಸಂಕೇತಗಳಲ್ಲಿ ವೈಫಲ್ಯವಿತ್ತು ಎನ್ನುವುದಾಗಿದೆ.

ವಿದ್ಯಾರ್ಥಿಗಳು ಯಾವ ಸಂಕೇತಗಳನ್ನು ಅರ್ಥಮಾಡಿ-ಕೊಳ್ಳುತ್ತಾರೆ ಎಂಬುದನ್ನು ಗುರುತಿಸಲು ಆರಂಭಿಸಿ, ಅವುಗಳಲ್ಲಿ ಅತಿ ಪರಿಣಾಮಕಾರಿ ಸಂಕೇತಗಳನ್ನು ಆರಿಸಿಕೊಂಡು ಬಳಸುವುದರಲ್ಲಿ ಚೆನ್ನಾಗಿ ಪಾಠ ಮಾಡುವುದನ್ನು ಕಲಿಯುವುದರ ಬಹುಪಾಲು ಅಡಗಿದೆ. ವಿದ್ಯಾರ್ಥಿಗಳು ನನ್ನ ತರಗತಿಯಲ್ಲಿ ಆಸಕ್ತಿ ತೋರಿ ಸ್ಪಂದಿಸಲು ತೊಡಗಿದಾಗ (ಅಥವಾ ಯಾವ ಸಂಕೇತಗಳು ಆಸಕ್ತಿಯನ್ನು ಪ್ರತಿನಿಧಿಸುತ್ತವೆ ಎಂದು ನಾನು ಗುರುತಿಸಿದಾಗ) ಅದು ನನ್ನ ಸ್ವಂತಿಕೆಯನ್ನು ರೂಪಿಸುತ್ತದೆ. ಆಗ ನಾನು ಹೆಮ್ಮೆಯಿಂದ ನನ್ನನ್ನು ಓರ್ವ ದಕ್ಷ ಶಿಕ್ಷಕನಾಗಿ ನೋಡಲು ತೊಡಗುತ್ತೇನೆ. ನಾವು ಸದಾ ಸಂಕೇತಗಳ ಮೂಲಕ ಒಡನಾಡುತ್ತಿದ್ದು, ಈ ಪ್ರಕ್ರಿಯೆಯ ಅಧ್ಯಯನವು ಕಲಿಕೆ ಮತ್ತು ಬೋಧನೆಗಳ ವಿಚಾರವಾಗಿ ಮಹತ್ವದ ಒಳನೋಟಗಳನ್ನು ನೀಡುತ್ತದೆ.

**ಸಾಂಕೇತಿಕ ಒಡನಾಟಗಳಲ್ಲಿ ಸ್ವಾಯತ್ತತೆ**

ಅಸ್ಮಿತೆಯು ಸಾಮಾಜಿಕ ಒಡನಾಟಗಳಿಂದ ರೂಪುಗೊಳ್ಳುತ್ತದೆ-ಯಾದರೂ, ಅದು ಯಾಂತ್ರಿಕವಾಗಿ ರೂಪುಗೊಳ್ಳುವುದಿಲ್ಲ. ಇತರರು ನಮ್ಮನ್ನು ಹೇಗೆ ನೋಡುತ್ತಾರೆ ಎಂಬುದನ್ನು ನಾವು ಎಲ್ಲಾ ಸಮಯದಲ್ಲೂ ಒಪ್ಪಿಕೊಳ್ಳುವುದಿಲ್ಲ. ಪ್ರಭಾವಿ ಜಾತಿಯ ಶಿಕ್ಷಕನೊಬ್ಬ ಆದಿವಾಸಿ ಮಗುವನ್ನು ತಿರಸ್ಕಾರದಿಂದಲೂ, ಪ್ರಯೋಜನಕ್ಕೆ ಬಾರದ ವಿದ್ಯಾರ್ಥಿಯೆಂದೂ ಕಂಡು, ಮಗು ಶಾಲೆಗೆ ಸೇರದೆ ಇರಬೇಕಿತ್ತು ಎಂಬ ಭಾವವನ್ನು ವ್ಯಕ್ತಪಡಿಸುವಂತೆ ತೋರಿದರೆ, ಆ ಭಾವದ ಹಿಂದಿನ ಅರ್ಥಗಳನ್ನು ಮಗು ಗ್ರಹಿಸುವ ಸಾಧ್ಯತೆ ಇರುತ್ತದೆ. ಆಗ, ಆ ಮಗುವು ಈ ಅರ್ಥಗಳನ್ನು ತಾನು ಹೇಗೆ ಭಾವಿಸಬೇಕು ಎಂಬುದನ್ನು ತಿಳಿಯಲು ಪ್ರಯತ್ನಿಸುತ್ತದೆ. ಮಗುವು ತನ್ನ ಬಗ್ಗೆಯೇ ಈ ರೀತಿ ಯೋಚಿಸತೊಡಗಬಹುದು: "ನಾನೊಬ್ಬ ಅಯೋಗ್ಯ, ತಪ್ಪು ಜಾಗಕ್ಕೆ ಬಂದಿದ್ದೇನೆ" ಇತ್ಯಾದಿ; ಅಥವಾ, "ನಾನೂ ಇತರರಂತೆಯೇ ಆಗಬೇಕು, ಶಿಕ್ಷಕರ ಮೆಚ್ಚುಗೆ ಗಳಿಸಲು ಪ್ರಯತ್ನಿಸಬೇಕು" ಎಂಬ ಬೇರೆಯೇ ಒಂದು ವ್ಯಾಖ್ಯಾನವನ್ನು ಕಟ್ಟಿಕೊಳ್ಳಬಹುದು. ಅಥವಾ, "ನನಗಿಲ್ಲಿ ಅನ್ಯಾಯವಾಗುತ್ತಿದೆ; ಬೆಳೆಯಲು ಬೇಕಿರುವ ಅವಕಾಶವನ್ನು ಶಿಕ್ಷಕರು ಅಲ್ಲಗಳೆಯುತ್ತಿದ್ದಾರೆ" ಎಂಬ ಇನ್ನೊಂದು ಬಗೆಯ ವ್ಯಾಖ್ಯಾನದ ರೂಪ ತಳೆಯಬಹುದು.

ನಮ್ಮನ್ನು ಉಳಿದವರು ಹೇಗೆ ಕಾಣುತ್ತಾರೆ ಎಂಬುದನ್ನು ಕಂಡ ಬಳಿಕ ನಮ್ಮಲ್ಲೇ ಹಲವು ಆಂತರಿಕ ಸಂಭಾಷಣೆಗಳು ನಡೆಯುತ್ತವೆ ಎನ್ನುತ್ತಾರೆ ಸಾಂಕೇತಿಕ ಒಡನಾಟವಾದದ ಪ್ರತಿಪಾದಕರು. ನಾವು ವಿಭಿನ್ನ ಪ್ರತಿಕ್ರಿಯೆಗಳನ್ನು ಗುರುತಿಸುವುದಾಗಲೀ, ಸೃಷ್ಟಿಸುವುದಾಗಲೀ, ಹಾಗು ಅವುಗಳ ನಡುವೆ ಆಯ್ಕೆ ಮಾಡುವುದಾಗಲೀ ಈ ಆಂತರಿಕ ಸಂಭಾಷಣೆಗಳಲ್ಲೇ. ಸಾಂಕೇತಿಕ ಒಡನಾಟವಾದವು ನಾವು ಈ ಆಂತರಿಕ ಸಂಭಾಷಣೆಗಳಿಗೆ ಹಾಗು ಅವು ತೆರೆದುಕೊಳ್ಳುವ ರೀತಿಗೆ ಗಮನ ನೀಡುವಂತೆ ನಮ್ಮನ್ನು ಪ್ರಚೋದಿಸುತ್ತದೆ. ಮೊದಮೊದಲು, ಅದು ಕೇವಲ ನಮ್ಮ ಆಂತರಿಕ ಜೀವನದೆಡೆಗೆ ನೋಟ ಬೀರುವಂತೆ ಇದ್ದರೂ, ಇಂದು ನಮ್ಮ ಆಂತರಿಕ ಜೀವನವು, ಸಾಮಾಜಿಕ ಬದುಕಿನ ಅಗಾಧ ಸಮಸ್ಯೆಗಳಿಗೂ, ಹೋರಾಟಗಳಿಗೂ ಬೆಸೆದು-ಕೊಂಡಿರುವುದನ್ನು ತೋರಿಸಲು ಈ ದೃಷ್ಟಿಕೋನವನ್ನು ಅಳವಡಿಸಿಕೊಳ್ಳಲಾಗಿದೆ. ನಮ್ಮ ಆಂತರಿಕ ಸಂಭಾಷಣೆಗಳು ನಮ್ಮನ್ನು ನಾವೇ ಒಂದು ಮೂಕ ಹೆಂಗಸು ಅಥವಾ ಓರ್ವ ಆದಿವಾಸಿಯ ಪಡಿಯಚ್ಚಿನಂತೆ ನೋಡುವುದನ್ನು ಪ್ರಶ್ನಿಸಲು ನಮ್ಮನ್ನು ಪ್ರಚೋದಿಸುತ್ತವೆ.

**ದಿಟ್ಟ ಅಸ್ಮಿತೆಯ ನಿರ್ಮಾಣ**

**ವಿದ್ಯೋದಯ ಶಾಲೆ**

ಹೊರಗಿನ ಸಮಾಜದ ಸಂಘರ್ಷಗಳು ತರಗತಿಗಳಲ್ಲಿ ಮತ್ತು ನಮ್ಮ ಆಂತರಿಕ ಸಂಭಾಷಣೆಗಳಲ್ಲಿ ಹೇಗೆ ಪ್ರತಿಧ್ವನಿಸುತ್ತವೆ ಎಂಬುದನ್ನು ಶಾಲಾ ಶಿಕ್ಷಣದಲ್ಲಿ ನಿರತವಾಗಿರುವ ಆದಿವಾಸಿ ಮುನ್ನೇಟ್ರ ಸಂಗಮ್‌ನ ಅನುಭವವು ತೋರಿಸುತ್ತದೆ. ಆದಿವಾಸಿ ಮುನ್ನೇಟ್ರ ಸಂಗಮ್‌ನ ವಾದವು ಆದಿವಾಸಿಗಳು ಸಭ್ಯ ಮತ್ತು ಉತ್ತಮ ಜನರಾಗಿದ್ದಾರೆ ಎಂಬುದಾಗಿತ್ತು. ಅವರನ್ನು ಶೋಷಿಸಿ, ಅವರ ಸಂಪತ್ತನ್ನು ದೋಚಿದ ಶಕ್ತಿಶಾಲಿ ವರ್ಗಗಳಿಂದ ಅವರು ಅನ್ಯಾಯಕ್ಕೆ ಒಳಗಾಗಿದ್ದಾರೆ. ಹಲವು ಪ್ರದೇಶಗಳಲ್ಲಿ ಅವರು ಆದಿವಾಸಿ ತಂಡಗಳನ್ನು ರಚಿಸಿಕೊಂಡು ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸಲು ಮತ್ತು ತಮಗೆ ಸಲ್ಲಬೇಕಿರುವ ನ್ಯಾಯಕ್ಕಾಗಿ ಹೋರಾಡಲು ಶ್ರಮಿಸುತ್ತಿದ್ದಾರೆ. ಆದಿವಾಸಿ ಮುನ್ನೇಟ್ರ ಸಂಗಮ್ ಆದಿವಾಸಿ ಸ್ವಾಭಿಮಾನದ ಪುನರ್‌ನಿರ್ಮಾಣಕ್ಕಾಗಿ ಮತ್ತು ಆದಿವಾಸಿಗಳು ತಮ್ಮ ಪರಿಸ್ಥಿತಿಗಳನ್ನು ಸುಧಾರಿಸಿಕೊಳ್ಳುವ ದಿಸೆಯಲ್ಲಿ ಅವರನ್ನು ಕ್ರಿಯಾಶೀಲರನ್ನಾಗಿ ಮಾಡಲು ಶ್ರಮಿಸಿದೆ.

ಈ ಪ್ರಕ್ರಿಯೆಯು, 'ವಿದ್ಯೋದಯ ಶಾಲೆ' ಎಂದು ಕರೆಯಲ್ಪಡುವ ಸಂಗಮ್‌ನ ಶಾಲೆಯ ಸ್ಥಾಪನೆಗೆ ಕಾರಣವಾದಂತೆಯೇ ಸ್ಥಳೀಯ ಶಾಲೆಗಳ ವ್ಯವಹಾರಗಳಲ್ಲಿ ಹಾಗು ಶಿಕ್ಷಣ ನಿರ್ವಹಣೆಯ ವಿಚಾರದಲ್ಲಿ ಆದಿವಾಸಿ ಮುನ್ನೇಟ್ರ ಸಂಗಮ್ ಎಲ್ಲ ರೀತಿಯಲ್ಲಿ ತೊಡಗಿಸಿಕೊಳ್ಳಲು ಕಾರಣವಾಯಿತು. ನೀಲಗಿರಿ ಬೆಟ್ಟಗಳ ಆದಿವಾಸಿ ವಿದ್ಯಾರ್ಥಿಗಳ ಆಂತರಿಕ ಸಂಭಾಷಣೆಗಳಿಗೆ ಇದರಿಂದ ಒಂದು ಶಕ್ತಿಶಾಲಿ ನಿರೂಪಣೆಯು ಸೇರ್ಪಡೆಯಾಯಿತು. ಇದು ಅವರಿಗೆ ಇತರ ಪ್ರಭಾವಿ ಸಮುದಾಯಗಳ ಶಿಕ್ಷಕರು ತಮ್ಮನ್ನು ಕಾಣುವ ರೀತಿಯನ್ನು ನಿಭಾಯಿಸುವ ವಿಧಾನವನ್ನು ನೀಡಿತು.

**ಅಸ್ಮಿತೆಯ ಪುನರ್‌ನಿರ್ಮಾಣ**

ಆದಿವಾಸಿ ಅಸ್ಮಿತೆಯ ಪುನರ್ ನಿರ್ಮಾಣಕ್ಕಾಗಿ ವಿದ್ಯೋದಯ ಶಾಲೆಯು ಪ್ರಜ್ಞಾಪೂರ್ವಕವಾಗಿ ತನ್ನನ್ನು ತಾನು ಆದಿವಾಸಿ ಶಿಕ್ಷಕರ ಸುತ್ತಲೂ ಕಟ್ಟಿಕೊಂಡಿತು. ಹಾಗೆಂದ ಮಾತ್ರಕ್ಕೆ ಇತರ ಶಿಕ್ಷಕರು ಅಲ್ಲಿ ಪಾಠ ಮಾಡುತ್ತಿರಲಿಲ್ಲ ಎಂದೇನೂ ಅಲ್ಲ. ಮೊದಮೊದಲು, ವಿದ್ಯೋದಯ ಶಾಲೆಯಲ್ಲಿ ಶಿಕ್ಷಕರಾಗಿ ಸೇರಲು ಆದಿವಾಸಿ ಪದವೀಧರರ ಕೊರತೆಯಿತ್ತು. ಆದ್ದರಿಂದ ಶಾಲೆಯು ತನ್ನ ಶಿಕ್ಷಕರಿಗೆ ತರಬೇತಿ ನೀಡುವ ತನ್ನದೇ ಆದ ಒಂದು ಪ್ರಕ್ರಿಯೆಯನ್ನು ರೂಪಿಸಿಕೊಂಡಿತು. ಶಿಕ್ಷಕರು ಶಾಲಾ ಪಠ್ಯಪುಸ್ತಕಗಳ ಅಧ್ಯಯನದಲ್ಲಿ ತೊಡಗಿ ಕರಗತ ಮಾಡಿಕೊಂಡರು. ಬೋಧನಾ ವಿಧಾನದ ಕಲೆ ಮತ್ತು ಶಿಕ್ಷಣಶಾಸ್ತ್ರದ ಬಗ್ಗೆ ಅರಿತುಕೊಂಡರು. ಆದಿವಾಸಿ ಜನಾಂಗದ ನಾಯಕರು ಹಾಗು ಹಿರಿಯರು ಶಿಕ್ಷಕರೊಂದಿಗೆ ತಮ್ಮ ಹೋರಾಟದ ಬಗ್ಗೆ ಹಾಗು ಅದರಲ್ಲಿ ಶಿಕ್ಷಣದ ಪಾತ್ರವೇನು ಎಂಬುದನ್ನು ತಿಳಿಸಿಕೊಟ್ಟರು. ಶಾಲೆಗಳ ಮೂಲಕ ಆದಿವಾಸಿ ಸಮುದಾಯದ ಮಕ್ಕಳನ್ನು ಬೇರೊಂದು ಸಂಸ್ಕೃತಿಯು ನುಂಗಿಹಾಕಬಹುದಾದ ಅಪಾಯವನ್ನು ಶಿಕ್ಷಕರಿಗೆ ಮನದಟ್ಟು ಮಾಡಿಸಲಾಯಿತು. ಸಾಂಪ್ರದಾಯಿಕ ಶಾಲೆಗಳಲ್ಲಿ ಒಳ್ಳೆಯ ಹೆಸರು ಪಡೆಯುವ ಆದಿವಾಸಿ ಮಕ್ಕಳು ತಮ್ಮನ್ನು, ತಮ್ಮ ಸಂಬಂಧಿಕರನ್ನು,

ಗೆಳೆಯ–ಗೆಳತಿಯರನ್ನು ನಿಕೃಷ್ಟವಾಗಿ ಕಾಣುವಂತಾಗುವ ಅಪಾಯವೂ ಇತ್ತು. ಅವರು ತಮ್ಮ ಮಕ್ಕಳಿಗೆ ಶಾಲೆಯಲ್ಲಿ ದೊರಕಿಸಬೇಕಾದುದು ಈ ರೀತಿಯ ಶಿಕ್ಷಣವಲ್ಲವೆಂಬ ವಿಚಾರವನ್ನು ಒತ್ತಿ ಹೇಳಿದರು.

ವಿದ್ಯೋದಯ ಶಾಲೆಯು ತನ್ನ ಆವರಣದಲ್ಲಿ ಆದಿವಾಸಿ ಭಾಷೆಗಳಲ್ಲಿ ಮಾತನಾಡಲು ಮಕ್ಕಳಿಗೆ ಮುಕ್ತವಾಗಿ ಅನುಮತಿ ನೀಡಿತು. ಆ ಪ್ರದೇಶದ ಇತರ ಖಾಸಗಿ ಹಾಗು ಸರ್ಕಾರಿ ಶಾಲೆಗಳು, ಆದಿವಾಸಿ ಮಕ್ಕಳ ಭಾಷೆಯನ್ನು ಬದಿಗೊತ್ತಿ, ಮಕ್ಕಳು ಶಾಲಾ–ಆವರಣದಲ್ಲಿ ತಮಿಳಿನಲ್ಲಿಯೇ ಮಾತನಾಡುವಂತೆ ತಾಕೀತು ಮಾಡುತ್ತಿದ್ದವು. ವಿದ್ಯೋದಯ ಶಾಲೆಯ ಶಿಕ್ಷಕಿಯೊಬ್ಬರು, ಆ ಶಾಲೆಯಲ್ಲಿ ಶಿಕ್ಷಕಿಯಾಗಿ ಸೇರಿದಾಗ, ಅದೇ ಮೊದಲ ಬಾರಿಗೆ ಶಾಲೆಯಲ್ಲಿ ತನ್ನ ಆಡುಭಾಷೆಯಲ್ಲಿ ಮಕ್ಕಳು ಮಾತನಾಡುತ್ತಿರುವುದನ್ನು ಕೇಳಿದ್ದಾಗಿ ಹೇಳಿದರು. ಆಕೆಗೆ ಅದೊಂದು ವಿಚಿತ್ರವೂ, ನೂತನವೂ ಆದ ಅನುಭವವಾಗಿತ್ತು. ಶಾಲೆಯ ಗೋಡೆಗಳ ನಡುವೆ ಆಕೆಯ ಭಾಷೆಗೆ ಎಡೆಯಿಲ್ಲದಂತೆ ಇದ್ದರೂ, ಅದು ಅಲ್ಲಿ ನ್ಯಾಯ, ಔಚಿತ್ಯಪೂರ್ಣವೂ ಆಗಿ ತೋರಿತ್ತು. ಈ ಶಾಲೆಯಲ್ಲಿ ಮಕ್ಕಳು ಪ್ರವೇಶಿಸುತ್ತಿದ್ದಂತೆಯೇ ತಮ್ಮ ಮನೆಯ ಆಡುಭಾಷೆಯ ಬಗ್ಗೆ ಮುಜುಗರಪಡುವಂತಹ ಸಂದೇಶವನ್ನು ರವಾನಿಸುವ ವಾತಾವರಣ ಎದುರಾಗುತ್ತಿರಲಿಲ್ಲ. ತಮಿಳು ಅಧಿಕೃತ ಬೋಧನಾ ಮಾಧ್ಯಮವಾಗಿದ್ದು, ಅದನ್ನು ಇನ್ನೂ ಕಲಿಸುತ್ತಿದ್ದರೂ, ಹಂತ–ಹಂತವಾಗಿ ಮಕ್ಕಳಿಗೆ ಪರಿಚಯಿಸಲಾಗುತ್ತಿತ್ತು. ಉದಾಹರಣೆಗೆ, ವಿವಿಧ ಆದಿವಾಸಿ ಭಾಷೆಗಳಲ್ಲಿ ಕೆಂಪು ಬಣ್ಣಕ್ಕೆ ಬೇರೆ–ಬೇರೆ ಪದಗಳಿರುವ ಬಗ್ಗೆ ಹಾಗು ತಮಿಳಿನಲ್ಲಿ ಅದನ್ನು ಸೂಚಿಸುವ ಪದದ ಬಗ್ಗೆ ಶಿಕ್ಷಕರು ಮಕ್ಕಳೊಡನೆ ಚರ್ಚಿಸುತ್ತಿದ್ದರು.

### 'ಸ್ವ' ಪ್ರಜ್ಞೆಯೊಡನೆ ಸಂಬಂಧ

ಸಾಂಕೇತಿಕ ಒಡನಾಟವಾದಿಗಳ ಪ್ರಕಾರ ಈ ಶಾಲೆಯಲ್ಲಿ ಮಕ್ಕಳು ತಮ್ಮ ಸ್ವಪ್ರಜ್ಞೆಯನ್ನು ಕಟ್ಟಿಕೊಳ್ಳುತ್ತಿದ್ದು, ಅದನ್ನವರು ಅಡಗಿಸಿಟ್ಟು–ಕೊಳ್ಳಬೇಕಾದ ಮತ್ತು ಮುಚ್ಚಿಕೊಳ್ಳಬೇಕಾದ, ರಹಸ್ಯದಂತೆ ಕಾಣುತ್ತಿರಲಿಲ್ಲ. ಬದಲಿಗೆ, ಅವರು ತಮ್ಮ ಸ್ವಪ್ರಜ್ಞೆಯ ವಿವಿಧ ಭಾಗಗಳೊಂದಿಗೆ ಸಂಭಾಷಣೆಗಳನ್ನು ಕಟ್ಟಿಕೊಳ್ಳುವ ಪ್ರಯತ್ನದಲ್ಲಿದ್ದರು. ವಿವಿಧ ಭಾಷೆಗಳ ನಡುವಿನ ಅಧಿಕಾರದ ಸಂಬಂಧವನ್ನೇನೂ ಅವರು ಕಡೆಗಣಿಸಿರಲಿಲ್ಲ. ಮಕ್ಕಳು ಮತ್ತು ಶಿಕ್ಷಕರಿಬ್ಬರೂ ಈ ವ್ಯತ್ಯಾಸಗಳನ್ನು ಅರಿತಿದ್ದರು, ಹಾಗೆಯೇ ತಮಿಳು ಭಾಷೆಯ ಶಕ್ತಿಯನ್ನೂ ತಿಳಿದಿದ್ದರು. ಮಕ್ಕಳು ಶಾಲೆಯಲ್ಲಿ ಇಂಗ್ಲೀಷನ್ನೂ ಕಲಿಯುತ್ತಿದ್ದು, ಅದನ್ನು ಕೂಡ ಚೆನ್ನಾಗಿಯೇ ಕಲಿಸಲಾಗುತ್ತಿತ್ತು. ಇಂಗ್ಲಿಷಿನಲ್ಲಿ ಮಾತನಾಡಬಲ್ಲ ಸಾಮರ್ಥ್ಯದ ವಿಚಾರದಲ್ಲಿ ಈ ಮಕ್ಕಳು ನಿಜವಾಗಿಯೂ ಮೇಲಿದ್ದರು. ಈ ಮಕ್ಕಳ ಸ್ವಂತ ಅಸ್ಮಿತೆ, ತಮಿಳು ಅಸ್ಮಿತೆ ಹಾಗು ಇಂಗ್ಲಿಷ್ ಮಾತನಾಡಬಲ್ಲ ಅಸ್ಮಿತೆಗಳ ನಡುವೆ ಸಂಬಂಧವೊಂದು ನಿರ್ಮಾಣವಾಗುತ್ತಿತ್ತು. ಇದೊಂದು ಹೊಸ ಬಗೆಯ ಅಸ್ಮಿತೆಯಾಗಿತ್ತು. ಸಂಕೋಚ, ಮುಜುಗರಗಳಿಂದ ತಮಿಳಿನಲ್ಲಿ ಮಾತನಾಡುವ, ಆದರೆ, ಗುಟ್ಟಾಗಿ ತನ್ನ ಗೆಳೆಯ–ಗೆಳತಿಯರೊಂದಿಗೆ, ಕುಟುಂಬದ ಸದಸ್ಯರೊಂದಿಗೆ ಬೇರೊಂದು ಭಾಷೆಯಲ್ಲಿ ಉತ್ಸಾಹದಿಂದ ಮಾತನಾಡುತ್ತಿದ್ದ ಹಳೆಯ ಅಸ್ಮಿತೆಗಿಂತ ಇದು ವಿಭಿನ್ನವಾಗಿತ್ತು. ಬದಲಿಗೆ, ಮಕ್ಕಳು ಒಂದು ಕ್ರಿಯಾತ್ಮಕವೂ, ಆತ್ಮವಿಶ್ವಾಸವುಳ್ಳದ್ದೂ ಆದ ಸ್ವಪ್ರಜ್ಞೆಯನ್ನು ನಿರ್ಮಿಸಿಕೊಳ್ಳುವತ್ತ ಭರದಿಂದ ಮುಂದೆ ಸಾಗುತ್ತಿದ್ದರು.

ಸಾಂಪ್ರದಾಯಿಕ ಶಾಲಾಶಿಕ್ಷಣವು ಕೀಳರಿಮೆ ಮತ್ತು ಸಾಮರ್ಥ್ಯ ಹೀನತೆಯ ಅಸ್ಮಿತೆಯನ್ನು ಹುಟ್ಟುಹಾಕಿದ್ದ ಪರಿಸ್ಥಿತಿಯಲ್ಲಿ ಆದಿವಾಸಿ ಮುನ್ನೇತ್ರ ಸಂಗಮ್ ಕೈಗೊಂಡ ಶೈಕ್ಷಣಿಕ ಕಾರ್ಯವು ಅದನ್ನು ಸರಿಪಡಿಸುವುದರಲ್ಲಿ ನಿರತವಾಗಿದೆ. ವಿದ್ಯೋದಯ ಶಾಲೆ ಹಾಗು ಆದಿವಾಸಿ ಮುನ್ನೇತ್ರ ಸಂಗಮ್‌ನ ಚಟುವಟಿಕೆಗಳು ಯಾವ ರೀತಿ ಮಕ್ಕಳ ಅಸ್ಮಿತೆಯ ಪರಿಕಲ್ಪನೆಯಲ್ಲಿ ಮಾರ್ಪಾಡು ತರಲು ನೆರವಾಗುತ್ತಿವೆ ಎಂಬುದನ್ನು ಅರ್ಥಮಾಡಿಕೊಳ್ಳಲು ಸಾಂಕೇತಿಕ ಒಡನಾಟವಾದವು ನಮಗೆ ದಾರಿತೋರುತ್ತದೆ. ಇಲ್ಲಿ ಬೇರೊಂದು ರೀತಿಯ ಆಂತರಿಕ ಸಂಭಾಷಣೆಗಳನ್ನು ಸಾಧ್ಯವಾಗಿಸಲಾಗಿದೆ. ಇವು ಸಾವಕಾಶವಾಗಿ ಮಕ್ಕಳ ಕ್ರಿಯೆಗಳಿಗೆ ಬಲತುಂಬುತ್ತಿದ್ದು, ಅವರಿಗೆ ಅಸ್ಮಿತೆಯ ಹೊಸ ಪ್ರಜ್ಞೆಯೊಂದನ್ನು ರೂಢಿಸಿಕೊಳ್ಳಲು ಹಾಗು ಪ್ರಸ್ತುತ ಜಗತ್ತಿನಲ್ಲಿ ಒಂದು ನೂತನವೂ, ಗೌರವಾನ್ವಿತವೂ ಆದ ಸ್ಥಾನವನ್ನು ಕಲ್ಪಿಸಿಕೊಳ್ಳಲು ಅವರಿಗೆ ನೆರವು ನೀಡುತ್ತಿದೆ.

**ಕೃತಜ್ಞತೆ**
ಈ ಲೇಖನ ಬರೆಯಲು ನೀಡಿದ ಬೆಂಬಲಕ್ಕಾಗಿ ರಮಾ ಶಾಸ್ತ್ರಿ ಬಿ. ರಾಮದಾಸ್ ಮತ್ತು ವಿದ್ಯೋದಯ ಶಾಲೆಯ ಎಲ್ಲಾ ಶಿಕ್ಷಕರಿಗೂ ಮತ್ತು ಆದಿವಾಸಿ ಮುನ್ನೇತ್ರ ಸಂಗಮ್‌ನ ಎಲ್ಲಾ ಸದಸ್ಯರಿಗೂ ನಾನು ಆಭಾರಿಯಾಗಿದ್ದೇನೆ.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**

Blackledge, David A., and Barry Dennis Hunt. "Micro-Interpretive Approaches: An Introduction." In Sociological Interpretations of Education, 233–48. Taylor & Francis, 1985.

Madan, Amman, Rama Sastry, and B. Ramdas. "Social Movements and Educational Change: A Case Study of the Adivasi Munnetra Sangam." Economic & Political Weekly 54, no. 5 (February 2, 2019): 45–52.

Reay, Diane. "Finding or Losing Yourself? Working-Class Relationships to Education." In The Routledge Falmer Reader in Sociology of Education, edited by Stephen Ball. London and New York: Routledge Falmer, 2004.



**ಅಮ್ಮನ್ ಮದನ್** ಅವರು ಚಂಡೀಘಡದ ಪಂಜಾಬ್ ವಿಶ್ವವಿದ್ಯಾಲಯದಲ್ಲಿ ಮಾನವಶಾಸ್ತ್ರವನ್ನೂ, ನವದೆಹಲಿಯ ಜವಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರವನ್ನೂ ಅಧ್ಯಯನ ಮಾಡಿದ್ದಾರೆ. ಪ್ರಸ್ತುತ ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಬೋಧಿಸುತ್ತಿದ್ದು, ಶಿಕ್ಷಣ ಹಾಗು ಸಾಮಾಜಿಕ ಅಸಮಾನತೆಯನ್ನು ಕುರಿತಾದ ಕೃತಿ ರಚನೆಯಲ್ಲಿ ತೊಡಗಿದ್ದಾರೆ. 'ಶಿಕ್ಷಣ ಹಾಗು ಆಧುನಿಕತೆ' ಎಂಬ ಅವರ ಇತ್ತೀಚಿನ ಪುಸ್ತಕವನ್ನು ಏಕಲವ್ಯ ಪ್ರಕಟಿಸಿದೆ. ಇವರನ್ನು ಸಂಪರ್ಕಿಸಬಹುದಾದ ಇ-ಮೇಲ್ ವಿಳಾಸ: amman.madan@apu.edu.in

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ಲತಾ ಕೆ ಸಿ**

**ಮಕ್ಕಳ ಮನಸ್ಸುಗಳಲ್ಲಿ ಅದರಲ್ಲೂ ವಿಶೇಷವಾಗಿ ಆರಂಭಿಕ ಪ್ರಾಥಮಿಕ ತರಗತಿಗಳಲ್ಲಿನ ಮಕ್ಕಳಲ್ಲಿ ಬಹಳ ಕುತೂಹಲವಿರುತ್ತದೆ. ಅವರಲ್ಲಿ ಪ್ರಯೋಗದ ಕಿಡಿಯನ್ನು ಅಥವಾ ಪ್ರಶ್ನಿಸುವ ಮನೋಭಾವವನ್ನು ಬೆಳೆಸಿ ಉಳಿಸಿಕೊಂಡು ಹೋಗುವುದು ಶಿಕ್ಷಕರ ಜವಾಬ್ದಾರಿಯಾಗಿರುತ್ತದೆ. ಶಿಕ್ಷಕರು ತರಗತಿಯಲ್ಲಿ ಬಳಸುವ ಭಾಗವಹಿಸುವಿಕೆಯ ವಿಧಾನಗಳು ಮತ್ತು ಸಮೃದ್ಧ ಶೈಲಿಯಲ್ಲಿ ವಿಷಯವನ್ನು ಪ್ರಸ್ತುತಪಡಿಸುವುದರಿಂದ, ಇವೆಲ್ಲಾ ಮಕ್ಕಳ ತಿಳುವಳಿಕೆ ಹಾಗೂ ಗ್ರಹಿಕೆಯ ಮೇಲೆ ಮಾಂತ್ರಿಕ ಪ್ರಭಾವವನ್ನು ಬೀರುತ್ತದೆ. ಯಾವುದೇ ರೀತಿಯ ಭಯವಿಲ್ಲದೆ ವಿಷಯದಲ್ಲಿ ಮಕ್ಕಳು ತೊಡಗುವುದು ಮತ್ತು ವಿಷಯವನ್ನು ಇಷ್ಟಪಡುವುದು ಕಲಿಕೆಯ ನಿರ್ಣಾಯಕ ಅಂಶಗಳು.**

**–ಆಶಾ ಸಿಂಗ್, ಮಕ್ಕಳಲ್ಲಿ ಉತ್ಸಾಹದ ಜೀವಕಳೆ ತುಂಬಿ ಅವರ ಮನಸ್ಸುಗಳೊಂದಿಗೆ ತೊಡಗುವುದು, ಪು.17**

# ಪ್ರತಿಯೊಂದು ಮಗುವೂ ಕಲಿಯಲು ಒತ್ತಾಸೆಯಾಗುವಂತೆ ಪ್ರಕ್ರಿಯೆಗಳ ಆವಿಷ್ಕಾರ

ಅನಿಲ್ ಸಿಂಗ್

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (2005)ರ ಮಾರ್ಗದರ್ಶಿ ತತ್ವಗಳು ಕೆಲವು ವಿಷಯಗಳನ್ನು ಬಹಳ ಸ್ಪಷ್ಟವಾಗಿ ಹೇಳಿದೆ. ಜ್ಞಾನವು ಶಾಲೆಯ ಹೊರಗಿನ ಬದುಕನ್ನು ಬೆಸೆಯಬೇಕು, ಉರುಹೊಡೆಯುವ ವಿಧಾನಗಳಿಂದಾಚೆಗೆ ಕಲಿಕೆಯುಂಟಾಗಬೇಕು ಮತ್ತು ಬೋಧನಾ-ಕಲಿಕೆ ಪ್ರಕ್ರಿಯೆಯು ಯಾಂತ್ರಿಕವಾಗಬಾರದು ಎನ್ನುವುದಕ್ಕೆ ಒತ್ತು ನೀಡಿದೆ. ಕಲಿಕೆಯು ಪಠ್ಯಪುಸ್ತಕಗಳಾಚೆಗೂ ವಿಸ್ತರಿಸಿ ಮಕ್ಕಳಲ್ಲಿ ಸಮಗ್ರ ಅರಿವು ಮೂಡುವಂತೆ ಪಠ್ಯಕ್ರಮವನ್ನು ಶ್ರೀಮಂತ-ಗೊಳಸಬೇಕಿದೆ. ಪರೀಕ್ಷಾ ವ್ಯವಸ್ಥೆ ನಮ್ಯವಾಗಿರಬೇಕಿದ್ದು, ನಿಯಮಿತ ತರಗತಿಯ ಚಟುವಟಿಕೆಗಳೊಳಗೇ ಸಂಯೋಜಿತ-ವಾಗಿರಬೇಕು. ಶಾಲೆಯ ವಾತಾವರಣ ಮತ್ತು ಬೋಧನಾ-ಕಲಿಕಾ ಪ್ರಕ್ರಿಯೆಯು ಪ್ರಜಾಪ್ರಭುತ್ವ ತತ್ವಾಧಾರಿತ-ವಾಗಿರಬೇಕು.

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದಿಂದ ಶಾಲೆಗಳಲ್ಲಿ ಮಕ್ಕಳ ದಾಖಲಾತಿಯು ಹಿಂದೆಂದಿಗಿಂತಲೂ ಅತೀ ಹೆಚ್ಚಿನ ವೇಗ ಪಡೆದಿದೆ. ವೈವಿಧ್ಯಮಯ ಕೌಶಲ ಮತ್ತು ಸಾಮರ್ಥ್ಯಗಳನ್ನು ಹೊಂದಿರುವ, ವಿವಿಧ ಸಮಾಜೋ – ಆರ್ಥಿಕ ಹಿನ್ನೆಲೆಗಳಿಂದ ಬಂದಂತಹ ಮಕ್ಕಳು ಹಾಗು ಯಾರಿಗೆ ಪ್ರಾಥಮಿಕ ಶಿಕ್ಷಣ ದೊರಕುತ್ತಿರಲಿಲ್ಲವೋ ಅವರೆಲ್ಲರೂ ಇಂದು ಶಾಲೆಗೆ ಬರುತ್ತಿದ್ದಾರೆ. ಪ್ರಾಥಮಿಕ ಶಿಕ್ಷಣವು ಈಗ ಮಕ್ಕಳ ಮೂಲಭೂತ ಹಕ್ಕು. ಈಗಿನ ಬದಲಾದ ಪರಿಸ್ಥಿತಿಗಳಲ್ಲಿ ಒಳಗೊಳ್ಳುವ ರೀತಿಗಳ ಮೂಲಕ ಎಲ್ಲಾ ಮಕ್ಕಳಿಗೆ ಶಾಲೆಗಳಲ್ಲಿ ಒಂದು ಗೌರವಯುತ ಸ್ಥಾನ ನೀಡುವುದು ಅತ್ಯಗತ್ಯ. ಯಾವುದನ್ನೇ ಆದರೂ ಮತ್ತು ಎಲ್ಲವನ್ನೂ ಕಲಿಯುವ ಸಾಮರ್ಥ್ಯ ತಮಗೆ ಇದೆ ಎಂಬ ನಂಬಿಕೆಯನ್ನು ಮಕ್ಕಳಲ್ಲಿ ಹುಟ್ಟಿಸುವುದು ಬಹಳ ಮುಖ್ಯ. ನಮ್ಮ ಸಂವಿಧಾನದಲ್ಲಿ ಅಡಕಗೊಂಡ ಮೌಲ್ಯಗಳೆಡೆಗಿನ ನಮ್ಮ ಬದ್ಧತೆಗಳಿಗೂ ಕೂಡ ಇದು ಒಂದು ಮೂಲ ಅಗತ್ಯವಾಗಿದೆ.

ಆನಂದ್ ನಿಕೇತನ್ ಡೆಮಾಕ್ರೆಟಿಕ್ ಶಾಲೆಯು ಒಳಗೊಳ್ಳುವಿಕೆ ಹಾಗು ಪ್ರಜಾಪ್ರಭುತ್ವ ತತ್ವಗಳ ಆಶಯಗಳೊಂದಿಗೆ ಕಾರ್ಯ-ನಿರ್ವಹಿಸುತ್ತಿದೆ. ಕಳೆದ ಎಂಟು ವರ್ಷಗಳ ಪಯಣದಲ್ಲಿ, ಈ ಶಾಲೆಗೆ ಮಕ್ಕಳು ಕೇವಲ ವಿವಿಧ ಸಮಾಜೋ – ಆರ್ಥಿಕ ಹಿನ್ನೆಲೆಗಳಿಂದಷ್ಟೇ ಅಲ್ಲದೆ, ವಿವಿಧ ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಸಾಮರ್ಥ್ಯಗಳನ್ನು ಹೊತ್ತು ಬಂದಿದ್ದಾರೆ. ಮಗು ಕೇಂದ್ರಿತ, ಪ್ರಜಾಪ್ರಭುತ್ವವಾದಿ ಮತ್ತು ಒಳಗೊಳ್ಳುವ ಪರಿಸರದಲ್ಲಿ ಎಲ್ಲ ಮಕ್ಕಳೂ ತಮ್ಮದೇ ವೇಗ ಮತ್ತು ಗತಿಯಲ್ಲಿ ಮೈಲಿಗಲ್ಲು /ಬೌದ್ಧಿಕ ಸಾಮರ್ಥ್ಯಗಳನ್ನು ಮುಟ್ಟಿದ್ದಾರೆ.

ಪ್ರತಿ ಮಗುವೂ ಕಲಿಯಬಲ್ಲುದೆಂದು ಈ ಅನುಭವಗಳು ನಮಗೆ ತೋರಿಸಿವೆ. ನಾವು ಮಾಡಬೇಕಾದುದೆಂದರೆ ಬೋಧನೆಯ ಕುರಿತ ನಮ್ಮ ಆತಂಕಗಳನ್ನು ಕಡಿಮೆಗೊಳಿಸಿ-ಕೊಳ್ಳುವುದು, ಶಿಕ್ಷಕರಾಗಿ ನಮ್ಮ ಅಧಿಕಾರದ ಕಲ್ಪನೆಯನ್ನು ಕಾಲಕಾಲಕ್ಕೆ ಕಳಚಿಕೊಳ್ಳುವುದು, ಮಕ್ಕಳ ಅಂತರ್ಗತ ಸಾಮರ್ಥ್ಯಗಳನ್ನು ಮತ್ತು ಅವರ ಒಲವುಗಳನ್ನು ಅರಿತು-ಕೊಳ್ಳುವುದು, ಕಲಿಕೆಯನ್ನು ಅವರಿಗೆ ಅರ್ಥಪೂರ್ಣ ಮತ್ತು ಉಲ್ಲಾಸಮಯಗೊಳಿಸುವುದು, ಅವರ ಜ್ಞಾನ ಮತ್ತು ತಿಳುವಳಿಕೆಯನ್ನು ಗೌರವಿಸುವುದು ಹಾಗೂ ಅವರ ವೈಯಕ್ತಿಕತೆ ಮತ್ತು ಘನತೆಯನ್ನು ರಕ್ಷಿಸುವುದು. ಹೀಗಾದಾಗ, ಕೆಲವೇ ಸಮಯದಲ್ಲಿ ಕಲಿಕೆಯ ಹಾದಿಗಳು ತಾವಾಗಿಯೇ ತೆರೆದುಕೊಳ್ಳುತ್ತವೆ.

ಐದು ಮಕ್ಕಳ ಕುರಿತ ಪ್ರಕರಣ ಅಧ್ಯಯನದ ಮೂಲಕ ಈ ಲೇಖನದಲ್ಲಿ ನನ್ನ ವಾದಗಳನ್ನು ಪ್ರಸ್ತುತಪಡಿಸಿದ್ದೇನೆ. ಒಂದು ಶಾಲಾ ಘಟಕವಾಗಿ ಕಲಿಯಲು ನಮಗೆ ಬಹಳಷ್ಟು ಉದಾಹರಣೆಗಳು ದೊರೆತಿವೆ. ನಮ್ಮ ಕಲಿಯುವ – ಕಲಿಸುವ ಪ್ರಕ್ರಿಯೆಗಳನ್ನು ಮಕ್ಕಳ ಅಗತ್ಯಗಳ ಆಧಾರದ ಮೇಲೆ ರೂಪಿಸಿ ಮಾರ್ಪಡಿಸಿದೆವು ಹಾಗೂ ಇದರೊಂದಿಗೆ ಮಕ್ಕಳ ಕಲಿಕಾ ಸಾಧನೆಗಳು ವೇಗ ಪಡೆದವು.

ಆ ಐವರಲ್ಲಿ ರೋಹಿತ್ 7 ವರ್ಷ ವಯಸ್ಸಿನವನು. ಶಾಲೆಯ ಸಮೀಪದ ಗುಡಿಸಲೊಂದರಲ್ಲಿ ಅವರ ಕುಟುಂಬ ವಾಸಿಸುತ್ತದೆ. ಅವನ ತಂದೆ ಅನಕ್ಷರಸ್ಥರಾಗಿದ್ದು, ಕಾಲೋನಿಯಲ್ಲಿ ನೀರು ಸರಬರಾಜು ಮಾಡುವ ಮತ್ತು ನಲ್ಲಿ ರಿಪೇರಿ ಮಾಡುವವರಾಗಿ (ಪ್ಲಂಬರ್) ದುಡಿಯುತ್ತಾರೆ. ಅವನ ಅಣ್ಣ ಹೋಟೆಲೊಂದರಲ್ಲಿ ಕೆಲಸ ಮಾಡುತ್ತಾನೆ. ಅವನಿಗೆ ಒಬ್ಬ ತಂಗಿ ಇದ್ದು ಅವಳನ್ನೂ ಆತನೇ ಶಾಲೆಗೆ ಕರೆತರುತ್ತಾನೆ. ಎರಡನೆಯ ಮಗು ಬಿಂದು (8 ವರ್ಷ) ಒಂದು ಹಳ್ಳಿಯಿಂದ ಬಂದಿದ್ದು ಮರಾಠಿ ಮಾತನಾಡುತ್ತಾಳೆ. ಹಿಂದಿ ಮಾತನಾಡಲು ಮತ್ತು ಅರ್ಥಮಾಡಿಕೊಳ್ಳಲು ಬಹಳ ಪ್ರಯಾಸಪಡುತ್ತಾಳೆ. ತನಗೆ ಕಲಿಕೆ ಅಸಾಧ್ಯವೆಂದು ಅವಳು ಆತಂಕಗೊಂಡಿದ್ದಳು. ಮೂರನೆಯ ಮಗು ಕೃಷ್ಣ (8 ವರ್ಷ), ಒಂದು ದನದ ಕೊಟ್ಟಿಗೆಯಲ್ಲಿ ತನ್ನ ತಾತನೊಂದಿಗೆ ವಾಸಿಸುತ್ತಾನೆ. ಅವನು ಹತ್ತಿರದ ಒಂದು ಶಾಲೆಗೆ ಹೋಗುತ್ತಿದ್ದನು. ನಿಯಮಿತವಾಗಿ ಶಾಲೆಗೆ ಹಾಜರಾಗದ ಹಾಗೂ ನಿರೀಕ್ಷಿತ ಕಲಿಕಾ ಫಲಿತಗಳನ್ನು ಗಳಿಸಲಿಲ್ಲವೆಂಬ ಕಾರಣಕ್ಕೆ ಅವನನ್ನು ಶಾಲೆಯಿಂದ ಹೊರಹಾಕಲಾಗಿತ್ತು. ಅವನು ಈಗ ನಮ್ಮ ಶಾಲೆಗೆ ಬರುತ್ತಿದ್ದಾನೆ. ಆದರೆ ಅವನ ಆತ್ಮಸ್ಥೈರ್ಯ ಬಹಳವೇ ಘಾಸಿಗೊಂಡಿದೆ. ನಾಲ್ಕನೆಯ ಮಗು ಪೂಜಾ (9 ವರ್ಷ), ಅವಳಿಗೆ ಸ್ವಲ್ಪ ಶ್ರವಣದೋಷದ ಸಮಸ್ಯೆ ಇದೆ. ಅವಳಿಗೆ ಶ್ರವಣಸಾಧನ ಅಳವಡಿಸಿದರೂ, ಈಗಲೂ ಮಾತನಾಡುವ ಮತ್ತು ಆಲಿಸುವಲ್ಲಿ ತೊಂದರೆಯನ್ನು ಅನುಭವಿಸುತ್ತಿದ್ದಾಳೆ. ಅವಳು ಪ್ರತಿಷ್ಠಿತ ಖಾಸಗಿ ಶಾಲೆಯೊಂದರಲ್ಲಿ ಓದುತ್ತಿದ್ದಳು. ಆದರೆ ಆ ಶಾಲೆಯ ಆಡಳಿತ ವರ್ಗ ಅವಳು ವಿಶೇಷ ಶಾಲೆಗೆ ಹೋಗಬೇಕೆಂದು ಅಭಿಪ್ರಾಯಪಟ್ಟಿತು. ಅವಳ ಪೋಷಕರು ಸಂವೇದನಾಶೀಲರಾಗಿದ್ದರು ಮತ್ತು ಮನಶಾಸ್ತ್ರಜ್ಞರ ಸಲಹೆಯನ್ನು ಪಾಲಿಸುತ್ತಿದ್ದರು. ಹಾಗಾಗಿ ಅವಳನ್ನು ಆನಂದ್ ನಿಕೇತನ್ ಶಾಲೆಗೆ ಸೇರಿಸಲಾಯಿತು. ಐದನೇ ಮಗು ಸ್ವಾತಿ (10 ವರ್ಷ), ಇವಳಿಗೆ ಮಾತನಾಡುವುದರಲ್ಲಿ ತೊಡಕುಗಳಿದ್ದವು. ಮಾತನಾಡುವಾಗ ಉಗ್ಗುತ್ತಿದ್ದಳು, ಬಿಕ್ಕಳಿಸುತ್ತಿದ್ದಳು ಮತ್ತು ಆಗಾಗ ಮಾತು

ತೊದಲುತ್ತಿತ್ತು. ಕೀಳರಿಮೆಯ ಭಾವನೆಯೂ ಅವಳಲ್ಲಿ ಬೇರೂರಿ, ಅತಿ ಸಣ್ಣ ವಿಷಯಗಳಿಗೂ ಅಳಲು ಆರಂಭಿಸುತ್ತಿದ್ದಳು.

ಈ ಎಲ್ಲಾ ಐದು ಮಕ್ಕಳು ಆನಂದ್‌ನಿಕೇತನ್ ಶಾಲೆಯಲ್ಲಿ ಮೂರರಿಂದ ಎಂಟು ವರ್ಷಗಳ ಕಾಲ ಇದ್ದರು. ಅವರು ಶೈಕ್ಷಣಿಕ ವಿಷಯದಲ್ಲಿ ಉತ್ತಮ ಸಾಧನೆ ಮಾಡಲು ಸಾಧ್ಯವಾದದ್ದಷ್ಟೇ ಅಲ್ಲದೆ ತಮ್ಮ ಇತರ ಸವಾಲುಗಳನ್ನೂ ಸಹಾ ಮೀರಿದರು. ಶಾಲೆಯಲ್ಲಿ ಮತ್ತು ಅದರ ಪ್ರಕ್ರಿಯೆಯಲ್ಲಿ ಅಗತ್ಯ ಬದಲಾವಣೆಗಳನ್ನು ತರುವ ಮೂಲಕ ಹಾಗೂ ನಮ್ಮ ದೃಷ್ಟಿಕೋನಗಳನ್ನು ವಿಸ್ತರಿಸಿಕೊಳ್ಳುವ ಮೂಲಕ ಪ್ರತಿ ಮಗುವೂ ತನ್ನದೇ ಆದ ವೇಗ, ಗತಿ, ಆಸಕ್ತಿ ಇವುಗಳ ಮೂಲಕ ಎಲ್ಲ ಸವಾಲುಗಳನ್ನು ಎದುರಿಸಿಯೂ ನಿರೀಕ್ಷಿತ ಶೈಕ್ಷಣಿಕ ಮಟ್ಟವನ್ನು ಮುಟ್ಟಬಹುದಾದಂತಹ ವಾತಾವರಣವನ್ನು ರೂಪಿಸಬಹುದು ಎಂಬ ವಿಶ್ವಾಸವನ್ನು ನಾವು ಕಂಡುಕೊಂಡೆವು.

ಏಳು ವರ್ಷದ ರೋಹಿತ್ ತನ್ನ ಬಣ್ಣ ಮತ್ತು ಕೂದಲಿನಿಂದಾಗಿ ಬಹಳ ಅಭದ್ರತೆಯನ್ನು ಅನುಭವಿಸುತ್ತಿದ್ದನು. ಶಾಲೆಯಲ್ಲಿ ಯಾರೊಡನೆಯೂ ಬೆರೆಯದೇ ಮೌನವಾಗಿ ಇರುತ್ತಿದ್ದನು. ಅವನು ಶಾಲೆಗೆ ಪ್ರತಿದಿನ ಬರುತ್ತಿರಲಿಲ್ಲ. ಶಾಲೆಯ ಸಮೀಪದ ಸ್ಲಂನಲ್ಲಿರುವ ಗುಡಿಸಲೊಂದರಲ್ಲಿ ಅವನು ವಾಸಿಸುತ್ತಿದ್ದನು. ಶಾಲೆಗೆ ಬರುವ ದಾರಿಯಲ್ಲಿಯೇ ಈ ಗುಡಿಸಲು ಇದ್ದಿದ್ದರಿಂದ ಈ ಅಂಶವೂ ಅವನು ಕೀಳರಿಮೆ ಅನುಭವಿಸುವಂತೆ ಮಾಡಿತು. ಅವನ ತಾಯಿಯು ನಗರವನ್ನು ತೊರೆದು ತನ್ನ ಹಳ್ಳಿಗೆ ತಿರುಗಿ ಹೋಗಿದ್ದಳು. ಒಡಹುಟ್ಟಿದವರು ಸೇರಿ ಅಡುಗೆ ಮಾಡುತ್ತಿದ್ದರು. ಅವರ ತಂದೆಯೂ ಕೆಲಸದ ಕಾರಣದಿಂದಾಗಿ ಹೆಚ್ಚಿನ ಸಮಯ ಮನೆಯಿಂದ ದೂರವಿರುತ್ತಿದ್ದರು. ಅವರ ಅಣ್ಣ ರಾಜ್ ಕೂಡ ಕೆಲಸಕ್ಕೆ ಹೋಗುತ್ತಿದ್ದ. ಇಂತಹ ಸನ್ನಿವೇಶದಲ್ಲಿ ತಂಗಿ ಒಬ್ಬಳನ್ನೇ ಮನೆಯಲ್ಲಿ ಬಿಡುವುದು ಕಷ್ಟವಾಗುತ್ತಿತ್ತು. ಅವನು ಅವಳನ್ನೂ ಶಾಲೆಗೆ ಕರೆತರಬಹುದು ಎಂದು ಹೇಳಿದೆವು. ಇನ್ನಿತರ ಎಷ್ಟೋ ಪುಟ್ಟ ಮಕ್ಕಳು ಶಾಲೆಗೆ ಬರುತ್ತಿದ್ದರು. ಅವನ ತಂಗಿಯು ಆ ಮಕ್ಕಳೊಂದಿಗೆ ಆಡುತ್ತಿದ್ದಳು. ಇದರಿಂದಾಗಿ ಅವನು ದಿನವೂ ಶಾಲೆಗೆ ಬರಲಾರಂಭಿಸಿದ ಮತ್ತು ಶಾಲೆಯಲ್ಲಿ ನಿರಾಳತೆಯನ್ನು ಅನುಭವಿಸಿದ.

ಆಟದ ಮೈದಾನದಲ್ಲಿ ಹಾಗೂ ಮರಗಳನ್ನು ಹತ್ತುವುದರಲ್ಲಿ ಯಾರೂ ಅವನನ್ನು ಸರಿಗಟ್ಟಲು ಆಗುತ್ತಿರಲಿಲ್ಲ. ಆದರೆ ಓದುವುದರತ್ತ ಅವನ ಆಸಕ್ತಿಯನ್ನು ಹರಿಸಲಿಲ್ಲ. ಶಿಕ್ಷಕರಾದ ನಾವು ರೋಹಿತ್‌ನ ಸಮಸ್ಯೆಯನ್ನು ಅರಿತುಕೊಳ್ಳಲು ನಮ್ಮಲ್ಲಿಯೇ ಮಾತನಾಡಿ–ಕೊಂಡೆವು. ಒಂದು ಕಬಡ್ಡಿ ತಂಡವನ್ನು ಕಟ್ಟಲು ನಿರ್ಧರಿಸಿದೆವು. ಮುಂದೆ ಶಾಲೆಯ ಸಮಯ ಮುಗಿದ ನಂತರ ಪ್ರತಿದಿನ ಅರ್ಧ ಗಂಟೆಗಳ ಕಾಲ ಕಬಡ್ಡಿ ಆಡುತ್ತಿದ್ದೆವು. ಇಲ್ಲಿ ಅಮೋಘ ನಾಯಕತ್ವ ಗುಣವು ರೋಹಿತ್‌ನಲ್ಲಿ ಮೊಳಕೆಯೊಡೆಯಿತು. ಇದರಿಂದ ಅವನು ಬಹಳಷ್ಟು ಸ್ನೇಹಿತರನ್ನು ಸಂಪಾದಿಸಲು ಸಾಧ್ಯವಾಯಿತಷ್ಟೇ ಅಲ್ಲದೆ ತನ್ನ ಓರಗೆಯವರೊಡನೆ ಪ್ರಭಾವಿ ಇರುವಿಕೆಯನ್ನು ಸಾಧಿಸಲು ಸಾಧ್ಯವಾಯಿತು. ಆ ಮಕ್ಕಳಲ್ಲಿ ಈಗವನು ಎಲ್ಲರ ಮೆಚ್ಚಿನವನಾಗಿದ್ದ ಮತ್ತು ಎಲ್ಲಾ ಮಕ್ಕಳು ಅವನಿರುವ ತಂಡವನ್ನು ಸೇರಲು ಆಶಿಸುತ್ತಿದ್ದರು.

ಅವನು ಹಲವಾರು ಪಕ್ಷಿಗಳು ಮತ್ತು ಪ್ರಾಣಿಗಳ ಧ್ವನಿಯನ್ನು ಅನುಕರಿಸುತ್ತಿದ್ದನು. ಮಕ್ಕಳೆಲ್ಲ ಸೇರಿ ಒಂದು ಕಿರುಚಿತ್ರವನ್ನು ಚಿತ್ರೀಕರಿಸಲು ಅಣಿಯಾದರು. ಹಿನ್ನೆಲೆ ಸಂಗೀತವನ್ನು ರೋಹಿತ್ ಒದಗಿಸಿದನು. ಹಲವಾರು ಧ್ವನಿಗಳನ್ನು ಅಂದರೆ ಕಾಡಿನ, ನೀರು ಸುರಿಯುತ್ತಿರುವ, ಪಕ್ಷಿಗಳ, ನಾಯಿಗಳ ಮತ್ತು ಹಸುಗಳ, ಮೋಟಾರು ಬೈಕುಗಳ, ರೈಲುಗಳ ಹಾಗೂ ಪಾತ್ರೆಗಳ ಹೀಗೆ ಹಲವಾರು ಧ್ವನಿಗಳನ್ನು ಸೃಷ್ಟಿಸಿದನು. ಅವನು ಕೆಲವನ್ನು ಮಿಮಿಕ್ರಿಯ ಮೂಲಕ ಮಾಡಿದರೆ ಉಳಿದವನ್ನು ತನ್ನದೇ ವಿನೂತನ ವಿಧಾನದಲ್ಲಿ ನಿರ್ಮಿಸಿದನು.

ಆನ್ವಯಿಕ ಗಣಿತದಲ್ಲಿ ರೋಹಿತ್ ಸಮರ್ಥನಾಗಿದ್ದನು. ಗಣಿತ ಶಿಕ್ಷಕರು ಅವನ ಪ್ರತಿದಿನದ ಬದುಕಿಗೆ ಸಂಬಂಧಿಸಿದಂತೆ ಹಲವಾರು ಸಮಸ್ಯೆಗಳನ್ನು ರಚಿಸಿ ಕೇಳಿದಾಗ, ಅವನು ಅವುಗಳನ್ನು ಸರಾಗವಾಗಿ ಪರಿಹರಿಸಿದನು. ಅವನು ಪ್ರತಿದಿನ ಶಾಲೆಗೆ ಬರಲಾರಂಭಿಸಿದ್ದರಿಂದ ಇತರ ಮಕ್ಕಳೊಡನೆ ಸ್ನೇಹ ಮತ್ತು ಶಿಕ್ಷಕರೊಂದಿಗೆ ಬಾಂಧವ್ಯ ಬೆಳೆಯಿತು ಮತ್ತು ಇವು ಅವನು ತರಗತಿಯನ್ನು ಆನಂದಿಸುವಂತೆ ಮಾಡಿದವು. ಅವನು ತನ್ನ ಕಲಿಕೆಯೆಡೆಗೆ ಗಮನಹರಿಸಲು ಪ್ರಾರಂಭಿಸಿದನು. ಗಣಿತದೊಡನೆ ಹಿಂದಿ ಮತ್ತು ಇಂಗ್ಲಿಷನ್ನು ಕೂಡ ಕಲಿತನು. ಆದರೆ ಸಮಾಜ ವಿಜ್ಞಾನವನ್ನು, ವ್ಯಕ್ತಿಗಳು ಮತ್ತು ಸರ್ಕಾರ ಇವುಗಳ ನಡುವಣ ಸಂಬಂಧಗಳನ್ನು ಅವನ ಬದುಕಿನ ಉದಾಹರಣೆಗಳ ಮೂಲಕ ವಿವರಿಸಿದಾಗ ಬಲುಬೇಗನೆ ಅದು ಅವನ ಆಸಕ್ತಿಯ ವಿಷಯವಾಯಿತು. ಸಮಾಜ ವಿಜ್ಞಾನದ ಅಧ್ಯಯನ ಯೋಜನೆಗಾಗಿ ಅವನು ಶಾಲೆಯ ಸಮೀಪದಲ್ಲಿ ಹರಿಯುತ್ತಿದ್ದ ಒಂದು ಕಾಲುವೆಯನ್ನು ಆಯ್ಕೆ ಮಾಡಿಕೊಂಡನು. ಅದು ಆರಂಭವಾಗುವ ಜಾಗದಿಂದ ಹಿಡಿದು ಅದು ಎಲ್ಲಿಗೆ ಹೋಗುತ್ತದೆ ಹಾಗೂ ಎಷ್ಟು ಕವಲುಗಳನ್ನು ಪಡೆಯುತ್ತದೆ ಎಂಬುದನ್ನೆಲ್ಲಾ ಗಮನಿಸಿದನು. ನೀರು ಹರಿಯುವ ಕಾಲಗಳನ್ನು ಸಹ ಅವರು ಅಧ್ಯಯನ ಮಾಡಿದರು. ಇದರಿಂದ ನೀರು ಯಾವ ತಿಂಗಳಲ್ಲಿ ಹರಿಯುತ್ತದೆ ಮತ್ತು ಯಾವ ತಿಂಗಳುಗಳಲ್ಲಿ ಕಾಲುವೆ ಒಣಗಿರುತ್ತದೆ ಎಂದು ಕಂಡುಕೊಂಡರು. ಎಷ್ಟು ಜನ ರೈತರು ತಮ್ಮ ಬೆಳೆಗಾಗಿ ಕಾಲುವೆಯನ್ನು ನೆಚ್ಚಿಕೊಂಡಿದ್ದಾರೆ ಎಂದು ಗಮನಿಸಿ ತನ್ನ ಬದುಕು ಮತ್ತು ತನ್ನ ಸುತ್ತಲಿನವರ ಬದುಕಿಗೆ ಕಾಲುವೆ ಎಷ್ಟು ಮುಖ್ಯ ಎಂದು ವಿಶ್ಲೇಷಿಸಿದರು. ಯೋಜನೆಗೆ ಮಾಡಿದ ಕೆಲಸವನ್ನು ತುಂಬಾ ಸುಂದರವಾಗಿ ರೂಪಿಸಿ ತರಗತಿಯಲ್ಲಿ ಎಲ್ಲರ ಮುಂದೆ ಪ್ರದರ್ಶನಕ್ಕೆ ಇಟ್ಟನು.

ರೋಹಿತ್ ಆರು ವರ್ಷಗಳ ಕಾಲ ಶಾಲೆಯಲ್ಲಿ ಇದ್ದನು. ಈ ಸಮಯದಲ್ಲಿ ಅವನು ಎಲ್ಲಾ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸಿದನು. ಸ್ಲಂ ನೆಲಸಮವಾದ ನಂತರ ರೋಹಿತ್ ಮತ್ತು ಅವನ ಕುಟುಂಬ ಶಾಲೆಯಿಂದ ಬಲುದೂರ ಬೇರೆಡೆಗೆ ಸ್ಥಳಾಂತರವಾಗಬೇಕಾಯಿತು. ಅಲ್ಲಿಗೆ ಸಮೀಪದ ಸರ್ಕಾರಿ ಶಾಲೆಯೊಂದರಲ್ಲಿ ಅವನು 7ನೇ ತರಗತಿಗೆ ದಾಖಲಾದನು. ನಂತರ ಒಮ್ಮೆ ಅವನು ಶಾಲೆಗೆ ಕೂಡ ಭೇಟಿ ನೀಡಿದ್ದನು.

ಎಂಟು ವರ್ಷದ ಬಿಂದು ಮಹಾರಾಷ್ಟ್ರದ ಒಂದು ಹಳ್ಳಿಯಿಂದ ಬಂದಿದ್ದಳು. ಅವಳಿಗೆ ಹಿಂದಿ ಸ್ವಲ್ಪಮಟ್ಟಿಗೆ ಅರ್ಥವಾಗುತ್ತಿತ್ತು. ಆದರೆ ಹಿಂದಿಯಲ್ಲಿ ಮಾತನಾಡುವುದು ಅವಳಿಗೆ ಬಹಳ ಪ್ರಯಾಸದ ವಿಷಯವಾಗಿತ್ತು. ಹಿಂದಿಯನ್ನು ಓದುವುದು ಮತ್ತು ಬರೆಯುವುದು ಇಲ್ಲವೇ ಇಲ್ಲ ಎನ್ನುವಂತಿತ್ತು. ಹಿಂದಿ ಶಿಕ್ಷಣ ಮಾಧ್ಯಮವಾಗಿದ್ದ ತರಗತಿಯಲ್ಲಿ ಅವಳು ಮೊದಲಿಗೆ ಕಷ್ಟಪಡುತ್ತಿದ್ದಳು. ಸುಮಾರು ಒಂದು ತಿಂಗಳು ತರಗತಿಯಲ್ಲಿ ಅನಾಸಕ್ತಿಯಿಂದ, ಯಾರೊಂದಿಗೂ ಮಾತನಾಡದೆ ಅಥವಾ ಅವಳಿಗೆ ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲು ಇಷ್ಟವಿಲ್ಲದೆ ಕುಳಿತಿರುತ್ತಿದ್ದಳು. ಮನೆಯಲ್ಲಿ ದಿನವೂ ಅಳುತ್ತಾಳೆ ಮತ್ತು ಇದೇ ರೀತಿ ಮುಂದುವರೆಯಲು ಸಾಧ್ಯವಾಗುವುದಿಲ್ಲ ಎಂದು ಗೋಗರೆಯುತ್ತಾಳೆ ಎಂದು ಅವಳ ತಾಯಿ ತಿಳಿಸಿದರು. ತನಗೆ ಎಂದಿಗೂ ಓದಲು ಮತ್ತು ಕಲಿಯಲು ಸಾಧ್ಯವಾಗದು ಎಂಬ ಚಿಂತೆಯಿಂದ ಅವಳು ತುಂಬಾ ನಿರಾಸೆಗೊಂಡಿದ್ದಳು.

ಶಿಕ್ಷಕರು ಒಟ್ಟಾಗಿ ಸೇರಿ ಚರ್ಚಿಸಿ ಅವಳಿಗೋಸ್ಕರ ಒಂದು ಯೋಜನೆಯನ್ನು ತಯಾರಿಸಿದರು. ನಮ್ಮಲ್ಲಿನ ಒಬ್ಬ ಸಹಶಿಕ್ಷಕರು ಮರಾಠಿ ಬಲ್ಲವರಾಗಿದ್ದರು. ಬಿಂದುವಿನೊಡನೆ ನಿಧಾನವಾಗಿ ಸಂವಾದವನ್ನು ಆರಂಭಿಸುವ ಜವಾಬ್ದಾರಿಯನ್ನು ಅವರಿಗೆ ನೀಡಲಾಯಿತು. ಅದೇ ಸಮಯದಲ್ಲಿ ನಾವು ಎರಡು ಮರಾಠಿ ಹಾಡುಗಳನ್ನು ಹುಡುಕಿಕೊಂಡು ಅವುಗಳನ್ನು ಬೆಳಗಿನ ಪ್ರಾರ್ಥನಾ ಸಭೆಯಲ್ಲಿ ಹಾಡಲು ಆರಂಭಿಸಿದೆವು. ನಮ್ಮ ಬೆಳಗಿನ ಸಭೆಗಳು ಅನೌಪಚಾರಿಕ, ಮುಕ್ತ ಮತ್ತು ಸ್ವಇಚ್ಛೆಯ ವೇದಿಕೆಯಾಗಿ ಬಹಳಷ್ಟು ಸಾಧ್ಯತೆಗಳಿಂದ ಕೂಡಿತ್ತು. ಇದರಲ್ಲಿ ಗುಂಪು ಚಟುವಟಿಕೆಗಳಿದ್ದು ಎಲ್ಲರಿಗೂ ಅವಕಾಶ ದೊರೆಯುತ್ತಿತ್ತು. ಮರಾಠಿ ಹಾಡಿನ ಸಮಯ ಬಂದಾಗ ಬಿಂದು ಅತ್ಯಂತ ಉತ್ಸಾಹದಿಂದ ಭಾಗವಹಿಸುತ್ತಿದ್ದಳು, ಅಷ್ಟೇ ಅಲ್ಲದೆ ಈ ಹಾಡನ್ನು ಮುನ್ನಡೆಸುವ ಜವಾಬ್ದಾರಿಯನ್ನು ಅವಳಿಗೇ ನೀಡಲಾಯಿತು. ನಿಜವೆಂದರೆ, ಅವಳು ಮಕ್ಕಳಿಗೆ ಹೊಸ ಹಾಡುಗಳನ್ನು ಪರಿಚಯಿಸಿದಳು. ವೇದಿಕೆ ಚಟುವಟಿಕೆಯಲ್ಲಿ ಮಕ್ಕಳು ತಮ್ಮ ಹಿಂದಿನ ದಿನದ ಶಾಲಾ ಅನುಭವಗಳನ್ನು ಹಂಚಿಕೊಳ್ಳುತ್ತಾರೆ. ಬಿಂದುವಿಗೆ ತನ್ನ ಅನುಭವವನ್ನು ಮರಾಠಿಯಲ್ಲಿ ಹಂಚಿಕೊಳ್ಳಲು ಅನುವು ಮಾಡಿಕೊಡಲಾಯಿತು. ಇದನ್ನು ನಂತರದಲ್ಲಿ ಮರಾಠಿ ಬಲ್ಲ ಶಿಕ್ಷಕರು ಇತರ ಮಕ್ಕಳಿಗೆ ಹಿಂದಿಗೆ ಅನುವಾದಿಸಿ ಹೇಳುತ್ತಿದ್ದರು.

ಅಷ್ಟೇ ಅಲ್ಲದೆ ಹಲವಾರು ಮರಾಠಿ ಜಾನಪದ ಕಥೆಗಳನ್ನು ಹುಡುಕಿ ತರಗತಿಯಲ್ಲಿ ಹೇಳಲಾರಂಭಿಸಿದೆವು. ಇವುಗಳಲ್ಲಿ ಕೆಲವನ್ನು ಅವಳು ಈ ಹಿಂದೆಯೂ ಕೇಳಿದ್ದರಿಂದ ಹಾಗೂ ಅದನ್ನು ಬಹಳ ಆನಂದಿಸಲು ಆರಂಭಿಸಿದಳು. ಅಲ್ಪಸ್ವಲ್ಪ ತಿಳಿದಿದ್ದ ಹಿಂದಿಯನ್ನು, ಬಹಳಷ್ಟು ಮರಾಠಿ ಪದಗಳನ್ನು ಉಪಯೋಗಿಸಿ ಈ ಜಾನಪದ ಕಥೆಗಳ ಬಗ್ಗೆ ಇನ್ನೂ ಹೆಚ್ಚಿನ ವಿಷಯಗಳನ್ನು ತನ್ನ ಸಹಪಾಠಿಗಳೊಂದಿಗೆ ಹಂಚಿಕೊಳ್ಳುತ್ತಿದ್ದಳು. ಇದು ಅವಳ ಆತ್ಮಸ್ಥೈರ್ಯವನ್ನು ಬಹಳ ಹೆಚ್ಚಿಸಿತು. ತನಗೆ ಕೇವಲ ಮರಾಠಿಯಷ್ಟೇ ಬರುತ್ತದೆಂಬ ಕೀಳರಿಮೆಯನ್ನು ಹೋಗಲಾಡಿಸಿ ಓರಗೆಯವರೊಂದಿಗೆ ಗೆಳೆತನವನ್ನು ಬೆಳೆಸಲು ಆಕೆಗೆ ಸಾಧ್ಯವಾಯಿತು. ನಂತರದಲ್ಲಿ ಅವಳು ಹಿಂದಿ, ವಿಜ್ಞಾನ ಮತ್ತು ಗಣಿತವನ್ನು ಕಲಿಯುವ ಸವಾಲನ್ನು ಎತ್ತಿಕೊಂಡಳು. ಕಲಿಯಲು ಒಮ್ಮೆ ಅವಳು ಮುಂದಡಿ ಇಟ್ಟಾಗ ಶಾಲೆಯು ಅವಳಿಗೆ ಸಹಕರಿಸಿತು. ಕೆಲವೇ ಸಮಯದಲ್ಲಿ ಬಿಂದು ಹಿಂದಿಯಲ್ಲಿ ಮಾತನಾಡಲು, ಅಷ್ಟೇ ಅಲ್ಲ ನಂತರದಲ್ಲಿ ಓದಲು ಮತ್ತು ಬರೆಯಲು ಕೂಡ ಕಲಿತಳು. ಶಾಲೆಯು ಅವಳನ್ನು ಮುಕ್ತವಾಗಿ ಬರಮಾಡಿಕೊಂಡಿತು ಹಾಗೂ ಅವಳು ಕೂಡ ಶಾಲೆಯನ್ನು ಸ್ವೀಕರಿಸಿದಳು. ಮುಂದಿನ ಕೆಲವು ವರ್ಷಗಳಲ್ಲಿ ಬಿಂದು ಶಾಲೆಗೆ ನಿಯಮಿತವಾಗಿ ಬರುವ ವಿದ್ಯಾರ್ಥಿಯಾದಳು ಹಾಗೂ ವೇಗವಾಗಿ ಕಲಿಯುವ ಮಕ್ಕಳಲ್ಲಿ ಒಬ್ಬಳಾದಳು. ಈಗ ಬಿಂದು ಇಂಗ್ಲಿಷ್‌ನಲ್ಲಿಯೂ ಸಂವಾದ ನಡೆಸಬಲ್ಲಳು. ಅವಳು ಹಿಂದಿಯಲ್ಲಿ ಪದ್ಯಗಳನ್ನು, ಕತೆಗಳನ್ನು ಕೂಡ ಬರೆದಿದ್ದಾಳೆ. ಅವಳು ನಿರಂತರವಾಗಿ ಸಂಗೀತ ತರಗತಿಗೆ ಬಂದದ್ದರಿಂದ ಹಾಗೂ ಹಾಡುವ ಬಗ್ಗೆ ಅಮಿತ ಉತ್ಸಾಹ ಬೆಳೆಸಿಕೊಂಡಿದ್ದರಿಂದ ಸಂಗೀತದಲ್ಲಿ ಅವಳಿಗೆ ಔಪಚಾರಿಕ ತರಬೇತಿಯನ್ನು ನೀಡಲು ಆರಂಭಿಸಲಾಯಿತು. ಶಾಲೆಯ ನಾಟಕಗಳಲ್ಲಿಯೂ ಅವಳು ಪಾತ್ರ ವಹಿಸಲು ಆರಂಭಿಸಿದಳು ಹಾಗೂ ರಿಂಚೆನ್ ಅವರ 'ಐ ವಿಲ್ ಸೇವ್ ಮೈ ಲ್ಯಾಂಡ್' ಎಂಬ ಪುಸ್ತಕ ಆಧಾರಿತ ನಾಟಕದಲ್ಲಿ ಮಾಟಿ ಎಂಬ ನಾಯಕಿಯ ಪಾತ್ರವನ್ನು ವಹಿಸಿದ್ದ ಅವಳು ಅದ್ಭುತವಾಗಿ ನಟಿಸಿದಳು. ಈ ವರ್ಷ ಬಿಂದು 8ನೇ ತರಗತಿಯನ್ನು ದಾಟಿದ್ದಾಳೆ. ಅವಳು ತನ್ನ ಕಲಿಕೆಯನ್ನು ಮುಂದುವರೆಸಲು ಬೇರೆಯ ಶಾಲೆಯನ್ನು ಸೇರುವ ತಯಾರಿಯಲ್ಲಿದ್ದಾಳೆ.

ಎಂಟು ವರ್ಷದ ಕೃಷ್ಣನು ತನ್ನ ಅಜ್ಜಿ–ತಾತನೊಂದಿಗೆ ಒಂದು ದನದ ಕೊಟ್ಟಿಗೆಯಲ್ಲಿ ವಾಸಿಸುತ್ತಾನೆ. ಮೂರನೇ ತರಗತಿಯವರೆಗೆ ಅವನು ಹತ್ತಿರದ ಖಾಸಗಿ ಶಾಲೆಗೆ ಹೋಗುತ್ತಿದ್ದನು. ಶಾಲೆಗೆ ಸರಿಯಾಗಿ ಹಾಜರಾಗದೆ ನಿರೀಕ್ಷಿತ ಕಲಿಕಾ ಮಟ್ಟವನ್ನು ಮುಟ್ಟಲಿಲ್ಲ ಎಂದು ಅವನನ್ನು ಶಾಲೆಯಿಂದ ಹೊರಹಾಕಲಾಗಿತ್ತು.

ಬೆಳಗ್ಗೆ 4 ಗಂಟೆಗೆ ಎದ್ದು ದನಗಳಿಗೆ ಮೇವು ತರಲು ಹೋಗುವುದರೊಂದಿಗೆ ಕೃಷ್ಣನ ದಿನಚರಿ ಆರಂಭವಾಗುತ್ತದೆ, 7 ಗಂಟೆಯೊಳಗೆ ಕೊಟ್ಟಿಗೆಯನ್ನು ಶುಚಿಗೊಳಿಸಲು ಮತ್ತು ಹಾಲು ಕರೆದು ಮುಗಿಸಲು ಅಜ್ಜಿ–ತಾತನಿಗೆ ಸಹಾಯ ಮಾಡುತ್ತಾನೆ. ಜನರು ಹಾಲು ಕೊಳ್ಳಲು ಬರಲಾರಂಭಿಸುತ್ತಾರೆ. ಅವನು ತನ್ನ ಸೈಕಲ್ಲಿನ ಮೇಲೆ ಹಲವು ಮನೆಗಳಿಗೆ ಹಾಲು ಹಾಕಲು ಹೋಗುತ್ತಾನೆ. ನಂತರ 8 ಗಂಟೆಯ ಹೊತ್ತಿಗೆ ಅಡುಗೆಮನೆಯಲ್ಲಿ ಅಜ್ಜಿಗೆ ಸಹಾಯ ಮಾಡುತ್ತಾನೆ. ಮನೆಯಲ್ಲಿ ಸಿದ್ಧಪಡಿಸಿದ ಆಹಾರವನ್ನು ತಿಂದು 9:30ಕ್ಕೆ ಶಾಲೆಗೆ ಬರುತ್ತಾನೆ.

ಶಾಲೆಗೆ ಬರಲಾರಂಭಿಸಿದಾಗ ಅವನಿಗೆ ಏನನ್ನೂ ಅರ್ಥ– ಮಾಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಆನ್ವಯಿಕ ಗಣಿತದಲ್ಲಿ ಅವನು ಮುಂದಿದ್ದು ತರಗತಿಯಲ್ಲಿ ಕೊಟ್ಟ ಕೆಲಸವನ್ನು ಬೇಗನೆ ಮಾಡಿ ಮುಗಿಸುತ್ತಿದ್ದ. ವಿಜ್ಞಾನ ಪ್ರಯೋಗಗಳಲ್ಲಿಯೂ ಅವನು ಆಸಕ್ತಿ ತೋರಿಸಿದ. ಆದರೆ ಇತರ ವಿಜ್ಞಾನ ತರಗತಿಗಳು ಅವನಿಗೆ ಹೆಚ್ಚು ಆಸಕ್ತಿಯನ್ನು ಕೆರಳಿಸಲಿಲ್ಲ. ಕೃಷ್ಣನ ಬಗ್ಗೆ ವಿಚಾರ ವಿನಿಮಯ ನಡೆಸಿದ ಶಿಕ್ಷಕರು ಅವನೊಂದಿಗೆ ವಿಭಿನ್ನ ರೀತಿಯಲ್ಲಿ ತೊಡಗಿಸಿಕೊಳ್ಳಲು ನಿರ್ಧರಿಸಿದರು.

ಪರಿಸರ ಅಧ್ಯಯನದ ತರಗತಿಯ ಒಂದು ಮಕ್ಕಳ ಗುಂಪನ್ನು ರಚಿಸಿ ಹತ್ತಿರದ ಡೈರಿಗೆ ಹೋಗಿ ಅಲ್ಲಿನ ಆಗುಹೋಗುಗಳ ಬಗ್ಗೆ, ಅಲ್ಲಿನ ಕೆಲಸದ ಬಗ್ಗೆ ತಿಳಿದುಕೊಂಡು ಬರಲು ಸೂಚಿಸಲಾಯಿತು. ಆ ಗುಂಪಿಗೆ ಸಹಾಯ ಮಾಡಲು ಕೃಷ್ಣನಿಗೆ ಜವಾಬ್ದಾರಿ ನೀಡಲಾಯಿತು. ಬಹಳ ಉತ್ಸುಕತೆಯಿಂದ ಯೋಜನೆಯಲ್ಲಿ ತೊಡಗಿಸಿಕೊಂಡ ಕೃಷ್ಣನು, ಮಕ್ಕಳು ಅಜ್ಜಿ–ತಾತನೊಂದಿಗೆ ಮಾತನಾಡಲು ನೆರವಾದನು. ಒಂದು ಡೈರಿಯ ಕೆಲಸದ ಎಲ್ಲ ವಿವರಗಳನ್ನು ನೀಡಿದನು – ದನಗಳಿಗೆ ನೀಡುವ ಮೇವಿನ ಪ್ರಮಾಣ ಮತ್ತು ಅದರ ಬೆಲೆ ದೊರಕುವ ಹಾಲಿನ ಪ್ರಮಾಣ, ಹಾಲು ಮಾರುವುದರಿಂದ ದೊರೆಯುವ ಹಣದ ಪ್ರಮಾಣ, ಔಷಧ ಮತ್ತು ದುಡಿಮೆಗಾರರ ಖರ್ಚು ಪರಿಶ್ರಮ ಮುಂತಾದವುಗಳ ಬಗ್ಗೆ ಸಾಕಷ್ಟು ವಿವರಗಳನ್ನು ನೀಡಿದನು. ಮಕ್ಕಳು ಬಹಳ ಸಂತೋಷಪಟ್ಟರು, ಕೃಷ್ಣನೂ ಸಹ ಬಹಳ ಖುಷಿಪಟ್ಟನು. ಇದು ಅವನ ಆತ್ಮಸ್ಥೈರ್ಯವನ್ನು ಹೆಚ್ಚಿಸಿ, ಇತರ ಮಕ್ಕಳೊಂದಿಗಿನ ಅವನ ಸ್ನೇಹವನ್ನು ಹೆಚ್ಚಿಸಿತು. ಇದರಿಂದ ಶಾಲೆಯೊಳಗಿನ ಬೋಧನಾ– ಕಲಿಕೆಯ ಪ್ರಕ್ರಿಯೆಯಲ್ಲಿ ಅವನ ತೊಡಗಿಸಿಕೊಳ್ಳುವಿಕೆ ಸಹ ಹೆಚ್ಚಿತು.

ಹೊರಗೆ ಸುತ್ತಾಡುತ್ತಿರುವಾಗ ಕೃಷ್ಣನು ಸಾಮಾನ್ಯವಾಗಿ ಹಳೆಯ ಮೋಟಾರ್, ಸೆಲ್ಲುಗಳು, ವೈರುಗಳು ಮತ್ತು ರಸ್ತೆಯಲ್ಲಿ ಎಸೆಯಲಾದ ಇತರೆ ವಸ್ತುಗಳನ್ನು ಶೇಖರಿಸುತ್ತಿದ್ದನು. ಒಂದು ದಿನ ಅವನಿಗೆ ರೇಡಿಯೋದ ಸರ್ಕ್ಯೂಟ್ ಬೋರ್ಡ್ ಸಿಕ್ಕಿತು ಮತ್ತು ಅದನ್ನು ಶಾಲೆಗೆ ತಂದನು. ಒಬ್ಬ ಶಿಕ್ಷಕರ ಸಹಾಯದೊಂದಿಗೆ ಅದು ಏನು ಎಂಬುದನ್ನು ಅರಿತುಕೊಂಡರು. ಹೊಸ ಬ್ಯಾಟರಿ ಸೆಲ್ಲುಗಳನ್ನು ಶಾಲೆಯಿಂದ ಕಡ ಪಡೆದು ಕೆಲವು ವೈರುಗಳನ್ನು ಸೇರಿಸಿ ಮತ್ತು ಅದನ್ನು ಹಳೆಯ ಸ್ಪೀಕರ್‌ಗೆ ಜೋಡಿಸಿ ರೇಡಿಯೋ ಸಿದ್ಧಪಡಿಸಿದನು. ಭೋಪಾಲಿನ ಒಂದು ಎಫ್‌ಎಂ ರೇಡಿಯೋ ಚಾನೆಲ್ ಪ್ರಸಾರವಾಗುವ ಸಿಗ್ನಲ್ ಸಿಕ್ಕಿದಾಗ ಕೃಷ್ಣನ ಆನಂದಕ್ಕೆ ಪಾರವೇ

ಇರಲಿಲ್ಲ. ಎಲ್ಲಾ ಮಕ್ಕಳು ಅವನನ್ನು ಹೊಗಳಿದರು. ಶಾಲೆಯ ಮಧ್ಯದ ಆವರಣದಲ್ಲಿ ಅದನ್ನು ಒಂದು ಟೇಬಲ್ಲಿನ ಮೇಲೆ ಇರಿಸಲಾಯಿತು. ಮಕ್ಕಳೆಲ್ಲ ಅದರ ಸುತ್ತ ಸೇರಿ ರೇಡಿಯೋದಲ್ಲಿ ಬರುತ್ತಿದ್ದ ಹಾಡು ಕೇಳಿದರು. ಆವತ್ತು ಕೃಷ್ಣನು ಶಾಲೆಯಲ್ಲಿ ಕೇಂದ್ರ ಬಿಂದುವಾಗಿದ್ದನು.

ಮಾರನೆಯ ದಿನ ಶಿಕ್ಷಕರು ರೇಡಿಯೋ ಹೇಗೆ ಕೆಲಸ ಮಾಡುತ್ತದೆ ಎನ್ನುವುದನ್ನು ತರಗತಿಯಲ್ಲಿ ವಿವರಿಸಿದರು. ಅಂದಿನಿಂದ ಕೃಷ್ಣ ತಪ್ಪದೇ ಪ್ರತಿದಿನ ಶಾಲೆಗೆ ಬರಲು ಪ್ರಾರಂಭಿಸಿದನು. ಅವನು ಎಲ್ಲವನ್ನೂ ಕಲಿಯಲು ಉತ್ಸುಕನಾಗಿದ್ದನು. ಶಾಲೆಯ ಅವಧಿಯ ನಂತರವೂ ಶಾಲೆಯಲ್ಲಿ ಶಿಕ್ಷಕರೊಂದಿಗೆ ಉಳಿದು ತನ್ನೆಲ್ಲ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುತ್ತಾ ಗ್ರಹಿಕೆಯನ್ನು ಬೆಳೆಸಿ-ಕೊಳ್ಳುತ್ತಿದ್ದನು. ಕೃಷ್ಣನು ದೋಣಿಯ ಮೂರು ಬೇರೆ ಪ್ರಕಾರಗಳ ಮಾದರಿಗಳನ್ನು ರಚಿಸಿ ಶಾಲೆಯಲ್ಲಿ ನಡೆದ ಉಮಂಗ್ ವಿಜ್ಞಾನ ಮೇಳದಲ್ಲಿ ಇವುಗಳನ್ನು ಎಲ್ಲರಿಗೂ ತೋರಿಸಿದನು. ಮೊದಲ ಮಾದರಿಯಲ್ಲಿ ಬಲೂನಿನಿಂದ ವಿರುದ್ಧ ದಿಕ್ಕಿನಿಂದ ಹೊರಗೆಡಹುವ ಗಾಳಿಯ ಬಲವನ್ನು ಉಪಯೋಗಿಸಿ ದೋಣಿಯನ್ನು ಮುನ್ನಡೆಸಿ ಎರಡನೆಯ ಮಾದರಿಯಲ್ಲಿ ಒಂದು ರಬ್ಬರ್ ಬ್ಯಾಂಡನ್ನು ಉಪಯೋಗಿಸಿ ಪೆಡಲ್ ದೋಣಿಯನ್ನು ಮಾಡಿದನು. ಮೂರನೆಯದರಲ್ಲಿ ಹಳೆಯ ಮೋಟರುಗಳನ್ನು ಉಪಯೋಗಿಸಿ ದೋಣಿಯ 2 ಕಡೆಗೂ ಪ್ರೊಪೆಲರುಗಳನ್ನು (ಚಕ್ರ) ರಚಿಸಿದ. ಮೇಳಕ್ಕೆ ಬಂದವರು ಕೇಳಿದ ಎಲ್ಲ ಪ್ರಶ್ನೆಗಳಿಗೂ ಸಮರ್ಪಕವಾಗಿ ಉತ್ತರಿಸಿದನು.

ಇದರಿಂದ ಶಿಕ್ಷಕರೊಂದಿಗಿನ ಬಾಂಧವ್ಯ ಮತ್ತು ಅವರೆಡೆಗಿನ ನಂಬಿಕೆಯು ಹೆಚ್ಚಿತು. ಶಾಲೆಯ ಬೋಧನಾ-ಕಲಿಕೆಯ ಪ್ರಕ್ರಿಯೆಯಲ್ಲಿ ಅವನು ಚೆನ್ನಾಗಿ ತೊಡಗಿಸಿಕೊಂಡನು. ಕೃಷ್ಣನು ಶಾಲೆಯಲ್ಲಿ ಕಳೆದ ನಾಲ್ಕು ವರ್ಷಗಳಿಂದ ಇದ್ದಾನೆ. ಸಮಾಜ ವಿಜ್ಞಾನ, ಗಣಿತ ಮತ್ತು ವಿಜ್ಞಾನ ಇವುಗಳ ಜೊತೆಗೆ ಭಾಷೆಗಳನ್ನು ಕಲಿಯುವ ಕಡೆಗೂ (ಹಿಂದಿ ಮತ್ತು ಇಂಗ್ಲಿಷ್) ಉತ್ತಮ ಪ್ರಗತಿಯನ್ನು ತೋರಿಸಿದ್ದಾನೆ.

ಒಂಬತ್ತು ವರ್ಷದ ಪೂಜಾಳಿಗೆ ಶ್ರವಣದೋಷದ ಸಮಸ್ಯೆಯಿದೆ ಅವಳಿಗೆ ಕಾಕ್ಲಿಯರ್ ಸಾಧನವನ್ನು ಜೋಡಿಸಿದ್ದರೂ ಸಹ ಮಾತನಾಡಲು ಮತ್ತು ಕೇಳಿಸಿಕೊಳ್ಳಲು ಅವಳು ಯಾವಾಗಲೂ ಕಷ್ಟಪಡುತ್ತಿದ್ದಳು. ಮೊದಲಿಗೆ ಶಾಲೆಗೆ ಬಂದಾಗ ಅವಳು ಮೌನವಾಗಿಯೇ ಇರುತ್ತಿದ್ದಳು. ಬೆಳಗಿನ ಪ್ರಾರ್ಥನಾ ಸಭೆಯಲ್ಲಿ ಇತರ ಮಕ್ಕಳು ಹಾಡುಗಳನ್ನು ಹಾಗೂ ಶಿಶುಗೀತೆಗಳನ್ನು ಹಾಡುತ್ತಿರುವಾಗ ಅವಳು ಅವರನ್ನು ನೋಡುತ್ತಾ ಸುಮ್ಮನೆ ಇದ್ದುಬಿಡುತ್ತಿದ್ದಳು ಅಥವಾ ಒಂದೆರಡು ಪದಗಳನ್ನು ಗೊಣಗುತ್ತಿದ್ದಳು. ಅವಳಿಗೆ ಬೆಳಗಿನ ಸಭೆಗಳಷ್ಟೇ ಹೆಚ್ಚು ಇಷ್ಟವಾಗುತ್ತಿದ್ದುದು. ಇತರ ತರಗತಿಗಳು ಅವಳಿಗೆ ಇಷ್ಟವಾಗುತ್ತಿರಲಿಲ್ಲ. ಕಲೆ ಮತ್ತು ಕರಕುಶಲ ತರಗತಿಯ ನಿರೀಕ್ಷೆಯಲ್ಲಿಯೇ ಅವಳು ಇರುತ್ತಿದ್ದಳು. ಮುಂಚೆ ಅವಳು ಒಂದು ಪ್ರತಿಷ್ಠಿತ ಖಾಸಗಿ ಶಾಲೆಯಲ್ಲಿ ಓದುತ್ತಿದ್ದಳು. ಅವಳು ಹಿಂದಿನ ಶಾಲೆಯಿಂದ ಹೊತ್ತು ತಂದ ತರಗತಿಯ ಪ್ರಕ್ರಿಯೆ, ಶಿಕ್ಷಕರ ವರ್ತನೆ, ಹಾಗೂ ತೋರಿಕೆಯ ಶಿಸ್ತಿನ ಒತ್ತಡದ ಸಂಗತಿಗಳ ಬಗ್ಗೆ ಭಯಭೀತಳಾಗಿ ತನ್ನಷ್ಟಕ್ಕೆ ತಾನು ಇರುತ್ತಿದ್ದುದು ನಮ್ಮ ಶಾಲೆಯಲ್ಲಿಯೂ ಪ್ರತಿಬಿಂಬಿತವಾದವು.

ನಾವು ಅವಳಿಗೆ ತರಗತಿಗೆ ಹೋಗುವಂತೆ ಒತ್ತಡ ಹೇರಲಿಲ್ಲ. ಬಹಳಷ್ಟು ಬಾರಿ ಅವಳು ಚಿಕ್ಕ ಮಕ್ಕಳ ತರಗತಿಗೆ ಹೋಗಿ ಮಕ್ಕಳಿಗೆ ಕಥೆಗಳನ್ನು ಜೋರಾಗಿ ಓದಿ ಹೇಳುತ್ತಿದ್ದಳು. ಒಂದೆರಡು ತಿಂಗಳ ನಂತರ ಅವಳು ಗಣಿತದ ತರಗತಿಯಲ್ಲಿ ಭಾಗವಹಿಸಲು ಆರಂಭಿಸಿದಳು. ಅಲ್ಲಿ ಭಿನ್ನರಾಶಿಗಳನ್ನು ಹೇಳಿಕೊಡುತ್ತಿದ್ದರು. ಪೂಜಾ ಕಲೆ ಮತ್ತು ಕರಕುಶಲ ವಿಷಯಗಳ ಬಗ್ಗೆ ಬಹಳ ಆಸಕ್ತಿ ಹೊಂದಿದ್ದಳು ಎಂದು ಶಿಕ್ಷಕರಿಗೆ ಗೊತ್ತಿತ್ತು. ಹಾಗಾಗಿ ಅವಳಿಗೆ ವೃತ್ತಾಕಾರದ ರಟ್ಟಿನ ತುಂಡನ್ನು ನೀಡಿ ಅವಳಿಗೆ ಅದನ್ನು 1/2, 1/3 ಮತ್ತು 1/4 ತುಂಡುಗಳನ್ನಾಗಿ ಕತ್ತರಿಸಲು ಹೇಳಿದರು. ತಕ್ಷಣವೇ ಅದನ್ನು ತೆಗೆದುಕೊಂಡು ಪೆನ್ಸಿಲ್ ಮತ್ತು ಅಂಚುಪಟ್ಟಿಯೊಡನೆ ಚಿತ್ರಗಳ ಭಾಗಗಳನ್ನು ಗುರುತಿಸಿದಳು. ಆ ಆಕಾರಗಳು ಬೇರೆಬೇರೆಯಾಗಿ ಗುರುತಿಸುವಂತೆ ಮಾಡಲು ಬೇರೆಬೇರೆ ಬಣ್ಣಗಳನ್ನು ತುಂಬಲು ಶಿಕ್ಷಕರು ತಿಳಿಸಿದರು. ಅವಳಿಗೆ ಇಷ್ಟದ ಕೆಲಸವಾದ್ದರಿಂದ ಹೆಚ್ಚಿನ ಸಮಯ ತೆಗೆದುಕೊಳ್ಳದೆ ಇದನ್ನು ಮಾಡಿ ಮುಗಿಸಿದಳು. ಈ ಕೆಲಸವನ್ನು ಮಾಡಿದ್ದು ಅವಳು ತರಗತಿಯಲ್ಲಿ ಹೆಚ್ಚಿನ ಗಮನ ನೀಡುವಂತೆ ಸಹಾಯ ಮಾಡಿತು ಮತ್ತು ಭಿನ್ನರಾಶಿಯ ಮೂಲ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ನಂತರ ಶಿಕ್ಷಕರು ಅವಳಿಗೆ ಇಂತಹ ಹಲವು ಚಟುವಟಿಕೆಗಳನ್ನು ನೀಡಿದರು. ಕೆಲವು ಅವಳು ಒಬ್ಬಳೇ ಮಾಡುವಂಥದ್ದು ಮತ್ತು ಉಳಿದವು ಗುಂಪಿನಲ್ಲಿ ಮಾಡುವಂಥದ್ದು. ಅವಳು ಸ್ನೇಹಿತರನ್ನು ಗಳಿಸಲು ಇವು ಸಹಾಯ ಮಾಡಿದವು. ಪೂಜಾಳು ಮನೆಯಲ್ಲಿಯೂ ಕೆಲಸಗಳನ್ನು ಮಾಡಿ ಶಾಲೆಗೆ ತರಲು ಆರಂಭಿಸಿದಳು.

ಅವಳಿಗೆ ಆಸಕ್ತಿ ಇದ್ದರೂ ಸಹ ಶ್ರವಣ ದೋಷದಿಂದಾಗಿ ಬೆಳಗಿನ ಸಭೆಗಳನ್ನು ಸಂಪೂರ್ಣವಾಗಿ ಆನಂದಿಸಲು ಸಾಧ್ಯವಾಗುತ್ತಿರಲಿಲ್ಲ. ಶಿಕ್ಷಕರು ತಮ್ಮೊಳಗೇ ಮಾತನಾಡಿಕೊಂಡು ಬೆಳಗಿನ ಸಭೆಯಲ್ಲಿ ಹಾಡುಗಳನ್ನು ಒಂದು ಸಿಡಿಯಲ್ಲಿ ಮುದ್ರಿಸಿ ಮನೆಯಲ್ಲಿ ಕೇಳಲು ಅವಳಿಗೆ ಕೊಟ್ಟರು. ಇದರಿಂದಾಗಿ ಅವಳು ಕೇವಲ ಬೆಳಗಿನ ಸಭೆಗಳನ್ನು ಆನಂದಿಸಲು ಸಾಧ್ಯವಾದದ್ದಷ್ಟೇ ಅಲ್ಲ, ಇತರ ತರಗತಿಗಳಲ್ಲೂ ಭಾಗವಹಿಸಲು ಆರಂಭಿಸಿದಳು. ಅವಳು ಹೆಚ್ಚು ಮಾತನಾಡಲು ಆರಂಭಿಸಿದಳು ಮತ್ತು ಬರೆಯುವ ಅಭ್ಯಾಸವೂ ಸಹ ಬೆಳೆಯಿತು. ಪ್ರಯೋಗ ಮತ್ತು ಮಾದರಿಗಳನ್ನು ಮಾಡುತ್ತಾ ಗಂಟೆಗಟ್ಟಲೆ ವಿಜ್ಞಾನ ತರಗತಿಗಳಲ್ಲಿ ಕೂರುತ್ತಿದ್ದಳು. ಶಿಕ್ಷಕರೊಡನೆ ಮಾತನಾಡಿ ಸೆಲ್ಲುಗಳು, ಮೋಟಾರುಗಳು, ವೈರುಗಳು ಮತ್ತು ಅಯಸ್ಕಾಂತಗಳು ಮುಂತಾದವುಗಳನ್ನು ಮನೆಯಿಂದ ತರುತ್ತಿದ್ದಳು. ಈ ವಸ್ತುಗಳನ್ನು ಬಳಸಿ ವಿದ್ಯುತ್ ಸ್ವಿಚ್‌ಗಳನ್ನು ಮಾಡಿ ಅಯಸ್ಕಾಂತದಲ್ಲಿ ಹಲವು ಪ್ರಯೋಗಗಳನ್ನು ಮಾಡಲು ಆರಂಭಿಸಿದಳು.

ಅವಳು ತನ್ನ ಸ್ನೇಹಿತರೊಂದಿಗೆ ಮತ್ತು ಶಿಕ್ಷಕರೊಂದಿಗೆ ಚೆನ್ನಾಗಿ ಹೊಂದಿಕೊಳ್ಳಲು ಪ್ರಾರಂಭಿಸಿದಳು. ಶಾಲೆಯಲ್ಲಿ ಅವಳ ಶ್ರವಣ ದೋಷವು ಯಾವುದೇ ರೀತಿಯ ಅಡೆತಡೆಗಳನ್ನು ಒಡ್ಡಲಿಲ್ಲ. ಈ ದೌರ್ಬಲ್ಯದ ಬಗ್ಗೆ ಯಾರೂ ಮಾತನಾಡುತ್ತಿರಲಿಲ್ಲ ಮತ್ತು ಯಾರೂ ಇದನ್ನು ಅಡಚಣೆಯೆಂದು ಪರಿಗಣಿಸುತ್ತಿರಲಿಲ್ಲ. ಸಂಗೀತ ತರಗತಿಯಲ್ಲಿ ಅವಳು ಆಸಕ್ತಿಯಿಂದ ಭಾಗವಹಿಸುತ್ತಿದ್ದಳು ಮತ್ತು ಎಲ್ಲಾ ಹಾಡುಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳುತ್ತಿದ್ದಳು. ಶಾಲೆಯ ವಾರ್ಷಿಕೋತ್ಸವದಲ್ಲಿ ಮಾಡಿದ ಒಂದು ನಾಟಕದಲ್ಲಿ ಅವಳು ಭಾಗವಹಿಸಿದ್ದಲ್ಲದೆ ಮತ್ತು ವೃಂದಗಾನದಲ್ಲಿ ಭಾಗವಹಿಸಿ ಎಲ್ಲಿಯೂ ತಪ್ಪದಂತೆ ಹಾಡುತ್ತಿದ್ದಳು.

ಹತ್ತು ವರ್ಷದ ಸ್ವಾತಿಯು ನೋಯಿಡಾದಿಂದ ಭೋಪಾಲಿಗೆ ಬಂದಿದ್ದಳು. ಅವಳಿಗೆ ಮಾತನಾಡುವುದರಲ್ಲಿ ತೊಂದರೆಯಿತ್ತು. ಅವಳು ಮಾತನಾಡುವಾಗ ಬಹಳ ಉಗ್ಗುತ್ತಿದ್ದುದರಿಂದ

ಹಿಂಜರಿಯುತ್ತಿದ್ದಳು. ಶಾಲೆಯ ಸ್ನೇಹಪೂರ್ಣ ಮತ್ತು ನಿರ್ಬಂಧವಿಲ್ಲದ ವಾತಾವರಣವು ಎಲ್ಲರಿಗೂ ಅವಕಾಶಗಳಿರು- ವುದನ್ನು ಖಾತರಿಪಡಿಸುತ್ತದೆ. ಸ್ವಾತಿಗೆ ಇದು ಪರಿಚಿತವಲ್ಲದಿದ್ದರೂ ಎಲ್ಲರೊಡನೆಯೂ ಬೆರೆಯಲು ಈ ವಾತಾವರಣವು ಸುಲಭ ಮಾಡಿತು. ಶಾಲೆಯಲ್ಲಿ ಯಾರೂ ಅವಳ ಉಗ್ಗುವಿಕೆಯ ಬಗ್ಗೆ ಲಕ್ಷ್ಯ ನೀಡದೇ ಅವಳೊಡನೆ ಮಾತನಾಡುತ್ತಿದ್ದರು. ಉದ್ದೇಶ- ಪೂರ್ವಕವಾಗಿಯೇ ಶಿಕ್ಷಕರು ಅವಳಿಗೆ ಪ್ರಶ್ನೆಗಳನ್ನು ಕೇಳಿ ಅವಳು ಮಾತನಾಡುವ ಅವಕಾಶಗಳನ್ನು ಕಲ್ಪಿಸುತ್ತಿದ್ದರು. ಹಾಗಾಗಿ ಅವಳು ಧೈರ್ಯ ಪಡೆದುಕೊಂಡಳು. ಮುಕ್ತವಾಗಿ ಮಾತನಾಡಲು ಸ್ವಾತಿಯು ಆರಂಭಿಸಿದಳು. ಬೆಳಗಿನ ಸಭೆಯಲ್ಲಿ ಅವಳು ಪದ್ಯಗಳನ್ನು ಹೇಳುತ್ತಿದ್ದಳು ಮತ್ತು ಹಾಡುಗಳನ್ನು ಹಾಡುತ್ತಿದ್ದಳು. ಅವಳ ಮಾತುಗಳೂ ಉತ್ತಮಗೊಂಡವು. ಎಂದೂ ಮಾತನಾಡಲು ಅವಳಿಗೆ ಅವಕಾಶ ಕೊಡದೇ ಇದ್ದದ್ದು ಮತ್ತು ಮಾತನಾಡುವುದನ್ನು ತಡೆದದ್ದೇ ಅವಳಿಗಿದ್ದ ತೊಂದರೆಯೇನೋ ಅನ್ನಿಸಿತು.

ಅವಳು ನೋಯಿಡಾದಲ್ಲಿ ಓದುತ್ತಿದ್ದ ಶಾಲೆಯಲ್ಲಿ ವಾರ್ಷಿಕೋತ್ಸವಕ್ಕೆ ಹಿಂದಿನ ಎರಡು ವಾರಗಳ ಮೊದಲು ಶಾಲೆಗೆ ಬರಬಾರದು ಎಂದು ತಾಕೀತು ಮಾಡಿದ್ದರು ಎಂದು ಅವಳ ತಾಯಿ ನಮಗೆ ತಿಳಿಸಿದರು. ಯಾವುದೇ ಚಟುವಟಿಕೆಯಲ್ಲೂ ಭಾಗವಹಿಸಲು ಅವಳಿಗೆ ಅವಕಾಶವನ್ನು ನೀಡಿರಲಿಲ್ಲ. ಇವು ಸ್ವಾತಿಯ ಆತ್ಮಸ್ಥೈರ್ಯವನ್ನು ಕುಗ್ಗಿಸಿತು. ಒಂದು ವಿಧದ ಕೀಳರಿಮೆ ಅವಳಲ್ಲಿ ಬೇರೂರಲಾರಂಭಿಸಿ ಅವಳು ಮಾತನಾಡುವ ತೊಂದರೆಯನ್ನು ಹೆಚ್ಚು ಮಾಡಿತು.

ಆನಂದ್‌ನಿಕೇತನ್ ಶಾಲೆಯಲ್ಲಿ ಪ್ರತಿದಿನ ಭಾಷಾ ತರಗತಿಯು ಅಂದಿನ ಪಾಠವನ್ನು ಪಾತ್ರಗಳ ಮೂಲಕ ಅಭಿನಯಿಸಿ ತೋರಿಸುವುದರೊಂದಿಗೆ ಕೊನೆಗೊಳ್ಳುತ್ತದೆ. ಈ ಕ್ರಿಯೆಯಲ್ಲಿ ಸ್ವಾತಿ ಭಾಗವಹಿಸಲಾರಂಭಿಸಿದಳು. ಶಾಲೆಗೆ ನಿಯಮಿತವಾಗಿ ಬರಲಾರಂಭಿಸಿದಳು. ಶಾಲೆಯ ವಾರ್ಷಿಕೋತ್ಸವದಲ್ಲಿ ಅವಳು ಭೂಪೇನ್ ಹಜಾರಿಕ ಅವರ 'ವಿಸ್ತಾರ್ ಹೈ ಅಪಾರ್.. ಪ್ರಜಾ ದೋನೋ ಪಾರ್' ಎಂಬ ಹಾಡನ್ನು ಹಾಡಿದಳು. ಸಭಿಕರು ಮಂತ್ರಮುಗ್ಧರಾದರು. ಅವಳು ಸ್ವಲ್ಪ ಕೂಡ ಉಗ್ಗಲೇ ಇಲ್ಲ!!

ಈ ಮಕ್ಕಳು ಕೊನೆಯಿಲ್ಲದಷ್ಟು ಸಾಧ್ಯತೆಗಳಿಂದ ತುಂಬಿ- ಕೊಂಡಿದ್ದಾರೆ. ಪ್ರತೀ ಮಗುವೂ ತನ್ನದೇ ಆದ ಪ್ರತಿಭೆ ಹಾಗೂ ಸಾಮರ್ಥ್ಯಗಳನ್ನು ಹೊಂದಿದೆ. ಕಲಿಕೆಯಲ್ಲಿ ಅವರು ಕೆಲವು ಬಾರಿ

ತಮ್ಮ ಸಾಮಾಜಿಕ - ಆರ್ಥಿಕ ಕಾರಣಗಳಿಂದ ಮತ್ತು ಕೆಲವೊಮ್ಮೆ ದೈಹಿಕ ಮತ್ತು ಮಾನಸಿಕ ಅಡೆತಡೆಗಳಿಂದಾಗಿ ಎಡವುತ್ತಾರೆ. ಈ ಮಕ್ಕಳ ಅಂತಃಸತ್ವಗಳನ್ನು ಗಮನಿಸಿ, ತಮ್ಮ ಅಗತ್ಯ ಹಾಗೂ ಮಿತಿಗಳನ್ನು ಅರಿತು, ಅವರಿಗೆ ಅವರ ಸಾಮರ್ಥ್ಯಗಳನ್ನು ಬೆಳೆಸಿಕೊಳ್ಳಲು ಅವಕಾಶ ನೀಡುವುದು ಹಾಗೂ ಆ ಸಾಮರ್ಥ್ಯಗಳನ್ನು ಪೋಷಿಸಲು ಅವಕಾಶಗಳನ್ನು ಒದಗಿಸುವುದು ಶಾಲೆಯ ಜವಾಬ್ದಾರಿಯಾಗಿದೆ. ಇದರಿಂದ ಇತರರೆಲ್ಲರ ಜೊತೆಗೆ ಅವರು ಸಾಗಲು, ತಮ್ಮ ಸಾಮರ್ಥ್ಯಗಳಲ್ಲಿ ನಂಬಿಕೆಯಿರಿಸಿ- ಕೊಂಡು ಏನೆಲ್ಲ ಕಲಿಯಬೇಕೋ ಆ ಎಲ್ಲವನ್ನು ಕಲಿಯಲು ಸಾಧ್ಯವಾಗುತ್ತದೆ. ಶಾಲೆಯ ಸಂಪ್ರದಾಯ ಮತ್ತು ರೂಢಿಗತ ಆಚರಣೆಗಳ ಭಾಗವಾಗಿ ಅನುಕಂಪ, ನಮ್ರತೆ, ಸಹನೆ, ಸಮಾನತೆ ಹಾಗೂ ಮಾನವೀಯ ದೃಷ್ಟಿಕೋನವನ್ನು ಸಂಯೋಜಿಸ- ಬೇಕಾದುದು ಅತ್ಯವಶ್ಯಕ. ಹಾಗಾದಾಗ, ಎಲ್ಲ ಮಕ್ಕಳೂ ಎಲ್ಲವನ್ನು ಕಲಿಯುವಂತಾಗುತ್ತದೆ.

*ಮಕ್ಕಳ ಗೌಪ್ಯತೆಯನ್ನು ಕಾಪಾಡಲು ಹೆಸರುಗಳನ್ನು ಬದಲಾಯಿಸಲಾಗಿದೆ.



**ಅನಿಲ್ ಸಿಂಗ್** ಅವರು ಶಿಕ್ಷಣ ಕ್ಷೇತ್ರದಲ್ಲಿ, ವಿಶೇಷವಾಗಿ ಶಾಲಾ ಶಿಕ್ಷಣ ಕ್ಷೇತ್ರದಲ್ಲಿ 15 ವರ್ಷಗಳಿಂದಲೂ ಕ್ರಿಯಾಶೀಲರಾಗಿದ್ದಾರೆ. ಹಿಂದಿ ಭಾಷೆಯನ್ನು ಕಲಿಸುವುದರ ಜೊತೆಗೆ ವಿದ್ಯಾರ್ಥಿಗಳ ದಿನನಿತ್ಯದ ಚಟುವಟಿಕೆಗಳೊಟ್ಟಿಗೆ ರಂಗಕಲೆಯನ್ನು ಬೆರೆಸುತ್ತಾರೆ. ಅವರು ಕಥೆ ಹೇಳುವುದರಲ್ಲಿ ವಿಶೇಷ ಆಸಕ್ತಿ ಹೊಂದಿದ್ದಾರೆ. ತಮ್ಮ ತರಗತಿಯಲ್ಲಿನ ಅನುಭವಗಳು ಮತ್ತು ಶಿಕ್ಷಣದಲ್ಲಿನ ಇತರ ವಿದ್ಯಮಾನಗಳ ಬಗ್ಗೆ ಅವರು ನಿಯತವಾಗಿ ಲೇಖನಗಳನ್ನು ಬರೆದು ಪ್ರಕಟಿಸುತ್ತಾರೆ. ಭೋಪಾಲ್‌ನ ಆನಂದ್ ನಿಕೇತನ್ ಡೆಮಾಕ್ರೆಟಿಕ್ ಶಾಲೆಯಲ್ಲಿ ಅನಿಲ್ ಅವರು ಪ್ರಸ್ತುತ ಶಿಕ್ಷಣದ ಪರ್ಯಾಯ ಮಾದರಿಯ ಶಿಕ್ಷಣದಲ್ಲಿ ತೊಡಗಿದ್ದಾರೆ. ಅವರನ್ನು bihuanandanil@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಜನಾರ್ದನ ಸಿ ಎಸ್** । ಪರಿಶೀಲನೆ: **ಲತಾ ಕೆ ಸಿ**

**ಶಿಕ್ಷಣವನ್ನು ಸಾಕ್ಷರತೆ ಹಾಗೂ ಪುಸ್ತಕೀಯ ಜ್ಞಾನವನ್ನು ನೀಡುವ ಪಾತ್ರ ಎನ್ನುವುದನ್ನು ಮೀರಿ ಒಬ್ಬ ವ್ಯಕ್ತಿಯನ್ನು ಅತ್ಯುತ್ತಮವಾಗಿ ರೂಪಿಸುವ ಪಾತ್ರವಾಗಿ ನೋಡುವುದು ಅನಿವಾರ್ಯ. ಈ ರೀತಿಯ ತಿಳುವಳಿಕೆಯು ಜನರೊಂದಿಗೆ ವ್ಯವಹರಿಸುವ ಮೂಲಕ ಮಾತ್ರ ಬೆಳೆಯುತ್ತದೆ**

**–ಜಗಮೋಹನ್ ಸಿಂಗ್ ಕಥೈಟ್, ಒಂದೇ ಸೂತ್ರದ ಹೆಣಿಕೆ– ಮಕ್ಕಳು, ಸಮುದಾಯ ಹಾಗು ಶಿಕ್ಷಕರು, ಪು.56**

# ಅಗತ್ಯಕ್ಕೆ ತಕ್ಕ ವಿಭಿನ್ನ ಬೋಧನಾಕ್ರಮ | ಒಂದೇ ಅಳತೆ ಎಲ್ಲರಿಗೂ ಹೊಂದುವುದಿಲ್ಲ

ಅಂಕುರ್ ಮದನ್

ಬ್ರಹ್ಮಕಮಲ, ಗುಲಾಬಿ, ಸೂರ್ಯಮುಖಿ... ಉತ್ತರಾಖಂಡದಲ್ಲಿ ಸಾಮಾನ್ಯವಾಗಿ ಕಾಣಸಿಗುವ ಕೆಲವು ಹೂವುಗಳ ಹಿಂದಿ ಹೆಸರುಗಳು. ಇದು ಯಾವುದೇ ಮಾಧ್ಯಮಿಕ ಶಾಲೆಯ ಸಸ್ಯಶಾಸ್ತ್ರದ ತರಗತಿಯ ಕುರಿತಾದ ಪ್ರಸ್ತಾಪವಲ್ಲ. ವಾಸ್ತವದಲ್ಲಿ ಇವು ಉತ್ತರಾಖಂಡದ ಅತ್ಯಂತ ದೂರದ ಗ್ರಾಮದಲ್ಲಿರುವ ಒಂದು ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕಿಯು 4ನೇ ತರಗತಿಯ ಮಕ್ಕಳ ಗುಂಪುಗಳಿಗೆ ನೀಡಿರುವ ಹೆಸರುಗಳು. ಶಿಕ್ಷಕರು ವಾರಕ್ಕೊಮ್ಮೆ ಅಥವಾ ವಾರದಲ್ಲಿ ಎರಡು ಬಾರಿ ಮಕ್ಕಳಿಗೆ ಕೊಡುವ ಕೆಲಸಗಳನ್ನು ಗುಂಪಿನ ಸದಸ್ಯರಾಗಿರುವ ಮಕ್ಕಳು ನಿರ್ವಹಿಸಬೇಕು ಎಂಬ ನಿರೀಕ್ಷೆಯಿರುತ್ತದೆ. ಪರಸ್ಪರ ಒಟ್ಟಾಗಿ ಕಥೆ ಪುಸ್ತಕ ಓದುವುದಿರ-ಬಹುದು, ಕಥೆಯನ್ನು ಚಿತ್ರಪಟದಲ್ಲಿ ನಿರೂಪಿಸುವ ಕೆಲಸವಿರಬಹುದು, ಆ ಕಥೆಯನ್ನು ಪಾತ್ರಗಳ ರೂಪದಲ್ಲಿ ನಟಿಸುವುದಿರಬಹುದು, ತಮ್ಮದೇ ಸ್ವಂತ ಕಥೆಯನ್ನು ರಚಿಸುವುದಿರಬಹುದು ಅಥವಾ ಪಠ್ಯಪುಸ್ತಕದ ಪಾಠದಲ್ಲಿರುವ ಪ್ರಶ್ನೆಗಳಿಗೆ ಉತ್ತರ ಬರೆಯುವುದು ಹಾಗೂ ಕಠಿಣ ಪದಗಳಿಗೆ ಅರ್ಥ ಹುಡುಕುವುದಿರಬಹುದು, ಹೀಗೆ ಮುಂತಾದ ಕೆಲಸಗಳಿರುತ್ತವೆ.

**ವಿಧಾನಗಳು**

ಪೂರೈಸಬೇಕಾದ ಕಾರ್ಯಗಳನ್ನು ಮನಸೋಇಚ್ಛೆ ನೀಡುವುದಿಲ್ಲ ಅಥವಾ ಮಕ್ಕಳನ್ನು ಯಾವುದೇ ಒಂದು ಗುಂಪಿಗೆ ಸಕಾರಣವಿಲ್ಲದೆ ನಿಯೋಜಿಸಲಾಗುವುದಿಲ್ಲ. ಶಿಕ್ಷಕಿಯು ಪ್ರತಿ ಮಗುವಿನ ಕಲಿಕಾ ಮಟ್ಟ, ಒಂದು ಅವಧಿಯಲ್ಲಿ ಆ ಮಗುವಿನ ಪ್ರಗತಿ, ಆಸಕ್ತಿಯ ಹಂತಗಳು ಹಾಗೂ ಅವರ ಸಹವರ್ತಿಗಳೊಂದಿಗಿನ ಸಂಬಂಧದ ಎಳೆಗಳ ಕಡೆಗೆ ಬಹಳ ಗಮನ ನೀಡಿದ ನಂತರವೇ ಮಕ್ಕಳನ್ನು ಆಯಾ ಗುಂಪಿಗೆ ನಿಯೋಜಿಸಿ ಅವರು ಮಾಡಬೇಕಾದ ಕಾರ್ಯಗಳನ್ನು ನೀಡುತ್ತಾರೆ. ಮಕ್ಕಳು ತಮಗೆ ನೀಡಿದ ಹೆಸರಿನ ಬಗ್ಗೆ ಹೆಮ್ಮೆಯನ್ನು ಹೊಂದಿದ್ದು, ಗುಂಪಿನಲ್ಲಿರುವ ಅವರ ಸಹವರ್ತಿಗಳೆಡೆಗೆ ಜವಾಬ್ದಾರಿಯನ್ನು ಹಾಗೂ ಅವಿನಾಭಾವ ಸಂಬಂಧವನ್ನು ಹೊಂದಿರುತ್ತಾರೆ.

ಮಕ್ಕಳಿಗೆ ನೀಡುವ ಕಾರ್ಯಗಳಲ್ಲಿ ಅವರ ಪ್ರಗತಿಯ ಕುರಿತು ದೈನಂದಿನ / ಸಾಪ್ತಾಹಿಕ ದಾಖಲೆಗಳನ್ನು ಶಿಕ್ಷಕಿಯು ನಿರ್ವಹಿಸುತ್ತಿದ್ದು, ಅದರ ಆಧಾರದ ಮೇಲೆ ಮಕ್ಕಳನ್ನು ಇತರ ಗುಂಪುಗಳಿಗೆ ಹಾಗೂ ಕಾರ್ಯಗಳಿಗೆ ಬದಲಾಯಿಸುತ್ತಾರೆ. ಇದರಲ್ಲಿ ಕಡಿಮೆ ಕಲಿಕಾ ಮಟ್ಟವನ್ನು ಹೊಂದಿರುವ ಮಕ್ಕಳನ್ನು ಅವರ ಗುಂಪಿನಲ್ಲಿಯೇ ಹೆಚ್ಚಿನ ಕಲಿಕಾ ಸಾಮರ್ಥ್ಯ ಹೊಂದಿರುವ ಮಕ್ಕಳು ಬೆಂಬಲಿಸುತ್ತಾರೆ ಹಾಗೂ ಒಂದು ರೀತಿಯ ಪರಸ್ಪರ ಸಹಾಯ ಮಾಡುವ ವ್ಯವಸ್ಥೆಯಿಂದ ಈ ಬೋಧನಾ ವಿಧಾನದಲ್ಲಿ ಸಹವರ್ತಿಗಳೊಂದಿಗಿನ ಕಲಿಕೆ ಪ್ರಮುಖ ಅಂಶವಾಗಿದೆ. ಒಂದು ದೂರದ ಹಳ್ಳಿಯ ಸರ್ಕಾರಿ ಶಾಲೆಯ ಕಿಕ್ಕಿರಿದ, ಮಿಶ್ರ ಸಾಮರ್ಥ್ಯವುಳ್ಳ, ಕಡಿಮೆ ಸಂಪನ್ಮೂಲವಿರುವ ತರಗತಿಯು 'ಉತ್ತಮ ಬೋಧನಾ ಅಭ್ಯಾಸಗಳ' ಕುರಿತು ಉದಾಹರಣೆಗಳನ್ನು ಹುಡುಕುವವರಿಗೆ ಹಾಗೂ ಇದರಿಂದ ಪ್ರೇರಿತರಾಗುವವರಿಗೆ ಯಾವುದೇ ರೀತಿಯಲ್ಲಿ ಒಂದು ತಕ್ಕುದಾದ ಸ್ಥಳವೆಂದು ಅನಿಸುವುದಿಲ್ಲವಾದರೂ ಮೇಲೆ ಹೇಳಿದ ಈ ತರಗತಿಯು ಇದಕ್ಕೆ ಮಾದರಿಯಾಗಿದೆ.

**ವ್ಯಕ್ತಿಗತ ಅಗತ್ಯಗಳಿಗೆ ಸ್ಪಂದಿಸುವುದು**

ಮೇಲೆ ತಿಳಿಸಿದ ಶಿಕ್ಷಕಿಯು ಬಳಸುವ ಅಭ್ಯಾಸಗಳು ವಿಭಿನ್ನ ಅಗತ್ಯಕ್ಕೆ ತಕ್ಕಹಾಗೆ ಬೋಧನಾಕ್ರಮವನ್ನು (Differentiated Instruction) ಅಳವಡಿಸುವುದಕ್ಕೆ ಸಂಬಂಧಿಸಿದಂತೆ ಒಳ್ಳೆಯ ಉದಾಹರಣೆಗಳಾಗಿವೆ. ಇದು ಒಂದು ಸಾಮಾನ್ಯ ತರಗತಿಯಲ್ಲಿ ಮಕ್ಕಳ ವ್ಯಕ್ತಿಗತ ಕಲಿಕಾ ಅಗತ್ಯಗಳಿಗೆ ಸ್ಪಂದಿಸಲು ವಿವಿಧ ರೀತಿಯ ಕಾರ್ಯತಂತ್ರಗಳನ್ನು ಬಳಸುವ ಬೋಧನೆಯ ಒಂದು ಕ್ರಮವಾಗಿದೆ.

ಉತ್ತರಾಖಂಡದ ಶಾಲೆಯಲ್ಲಿದ್ದ ಶಿಕ್ಷಕಿಗೆ ಆ ಹೊತ್ತಿನಲ್ಲಿ ಸಹಜವಾಗಿ ಇದು ತಿಳಿದಿರಲಿಲ್ಲ. ತನ್ನ ತರಗತಿಯಲ್ಲಿರುವ ಮಕ್ಕಳಿಗೆ ಮೂಲಭೂತ ಸಾಕ್ಷರತಾ ಕೌಶಲ್ಯಗಳನ್ನು ಅನುಕೂಲಿಸಲು ಪರಿಹಾರಗಳ ಹುಡುಕಾಟದಲ್ಲಿದ್ದಾಗ ಮಕ್ಕಳು ಒಂದೇ ವಯಸ್ಸಿನವರಿದ್ದರೂ ಸಹ ಅವರ ಕಲಿಕಾ ಮಟ್ಟದಲ್ಲಿ ಭಿನ್ನತೆಯಿದೆ ಎಂಬುದನ್ನು ಕಂಡುಕೊಂಡರು. ತಾನು ಎಷ್ಟೇ ಉತ್ತಮವಾಗಿ ಬೋಧಿಸಿದರೂ ಕೆಲವು ಮಕ್ಕಳಷ್ಟೇ ತನ್ನ ಬೋಧನೆಯಿಂದ ಪ್ರಯೋಜನ ಪಡೆಯುತ್ತಾರೆ ಎಂದು ಅರಿತರು. ಹಾಗಾಗಿ ತನ್ನ ತರಗತಿಯಲ್ಲಿರುವ ಎಲ್ಲ ಮಕ್ಕಳ ವೈಯಕ್ತಿಕ ಕಲಿಕಾ ಅಗತ್ಯಗಳಿಗೆ ಪೂರಕವಾಗಿರುವ ಬೋಧನಾ ಕ್ರಮಗಳನ್ನು ಅಳವಡಿಸಿ-ಕೊಳ್ಳಬೇಕಾದುದರ ಅಗತ್ಯವನ್ನು ಅವರು ಮನಗಂಡರು. ವಿಭಿನ್ನ ಅಗತ್ಯಕ್ಕೆ ತಕ್ಕ ಬೋಧನಾಕ್ರಮದ (Differentiated Instruction-DI) ಪ್ರಮುಖ ಪೀಠಿಕೆಯು ಈ ಅಂಶವನ್ನೇ ಆಧರಿಸಿದೆ.

ಈ ಲೇಖನವು ಡಿಐನ ಪ್ರಮುಖ ತತ್ವಗಳನ್ನು ಪರಿಚಯಿಸುತ್ತಿದ್ದು, ಭಾರತದ ತರಗತಿಗಳಿಗೆ ಇದರ ಪ್ರಸ್ತುತತೆ ಹಾಗೂ ಕಾರ್ಯ-ಸಾಧ್ಯತೆಯನ್ನು ವಿವರಿಸಲು ಬೇಕಾದ ಕೆಲವು ಉದಾಹರಣೆಗಳನ್ನು ನೀಡುತ್ತದೆ.

**ವಿಭಿನ್ನ ಅಗತ್ಯಕ್ಕೆ ತಕ್ಕ ಬೋಧನಾ ಕ್ರಮದ ಪ್ರಮುಖ ಅಂಶಗಳು**

ಒಂದೇ ವಯಸ್ಸಿನ ಅಥವಾ ಸಮಾನ ವಯಸ್ಸಿನ ಮಕ್ಕಳು ಒಂದೇ ಮಾದರಿಯಲ್ಲಿ ಕಲಿಯಬಲ್ಲರು ಮತ್ತು ಅವರಿಗೆ ಒಂದೇ ರೀತಿ ಕಲಿಸಬಹುದು ಎನ್ನುವ ಕಲ್ಪನೆಯನ್ನು 'ಅ.ತ.ಬೋ.ಕ್ರ' (ಡಿಐ) ಪ್ರಶ್ನಿಸುತ್ತದೆ. ಮೊದಲಿಗೆ ಕಾರೋಲ್ ಟಾಮ್‌ಲಿನ್ಸನ್ ಇದನ್ನು ಪ್ರಸ್ತಾಪಿಸಿದ್ದು, ತರಗತಿಯಲ್ಲಿನ ಏಕರೂಪತೆ ಎಂಬ ಕಲ್ಪನೆಯನ್ನು ಡಿಐ ಬೋಧನಾ ಕ್ರಮ ತಳ್ಳಿಹಾಕುತ್ತದೆ ಹಾಗೂ ಜಗತ್ತಿನಾದ್ಯಂತ ಇರುವ ಯಾವುದೇ ಶಾಲೆಯ ಯಾವುದೇ ತರಗತಿಯಲ್ಲಿ ವ್ಯಾಪಕವಾಗಿ ಹರಡಿರುವ ವೈವಿಧ್ಯತೆಯತ್ತ ಶಿಕ್ಷಕರ ಹಾಗೂ ಶಿಕ್ಷಣತಜ್ಞರ ಗಮನವನ್ನು ಸೆಳೆಯುತ್ತದೆ.

ಎಲ್ಲಾ ಶಿಕ್ಷಕರು ತಮ್ಮ ತರಗತಿಯಲ್ಲಿರುವ ಎಲ್ಲ ಮಕ್ಕಳು ಕಲಿಕಾ ಸಾಮರ್ಥ್ಯಗಳಲ್ಲಿ, ಆಸಕ್ತಿಗಳಲ್ಲಿ, ಕಲಿಕೆಗೆ ಬೇಕಾದ ಸಿದ್ಧತೆಯಲ್ಲಿ, ವರ್ತನೆ ಮತ್ತು ಭಾವನಾತ್ಮಕ ಅಗತ್ಯಗಳಲ್ಲಿ ಪರಸ್ಪರ ವಿಭಿನ್ನವಾಗಿದ್ದಾರೆ ಎಂದು ಚೆನ್ನಾಗಿ ಅರಿತಿದ್ದಾರೆ. ಮಕ್ಕಳು ಕೂಡ ವಿಭಿನ್ನ ಸಮಾಜೋ-ಆರ್ಥಿಕ ಹಿನ್ನೆಲೆಗಳನ್ನು ಹೊಂದಿದ್ದು ಭಿನ್ನ ಭಾಷಾ ಆಯ್ಕೆಗಳು, ವಿವಿಧ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಭ್ಯಾಸಗಳನ್ನು ಅನುಸರಿಸುತ್ತಾರೆ. ಮಕ್ಕಳು ತರಗತಿಯಲ್ಲಿ ಕಲಿಸುವ ಪಠ್ಯಕ್ರಮವಷ್ಟೇ ಅಲ್ಲದೆ, ತರಗತಿಯಲ್ಲಿ ಅವರ ಸಾಮಾಜಿಕ ಹಾಗು ಭಾವನಾತ್ಮಕ ಸ್ವಾಸ್ಥ್ಯ ಹಾಗು ಹೊಂದಿಕೊಳ್ಳಬೇಕಾದ ಪರಿಸ್ಥಿತಿಯ ಮೇಲೂ ಈ ಎಲ್ಲಾ ಅಂಶಗಳು ಪರಿಣಾಮ ಬೀರುತ್ತವೆ. ಶಿಕ್ಷಕರಾಗಿ ನಮಗೆ ಈ ವ್ಯತ್ಯಾಸಗಳ ಬಗ್ಗೆ ಅರಿವಿದ್ದರೂ, ಮಕ್ಕಳಿಗೆ ಬೋಧಿಸುವುದಕ್ಕೆ ಒಂದೇ ಮಾರ್ಗವಿದೆ ಎಂದು ಭಾವಿಸುತ್ತೇವೆ: ಅದೆಂದರೆ ನಮ್ಮ ಮಾರ್ಗ!

ಈ ಎಲ್ಲ ಅನಿಸಿಕೆಗಳನ್ನು ಪ್ರಶ್ನಿಸುತ್ತಲೇ, ತರಗತಿಯಲ್ಲಿರುವ ಪ್ರತಿಯೊಂದು ಮಗುವಿನ ಕಲಿಕಾ ಅಗತ್ಯಗಳನ್ನು ಪೂರೈಸಲು ಬೇಕಾದ ಬೋಧನೆ, ಕಲಿಕೆ ಹಾಗು ಮೌಲ್ಯಮಾಪನಗಳಿಗೆ ವಿವಿಧ ವಿಧಾನಗಳನ್ನು ಮುಂಚಿತವಾಗಿಯೇ ಆಯೋಜಿಸಿ ಅಳವಡಿಸಿಕೊಳ್ಳಲು ಡಿಐ ಶಿಕ್ಷಕರನ್ನು ಪ್ರೋತ್ಸಾಹಿಸುತ್ತದೆ. ಟಾಮ್‌ಲಿನ್ಸನ್ ಅವರ ಶಬ್ದಗಳಲ್ಲಿ ಹೇಳುವುದಾದರೆ, 'ತರಗತಿಯಲ್ಲಿನ ಅಭ್ಯಾಸಗಳು ಮಕ್ಕಳು ವಿಭಿನ್ನವಾಗಿ ಇದ್ದಾರೆ ಎನ್ನುವ ವಾಸ್ತವವನ್ನು ಪ್ರತಿಯೊಂದು ಮಗುವನ್ನು ಹತ್ತಿರದಿಂದ ಗಮನಿಸುವ ಮೂಲಕ ಮಾಡಬಹುದು ಹಾಗೂ ಅತ್ಯಂತ ಸಮರ್ಥ ಶಿಕ್ಷಕರು ವಿವಿಧ ಹಂತದಲ್ಲಿರುವ ಮಕ್ಕಳನ್ನು ಕಲಿಕೆಯೆಡೆಗೆ ಸೆಳೆಯಲು ಏನು ಬೇಕೋ ಎಲ್ಲ ಕ್ರಮವನ್ನೂ ಅನುಸರಿಸುತ್ತಾರೆ' (ಸಿ.ಎ. ಟಾಮ್‌ಲಿನ್ಸನ್, 2001).

ಬೋಧನೆಗಾಗಿಯೇ ಒಂದು ಸಿದ್ಧಮಾದರಿಯನ್ನು ಡಿಐ ಬೋಧನಾಕ್ರಮ ಒದಗಿಸುವುದಿಲ್ಲವಾದರೂ, ಬೋಧನೆ ಹಾಗೂ ಕಲಿಕೆಯೆಡೆಗೆ ಇರುವ ತಾರ್ಕಿಕ ನೆಲೆಗಟ್ಟು ಅಥವಾ ಚಿಂತನೆಗೆ ಹಚ್ಚುವ ಮಾರ್ಗವೆಂದು ಒತ್ತಿ ಹೇಳುತ್ತಾ, ಬೋಧನೆಗೆ ಯಾವುದೇ ಸೂತ್ರಗಳನ್ನು ಸೂಚಿಸುವುದಿಲ್ಲ, ಆದರೆ ತರಗತಿಯ ಎಲ್ಲ ಮಕ್ಕಳ ಸಾಮರ್ಥ್ಯಗಳನ್ನು ಹೆಚ್ಚಿಸಲು ಬೇಕಾದ ವಿಚಾರಗಳನ್ನು ಶಿಕ್ಷಕರಿಗೆ ಕಟ್ಟಿಕೊಡುತ್ತದೆ ಎಂದು ಟಾಮ್‌ಲಿನ್ಸನ್ ಸ್ಪಷ್ಟಪಡಿಸುತ್ತಾರೆ. ಶಿಕ್ಷಕರು ಒಂದೇ ಪಾಠ ಅಥವಾ ಘಟಕದಿಂದ ಸಿದ್ಧಪಡಿಸಿ ನೀಡುವ ಕಾರ್ಯಗಳನ್ನು ಮಕ್ಕಳು ಪಠ್ಯಕ್ರಮವನ್ನು ಅನ್ವೇಷಿಸುವುದರ ಮೂಲಕ ಹಾಗು ವಿವಿಧ ಹಂತಗಳಲ್ಲಿ ಕಾರ್ಯಗಳನ್ನು ಪೂರೈಸಿ ತಮ್ಮ ಕಲಿಕೆಯನ್ನು ಪ್ರಸ್ತುತಪಡಿಸುವುದಕ್ಕೆ ವಿವಿಧ ರೀತಿಯ ಅವಕಾಶಗಳನ್ನು ಡಿಐ ಬೋಧನಾಕ್ರಮ ಒದಗಿಸುತ್ತದೆ ಎನ್ನುವುದರಲ್ಲಿಯೇ ಅದರ ಸಾರ ಅಡಗಿದೆ. ಈ ನಿಟ್ಟಿನಲ್ಲಿ ಕೆಲಸ ಮಾಡಲು ಶಿಕ್ಷಕಿಯು ತನ್ನ ತರಗತಿಯಲ್ಲಿರುವ ಎಲ್ಲ ಮಕ್ಕಳ ವೈಯಕ್ತಿಕ ಸಾಮರ್ಥ್ಯಗಳು ಹಾಗು ಕಲಿಕಾ ಅಗತ್ಯಗಳನ್ನು ಒರೆಗೆ ಹಚ್ಚಿ ಇದರ ಆಧಾರದ ಮೇಲೆ ವಿಷಯವಸ್ತು, ಪ್ರಕ್ರಿಯೆ, ಫಲಿತ ಹಾಗು ಕಲಿಕಾ ವಾತಾವರಣವನ್ನು ಮಾರ್ಪಡಿಸುತ್ತಾರೆ.

ವಿಷಯವಸ್ತುವು ವಿದ್ಯಾರ್ಥಿಗಳು ಏನನ್ನು ಕಲಿಯಬೇಕೆಂದು ಅಪೇಕ್ಷಿಸುತ್ತಾರೆ ಹಾಗು ಇದಕ್ಕಾಗಿ ಬೇಕಾದ ಸಂಪನ್ಮೂಲಗಳು ಮತ್ತು ಕಾರ್ಯವಿಧಾನಗಳಿಗೆ ವಿಷಯವಸ್ತು ಎಂದು ಕರೆಯಲಾಗುತ್ತದೆ. ಶಿಕ್ಷಕಿಯು ವಿಷಯವನ್ನು ಪರಿಣಾಮ-ಕಾರಿಯಾಗಿ ನಿರ್ವಹಿಸಲು ಬೇಕಾದ ಬೋಧನಾ ತಂತ್ರಗಳನ್ನು ಅಳವಡಿಸಿಕೊಳ್ಳುವುದನ್ನು ಪ್ರಕ್ರಿಯೆ ಎನ್ನುತ್ತಾರೆ. ಮಕ್ಕಳು ತಮ್ಮ ಕಲಿಕೆಯನ್ನು ವಿವಿಧ ರೀತಿಯಲ್ಲಿ ಪ್ರಸ್ತುತಪಡಿಸುವುದೇ ಫಲಿತ. ಕಲಿಕಾ ವಾತಾವರಣ ಶಿಕ್ಷಕಿಯು ತನ್ನ ತರಗತಿಯಲ್ಲಿರುವ ಎಲ್ಲ ಮಕ್ಕಳಿಗೆ ಒಂದು ಗೌರವಯುತವಾದ ಹಾಗೂ ಸುರಕ್ಷಿತವಾದ ಪರಿಸರವನ್ನು ಒದಗಿಸಲು ಮಾಡುವ ಮಾರ್ಪಾಡುಗಳಾಗಿದ್ದು, ಆ ಮೂಲಕ ಮಕ್ಕಳು ತಮ್ಮ ವೈಯಕ್ತಿಕ ಸಾಮರ್ಥ್ಯಕ್ಕೆ ಅನುಗುಣವಾದ ಗತಿಯಲ್ಲಿ ಹಾಗು ಕಲಿಕಾ ಮಟ್ಟದ ಆಧಾರದ ಮೇಲೆ ತಮ್ಮನ್ನು ತಾವು ಅರ್ಥಪೂರ್ಣವಾಗಿ ತೊಡಗಿಸಿಕೊಳ್ಳುವುದು ಎಂಬುದರ ಸೂಚಕವಾಗಿದೆ.

ಇದೆಲ್ಲವನ್ನೂ ಮಾಡುವಾಗ ಶಿಕ್ಷಕಿಯು ತನ್ನ ತರಗತಿಯ ಎಲ್ಲ ವಿದ್ಯಾರ್ಥಿಗಳ ಒಟ್ಟಾರೆ ಬೆಂಬಲದ ಮೇಲೆ ಹೆಚ್ಚಾಗಿ ಅವಲಂಬಿತರಾಗಿರುತ್ತಾರೆ. ವಿದ್ಯಾರ್ಥಿಗಳು ಆಯ್ದುಕೊಳ್ಳುವ ಸಂಪನ್ಮೂಲಗಳ ವಿಷಯದಲ್ಲಿ, ಕಾರ್ಯಗಳಲ್ಲಿ ಹಾಗು ಕೆಲಸದ ವೇಗದಲ್ಲಿ ನಮ್ಯತೆಯನ್ನು ಖಚಿತಪಡಿಸುವುದಲ್ಲದೆ, ಬಹು-ಮುಖ್ಯವಾಗಿ ಎಲ್ಲ ಮಕ್ಕಳು ಸಮಾನವಾಗಿ ಗೌರವಿಸಲು ಸಹಪಾಠಿಗಳು, ಮತ್ತು ಶಿಕ್ಷಕರು ಇಬ್ಬರಿಂದಲೂ ಸಮಾನ ಮಹತ್ವವುಳ್ಳದ್ದು ಎಂದು ಭಾವಿಸುವ ಚಟುವಟಿಕೆಗಳಲ್ಲಿ ತೊಡಗಿ-ಕೊಳ್ಳುತ್ತಾರೆ ಎಂಬುದನ್ನು ಖಚಿತಪಡಿಸುತ್ತಾರೆ.

**ತರಗತಿಯಲ್ಲಿ ವಿಭಿನ್ನ ಅಗತ್ಯಕ್ಕೆ ತಕ್ಕ ಬೋಧನಾ ಕ್ರಮವನ್ನು ಅಳವಡಿಸುವುದು**

ಈ ಮೊದಲೇ ಹೇಳಿದಂತೆ ವಿಭಿನ್ನ ಅಗತ್ಯಕ್ಕೆ ತಕ್ಕಂತೆ ಬೋಧನಾ ಕ್ರಮವು ತರಗತಿಯಲ್ಲಿ ಅಳವಡಿಸಿಕೊಳ್ಳಲು ಬೇಕಾದ ಬೋಧನಾ ಕಾರ್ಯತಂತ್ರಗಳ ಸಾಧನವಲ್ಲ. ಇದಕ್ಕೆ ವಿರುದ್ಧವಾಗಿ ಹೇಳಬೇಕೆಂದರೆ ಈ ಬೋಧನಾ ಕ್ರಮದ ಮೂಲತತ್ವ ಅದರ ನಮ್ಯತೆ ಹಾಗೂ ಶಿಕ್ಷಕಿಯು ತನ್ನ ತರಗತಿಯ ವಿದ್ಯಾರ್ಥಿಗಳ ನಿರ್ದಿಷ್ಟ ಅಗತ್ಯಗಳನ್ನು ಗುರುತಿಸುವ ಸಾಮರ್ಥ್ಯ ಹೊಂದಿ ಈ ಬೋಧನಾ ಕ್ರಮದ ಪ್ರಮುಖ ಅಂಶಗಳನ್ನೊಳಗೊಂಡ ಅಭ್ಯಾಸಗಳನ್ನು ಅಳವಡಿಸಿಕೊಳ್ಳುವುದರಲ್ಲಿ ಅಡಗಿದೆ. ಈ ವಿಭಾಗದಲ್ಲಿ, ಈ ಬೋಧನಾ ಕ್ರಮದ ತಂತ್ರಗಳಿಗೆ ಸಂಬಂಧಿಸಿದ ಕೆಲವು ಉದಾಹರಣೆಗಳನ್ನು ವಿವರಿಸಲಾಗಿದೆ. ಮಕ್ಕಳ ನಿರ್ದಿಷ್ಟ ಅಗತ್ಯಗಳು, ಶಿಕ್ಷಕಿಗೆ ಲಭ್ಯವಿರುವ ಸಂಪನ್ಮೂಲಗಳು, ತರಗತಿಯ ಗಾತ್ರ ಹಾಗು ಶಿಕ್ಷಕಿಯು ತೊಡಗಿಸಿಕೊಳ್ಳಬಹುದಾದ ಅವಧಿ ಮತ್ತು ಅವರ ತಯಾರಿಗೆ ಬೇಕಾದ ಸಮಯವನ್ನು ಅವಲಂಬಿಸಿ ಇವುಗಳನ್ನು ಯಾವುದೇ ತರಗತಿಯಲ್ಲಿ ಅನ್ವಯಿಸಬಹುದು. ಅಂತಹ ಒಂದು ತಂತ್ರವೆಂದರೆ ವಿದ್ಯಾರ್ಥಿಗಳು ಒಂದೇ ಸಮಯದಲ್ಲಿ ವಿವಿಧ ಕಾರ್ಯಗಳನ್ನು ನಿರ್ವಹಿಸುವುದು. ಶಿಕ್ಷಕಿಯು ಮಿಶ್ರ ಸಾಮರ್ಥ್ಯವುಳ್ಳ ಗುಂಪುಗಳಿಗೆ ಮಕ್ಕಳನ್ನು ನಿಯೋಜಿಸಿ ವಿವಿಧ ಆಸಕ್ತಿಗಳ ಹಂತಗಳಲ್ಲಿರುವವರಿಗೆ ಇಷ್ಟವಾಗುವಂತೆ ಹಾಗು ತಾನು ನೀಡುವ ಕಾರ್ಯಗಳನ್ನು ಪೂರೈಸುವುದಕ್ಕೆ ಅಗತ್ಯವಿರುವ ವಿಭಿನ್ನ ಕೌಶಲ್ಯಗಳನ್ನು ಹೊಂದಿರುವವರನ್ನೊಳಗೊಂಡ ಗುಂಪುಗಳಾಗಿ ರಚಿಸಬಹುದು. ಮಕ್ಕಳಿಗೆ ಈ ಕಾರ್ಯಗಳಲ್ಲಿ ಎಲ್ಲವನ್ನೂ ಅಥವಾ ಇವುಗಳಲ್ಲಿ ಕೆಲವನ್ನು ತಮ್ಮದೇ ಗತಿಯಲ್ಲಿ ಮಾಡುವಂತೆ, ಸಹವರ್ತಿಗಳ ಸಹಾಯದೊಂದಿಗೆ ಹಾಗು ತಮಗೆ ಆಸಕ್ತಿ ಇದ್ದಾಗ ಕೈಗೊಳ್ಳಲು ಪ್ರೋತ್ಸಾಹಿಸಬಹುದು. ಉದಾಹರಣೆಗೆ, 6ನೇ ತರಗತಿಯ ಇತಿಹಾಸದ ಪಾಠಕ್ಕೆ ಶಿಕ್ಷಕಿಯು ವಿವಿಧ ಸ್ತರದ ಕಾರ್ಯಗಳನ್ನು ರೂಪಿಸಬಹುದು. ಮೊದಲನೆಯದಾಗಿ ಮಕ್ಕಳು ಪಠ್ಯಪುಸ್ತಕದಲ್ಲಿರುವ ಪಾಠದಿಂದ ಘಟನಾವಳಿಗಳನ್ನು ಆಧರಿಸಿದ ವಾಸ್ತವಾಂಶಗಳನ್ನು ಹುಡುಕಿ ತೆಗೆದು ಆನಂತರ ಪಠ್ಯದಲ್ಲಿ ಇರುವಂತೆ ಘಟನೆಗಳ ಕಾಲಾನುಕ್ರಮದಲ್ಲಿ ಒಂದು ಪರಿಕಲ್ಪನಾತ್ಮಕ

ನಕ್ಷೆಯನ್ನು ರಚಿಸಬಹುದು. ಒಂದು ನಿರ್ದಿಷ್ಟ ವಿಷಯದ ಬಗ್ಗೆ ಹೆಚ್ಚುವರಿ ವಿಷಯಗಳನ್ನು ಪಠ್ಯಪುಸ್ತಕದಿಂದಾಚೆ ಹುಡುಕಿ ತೆಗೆದು ತರಗತಿಯ ಎದುರು ಒಂದು ಪ್ರಾತ್ಯಕ್ಷಿಕೆಯನ್ನು ನೀಡುವುದು ಇನ್ನೊಂದು ಕಾರ್ಯವಾಗಬಹುದು. ಮತ್ತೊಂದು ಕಾರ್ಯವೆಂದರೆ ಪಠ್ಯಕ್ಕೆ ಸಂಬಂಧಪಟ್ಟ ವಿಷಯದ ಸಾರವನ್ನು ಲಿಖಿತರೂಪದಲ್ಲಿ ಟಿಪ್ಪಣಿ ಮಾಡುವುದು ಅಥವಾ ವಿದ್ಯಾರ್ಥಿಗಳು ಈ ಪಠ್ಯವನ್ನು ಒಂದು ನಾಟಕವಾಗಿ ಅಭಿನಯಿಸುವುದು ಅಥವಾ ಹಾಸ್ಯ ಚಿತ್ರಸರಣಿಗಳನ್ನು ತಯಾರಿಸುವ ಮುಖಾಂತರ ಪ್ರಸ್ತುತಪಡಿಸಲು ಹೇಳಿ ಪ್ರೋತ್ಸಾಹಿಸಬಹುದು!

ಈ ರೀತಿಯ ವಿಭಿನ್ನ ಚಟುವಟಿಕೆ ಕಾರ್ಯಗಳನ್ನು ರೂಪಿಸಿದಾಗ ವಿವಿಧ ಮಟ್ಟದ ಆಸಕ್ತಿ ಹೊಂದಿರುವ ಹಾಗೂ ಬಹುವಿಧ ಸಾಮರ್ಥ್ಯವಿರುವ ಮಕ್ಕಳು ತಮಗೆ ಇಷ್ಟವಿರುವ ಕಾರ್ಯಗಳಲ್ಲಿ ಭಾಗವಹಿಸುವ ಅವಕಾಶ ಪಡೆಯುವುದಲ್ಲದೆ, ವಿಭಿನ್ನ ರೀತಿಯಲ್ಲಿ ತಮ್ಮ ಕೌಶಲ ಹಾಗು ಸಾಮರ್ಥ್ಯಗಳನ್ನು ಪ್ರದರ್ಶಿಸುವುದಕ್ಕೆ ಸಾಧ್ಯವಾಗುವಂತೆ ಶಿಕ್ಷಕಿಯು ಖಚಿತ ಪಡಿಸಿಕೊಳ್ಳುವಂತಾಗುತ್ತದೆ. ಮೌಲ್ಯಮಾಪನವು ಇಂತಹ ಕಾರ್ಯಗಳೊಂದಿಗೆ ನಿಕಟವಾದ ಸಂಬಂಧ ಹೊಂದಿದ್ದು ಮಗುವಿನ ಕಲಿಕೆಗೆ ಸಂಬಂಧಿಸಿದಂತೆ ವಿವಿಧ ರೀತಿಗಳಲ್ಲಿ ಆಗುತ್ತದೆ ಎನ್ನುವುದನ್ನೂ ಖಚಿತಪಡಿಸುತ್ತದೆ.

ಈ ಹಂತದಲ್ಲಿ ಶಿಕ್ಷಕಿಗೆ ಇದನ್ನು ಆಯೋಜಿಸಿ ಕೈಗೊಳ್ಳುವುದು ಪ್ರಯಾಸಕರ ಎಂದೆನಿಸಿದರೂ ವಾಸ್ತವದಲ್ಲಿ ಇದು ಅಷ್ಟು ಕಷ್ಟಕರವಲ್ಲ. ಮುಂಚಿತವಾಗಿಯೇ ಇದಕ್ಕೆ ಸ್ವಲ್ಪಮಟ್ಟಿನ ತಯಾರಿಯ ಆಯೋಜನೆಯ ಅಗತ್ಯವಿದ್ದರೂ, ಆನಂತರ ಈ ತರಹದ ತರಗತಿ ಅಭ್ಯಾಸಗಳು ಶಿಕ್ಷಕರ ಮಟ್ಟಿಗೆ ಕನಿಷ್ಠ ಮಧ್ಯಸ್ಥಿಕೆಯನ್ನು ಬೇಡುತ್ತದೆ. ಏಕೆಂದರೆ ಇದರ ಸಾರವೇ ಓರಗೆಯವರೊಡನೆ ಕಲಿಕೆ ಹಾಗು ಸಹಕಾರದಲ್ಲಿದೆ. ಜೊತೆಗೆ ಈ ತರಹದ ಕಾರ್ಯಗಳನ್ನು ಮೊದಲು ಪರಿಚಯಿಸಿದಾಗ ಸ್ವಲ್ಪಮಟ್ಟಿನ ಗದ್ದಲ ಹಾಗು ಶಿಷ್ಟಾಚಾರದ ಕೊರತೆಯ ಸ್ಥಿತಿ ಎದುರಾಗಬಹುದು. ಇದನ್ನು ನಿಭಾಯಿಸಲು ಶಿಕ್ಷಕಿ ಸಿದ್ಧರಿರಬೇಕು. ಆದರೂ ವಿದ್ಯಾರ್ಥಿಗಳು ಶಿಕ್ಷಣಾತ್ಮಕ ಹಾಗೂ ಶಿಕ್ಷಕರ ನೇತೃತ್ವವೇ ಪ್ರಧಾನವಾಗಿರದ ಬೋಧನಾ ವಿಧಾನದ ಕಲ್ಪನೆಗೆ ಒಮ್ಮೆ ಹೊಂದಿಕೊಂಡರೆಂದರೆ, ತಮ್ಮ ಕಲಿಕೆಯ ಜವಾಬ್ದಾರಿಯನ್ನು ತಾವಾಗಿಯೇ ಹೊತ್ತುಕೊಳ್ಳಲು ಕಲಿಯುತ್ತಾರೆ ಮತ್ತು ಶಿಸ್ತುಬದ್ಧರಾಗುತ್ತಾರೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಸಮೃದ್ಧ ಸಂಪನ್ಮೂಲಗಳು ಇಲ್ಲದಿರುವ ತರಗತಿಗಳಲ್ಲಿಯೂ ಈ ರೀತಿಯ ಅಭ್ಯಾಸಗಳನ್ನು ಅಳವಡಿಸಿ–ಕೊಳ್ಳಬಹುದು. ಆಸನಗಳ ವ್ಯವಸ್ಥೆಯನ್ನು ಮರುರೂಪಿಸುವುದು ಹಾಗೂ ಶಾಲೆಯೊಳಗಿನ ಮತ್ತು ಹೊರಗಿನ ಸ್ಥಳಗಳನ್ನು ಉತ್ತಮವಾಗಿ ಬಳಸಿಕೊಂಡು ಪೂರಕ ಕಲಿಕಾ ವಾತಾವರಣವನ್ನು ನಿರ್ಮಿಸುವುದು ಈ ರೀತಿಯ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸುವ ನಿಟ್ಟಿನಲ್ಲಿ ಬಹಳ ಸಹಾಯ ಮಾಡುತ್ತದೆ.

**ತರಗತಿಯಲ್ಲಿ ವಿಭಿನ್ನ ಬೋಧನಾ ಕ್ರಮಗಳನ್ನು ಅಗತ್ಯವಿರುವಂತೆ ಅಳವಡಿಸಿಕೊಳ್ಳುವುದು**

ಶಿಕ್ಷಕರು ಯಾವುದೇ ವಿಷಯದಲ್ಲಿಯೇ ಆಗಲಿ ಯಾವುದೇ ಹಂತದಲ್ಲಿಯೇ ಆಗಲಿ ತಮ್ಮ ಪಾಠಗಳನ್ನು ಆಯೋಜಿಸುವಾಗ ಈ ಕೆಳಗೆ ಕೊಟ್ಟಿರುವ ಕೆಲವು ತತ್ವಗಳನ್ನು/ತಂತ್ರಗಳನ್ನು ಗಮನದಲ್ಲಿಟ್ಟು ಕೊಳ್ಳಬಹುದಾಗಿದೆ:

**ಮುಖ್ಯ ಪರಿಕಲ್ಪನೆಗಳನ್ನು ಗುರುತಿಸುವುದು**

ಯಾವುದೇ ವಿಷಯದಲ್ಲಿ ಕಲಿಯಬೇಕಾದ ಮುಖ್ಯ ಪರಿಕಲ್ಪನೆಗಳನ್ನು ಗುರುತಿಸಿ ಕೇಂದ್ರೀಕರಿಸಿದಾಗ, ಶಿಕ್ಷಕಿಯು ಕಲಿಸಬೇಕಾದ ವಸ್ತುವಿಷಯವನ್ನು ಗಣನೀಯವಾಗಿ ಕಡಿತಗೊಳಿಸಬಹುದು. ದೊಡ್ಡ ಪ್ರಮಾಣದ ಪಠ್ಯ ಭಾಗವನ್ನು ಓದುವುದಕ್ಕೆ ಕಷ್ಟಪಡುವ, ಅಂದರೆ ಕಲಿಕಾ ನ್ಯೂನತೆ ಹೊಂದಿರುವಂತಹ ಕೆಲವು ವಿದ್ಯಾರ್ಥಿಗಳಿಗೆ ಇದರಿಂದ ಉಪಯೋಗವಾಗುತ್ತದೆ. ಪ್ರತಿಯೊಂದು ಪಾಠವನ್ನು ಕಲಿಸುವಾಗ ಮುಖ್ಯಾಂಶಗಳನ್ನು ಗುರುತಿಸುವುದು/ಒತ್ತು ಕೊಡುವುದು, ಕೆಳಗೆ ಗೆರೆ ಎಳೆಯುವ ಮೂಲಕ ಅದಕ್ಕೆ ಮುಖ್ಯವಾದ ಪದಗಳನ್ನು ಪಟ್ಟಿ ಮಾಡುವುದು ಹಾಗೂ ಮುಖ್ಯ ಅಂಶಗಳನ್ನು ಮಿಂಚುಪಟ್ಟಿಯ ಮೂಲಕ ಪ್ರದರ್ಶಿಸುವುದು ಈ ಕಾರ್ಯವನ್ನು ಸುಲಭವಾಗಿ ಅನುಕೂಲಿಸಬಹುದಾದ ಮಾರ್ಗಗಳಾಗಿವೆ.

**ವಿಭಿನ್ನ ವಿಧಾನಗಳ ಮೂಲಕ ವಿಷಯವನ್ನು ಪ್ರಸ್ತುತಪಡಿಸುವುದು, ಅನುಭವಾತ್ಮಕ ಕಲಿಕೆಯನ್ನು ಉತ್ತೇಜಿಸುವುದು**

ಶಿಕ್ಷಕರ ನೇತೃತ್ವದ, ಉಪನ್ಯಾಸ ಆಧಾರಿತ ಬೋಧನಾ ವಿಧಾನಕ್ಕಾಗಿ ಭರಿಸುವ ಸಮಯವನ್ನು ಕಡಿತಗೊಳಿಸುವ ಮೂಲಕ ಶಿಕ್ಷಕರು ವಿಷಯವನ್ನು ಅಳವಡಿಸಿಕೊಳ್ಳಬಹುದು ಮತ್ತು ಅದನ್ನು ದೃಶ್ಯ ಐಂದ್ರೀಯ ಅಥವಾ ಆಂಗಿಕ ಚಲನ ಹಾಗೂ ಶ್ರವಣ ವಿಧಾನಗಳ ಮೂಲಕ ಪ್ರಸ್ತುತಪಡಿಸಬಹುದು. ಇದು ಮಾದರಿಗಳು, ವಿಡಿಯೋ, ಚಾರ್ಟ್, ಹಾಗೂ ಪೋಸ್ಟರ್‌ಗಳು ಅಥವಾ ಆಡಿಯೋ ತುಣುಕುಗಳ ರೂಪದಲ್ಲಿಯೂ ಇರಬಹುದು. ವಿವಿಧ ಆಸಕ್ತಿ ಮಟ್ಟಗಳನ್ನು ಹಾಗು ಕಲಿಕಾ ಹಿನ್ನೆಲೆಗಳನ್ನು ಹೊಂದಿರುವ ವಿದ್ಯಾರ್ಥಿಗಳಿಗೆ ಈ ರೀತಿಯ ಪರ್ಯಾಯ ವಿಧಾನಗಳು ಆಕರ್ಷಕವಾಗಿರುತ್ತವೆ. ವಿದ್ಯಾರ್ಥಿಗಳು ಕಲಿಕೆಯನ್ನು ನೇರವಾಗಿ ಪಡೆದು ಅನುಭವಿಸುವುದಕ್ಕೆ ಹಾಗು ತಮ್ಮದೇ ಆದ ಅರ್ಥಗಳನ್ನು ಹುಡುಕಿಕೊಳ್ಳುವುದಕ್ಕೆ ಇದು ಅನುವು ಮಾಡಿಕೊಡುತ್ತದೆ. ತರಗತಿಯ ಬೇರೆಬೇರೆ ಜಾಗಗಳಲ್ಲಿ ಸಜ್ಜುಗೊಳಿಸುವುದರ ಮೂಲಕ ಇದನ್ನು ಮಾಡಬಹುದು. ವಿದ್ಯಾರ್ಥಿಗಳು ಒಂದು ಕೇಂದ್ರದಿಂದ ಮತ್ತೊಂದು ಕೇಂದ್ರಕ್ಕೆ ಭೇಟಿ ನೀಡಿ ಅಲ್ಲಿ ಪ್ರದರ್ಶಿಸಲಾದ ಪರಿಕರಗಳೊಂದಿಗೆ ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಅವರನ್ನು ಪ್ರೋತ್ಸಾಹಿಸಬಹುದು.

**ವಿದ್ಯಾರ್ಥಿಯ ಕಲಿಕೆಯ ಗತಿಯನ್ನು ಬದಲಾಯಿಸುವುದು ಹಾಗೂ ಮೌಲ್ಯಮಾಪನಕ್ಕಾಗಿ ವಿವಿಧ ನಿಯಮಗಳನ್ನು ಪರಿಚಯಿಸುವುದು**.

ಪ್ರತಿಯೊಂದು ಮಗುವಿನ ಬಲಾಬಲಗಳನ್ನು ಅರ್ಥಮಾಡಿಕೊಂಡು ದೌರ್ಬಲ್ಯವಿರುವ ಕ್ಷೇತ್ರದಲ್ಲಿ ಸಶಕ್ತನನ್ನಾಗಿ ಮಾಡುವುದರ ಮೇಲೆ ಗಮನಹರಿಸಲು ಶಿಕ್ಷಕಿಯು ಯಾವುದೇ ವಿಷಯವನ್ನು ಕುರಿತಂತೆ ಬಹುಸ್ತರ ಮೌಲ್ಯಮಾಪನ ವಿಧಾನವನ್ನು ರೂಪಿಸಬಹುದು. ವಿದ್ಯಾರ್ಥಿಗಳು ಆರಾಮದಾಯಕವಾಗಿ ಕೊಟ್ಟ ಕಾರ್ಯಗಳನ್ನು ನಿರ್ವಹಿಸಲು ಅವರ ಸಿದ್ಧತಾ ಹಂತ ಹಾಗೂ ಗತಿಯನ್ನು ಆಧರಿಸಿ ಅವರನ್ನು ತೊಡಗಿಸಬಹುದು. ಒಮ್ಮೆ ಮಗುವು ಕಲಿಕಾ ಉದ್ದೇಶವನ್ನು ಸಾಧಿಸಿದ ನಂತರ ಮುಂದಿನ ಹಂತದ ಮೌಲ್ಯಮಾಪನಕ್ಕೆ ಒಳಪಡಿಸಬಹುದು. ಎಲ್ಲ ವಿದ್ಯಾರ್ಥಿಗಳು ಮೌಲ್ಯಮಾಪನದ ಎಲ್ಲಾ ಹಂತಗಳನ್ನು ಸಾಧಿಸಬೇಕೆನ್ನುವುದು ಅಗತ್ಯವಿಲ್ಲ.

## ವಿವಿಧ ಹಂತಗಳ ಕಲಿಕೆಗೆ ಬೆಂಬಲವನ್ನೊದಗಿಸುವುದು

ವಿವಿಧ ಹಂತದ ಸಿದ್ಧತೆ ಹಾಗೂ ಕಲಿಕಾ ಮಟ್ಟವನ್ನನುಸರಿಸಿದಂತೆ ವ್ಯಕ್ತಿಗತ ಬೋಧನೆ ಹಾಗೂ ಮಕ್ಕಳಿಗೆ ಬೆಂಬಲದ ಅಗತ್ಯವಿರುತ್ತದೆ. ಅಗತ್ಯವಿರುವ ವಿದ್ಯಾರ್ಥಿಗಳಿಗಷ್ಟೇ ಆಳವಾದ, ನಿರ್ದಿಷ್ಟ ವಿಧಾನದ ಬೋಧನೆಯನ್ನು ಅನುಕೂಲಿಸುವುದರ ಮೂಲಕ ಶಿಕ್ಷಕರು ಸಮಯ ಹಾಗೂ ಶ್ರಮವನ್ನು ಉಳಿಸಬಹುದು. ಇತರ ಮಕ್ಕಳು ಸ್ವಂತವಾಗಿ ಹಾಗೂ ಸಹಪಾಠಿಗಳ ಬೆಂಬಲದೊಂದಿಗೆ ಕಲಿಯುತ್ತಾರಾದರೆ, ಅವರನ್ನು ಆ ನಿಟ್ಟಿನಲ್ಲಿಯೇ ಪ್ರೋತ್ಸಾಹಿಸಬೇಕು. ಈ ರೀತಿಯ ಕಾರ್ಯವಿಧಾನಗಳು ತರಗತಿಗಳಲ್ಲಿ ಶಿಕ್ಷಕರು ತಮ್ಮ ಸಮಯವನ್ನು ಉತ್ತಮವಾಗಿ ಬಳಸುವುದಕ್ಕೆ ಹಾಗು ವಿದ್ಯಾರ್ಥಿಗಳು ಸ್ವತಂತ್ರ ಕಲಿಕಾರ್ಥಿಗಳಾ–ಗುವುದಕ್ಕೆ ಸಹಾಯಮಾಡುತ್ತವೆ. ಇವು ಪರಸ್ಪರ ಮಕ್ಕಳಲ್ಲಿ ಸಂವೇದನಾಶೀಲತೆಯನ್ನು ಬೆಳೆಸುವುದಕ್ಕೂ ಹಾಗು ಸಹಪಾಠಿಗ–ಳೊಂದಿಗಿನ ಸಂಬಂಧಗಳನ್ನು ಬೆಳೆಸುವುದಕ್ಕೂ ಸಹಾಯ ಮಾಡುತ್ತವೆ.

ಈ ರೀತಿಯ ಪ್ರತಿಯೊಂದು ಅಭ್ಯಾಸ ಅಥವಾ ಶಿಫಾರಸಿನ ಮೂಲವಾಗಿ ಒಳಗೊಳ್ಳುವಿಕೆಯೆಡೆಗೆ ಒಂದು ದೃಢವಾದ ಬದ್ಧತೆ ಇರುತ್ತದೆ. ಮಕ್ಕಳ ಸಾಮರ್ಥ್ಯ ಹಾಗು ಆಸಕ್ತಿಗಳಲ್ಲಿರುವ ವೈಯಕ್ತಿಕ ಭಿನ್ನತೆಯು, ಪ್ರತಿಯೊಂದು ತರಗತಿ, ಪ್ರತಿಯೊಂದು ಸನ್ನಿವೇಶದಲ್ಲಿಯೂ ಒಂದು ಅನಿವಾರ್ಯವಾದ ವಾಸ್ತವ ಎಂಬ ನಂಬಿಕೆಯನ್ನು ಅರ್ಥ ಮಾಡಿಕೊಳ್ಳಬೇಕಿರುವುದೂ ಬಹು ಮುಖ್ಯ.

## ಕೊನೆಯ ಮಾತು

ದೇಶದಲ್ಲಿರುವ ಬಹುತೇಕ ಶಾಲೆಗಳ ಶೋಚನೀಯ ಪರಿಸ್ಥಿತಿಯನ್ನು ಅವಲೋಕಿಸಿ ನೋಡಿದಾಗ ವಿಭಿನ್ನ ಅಗತ್ಯಕ್ಕೆ ತಕ್ಕ ಬೋಧನಾ ಕ್ರಮವನ್ನು ಭಾರತೀಯ ಸನ್ನಿವೇಶದಲ್ಲಿ ಅಳವಡಿಸಿಕೊಳ್ಳುವ ಸಾಧ್ಯತೆಯ ಬಗ್ಗೆ ಹಲವಾರು ಪ್ರಶ್ನೆಗಳು ಏಳಬಹುದು. ಆದಾಗ್ಯೂ ಈ ಬೋಧನಾ ಕ್ರಮ ಒಂದು ಬಹುಮುಖಿ ವಿಧಾನವಾಗಿದ್ದು, ತರಗತಿಯ ಬೋಧನಾ ವಿಧಾನವನ್ನು ಮರು ರೂಪಿಸುವುದಕ್ಕೆ ಒಂದು ಮಾರ್ಗವಾಗಿದೆ. ಆದರೆ ಇದು ಒಂದು ಕಟ್ಟುನಿಟ್ಟಾದ ಅಭೇದ್ಯ ಮಾದರಿಯಲ್ಲ ಎಂದು ಅರ್ಥಮಾಡಿಕೊಳ್ಳುವುದು ಮುಖ್ಯ. ಮಕ್ಕಳ ಕಲಿಕೆಯ ವಿಷಯದಲ್ಲಿ ಹೇಗೆ ಒಂದೇ ಅಳತೆ ಎಲ್ಲರಿಗೂ ಹೊಂದುವುದಿಲ್ಲವೋ, ನಮ್ಮ ಪರಿಸ್ಥಿತಿಗಳಿಗೆ ಪೂರಕವಾಗಿ ಹಾಗೂ ಕಡಿಮೆ ಸಂಪನ್ಮೂಲಗಳುಳ್ಳ ಮತ್ತು ಕಿಕ್ಕಿರಿದ ತರಗತಿಗಳ ವಾಸ್ತವದ ಅರಿವಿನಿಂದಲೇ ವಿಭಿನ್ನ ಬೋಧನಾಕ್ರಮದ ತತ್ವಗಳನ್ನು ಮಾರ್ಪಡಿಸಿಕೊಂಡು ಅಳವಡಿಸಿಕೊಳ್ಳದಿರಲು ಯಾವುದೇ ಕಾರಣವಿಲ್ಲ. ಅದಕ್ಕಾಗಿಯೇ ಉತ್ತರಾಖಂಡದ ಶಾಲಾ ತರಗತಿಯ ಪ್ರತಿಯೊಂದು ಗೋಡೆಯ ಒಂದೊಂದು ಇಂಚು ಮತ್ತು ಒಂದೊಂದು ಕಾಗದದ ತುಣುಕೂ, ಸೀಮೆಸುಣ್ಣವೂ ಮಕ್ಕಳು ಕೆಲಸ ಮಾಡಲು, ಸೂಕ್ತ ಚಟುವಟಿಕೆಗಳನ್ನು ರೂಪಿಸುವುದಕ್ಕೆ ಹಾಗು ಮೌಲ್ಯಮಾಪನವನ್ನು ಕೈಗೊಳ್ಳಲು ಉಪಯೋಗಿಸಲ್ಪಟ್ಟಿವೆ. ಹೀಗಾಗಿಯೇ ವಿಭಿನ್ನ ಅಗತ್ಯಕ್ಕೆ ತಕ್ಕ ಬೋಧನಾಕ್ರಮದ ಹಾಗು ಅಭ್ಯಾಸಗಳನ್ನು ಅಳವಡಿಸಿಕೊಳ್ಳಲು ಬೇಕಾದ ಸ್ಫೂರ್ತಿ ಮತ್ತು ಪ್ರೇರಣೆಯನ್ನು ಪಡೆಯುವುದಕ್ಕೆ ಭಾರತದಲ್ಲಿನ ತರಗತಿಗಳು ಈ ಶಾಲೆಯನ್ನು ಒಂದು ಉದಾಹರಣೆಯಾಗಿ ನೋಡಬೇಕು.


**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**

*Tomlinson, C. A. (2001)*. How to Differentiate Instruction in Mixed Ability Classrooms, ASCD.





**ಅಂಕುರ್ ಮದನ್** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಬೋಧಿಸುತ್ತಾರೆ. ಮಗುವಿನ ಬೆಳವಣಿಗೆ ಹಾಗು ಸಮನ್ವಯ ಶಿಕ್ಷಣ, ಅವರ ಬೋಧನೆ ಮತ್ತು ಸಂಶೋಧನಾ ಕ್ಷೇತ್ರಗಳಾಗಿವೆ. ಇವರನ್ನು ankur.madan@apu.edu.in ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ವಿನಯಾ ವಿಠ್ಠಲ** । ಪರಿಶೀಲನೆ: **ಲತಾ ಕೆ ಸಿ**

# ಮಕ್ಕಳಲ್ಲಿ ಉತ್ಸಾಹದ ಜೀವಕಳೆ ತುಂಬಿ ಅವರ ಮನಸ್ಸುಗಳೊಂದಿಗೆ ತೊಡಗುವುದು

ಆಶಾ ಸಿಂಗ್

ಒಬ್ಬ ಶಿಕ್ಷಕ ಶಿಕ್ಷಕಿಯಾಗಿ ನಾನು ನನ್ನ ತರಗತಿಯನ್ನು ತರಗತಿ ಕೊಠಡಿಯ ಅನುಭವದೊಂದಿಗೆ ಆರಂಭಿಸುತ್ತೇನೆ. ಶಿಕ್ಷಕರಾಗುವ ಹಾದಿಯಲ್ಲಿ ಕಲಿಕೆಯಲ್ಲಿ ತೊಡಗಿರುವ ನನ್ನ ಪದವಿ ವಿದ್ಯಾರ್ಥಿಗಳಿಗೆ ಮೊದಮೊದಲು ಈ ಕೆಲವು ಏಕಾಗ್ರತೆಯನ್ನು ಬೇಡುವ ಚಟುವಟಿಕೆಗಳಲ್ಲಿ ಭಾಗವಹಿಸುವುದು ಹಾಸ್ಯಾಸ್ಪದವೆನಿಸಿದರೂ ನಾನು ಇದನ್ನೇ ಅವರಿಗೆ ಹೇಳುವುದು:

ಶಿಕ್ಷಕರು ತರಗತಿಯನ್ನು ಪ್ರವೇಶಿಸುವಾಗ ವಿದ್ಯಾರ್ಥಿಗಳು ಸಾಮಾನ್ಯವಾಗಿ ತಮ್ಮ ಸಹಗರದ ಹರಟೆಯಲ್ಲಿ ತೊಡಗಿರುತ್ತಾರೆ. ಶಿಕ್ಷಕರನ್ನು ಕಂಡ ಕೂಡಲೇ ಸಾವರಿಸಿ-ಕೊಂಡು 'ಗುಡ್ ಮಾರ್ನಿಂಗ್' ಹೇಳಲು ತರಾತುರಿಯಲ್ಲಿ ಸಿದ್ಧರಾಗುತ್ತಾರೆ. ವಿನೋದದ ಹಾವಭಾವ ಮತ್ತು ಸೂಚನೆಗಳ ಮೂಲಕ ಶಿಕ್ಷಕರು ಈ ಸನ್ನಿವೇಶವನ್ನು ಬದಲಾಯಿಸಬಹುದು. ಮಕ್ಕಳು ಕೈಗಳನ್ನು ಮೇಲೆತ್ತಿ ಬೆರಳುಗಳನ್ನು ಆಡಿಸುತ್ತಾ, (ಧ್ವನಿಯ ಸೂಕ್ತ ಏರಿಳಿತಗಳಿಂದ) 'ತಾರೆಗಳೇ ತಾರೆಗಳೇ, ನಗುನಗುವ ತಾರೆಗಳೇ, ಅಳುಅಳುವ ತಾರೆಗಳೇ, ಕೋಪವೇಕೆ ತಾರೆಗಳೇ, ನಲಿನಲಿಯಿರಿ ತಾರೆಗಳೇ' ಎನ್ನುತ್ತಾ ನಂತರ ಆ ಇಡೀ ಗುಂಪಿನ ಗಮನವನ್ನು ತಮ್ಮತ್ತ ಸೆಳೆಯಲು ಒಮ್ಮೆಲೇ ಮೆಲುದನಿಯಲ್ಲಿ 'ಶಾಂತರಾಗಿ ತಾರೆಗಳೇ, ಮೆಲ್ಲನಿರಿ' ಎನ್ನುವುದು.

ನಾನು ನನ್ನ ಪ್ರಶಿಕ್ಷಣಾರ್ಥಿಗಳಿಗೆ ನೀಡಿದ ಸಲಹೆಯೆಂದರೆ: ಹೊಸ ವಿಚಾರಗಳನ್ನು ತಮ್ಮದಾಗಿಸಿಕೊಳ್ಳಲು ಸಿದ್ಧರಾದ ಈ ಹುಮ್ಮಸ್ಸಿನ ಗುಂಪಿನೊಂದಿಗೆ ನಿಮ್ಮ ಪಾಠವನ್ನು ಆರಂಭಿಸಿ. ಹೊಸ ವಿಚಾರಗಳನ್ನು ಹುರಿದುಂಬಿಸಲು ಸಿದ್ಧರಾಗಿ. ವಿದ್ಯಾರ್ಥಿಗಳು ಒಲ್ಲದ ಮನಸ್ಸಿನಿಂದಲೇ ನಿರತರಾದರು. ಇದು ಅವರಿಗೆ ತರಗತಿಯಲ್ಲಿ ಘನತೆ ತಾರದ ವರ್ತನೆಯೆನಿಸಿರ-ಬಹುದು. ಆದರೂ, ಮಕ್ಕಳ ಜೊತೆಗೆ ವಿವಿಧ ರೀತಿಗಳಲ್ಲಿ ತೊಡಗುವುದನ್ನು ಅನುಭವಿಸಬೇಕೇ ಹೊರತು ಕೇವಲ ಕಲ್ಪಿಸಿಕೊಳ್ಳುವುದಲ್ಲ ಎಂಬ ನನ್ನ ನಂಬಿಕೆಯನ್ನು ನಾನು ಪಾಲಿಸಿದೆ.

ಶೀಘ್ರದಲ್ಲೇ ವಿದ್ಯಾರ್ಥಿ ಶಿಕ್ಷಕರು ತಮ್ಮ ಇಂಟರ್ನ್‌ಶಿಪ್‌ಗಾಗಿ ತೆರಳಿದರು: ವಿದ್ಯಾರ್ಥಿಗಳು ಬೇಗನೆ ಪಾಠ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ತರಗತಿಗಳಲ್ಲಿ ತಾವು ಕಲಿತ ಸೈದ್ಧಾಂತಿಕ ಬೋಧನಾ ಅಭ್ಯಾಸಗಳನ್ನು ತರಗತಿಗಳಲ್ಲಿ ಅವರು ಬಳಸ-ಬೇಕಾಗುತ್ತದೆ. ಶಾಲೆಗಳಲ್ಲಿ ಮೂರು ವಾರ ಪ್ರಾಯೋಗಿಕ ತರಗತಿಗಳು ಮುಗಿದ ನಂತರ ನಾನು ಅವರನ್ನು ಭೇಟಿಯಾದೆ. ನನ್ನ 'ತಾರೆಗಳೇ, ತಾರೆಗಳೇ' ಎಂಬ ಗೀತೆಯ ಉಪ-ಯುಕ್ತತೆಯ ಬಗ್ಗೆ ಅವರು ಚಕಾರ ಎತ್ತಲಿಲ್ಲ. ವಿವಿಧ ರೀತಿಯ ಭಾವನಾತ್ಮಕ ಪ್ರಾಸಬದ್ಧ ಚುಟುಕಗಳು ಮಕ್ಕಳ ಹುಮ್ಮಸ್ಸನ್ನು ಒಂದೆಡೆಗೆ ಒಗ್ಗೂಡಿಸಿ ಗಮನ ನೀಡುವುದರ ಮಹತ್ವವನ್ನು ನೆಲೆಯೂರಿಸುತ್ತದೆ. ತನ್ಮೂಲಕ ಅವರನ್ನು ಅವರ ಗುಂಪು-ಗಳೊಂದಿಗೆ ಹತ್ತಿರವಾಗುವಂತೆ ಮಾಡುತ್ತದೆ.

ಈ ಮೇಲೆ ಉಲ್ಲೇಖಿಸಿದ ವಿದ್ಯಾರ್ಥಿ-ಶಿಕ್ಷಕರ ನಡುವಿನ ಹಂಚಿಕೊಂಡ ಅನುಭವವು 'ನಾವೆಲ್ಲರೂ ಸುಮ್ಮನಿರೋಣವೆ' ಎಂಬ ಕಟು ಆದೇಶಯುಕ್ತ ಧೋರಣೆಯ ಏರು ದನಿಯಿಂದ ಶಿಕ್ಷಕರು ತರಗತಿಗೆ ಪ್ರವೇಶ ಮಾಡುವುದರ ಬದಲು ಒಂದು ಪರ್ಯಾಯವಾಗಿದೆ. ಶಿಕ್ಷಕ-ನಿಯಂತ್ರಿತ ವಿಧಾನಕ್ಕಿಂತ ಈ ಲಘುವಿನೋದ ಭರಿತ ಪರ್ಯಾಯವು ತರಗತಿಯನ್ನು ನಿಯಂತ್ರಿಸಲು ನೆರವಾಗುತ್ತದೆ. ಸಿಲ್ವಿಯ ಆಶ್ಟನ್ ವೆರ್ನರ್ ತಮ್ಮ 'ದಿ ಟೀಚರ್' ಎಂಬ ಬಹುಮುಖ್ಯ ಪುಸ್ತಕದಲ್ಲಿ ತಮ್ಮ ವಿದ್ಯಾರ್ಥಿಗಳ ಗಮನ ಸೆಳೆಯಲು ತಾವು ಶಿಕ್ಷಕರು ಪಿಯಾನೊವನ್ನು ಬಳಸಿರುವುದರ ಬಗ್ಗೆ ಉಲ್ಲೇಖಿಸುತ್ತಾರೆ. ತರಗತಿ ಸಾಧನಗಳು ಸ್ಥಳೀಯ ಸಂದರ್ಭಗಳು ಮತ್ತು ಸಂಪನ್ಮೂಲಗಳಿಗೆ ಸಂಬಂಧಿಸಿದಂತಿರಬೇಕು. ಅಸ್ತವ್ಯಸ್ಥತೆಯು ಮೂಲಕ ಕ್ರಮ-ಬದ್ಧತೆಯನ್ನುಂಟು ಮಾಡುವ ತರಗತಿ ಪ್ರಕ್ರಿಯೆಗಳು ಆಟವಾಡುವ ಮಕ್ಕಳ ಪ್ರವೃತ್ತಿಗೆ ಹತ್ತಿರವಾಗಿರುತ್ತವೆ. ಮಕ್ಕಳಿಗೆ ಸ್ವಲ್ಪ ನಗು, ಸ್ವಲ್ಪ ತರಲೆ, ಕಿಲಕಿಲ ನಗು ಇವೆಲ್ಲವುಗಳಿಗೆ ಸಮಯ ಸಿಕ್ಕರೆ ಭಾವನಾತ್ಮಕವಾಗಿ ಸಂತೃಪ್ತರಾಗುತ್ತಾರೆ. ಇಲ್ಲಿ ಅವರು ಕೇವಲ ಜ್ಞಾನಾರ್ಜನೆ ಮಾಡಿಕೊಳ್ಳುವ ವಿದ್ಯಾರ್ಥಿಗಳಾಗಿರದೆ 'ಮಕ್ಕಳು' ಎಂಬುದನ್ನು ಅಂಗೀಕರಿಸಿದಂತಾಗುತ್ತದೆ.

**ಅಗೋಚರ ಮಂತ್ರೌಷಧಿ**

ಮಕ್ಕಳ ಮನಸ್ಸುಗಳಲ್ಲಿ ಅದರಲ್ಲೂ ವಿಶೇಷವಾಗಿ ಆರಂಭಿಕ ಪ್ರಾಥಮಿಕ ತರಗತಿಗಳಲ್ಲಿನ ಮಕ್ಕಳಲ್ಲಿ ಬಹಳ ಕುತೂಹಲವಿರುತ್ತದೆ. ಅವರಲ್ಲಿ ಪ್ರಯೋಗದ ಕಿಡಿಯನ್ನು ಅಥವಾ ಪ್ರಶ್ನಿಸುವ ಮನೋಭಾವವನ್ನು ಬೆಳೆಸಿ ಉಳಿಸಿಕೊಂಡು ಹೋಗುವುದು ಶಿಕ್ಷಕರ ಜವಾಬ್ದಾರಿಯಾಗಿರುತ್ತದೆ. ಶಿಕ್ಷಕರು ತರಗತಿಯಲ್ಲಿ ಬಳಸುವ ಭಾಗವಹಿಸುವಿಕೆಯ ವಿಧಾನಗಳು ಮತ್ತು ಸಮೃದ್ಧ ಶೈಲಿಯಲ್ಲಿ ವಿಷಯವನ್ನು ಪ್ರಸ್ತುತಪಡಿಸುವುದರಿಂದ, ಇವೆಲ್ಲಾ ಮಕ್ಕಳ ತಿಳುವಳಿಕೆ ಹಾಗು ಗ್ರಹಿಕೆಯ ಮೇಲೆ ಮಾಂತ್ರಿಕ ಪ್ರಭಾವವನ್ನು ಬೀರುತ್ತದೆ. ಯಾವುದೇ ರೀತಿಯ ಭಯವಿಲ್ಲದೆ ವಿಷಯದಲ್ಲಿ ಮಕ್ಕಳು ತೊಡಗುವುದು ಮತ್ತು ವಿಷಯವನ್ನು ಇಷ್ಟಪಡುವುದು ಕಲಿಕೆಯ ನಿರ್ಣಾಯಕ ಅಂಶಗಳು. ಮಕ್ಕಳು ತಪ್ಪುಗಳನ್ನು ಮಾಡಲು ಹೆದರದೆ ಇರುವ ಅಥವಾ ಸಾಕ್ಷರತೆಗೆ ಎಷ್ಟೋ ಸೃಜನಶೀಲತೆಗೂ ಅಷ್ಟೇ ಒತ್ತು ನೀಡುವ ತರಗತಿ ವಾತಾವರಣವು ನಂಬಿಕೆಯ ಬೇರನ್ನು ಒದಗಿಸುತ್ತದೆ. ಬೆಂಬಲ ನೀಡುವ ಓರ್ವ ಶಿಕ್ಷಕ ಗೌರವಯುತ ಮತ್ತು ಬೆಚ್ಚನೆಯ ಭಾವವನ್ನು ಉಂಟು ಮಾಡುವ ಒಬ್ಬ ಹಿರಿಯರಾಗಿ ಮಕ್ಕಳಿಗೆ ಭಾವನಾತ್ಮಕವಾಗಿ ಪೋಷಿಸುವ ಕಲಿಕಾ ಅವಕಾಶಗಳನ್ನು ಒದಗಿಸುತ್ತಾರೆ. ಜಾನ್ ಹೋಲ್ಟ್ ಅವರ ಪ್ರಕಾರ 'ಕಲಿಕೆಯು ಬೋಧನೆಯ ಫಲಿತವಲ್ಲ. ಕಲಿಕಾರ್ಥಿಗಳು ಚಟುವಟಿಕೆಯಲ್ಲಿ ನಿರತರಾಗಿರುವುದರ ಫಲಿತವೇ ಕಲಿಕೆ. ಮಕ್ಕಳಿಗೆ ಯಾವುದು ಪ್ರಯೋಜನಕಾರಿಯೋ ಅಂದರೆ ಅವರು ಅವಕಾಶ ನೀಡುವ ಇತರೆ ಮಕ್ಕಳೊಂದಿಗೆ ಇರುವುದು ಅಂತಹ ಮಾರ್ಗಗಳಿಗೆ ಅಗತ್ಯವಿದೆ. ವಾಸ್ತವವಾಗಿ 3-10 ವರ್ಷದ

ಮಕ್ಕಳ ಕಲಿಕೆಯಲ್ಲಿ ತೊಡಗಿರುವ ಶಿಕ್ಷಕ ಸಮುದಾಯದ ಮಂತ್ರ ಹೀಗಿರಬೇಕು:

1. ಪ್ರತಿಯೊಂದು ಮಗುವೂ ತಾನು ವಿಶೇಷ ಎಂಬ ಭಾವನೆ ಹೊಂದಬೇಕು.
2. ಮಕ್ಕಳು ಆಟದ ಸಂದರ್ಭಗಳಲ್ಲಿಯೇ ಅತ್ಯುತ್ತಮವಾಗಿ ಕಲಿಯುತ್ತಾರೆ.
3. ನಿಮ್ಮ ತರಗತಿಯ ಪ್ರಕ್ರಿಯೆಗಳು ಮಕ್ಕಳನ್ನು ವೈಯುಕ್ತಿಕ ನೆಲೆಯಲ್ಲಿ ತೊಡಗಿಸಿಕೊಳ್ಳುವಂತಿದೆಯೇ ಎಂಬುದರ ಬಗ್ಗೆ ಪರ್ಯಾಲೋಚಿಸಿ.

ಎಲ್ಲ ಶಿಕ್ಷಕರು ಮಗು ಕೇಂದ್ರಿತ ಬೋಧನಾ ವಿಧಾನವನ್ನು ಪರಿಚಯಿಸಿಕೊಂಡಿರಬೇಕು ಮತ್ತು ಅದನ್ನು ಚೆನ್ನಾಗಿ ಕರಗತ ಮಾಡಿಕೊಂಡಿರಬೇಕು. ಸಾಮಾನ್ಯವಾಗಿ, ಒಂದು ದೊಡ್ಡ ಗುಂಪಿನಲ್ಲಿ ತಮಗಾಗಿ ಒಂದು ಸ್ಥಳವನ್ನು ಆಕಾಂಕ್ಷಿಸಿದಾಗ ಮಕ್ಕಳ ಅಸ್ಮಿತೆಯ ಹುಡುಕಾಟವು ಕ್ರಿಯಾಶೀಲವಾಗುತ್ತದೆ. ನಾಟಕ ಸಂಬಂಧಿ ಆಟಗಳು ಗುಂಪುಕಾರ್ಯ ಮತ್ತು ವೈಯಕ್ತಿಕ ಕಾರ್ಯಗಳೆರಡಕ್ಕೂ ಒಂದಾದ ಮೇಲೆ ಇನ್ನೊಂದಕ್ಕೆ ಒತ್ತು ನೀಡುವ ಮೂಲಕ ಪ್ರತಿಯೊಬ್ಬರ ವೈಯಕ್ತಿಕತೆಯನ್ನು ಪ್ರೇರೇಪಿಸುವ ಸಾಮರ್ಥ್ಯವನ್ನು ಹೊಂದಿವೆ, ಮುಂದಿನ ಭಾಗಗಳಲ್ಲಿ ಮಕ್ಕಳು ತಾವು ಕಂಡಿದ್ದನ್ನು ಹಂಚಿಕೊಳ್ಳುವ ಮತ್ತು ಅದನ್ನು ವ್ಯಾಖ್ಯಾನಿಸುವುದನ್ನು ಪ್ರೋತ್ಸಾಹಿಸುವ ಮೂಲಕ ಮಕ್ಕಳ ಪಾಲ್ಗೊಳ್ಳುವಿಕೆಯನ್ನು ಬೆಂಬಲಿಸುವ ಕೆಲವು ವಿಧಾನಗಳನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ. ಮಕ್ಕಳ ಸಣ್ಣ ಗುಂಪುಗಳನ್ನು ಮಾಡುವುದು, ಅವರು ಹಂಚಿಕೊಳ್ಳಲು ಅನುವಾಗುವಂತೆ ಬೆರೆಯುವಂತೆ ಮಾಡುವುದು, ಇವು ಮಕ್ಕಳು ಆಲೋಚಿಸುವಂತೆ ಮಾಡಲು ಪ್ರೋತ್ಸಾಹಿಸುವ ಕೆಲವು ತರಗತಿ ಮಟ್ಟದ ಚಟುವಟಿಕೆಗಳು. ಸಣ್ಣ ಗುಂಪುಗಳಲ್ಲಿ ಹಂಚಿಕೊಳ್ಳುವ ಸಂದರ್ಭಗಳಿಂದಾಗಿ ನಾಚಿಕೆ ಸ್ವಭಾವದ ಅಥವಾ ಮಾತನಾಡದೆ ಮೌನವಾಗಿರುವ ಮಕ್ಕಳಿಗೆ ವಿಶ್ವಾಸದಿಂದ ಅವರು ಧೈರ್ಯವಂತರಾಗಿ ತಮ್ಮ ಭಾವನೆಗಳನ್ನು ವಿಶ್ವಾಸದಿಂದ ವ್ಯಕ್ತಪಡಿಸಲು ಸಮೃದ್ಧ ಸಾಧ್ಯತೆಗಳು ನಿರ್ಮಾಣವಾಗುತ್ತವೆ.

**ವಿಮರ್ಶಾತ್ಮಕ ಅಲೋಚನೆಯ ಹಾದಿಯಲ್ಲಿ ಸಹಯೋಗದ ಕಲಿಕೆ**

ಐದು ಅಥವಾ ಆರು ಮಕ್ಕಳು ಉದಾಹರಣೆಗೆ, ಒಂದು ಭಾಷಾ ಪಠ್ಯದ ಒಂದು ಅಧ್ಯಾಯದ ಬೇರೆಬೇರೆ ಭಾಗಗಳನ್ನು ಆಯ್ಕೆ ಮಾಡಿ-ಕೊಂಡು ಸಣ್ಣ ಗುಂಪುಗಳಲ್ಲಿ ಚರ್ಚಿಸಿ ಅದನ್ನು ಹೇಗೆ ಪ್ರಸ್ತುತಪಡಿಸುವುದೆಂದು ಮಾತುಕತೆ ನಡೆಸುತ್ತಾರೆ. ಅವರು ಚಿತ್ರ ಬಿಡಿಸಬಹುದು ಅಥವಾ ನಾಟಕ ರೂಪದಲ್ಲಿ ತೋರಿಸಬಹುದು ಅಥವಾ ಚರ್ಚೆ ನಡೆಸಬಹುದು. ಈ ಮೂಲಕ ಮಕ್ಕಳು ಹಲವಾರು ರೀತಿಯಲ್ಲಿ ಯೋಚಿಸುತ್ತಾರೆ ಮತ್ತು ಶಿಕ್ಷಕರಿಂದ ಸಲಹೆ ಪಡೆಯತ್ತಾರೆ.

ಇಂತಹ ಪ್ರಕ್ರಿಯೆಗಳ ಮೂಲಕ ಅವರು ಚುರುಕಿನಿಂದ, ಕಾರ್ಯ-ಶೀಲರಾಗಿ ವಿಷಯವನ್ನು ಗಂಭೀರವಾಗಿ ಪರಿಗಣಿಸುತ್ತಾರೆ. ಅಲ್ಲದೆ ತಮ್ಮ ಸಹಪಾಠಿಗಳ ಕೆಲಸವನ್ನು ವಿಮರ್ಶಾತ್ಮವಾಗಿ ನೋಡುವ ಗುಣವನ್ನು ಬೆಳೆಸಿಕೊಳ್ಳುತ್ತಾರೆ. ಪರಸ್ಪರ ಗುಂಪಿನ ಸದಸ್ಯರ ಬಲಾಬಲಗಳ ಬಗ್ಗೆ ಪರಿಚಿತರಾಗುತ್ತಾರಲ್ಲದೆ ಹೆಚ್ಚು ಕೌಶಲ್ಯಪೂರ್ಣ ಚರ್ಚೆಗಳನ್ನು ನಡೆಸಲು ಪರ್ಯಾಲೋಚನೆ ಮತ್ತು ಪ್ರೇರಣೆಯನ್ನು ಹೊಂದುತ್ತಾರೆ. ಈ ಮೂಲಕ ಮಕ್ಕಳು ತಾವು ವಿಶೇಷವೆಂದು ಭಾವಿಸಿ ವಿನೋದದಿಂದಲೇ ತಲ್ಲೀನರಾಗಿ ಗುಂಪುಕಾರ್ಯದ ಶಕ್ತಿಯನ್ನು ಹೆಚ್ಚಿಸುತ್ತಾರೆ.

**ಭಾಷಾ ಶಾಸ್ತ್ರದ ತಿಳುವಳಿಕೆಯ ಮೂಲಗಳಾಗಿ ವೈಯಕ್ತಿಕ ಹೆಸರುಗಳ ಬಳಕೆ**

ತರಗತಿಯಲ್ಲಿ ಬಹಳ ಮಕ್ಕಳಿದ್ದರೂ ಇಡೀ ತರಗತಿಯಲ್ಲಿ ಅನ್ಯೋನ್ಯತೆಯನ್ನು ಉಂಟುಮಾಡುವ ಸಂವಾದವನ್ನು ನಾನು ಮುಂದಿಡುತ್ತೇನೆ. ಮತ್ತು ಚರ್ಚೆಯನ್ನು ನಾನು ನಡೆಸುತ್ತೇನೆ. ಇಲ್ಲಿ ಮಕ್ಕಳ ಹೆಸರು, ಅದರ ಅರ್ಥ, ಹೆಸರಿನಲ್ಲಿ ಯಾವ ಶಬ್ದಗಳು ಹಾಗೂ ಮಗುವಿನ ಹೆಸರು ನಿರ್ಧಿಷ್ಟ ರಚನೆಯಂತೆ ಯಾವ ವಸ್ತುಗಳು, ಸ್ಥಳಗಳೊಂದಿಗೆ ಸಂಬಂಧೀಕರಿಸಿದೆ ಎನ್ನುವ ಆಟದ ಚಟುವಟಿಕೆಯನ್ನು ನಡೆಸಲಾಗುತ್ತದೆ. ಇದರಲ್ಲಿ ಮಕ್ಕಳು ತಮಗೇ ತಿಳಿಯದಂತೆ ವ್ಯಾಕರಣಾಂಶವನ್ನು ಕಲಿತಿರುತ್ತಾರೆ.

**ಹೆಸರಿನ ಆಟ**

ಈ ಚಟುವಟಿಕೆಯಲ್ಲಿ ಮಕ್ಕಳಿಗೆ ತಮ್ಮ ಹೆಸರನ್ನು ಒಂದು ಆಂಗಿಕಕ್ರಿಯೆ ಅಥವಾ ಭಾವನೆಯ ಮೂಲಕ ಹೇಳಬೇಕೆಂದು ಕೋರಲಾಗುತ್ತದೆ. ಇಡೀ ತರಗತಿಯ ಮಕ್ಕಳು ಆ ಕ್ರಿಯೆ ಮತ್ತು ಹೆಸರನ್ನು ಎರಡು ಬಾರಿ ಅನುಕರಿಸುತ್ತಾರೆ. 'ನಾನು ಶುರು ಮಾಡಬಲ್ಲೆ, ಆದರೆ ಗಜರಾಜ್ ಅಥವಾ ರೋಹಿಣಿ, ನೀವು ಹೇಳಲು ಪ್ರಯತ್ನಿಸುವಿರಾ?' ಇದನ್ನು ಪ್ರಾರಂಭ ಮಾಡುವವರು ಹಾವಭಾವಗಳ ಮೂಲಕವಾಗಲಿ ಅಥವಾ ಮುನ್ನಡೆಯುತ್ತಾ, ನನ್ನ ಹೆಸರು – ಎಂದು ಮಾತ್ರ ಹೇಳಬಹುದು.

ಶಿಕ್ಷಕರು ಖುಷಿಯಿಂದ ಇದರಲ್ಲಿ ಭಾಗಿಯಾಗುತ್ತ ಚಟುವಟಿಕೆಯು ಹುರುಪಿನಿಂದ ಸಾಗದಿದ್ದರೆ ಮಾತ್ರ ಮಧ್ಯಪ್ರವೇಶಿಸಬೇಕು. ನಿಯಂತ್ರಿತವಾಗಿ ಚಟುವಟಿಕೆ ನಡೆಯುತ್ತಿದ್ದಲ್ಲಿ ಆ ವಾತಾವರಣವನ್ನು ತಿಳಿಗೊಳಿಸಲು ಶಿಕ್ಷಕರು ಜಿಗಿಯುವುದು, ಸುತ್ತ ತಿರುಗುವುದು, ಕೈಗಳನ್ನು ಮೇಲೆತ್ತಿ ಹಾಗೂ ತಮ್ಮ ಹೆಸರನ್ನು ಹೇಳುವುದು ಅದನ್ನೇ ನಂತರ ಮಕ್ಕಳು ಪುನರಾವರ್ತಿಸುತ್ತಾರೆ. ಮಕ್ಕಳು ತಮ್ಮ ಶಿಕ್ಷಕರು ಹುರುಪಿನಿಂದ ಇರುವುದನ್ನು, ಆತ್ಮೀಯವಾಗಿ ವರ್ತಿಸುವುದನ್ನು ನೋಡಿ ಖುಷಿಪಡುತ್ತಾರೆ. ಇದು ಒಬ್ಬೊಬ್ಬರಿಂದ ಎಲ್ಲರಲ್ಲೂ ಹರಡುತ್ತದೆ. ಈ ಮೂಲಕ ಮಕ್ಕಳು ಹೆಚ್ಚಾಗಿ ಬಿಚ್ಚು ಮನಸ್ಸಿನಿಂದ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ. ಆಶ್ಚರ್ಯ, ಧೈರ್ಯ, ಕೋಪ, ದುಃಖ ಇತ್ಯಾದಿ ಬೇರೆಬೇರೆ ಭಾವನೆಗಳನ್ನು ಅಭಿವ್ಯಕ್ತಿಸುವುದರಿಂದ ಇಡೀ ತರಗತಿ ಜೀವಕಳೆಯನ್ನು ಪಡೆಯುತ್ತದೆ.

**ಶಬ್ದಗಳನ್ನು ಗುರುತಿಸುವುದು**

ನಿಮ್ಮ ಕೈಗಳನ್ನು ಉಜ್ಜುವ ಮೂಲಕ, ಅಂಗೈಗಳಿಂದ ಹೊಮ್ಮುವ ಶಕ್ತಿಯನ್ನು ಗ್ರಹಿಸಿ ಅವಲೋಕಿಸುವುದು. ಈ ರೀತಿ ಮೊದಲ ಹೆಜ್ಜೆಯಾಗಿ ನೀವು ಆಟದ ನಿಯಮಗಳನ್ನು ಈ ಕೆಳಗಿನಂತೆ ಸರಿಯಾಗಿ ರೂಪಿಸಬೇಕು.

1. ಮೊದಲು ಒಬ್ಬೊಬ್ಬರಾಗಿ ನೀವು ಹೆಸರುಗಳನ್ನು ಕರೆಯಿರಿ.
2. ನಂತರ ಮಕ್ಕಳಿಗೆ ಹೀಗೆ ಹೇಳಿ: ಈಗ ನಾವು ನಮ್ಮ ಹೆಸರಿನ ಮೊದಲ ಶಬ್ದವನ್ನು ಕೇಳೋಣ.
3. ಆ ಮೊದಲ ಶಬ್ದಕ್ಕೆ ಹೊಂದಿಕೆಯಾಗುವ ಒಂದು ಪದವನ್ನು ಹೇಳಿ.
4. ಈವರೆಗೆ ಹೇಳಿರುವುದನ್ನು ಅರ್ಥೈಸಿಕೊಳ್ಳಲು ಮಕ್ಕಳಿಗೆ ಅವಕಾಶ ನೀಡಿ.
5. ಸೂಚನೆಗಳು ಸರಿಯಾಗಿ ಅರ್ಥವಾಗದಿದ್ದರೆ ಮಧ್ಯಪ್ರವೇಶ ಮಾಡಿ ಉದಾಹರಣೆಗಳನ್ನು ನೀಡಿ.

6. ಮಕ್ಕಳು ಈ ಆಟದಲ್ಲಿ ಪಾಲ್ಗೊಳ್ಳುತ್ತಾ ಪ್ರತಿಯೊಬ್ಬರ ಪ್ರತಿಕ್ರಿಯೆಗಳನ್ನು ಮತ್ತು ಹೊಂದುವ ಪದಕ್ಕೆ ಸಮವಾದಿ-ಯಾದ ಶಬ್ದಗಳ ನಿಖರತೆಯನ್ನು ತಾವೇ ನಿರ್ಣಯಿಸಲು ಬಿಡಿ.

ಇಲ್ಲಿ ಮಕ್ಕಳಿಂದ ಹಲವಾರು ಪ್ರತಿಕ್ರಿಯೆಗಳು ಬರುತ್ತವೆ. ಮಕ್ಕಳ ಭಾಷಾ ಕಲಿಕೆ ಮತ್ತು ಗ್ರಹಿಕೆಯ ಮಟ್ಟವನ್ನು ಅವಲಂಬಿಸಿ ಶಿಕ್ಷಕರು ಮಧ್ಯಪ್ರವೇಶ ಮಾಡಬೇಕು. ಪೂರ್ವಪ್ರಾಥಮಿಕ ಹಂತದ ಮಕ್ಕಳಿಗೆ ಆಟವನ್ನು ಕೇವಲ ಶಬ್ದಗಳಿಗೆ ಸೀಮಿತಗೊಳಿಸಬಹುದು. ಉದಾಹರಣೆಗೆ, 'ಸ್ನೇಹ' ಎಂಬ ಪದಕ್ಕೆ 'ಸ್ನಾಯು' ಎಂದು ಹೇಳಿದರೆ ಶಬ್ದ ವ್ಯತ್ಯಾಸದ ಬಗ್ಗೆ ಮಾತ್ರ ಮಾತನಾಡಿ. ಏಕೆಂದರೆ ಇಲ್ಲಿ ಸೂಕ್ಷ್ಮ ವ್ಯತ್ಯಾಸವಿರುತ್ತದೆ.

ಹಿರಿಯ ಮಕ್ಕಳಿಗೆ ಹೃಸ್ವ ಮತ್ತು ದೀರ್ಘಸ್ವರಗಳ ಶಬ್ದಗಳು, ಒತ್ತಕ್ಷರಗಳುಳ್ಳ ಪದಗಳ ಬಗ್ಗೆಯೂ ತಿಳಿಸಿ ಹೇಳಿ. ಉದಾಹರಣೆಗೆ, ಶರದ್ ಎಂಬ ಪದಕ್ಕೆ ಶಪಥ ಎಂದರೆ ಪರವಾಗಿಲ್ಲ. ಆದರೆ 'ಥ'ದಲ್ಲಿ ಮಹಾಪ್ರಾಣ ಇರುವ ವ್ಯತ್ಯಾಸವನ್ನು ತಿಳಿಸಬೇಕು. ಒಂದು ವೇಳೆ 'ಶಂಖ' ಎಂಬ ಪದ ಹೇಳಿದರೆ ಅನುಸ್ವಾರ 'ಂ' ಅಕ್ಷರದ ಇರುವಿಕೆಯ ಬಗ್ಗೆ ತಿಳಿಸಬೇಕು.

**ನಾಮಪದಗಳನ್ನು ಗುರುತಿಸಲು ಹೆಸರುಗಳನ್ನು ಬಳಸುವುದು**

ಹಿರಿಯ ತರಗತಿಯ ಮಕ್ಕಳಿಗೆ ಹೆಚ್ಚು ಸಂಕೀರ್ಣವಾದ ಪದಗಳನ್ನು ಬಳಸಲು ಹೇಳಬಹುದು. ಹೆಸರಿನ ಮೊದಲ ಶಬ್ದದ ನಿಯಮವನ್ನು ಬಳಸಿ ಮಕ್ಕಳು ಆ ಶಬ್ದಕ್ಕೆ ಹೊಂದುವ ಒಂದು ಸ್ಥಳ, ವ್ಯಕ್ತಿ ಅಥವಾ ವಸ್ತುವನ್ನು ಹೇಳಬೇಕು. ಉದಾಹರಣೆಗೆ, ಮಗುವಿನ ಹೆಸರು ಪಾವನ ಆಗಿದ್ದರೆ ಪಾಟ್ನಾ, ಪಾತರಗಿತ್ತಿ, ಪತ್ರ, ಪದಕ, ಪಲ್ಲಂಗ, ಪೆಟ್ಟಿಗೆ ಪುಷ್ಕರ ಎಂಬೆಲ್ಲಾ ಪದಗಳನ್ನು ಹೇಳಬಹುದು.

ಶಬ್ದಗಳನ್ನು ವಿಸ್ತರಿಸಲು ಇದು ಉತ್ತಮ ಸಮಯವಾಗಿದ್ದು ಶಬ್ದಗಳನ್ನು ವಿಸ್ತರಿಸುವ ಚಿಹ್ನೆಯ ಕನ್ನಡ ಪದವನ್ನು ಮಾತ್ರೆ ಎಂದು ಸೂಚಿಸಲಾಗುತ್ತದೆ ಎಂದು ತಿಳಿಸಬಹುದು. ಆಟ ಮುಂದುವರೆ-ದಂತೆ ನೀವು ಪರ್ಯಾಲೋಚಿಸಿ ಹೆಚ್ಚುಹೆಚ್ಚು ಪರಿಕಲ್ಪನೆಗಳನ್ನು ಸೇರಿಸಬಹುದು. ಉದಾಹರಣೆಗೆ, ಇಂಗ್ಲಿಷ್ ಭಾಷೆಯಲ್ಲಿ ಮಗುವಿನ ಹೆಸರು ಮಧುರ್ ಎಂದಿದ್ದರೆ ಮಗು, ಮಂಕಿ, ಮದರ್, ಮತ್ತು ಮಿರ್‌ಜಾಪುರ್ ಅಥವಾ ಮ್ಯಾಂಗೋ ಇತ್ಯಾದಿ ಪದಗಳನ್ನು ಹೇಳಬಹುದು. ನಂತರ ಇಲ್ಲಿ ಮಂಕಿ ಮತ್ತು ಮದರ್ ಸಾಮಾನ್ಯ ಪದಗಳು ಮತ್ತು ಇವು ವ್ಯಕ್ತಿಗಳ ಹೆಸರಾಗಿರದೆ ನಿರ್ದಿಷ್ಟ ಗುಂಪಿನ ವರ್ಗಗಳ ಹೆಸರುಗಳು. ಇವುಗಳನ್ನು ನಾಮಪದಗಳು ಎನ್ನುತ್ತಾರೆ. ಇವು ಪ್ರಾಣಿಗಳು, ಹಣ್ಣುಗಳು ಇತ್ಯಾದಿ ವರ್ಗಗಳಿಗೆ ಸೇರಿದ ಪದಗಳು ಎಂದು ಹೇಳುತ್ತಾ ನಾವು ಹೆಚ್ಚು ತಿಳುವಳಿಕೆಯನ್ನು ಅವರಿಗೆ ನೀಡಬಹುದು.

ಇದು ಚಟುವಟಿಕೆಯಲ್ಲಿ ತೊಡಗುವ ಮಕ್ಕಳ ಆಸಕ್ತಿ ಪರಿಗಣಿಸಿ ತಮ್ಮನ್ನು ಒಳಗೊಳ್ಳಲಾಗಿದೆಯೆಂಬ ಅವರ ಬಯಕೆಯನ್ನೂ ಪರಿಗಣಿಸಿ, ಮಗುವಿನ ಕ್ರಿಯಾಶೀಲತೆಯ ಜೊತೆಗೆ ಭಾಷಾ ಶಾಸ್ತ್ರದ ತಿಳುವಳಿಕೆಯನ್ನೂ ಹೆಚ್ಚಿಸುವ ಬಹಳ ಯಶಸ್ವಿ ಆಟವಾಗಿದೆ. ಈ ಹಿಂದೆ ಹೇಳಿದಂತೆ ಮಾತ್ರೆಯ ಈ ಚಟುವಟಿಕೆಯನ್ನು ಪರೀಕ್ಷೆಗೆ ಒಳಪಡಿಸಿ ಅವಲೋಕಿಸಿದರೆ- ಪ್ರತಿಯೊಂದು ಮಗುವೂ ತಾನು ವಿಶೇಷ ಎಂದು ಭಾವಿಸುತ್ತದೆ. ಆಟವನ್ನು ಕಲಿಕೆಯ ಅವಕಾಶ ಎಂದು ಭಾವಿಸುವಂತೆ ವೈಯಕ್ತಿಕವಾಗಿ ಮಕ್ಕಳು ತಲ್ಲೀನರಾಗುತ್ತಾರೆ. ಎಲ್ಲವೂ ಚೆನ್ನಾಗಿ ನಡೆಯುತ್ತದೆ. ಇದರ ಜೊತೆಜೊತೆಗೆ ಶಿಕ್ಷಕರು ತರಗತಿಯಲ್ಲಿ ಉತ್ಸಾಹವಿದೆಯೇ ಹಾಗು ಈ ಕುರಿತಾದ ಪ್ರಕ್ರಿಯೆಯ ಬಗ್ಗೆ ಆಡುತ್ತಿರುವ ಆಟ ನಿಜಕ್ಕೂ ಮಂತ್ರೌಷಧಿಯಂತಿದೆಯೇ? ಎಂದು ಆಲೋಚಿಸಬೇಕು.

ಅಂತಹ ಪರಸ್ಪರ ಕಾರ್ಯ ನಡೆಸುವ ಮಕ್ಕಳ ಮುಂದೊಡಗಿನ ಪ್ರತಿಕ್ರಿಯೆಯು ಅನುಸರಣೆ ಮತ್ತು ಏಕರೂಪತೆಯ ಸಂಕೇತಗಳಾಗುತ್ತವೆ ಮತ್ತು ಎಲ್ಲಕ್ಕೂ ಮಿಗಿಲಾಗಿ ಪ್ರತಿಯೊಬ್ಬರೂ ತಮ್ಮ ಆಲೋಚನೆಗಳನ್ನು ಹಂಚಿಕೊಳ್ಳುವಲ್ಲಿ ಭಾವನಾತ್ಮಕರಾಗಿ ಪುಳಕಿತರಾಗುತ್ತಾರೆ ಮತ್ತು ಖುಷಿಯಾಗಿರುತ್ತಾರೆ. ಪದಗಳು ಮತ್ತು ಶಬ್ದಗಳೊಂದಿಗೆ ಮಕ್ಕಳು ಆಟವಾಡುತ್ತಿದ್ದಂತೆ ತಮ್ಮನ್ನು ವ್ಯಕ್ತಪಡಿಸಲು ಅವರಿಗೆ ಅವಕಾಶಗಳು ಸಿಗುವುದು ಮಾತ್ರವಲ್ಲ ಇದು ಅವರ ಕುತೂಹಲಕ್ಕೆ ಪ್ರೇರಣೆಯಾಗುತ್ತದೆ. ಆಗ ದೊಡ್ಡ ತರಗತಿಯೂ ಕೂಡ ಒಂದು ಸುರಕ್ಷಿತವಾದ, ಭಯವಿಲ್ಲದ ವೈಯಕ್ತಿಕ ವಾತಾವರಣವಾಗಿ, ಅರ್ಥ ನೀಡುವುದರಲ್ಲಿ ಕಾಣುವ ವ್ಯತ್ಯಾಸಗಳನ್ನು ಕೇಳುವ ಒಂದು ವೇದಿಕೆಯಾಗುತ್ತದೆ.

**ಕಲಿಕೆಯಾಗಿ ಅನ್ವೇಷಣೆ**

ಪೋಷಕರು ತಮ್ಮ ಮಕ್ಕಳು ಒತ್ತಡವಿಲ್ಲದ ಪರಿಸರದಲ್ಲಿದ್ದು, ಸಂತೋಷದಿಂದ ಅನ್ವೇಷಣೆಯಲ್ಲಿ ತೊಡಗಿ ಪ್ರಯೋಗ ಮಾಡಲು ಹಿಂಜರಿಯದೆ ಇರುವುದನ್ನು ಕಂಡು ನಿರಾಳವಾಗಿ ಸಂತುಷ್ಟ-ರಾಗುತ್ತಾರೆ. ಪ್ರಾರಂಭಿಕ ಶಾಲಾ ಹಂತದಲ್ಲಿ ಮಕ್ಕಳಿಗೆ ಪಠ್ಯ ವಿಷಯಗಳ ಒತ್ತಡವಿಲ್ಲದ ನೋಡುವಿಕೆ ತೊಡಗಿಕೊಳ್ಳುವಿಕೆಗೆ ಮತ್ತು ಅನ್ವೇಷಣೆಗೆ ಫಿನ್‌ಲ್ಯಾಂಡಿನ ಶಾಲೆಗಳು ನಿದರ್ಶನ-ಗಳಾಗಿವೆ, ಈ ಲೇಖನದಲ್ಲಿ ದೈಹಿಕ ಚಟುವಟಿಕೆಯಿಂದ ಮಕ್ಕಳು ಚೆನ್ನಾಗಿ ಕಲಿಯುತ್ತಾರೆಂದು ಹೇಳುವಂತೆಯೇ, ತಾಜಾ ಗಾಳಿ, ಪ್ರಕೃತಿ ಮತ್ತು ನಿಯಮಿತ ದೈಹಿಕ ಚಟುವಟಿಕೆಗಳು ಹಾಗು ವಿರಾಮಗಳು ಕಲಿಕೆಯ ಪ್ರೇರಕಗಳು ಎಂದು ಪರಿಗಣಿತವಾಗುತ್ತದೆ.. ನಮ್ಮ ತರಗತಿಗಳು ಮಕ್ಕಳ ಮೆದುಳನ್ನು ಮಾತ್ರ ಮುಖ್ಯವೆಂದು ಪರಿಗಣಿಸುತ್ತವೆ, ಇತರೆ ಅಂಗಗಳಾದ, ಹೃದಯ ಹಾಗೂ ದೇಹ ಕೇವಲ ಮನೋ ಪ್ರಕ್ರಿಯೆಗಳನ್ನು ಬೆಂಬಲಿಸುವ ಅಂಗಗಳೆಂಬ ಭಾವನೆಯಿದೆ! ಹೆಚ್ಚಿನ ಸಂದರ್ಭದಲ್ಲಿ, ಮಕ್ಕಳು ತರಗತಿಯಲ್ಲಿ ಸ್ಥಿರತೆಯಲ್ಲಿರದಿದ್ದರೆ ಅವರನ್ನು ಚಡಪಡಿಕೆಯಿಂದ ಕೂಡಿರುವ, ಅತಿಚಟುವಟಿಕೆಯ ಮಗು ಎಂದು ಪರಿಗಣಿಸಲಾಗುತ್ತದೆ. ಭೌತಿಕ ಅನ್ವೇಷಣೆಗಳು, ಸಂಭಾಷಣೆ, ಮಾತುಕತೆ ಮತ್ತು ಹೆಚ್ಚು ಅನುಭವಸ್ಥರ ಸಂಪರ್ಕ, ಇವೆಲ್ಲದರ ಮೂಲಕ ಮಗುವಿನ ಬೆಳವಣಿಗೆ ಅತ್ಯುತ್ತಮವಾಗಿ ಆಗುತ್ತದೆ. ಹೃದಯ, ತಲೆ ಮತ್ತು ಕೈಗಳು ಪ್ರಬಲ ತಂಡವಾಗಿ ಕಾರ್ಯ ನಿರ್ವಹಿಸುತ್ತವೆ.

ಶಿಕ್ಷಣ ಕ್ಷೇತ್ರದಲ್ಲಿ, ನಗರದ ಬಡ ಮಕ್ಕಳು ಮತ್ತು ಗ್ರಾಮೀಣ ಮಕ್ಕಳ ತರಗತಿಗಳಿಗೆ ಕುರಿತಾಗಿ, ಆ ಮಕ್ಕಳ ವಸತಿ ಪ್ರದೇಶಗಳು ಅವರಿಗೆ ಸಂಪನ್ಮೂಲಗಳನ್ನು ದಕ್ಕಿಸಿಕೊಳ್ಳುವಲ್ಲಿ ಇರಬೇಕಾದ ಅಗತ್ಯ ಅಭ್ಯಾಸಗಳ ಕೊರತೆಯಿಂದ ಕೂಡಿವೆ ಎನ್ನುವ ಭಾವನೆಯಿದೆ. ಶೈಕ್ಷಣಿಕ ವಿಷಯಾಂಶಗಳು, ಪರೀಕ್ಷೆಗಳನ್ನು ನಿಯಂತ್ರಿಸುವ ಮತ್ತು ಪಠ್ಯಕ್ರಮದ ವಿನ್ಯಾಸಗೊಳಿಸುವಂತಹ ಮಧ್ಯಮ ವರ್ಗದ ದೃಷ್ಟಿಕೋನದಿಂದ ಚಾಲಿತವಾಗುತ್ತವೆ. ನಗರಗಳ ಕಡಿಮೆ ಆದಾಯದ ನೆಲೆಗಳಲ್ಲಿ ಅಥವಾ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಕಾಣುವ, ಹತ್ತು ಹಕ್ಕಿಗಳು/ಪಕ್ಷಿಗಳು ಅಥವಾ ಹತ್ತು ಸಾಮಾನ್ಯ ಮರಗಳು ಅಥವಾ ಹತ್ತು ವಿಧಗಳ ಮಾರುಕಟ್ಟೆ ಲಕ್ಷಣಗಳನ್ನು ಕೇಳಿ ಮಕ್ಕಳನ್ನು ಪರೀಕ್ಷಿಸುವ ಆಲೋಚನೆಯೇ ಬರುವುದಿಲ್ಲ. ನಮ್ಮ ಪ್ರಶ್ನೆಗಳು ಯಾವಾಗಲೂ ಸಾರಿಗೆ ವಿಧಾನಗಳು, ಜ್ಯಾಮಿತೀಯ ಆಕೃತಿಗಳನ್ನು ಹೊಂದಿಸುವುದು ಮತ್ತು ಇತರೆ ಔಪಚಾರಿಕ ಶಾಲಾ

ವಿಚಾರಗಳಿಗೆ ಸಂಬಂಧಿಸಿರುತ್ತವೆ. ಬೇರೆಬೇರೆ ದೂರದ ಸ್ಥಳಗಳಲ್ಲಿ ಬೆಳೆದ ಅತ್ಯಂತ ಬಡ ಕುಟುಂಬಗಳ ಮಕ್ಕಳು ಅಥವಾ ಗುಂಪುಗಳಿಗೆ ಇವುಗಳ ಪ್ರಯೋಜನಗಳು ಬೇಕು ಎಂಬ ನಂಬಿಕೆ ಹಾಗೆ ಇರುತ್ತದಾದರೂ, ಈ ಮಕ್ಕಳು ತಮ್ಮ ನಗರದ ಸಹಪಾಠಿಗಳಿಗಿಂತ ಹೇಗೆ ಭಿನ್ನ ಎಂಬುದರ ಬಗ್ಗೆ ಗಮನ ಹರಿಸುವುದೇ ಇಲ್ಲ. ವಾಸ್ತವವಾಗಿ, ಪ್ರತಿಯೊಂದು ಗುಂಪಿಗೂ ತಮ್ಮದೇ ಆದ ಬಲ, ಕೌಶಲಗಳಿರುತ್ತವೆ ಉದಾಹರಣೆಗೆ, ಒಂದು ರಾಷ್ಟ್ರೀಯ ಮಕ್ಕಳ ಕಲಾ ಮೇಳದಲ್ಲಿ, ನಗರದ ವಿದ್ಯಾರ್ಥಿಗಳು, ಗುಂಪು ಕುಣಿತ ಅಥವಾ ವಾದ್ಯಗಳನ್ನು ನುಡಿಸುವುದು ಅಥವಾ ಒಟ್ಟಿಗೆ ಹಾಡು ಹೇಳುವುದು ಅಥವಾ ಬುಟ್ಟಿ ಹೆಣೆಯುವುದು ಇತ್ಯಾದಿಗಳಲ್ಲಿ, ತಮ್ಮಲ್ಲಿ ಕೆಲವರಿಗೆ ಮಾತ್ರ ಇಂತಹ ಕೌಶಲವಿದೆಯೆಂದು ಅರಿತುಕೊಂಡರು. ಇದರ ಜೊತೆಗೆ, ಸಮುದಾಯದ ಭಾಗವಾಗಿ ಬೆಳೆದ ಹಳ್ಳಿಯ ಅಥವಾ ಬಡ ಮಕ್ಕಳು ಹಲವಾರು ಇಂತಹ ಕುಶಲ ಕಲೆಗಳನ್ನು ತಿಳಿದಿರುವರೆಂದು, ಇವರಲ್ಲಿ ಕೆಲವು ಮಕ್ಕಳು ಅಂತಹ ಸಾಂಪ್ರದಾಯಿಕ ಕಲಾಕಾರರ ಮನೆಗಳಿಂದ ಬಂದವರು ಎನ್ನುವುದನ್ನು ಅವರು ಅರಿತರು.

ಕೆಲವೊಮ್ಮೆ ಮಕ್ಕಳಿಗೆ ಅಕ್ಷರಜ್ಞಾನ ಇಲ್ಲದಿರಬಹುದಾದರೂ, ಕತೆ ಹೇಳುವ ಚಟುವಟಿಕೆಯನ್ನು ರಾಜಸ್ತಾನದ ಫಡ್ ಕಥಾ ಕಲಾ ಪ್ರಕಾರವಾಗಿ ಪ್ರದರ್ಶಿಸಬಲ್ಲರು. ನಗರದ ವರದಿಗಾರರು ಮಕ್ಕಳ ಕೌಶಲದಿಂದ ಆಕರ್ಷಿತರಾದರೂ, ಕೇವಲ ಬಾಯಿ ಮಾತಿನ ಉಪಚಾರವಾಗಿ ಅದನ್ನು ಹೊಗಳುತ್ತಾರೆ. ಆದರೆ ನಿಜವಾಗಿ ಮಕ್ಕಳ ಕೌಶಲದ ಆಳವನ್ನು ಅರಿತಿಲ್ಲ. ಆದ್ದರಿಂದಲೇ ಈ ವರದಿಗಾರರು ಅವರಿಗೆ ಶಾಲೆಯಲ್ಲಿ ಅವರು ಏನು ಕಲಿತೇ? ಅಲ್ಲಿ ನಿನಗೆ ಇಷ್ಟವಾಗುತ್ತದೆಯೇ ಎಂಬ ಪ್ರಶ್ನೆಗಳನ್ನು ಕೇಳುತ್ತಾರೆ. ಹೀಗಾಗಿ ಈ ಮೂಲಕ ಸಮುದಾಯಕ್ಕೆ ಸಂದೇಶವೆಂದರೆ, ಜಾನಪದ ಕಲೆ ಮತ್ತು ಕೌಶಲಗಳು ಅತ್ಯುತ್ತಮ ಮತ್ತು ಅಮೂಲ್ಯವಾದವು, ಆದರೆ ನಮ್ಮ ದೇಸಿ ಕಲೆಗಳು, ನೀವು ಆಧುನಿಕ ಜೀವನ ಶೈಲಿಗೆ ಮತ್ತು ಬದುಕಿಗೆ ಅವುಗಳನ್ನು ಹೇಗೆ ಒಗ್ಗಿಸಿಕೊಳ್ಳುತ್ತೀರಿ? ಸಾಕ್ಷರತೆಯು ಒಂದು ಪ್ರಮುಖ ಸಾಧನ ಎಂಬುದರಲ್ಲಿ ಸಂಶಯವೇ ಇಲ್ಲ. ಆದರೆ ಅದು ಅನಕ್ಷರಸ್ಥರ ಕೌಶಲಗಳಿಗೆ ಸಂಬಂಧಪಟ್ಟ ಗ್ರಹಿಕಾ ಸಾಮರ್ಥ್ಯದ ನಿರಾಕರಣೆ ಮಾಡಬೇಕಾಗಿಲ್ಲ.

**ಸಂಪನ್ಮೂಲವಾಗಿ ಪ್ರಕೃತಿ**

ಮಕ್ಕಳು ಹುಡುಕಾಟದಲ್ಲಿ ತೊಡಗಿರುವ ಆಸಕ್ತರು ಮತ್ತು ಅವರು ಸದಾ ಸಹಜ ಕುತೂಹಲಿಗಳಾಗಿರಬೇಕು. ಏಕೆಂದರೆ ಇದು ತಾವೇ ಒಮ್ಮೆ ಮಕ್ಕಳಾಗಿದ್ದೇವೆಂಬ ಮಸುಕು ನೆನಪನ್ನು ಹೊಂದಿರುವ ಜನರಿಂದ ನಿಯಂತ್ರಿತವಾದ ಪ್ರಪಂಚದಲ್ಲಿ 'ಉಳಿಯಲು' ಮಕ್ಕಳಿಗೆ ಅಗತ್ಯವಿರುವ ಒಂದು ಕೌಶಲವಾಗಿದೆ. ಬಾಲ್ಯಕ್ಕೆ ಸುಲಭವಾಗಿ ತೆರೆದುಕೊಳ್ಳುವುದು ಶಿಕ್ಷಕರಿಗೆ ಉಪಯುಕ್ತವಾದವು. ಪ್ರಕೃತಿ, ಮಾಹಿತಿ ಜೋಡಣೆ, ಗೆಳೆಯರ ಜೊತೆಗೂಡಿ ಹೊರಪ್ರಪಂಚದಲ್ಲಿ ಹುಡುಕಾಟ ಇವೆಲ್ಲವೂ ಎಲ್ಲಾ ಕಾಲಕ್ಕೂ ಮಕ್ಕಳಿಗೆ ಬಹಳ ಇಷ್ಟವಾಗುವ ಪ್ರಿಯವಾದ ಚಟುವಟಿಕೆಗಳು. ಈ ಹಿಂದೆ ಹೇಳಿದಂತೆ, ಮಕ್ಕಳು ಕ್ರಿಯಾಶೀಲರಾಗಿ ಅರ್ಥ ರೂಪಿಸುವಂತಹವರು ಮತ್ತು ತಮ್ಮ ನೆಲೆಗಳಿಂದ ಪ್ರಭಾವಿತರಾದವರು. 15 ವರ್ಷದೊಳಗೆ ಒಂದು ಹಳ್ಳಿಯ ಮಗು ಎಷ್ಟೋ ಕರುಗಳು ಹುಟ್ಟಿರುವುದನ್ನು ನೋಡಿರುತ್ತದೆ. ಹೀಗಾಗಿ ಬೆಳೆದ ನಂತರ ಅದು ಬಸುರಿ ಹೆಂಗಸು ಹೆರಿಗೆಯ ವೇಳೆ ಅನುಭವಿಸುವ ನೋವನ್ನು ಗುರುತಿಸಿ ಅರಿಯುತ್ತದೆ.

ದೈಹಿಕ ಕೌಶಲಗಳು ನಮ್ಮ ದೈನಂದಿನ ಸಂಪನ್ಮೂಲಗಳಿಂದ ರೂಪುಗೊಳ್ಳುತ್ತವೆ. ಸಾರಿಗೆ ಇಲ್ಲದ ಸ್ಥಳದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಲು ನಡಿಗೆ ಮಾತ್ರ ಸಾಧ್ಯವಾಗಿರು-ವುದರಿಂದ ವೇಗವಾಗಿ ಓಡುವ ಕೌಶಲವು ಚುರುಕಾಗಿರುತ್ತದೆ. ನದಿಯಲ್ಲಿ ಸಣ್ಣ ಕಲ್ಲುಗಳನ್ನು ಎಸೆದು ಉಂಟಾಗುವ ಅಲೆಗಳನ್ನು ಅಥವಾ ಅದರ ಆಳವನ್ನು ನೋಡಲು ಮತ್ತೆಮತ್ತೆ ಕಲ್ಲೆಸೆಯುವ ಕೆಲಸದಲ್ಲಿ ಮಕ್ಕಳು ಕಾಲ ಕಳೆಯಬಹುದು. ತೆಲಂಗಾಣದ ಬುಡಕಟ್ಟು ಜನರ ಜೊತೆಗೆ ಕೆಲಸ ಮಾಡುವಾಗ ಒಂದು ಮಗು ಗಾಳಿಯಲ್ಲಿ ಒಂದು ಕಲ್ಲನ್ನು ಎಸೆದರೆ ಅದು ಅಲ್ಲಿಯೇ ನಿಲ್ಲಲು ಯಾವ ರೀತಿಯ ಬಲ ಬೇಕು ಎಂದು ಕೇಳಿತೆಂಬ ತಮ್ಮ ಅನುಭವವನ್ನು ಒಬ್ಬ ಹಳ್ಳಿ ಶಿಕ್ಷಕರು ಹಂಚಿಕೊಂಡಿದ್ದಾರೆ. ಆ ಮಗುವಿಗೆ ಕಲ್ಲನ್ನು ಎಸೆದರೆ ಗಾಳಿಯಲ್ಲೇ ಇರಲು ಯಾವ ರೀತಿಯ ಬಲ ಬೇಕೆಂಬ ಪ್ರಶ್ನೆಯಿತ್ತು. ಹೊಸ ಯುಗದ ನ್ಯೂಟನ್‌ನಂತಹ ಈ ಮಗುವಿಗೆ ಇಂತಹ ಹಲವು ಶೋಧನೆಯನ್ನು ಮಾಡಲು ಪ್ರೋತ್ಸಾಹಿಸಬೇಕು. ಏಕೆಂದರೆ ಆ ಮಗುವಿಗೆ ಪ್ರಕೃತಿಯನ್ನು ಸೂಕ್ಷ್ಮವಾಗಿ ಗಮನಿಸುವ ಮತ್ತು ಪ್ರಶ್ನೆ ಮಾಡುವ ಮನಸ್ಸಿದೆ. ನೈಸರ್ಗಿಕ ಆಗುಹೋಗುಗಳನ್ನು ತಿಳಿಯುವ ಹಂಬಲವಿದೆ. ಇಂತಹ ಪ್ರಶ್ನೆಗಳ ಕೆಲವು ಉದಾಹರಣೆಗಳು ಹೀಗಿವೆ:

- ತರಗತಿಯಲ್ಲಿ ಟೀಚರ್ ತೋರಿಸುವಂತೆ ಹಕ್ಕಿ/ಪಕ್ಷಿಗಳು ತ್ರಿಕೋನಾಕಾರದಲ್ಲೇಕೆ ಹಾರುತ್ತವೆ?

- ಎಲ್ಲಾ ಮರಗಳಲ್ಲಿ ಎಲೆಗಳಿವೆ, ಆದರೆ ಎಲ್ಲಾ ಎಲೆಗಳು ಬೇರೆ ಬೇರೆಯೇಕೆ? ... ಅವು ಬಹುತೇಕ ತ್ರಿಕೋನಾಕಾರದಲ್ಲಿ ಏಕಿವೆ?

- ಒಮ್ಮೆ ಶಾಲೆಯಲ್ಲಿ ಓದದ ಹಿರಿಯ ಹುಡುಗರ ಒಂದು ಗುಂಪು ವೃತ್ತವನ್ನು ಬರೆಯಲು ದಿಕ್ಸೂಚಿಯನ್ನು ಬಳಸಲು ಇಷ್ಟಪಡಲಿಲ್ಲ. ಇದನ್ನು ನೋಡಿ ನಗರದ ಹುಡುಗರಿಗೆ ಆಶ್ಚರ್ಯವಾಯಿತು. ಶಿಕ್ಷಕರಿಗೆ ಮಕ್ಕಳ ಬಗ್ಗೆ ಗೊತ್ತಿತ್ತು. ಅವರು ಮಕ್ಕಳಿಗೆ ಒಂದು ಬಾವಿಯನ್ನು ಅಗೆಯಲು ಒಂದು ವೃತ್ತವನ್ನು ಬರೆಯಲು ಅವರಿಗೆ ಹೇಳಿದರು. ಜ್ಯಾಮಿತಿ ಬಾಕ್ಸನ್ನು ಬಳಸಲು ಗೊತ್ತಿರದ ಆ ಮಕ್ಕಳು ಒಂದು ದೊಡ್ಡ ಮೊಳೆಯನ್ನು ತಂದು ಅದಕ್ಕೆ ದಾರವನ್ನು ಸುತ್ತಿ ಒಂದು ಪರಿಪೂರ್ಣವಾದ ವೃತ್ತವನ್ನು ಬರೆದರು!

ಮಕ್ಕಳು ಅವಲೋಕಿಸುವುದು ಮತ್ತು ಅವರು ಆಟದ ಸಮಯದಲ್ಲಿ ಅವಲೋಕಿಸುವುದು ಆಸಕ್ತಿದಾಯಕವಾದ ತರಗತಿಯ ಚಟುವಟಿಕೆಗಳನ್ನು ನಿರ್ಮಿಸಲು, ಒಳನೋಟವನ್ನು ನೀಡುತ್ತದೆ. ನಗರದ ಶಾಲೆಗಳಲ್ಲಿನ ಮಕ್ಕಳು ಕೂಡ ನೆಲದ ಮೇಲೆ ಬಿದ್ದಿರುವ ಎಲೆಗಳು, ಕಡ್ಡಿಗಳು ಅಥವಾ ಕಲ್ಲುಗಳನ್ನು ತೆಗೆದುಕೊಂಡು ಅದರಿಂದ ಆಕಾರಗಳನ್ನು ಮಾಡಬಹುದು. ಅಥವಾ ಸ್ಥಳೀಯ ಸುಂದರವಾದ ರಂಗೋಲಿ ವಿನ್ಯಾಸಗಳನ್ನು ಮೂಡಿಸಬಹುದು. ಪ್ರಾದೇಶಿಕ ಗಣಿತ, ವಿನ್ಯಾಸ ಮತ್ತು ಆಕಾರಗಳ ಬಗ್ಗೆ ತಿಳುವಳಿಕೆಗಳಿಗೆ ವಿನ್ಯಾಸಗಳ ಪುನರಾವರ್ತಿತ ರೇಖಾ ರಚನೆಗಳು ಒಳ್ಳೆಯ ತಿಳುವಳಿಕೆಯನ್ನು ಉಂಟುಮಾಡುತ್ತವೆ.

**ಶಿಕ್ಷಕರ ಪರ್ಯಾಲೋಚನೆಗಳು**

ಶಿಕ್ಷಕರೊಂದಿಗಿನ ನನ್ನ ಮುಖಾಮುಖಿಯಲ್ಲಿ, ಅವರು ಹೆಮ್ಮೆಯಿಂದ ತಮ್ಮ ಯಶಸ್ಸುಗಳ ಬಗ್ಗೆ ವಿವರಿಸುವುದನ್ನು ನಾನು ಆಲಿಸಿದ್ದೇನೆ. ಒಬ್ಬ ಶಿಕ್ಷಕರು ಮರಗಳನ್ನು ಅಧ್ಯಯನ ಮಾಡಲು, ಮಕ್ಕಳಿಗೆ ಆಟಗಳನ್ನು ಆಡಿಸಲು, ಬೇರೆಬೇರೆ ವಸ್ತುಗಳನ್ನು ತರಲು, ಆ ವಸ್ತುಗಳ ಹೆಸರನ್ನು ಇಂಗ್ಲಿಷಿನಲ್ಲಿ ಮಕ್ಕಳಿಗೆ ಕಲಿಸಲು, ಮಕ್ಕಳನ್ನು ಹೊರಾಂಗಣಕ್ಕೆ ಕರೆದುಕೊಂಡು ಹೋಗಲು ಬಯಸಿದರು. ಅವರು ಗುಂಪು ಕಲಿಕೆಯನ್ನು ಉತ್ತೇಜಿಸಲು ಮತ್ತು ಸಣ್ಣ ಗುಂಪಿನಲ್ಲಿ

ಆಟಗಳನ್ನು ಆಡಿಸಲು ಬಹಳ ಉತ್ಸುಕರಾಗಿದ್ದರು. ಹಾಗೆಯೇ ಕಾಗುಣಿತ ಕಲಿಕೆ ಅಥವಾ ಆಕಾರ ರಚನೆಗಳಿಗೆ ನೆರವು ನೀಡುವ ಚಟುವಟಿಕೆಗಳನ್ನು ಮಾಡಿಸಲು ಆಸಕ್ತರಾಗಿದ್ದರು.

ಮಕ್ಕಳನ್ನು ಚೆನ್ನಾಗಿ ಅರಿತ ಅವರು ತರಗತಿಯಿಂದ ಬಯಲಿನ ಕಲಿಕೆಗೆ ಪರಿವರ್ತನೆಗೊಳ್ಳುವುದು ಕಷ್ಟವೆಂದು ತಿಳಿದಿದ್ದರು. ಆದರೆ ಆ ಕ್ಷಣದಲ್ಲಿ ಅವರು ಮಕ್ಕಳಿಗೆ ಏನು ಮಾಡಬೇಕೆಂದು ಅವರಿಗೆ ಗೊತ್ತಿತ್ತು. ಅವರು ಮಕ್ಕಳಿಗೆ 'ನೀವು ಇರುವೆಗಳು ಚಲಿಸುತ್ತಿರುವುದನ್ನು ನೋಡಿದ್ದಿರಿ, ಅವು ಹೇಗೆ ಹೊಲದಲ್ಲಿ ಸಾಗುತ್ತಿವೆಯೋ ಹಾಗೆಯೇ ನೀವೆಲ್ಲರೂ ಹೋಗಬೇಕು ಎಂದರು. ಹೀಗಾಗಿ ಮಕ್ಕಳು ಪರಸ್ಪರ ಪಿಸುದನಿಯಲ್ಲಿ ಮಾತನಾಡಿ-ಕೊಳ್ಳುತ್ತಾ ಒಂದೇ ಸಾಲಿನಲ್ಲಿ ಮುಂದೆ ಸಾಗಿದರು. ಹೊಲದಲ್ಲಿ ಅವರು ಮರಗಳನ್ನು ಮುಟ್ಟಿದರು, ಹಕ್ಕಿಗಳನ್ನು ನೋಡಿದರು. ನೆಲದ ಮೇಲೆ ಬಿದ್ದ ಎಲೆಗಳನ್ನು ಸಂಗ್ರಹಿಸಿದರು, ಹಾಗೆಯೇ ಈ ಕೆಳಕಂಡ ಆಟಗಳನ್ನು ಆಡಿದರು:

1. ಹದಿನೈದನ್ನು ಎಣಿಸುತ್ತಿದ್ದಂತೆ ಏಳು ಮಕ್ಕಳ ಗುಂಪುಗಳ ಮೂಲಕ ಒಂದು ಚೌಕ/ತ್ರಿಕೋನ. ಅಷ್ಟಭುಜಾಕೃತಿ ಮಾಡುವುದು. ಹೊಲದಲ್ಲಿ ಶಿಕ್ಷಕರು ಹೇಳುವ ಕೆಲವು ಆಕಾರಗಳನ್ನು ಹುಡುಕಿ ಮತ್ತು ೩೦ ಎಣಿಸುವುದರ ಒಳಗೆ ವಾಪಸ್ಸು ಬರುವುದು.

2. ಇನ್ನೊಂದು ದಿನ ಮಕ್ಕಳು ಯಾವ ವಸ್ತುಗಳನ್ನು ಇಂಗ್ಲಿಷ್ ಪದಗಳಲ್ಲಿ ತಿಳಿಯಲು ಇಷ್ಟಪಡುತ್ತಾರೋ ಆ ವಸ್ತುಗಳನ್ನು ಕಲೆಹಾಕುವುದು. ಆ ವಸ್ತುಗಳಲ್ಲಿ ಕಲ್ಲುಗಳು, ದಳಗಳು, ಕೊಂಬೆಗಳು, ಬಸವನ ಹುಳುಗಳು, ಚಿಟ್ಟೆಗಳು ಅಥವಾ ಆಕಾಶದ ಬಣ್ಣಗಳಿರಬಹುದು. ಕೆಲವು ಮಕ್ಕಳಿಗೆ ಹೆಸರು ಗೊತ್ತಿರುತ್ತದೆ. ಬೇರೆ ಮಕ್ಕಳಿಗೆ ಆ ಹೆಸರುಗಳನ್ನು ಶಿಕ್ಷಕರು ಹೇಳಿಕೊಡುವುದು.

3. ಐದು ಪದಗಳನ್ನು ಆರಿಸಿ, ಶಬ್ದಗಳನ್ನು ಗುರುತಿಸಿ, ಮಕ್ಕಳಿಗೆ ಶಬ್ದಗಳನ್ನು ಕಲಿಯಲು ಮತ್ತು ಒಂದು ತಂಡವಾಗಿ ಎಲ್ಲ ಅಕ್ಷರಗಳನ್ನು ಜೋಡಿಸಲು ಹೇಳುವುದರ ಮೂಲಕ ಕಾಗುಣಿತ ಆಟ ಆಡುವುದು. ಅಲ್ಲಿ ನಾಲ್ಕು ಮಕ್ಕಳು ಒಂದು ಸಾಲಿನಲ್ಲಿ ನಿಲ್ಲುತ್ತಾರೆ. ಅವರು ಇಂಗ್ಲಿಷಿನ I ನಂತೆ ನಿಲ್ಲುತ್ತಾರೆ. ಇನ್ನೊಂದು ಗುಂಪು Cನಂತೆ ಸುರುಳಿ ಸುತ್ತಿ ನಿಲ್ಲುತ್ತಾರೆ. ಅಚ್ಚರಿ ತರುವ ಸೃಜಶೀಲ ವಿಧಾನಗಳನ್ನು ಮಕ್ಕಳು ಹೇಳುತ್ತಾರೆ. ಇಲ್ಲಿ ಸಾಮೂಹಿಕ ಉತ್ಸಾಹ ಮತ್ತು ತಂಡಗಳ ಅರ್ಥೈಸುವಿಕೆ ಆಧಾರದಲ್ಲಿ ಕಲಿಕೆ ನಡೆಯುವುದನ್ನು ಪ್ರಯತ್ನಿಸಲಾಗುತ್ತದೆ.

ಶಿಕ್ಷಕರು ತಾವು ಅನೇಕ ಸವಾಲುಗಳನ್ನು ಹೇಗೆ ಎದುರಿಸಿದೆವೆಂದು ಹಲವು ಸೃಜನಶೀಲ ಕತೆಗಳನ್ನು ಹೇಳುತ್ತಾರೆ. ಶಿಕ್ಷಕರಿಗೆ ಕಾರ್ಯಾಗಾರಗಳ ಕಲ್ಪನೆಯನ್ನು ಪುನರ್ ರೂಪಿಸಬೇಕು. ಶಿಕ್ಷಕರು ಪ್ರಯೋಗಗಳು ಮತ್ತು ಯಶಸ್ಸುಗಳತ್ತ ಗಮನ ಹರಿಸಬೇಕು. ಸಾಧನೆ ಮಾಡಲು ಪ್ರಯತ್ನಿಸುವ ಶಿಕ್ಷಕರು ಅಳವಡಿಸಿಕೊಳ್ಳುವ ನಿದರ್ಶನಗಳು ಮತ್ತು ಕಾರ್ಯತಂತ್ರಗಳು ವಾಸ್ತವಿಕ ನಿರೀಕ್ಷೆಗಳು ಮತ್ತು ಫಲಿತಾಂಶಗಳ ಆಧಾರದಲ್ಲಿರುತ್ತವೆ.

ತರಗತಿಗೆ ಸಂಬಂಧಿಸಿದಂತೆ ಮಕ್ಕಳು ಭಾವನಾತ್ಮಕ ಅಡೆ-ತಡೆಯನ್ನು ಹೊಂದಿರಬಹುದು. ಆಗ ತುಂಬು ಹೃದಯದಿಂದ, ಬೆಚ್ಚನೆಯ ಭಾವದಿಂದ ಮಗುವನ್ನು ಸ್ವೀಕರಿಸಬೇಕು. ಶಾಂತವಾಗಿರದ ಅಥವಾ ತೊಂದರೆಯಲ್ಲಿರುವ ಮಗುವನ್ನು ಹಳ್ಳಿಯ ಶಾಲೆಯಿಂದ ನಗರ ಶಾಲೆಗೆ ಕರೆತಂದಾಗ ಆ ಮಗುವಿಗೆ ಧೈರ್ಯತುಂಬಬಹುದು ಅಥವಾ ಭರವಸೆ ಹುಟ್ಟಿಸಬಹುದು. ಆ ಕಲೆಯನ್ನು ಶಿಕ್ಷಕರು ಕಲಿಯಬೇಕು.

**ಕೊನೆಯ ಅವಲೋಕನ**

ಕೊನೆಯದಾಗಿ, ಶಿಕ್ಷಕರಿಗೆ ಅಭಿನಂದಿಸುವಂತಹ, ತರಗತಿ ಕೊಠಡಿಯ ಅತ್ಯುತ್ತಮ ಅಭ್ಯಾಸಗಳನ್ನು ಸಂಕಲನ ರೂಪದಲ್ಲಿ ತಂದು ಹಂಚಿಕೊಳ್ಳಬೇಕೆನ್ನುವ ಪ್ರಸ್ತಾವನೆಯನ್ನು ನಾನು ಮುಂದಿಡ ಬಯಸುತ್ತೇನೆ. ಬಹುತೇಕ ಎಲ್ಲ ಶಿಕ್ಷಕರು ಅಲಕ್ಷ್ಯರಾಗಿರುವುದಿಲ್ಲ, ಅವರು ಯಾವಾಗಲೂ ಅಸಲಿಯಾದ, ಹೊಸದಾದ ಸೃಜನಶೀಲ ಮಾರ್ಗಗಳನ್ನು ಹುಡುಕುತ್ತಾರೆ. ಅರ್ಥ ಒದಗಿಸಲು, ಶಿಕ್ಷಣದ ಮಿತಿಯನ್ನು ವಿಸ್ತರಿಸಲು ಮತ್ತು ಅದಕ್ಕೆ ಪುನರ್ ವ್ಯಾಖ್ಯಾನ ನೀಡಲು ಮಕ್ಕಳ ಅಸ್ಮಿತೆಗಳನ್ನು ಗೌರವಿಸುತ್ತಾ ಮಕ್ಕಳು ಏನು ಮಾಡಬಲ್ಲರು ಮತ್ತು ಹೇಗೆ ಕಲಿಯಬಲ್ಲರೆಂಬುದರ ವಿವಿಧ ವಿಧಾನಗಳ ಆಯಾಮಗಳನ್ನು ಶೋಧಿಸಲು ಸದಾ ಸಿದ್ಧರಾಗಿರುತ್ತಾರೆ. ಬಾಲ್ಯದ ಹುರುಪು ಹಾಗು ಚೈತನ್ಯದ ಮೂಲಕ ಮಕ್ಕಳ ಮಾರ್ಗದರ್ಶನ ನೀಡುತ್ತಿರುವ ಈ ಸೃಜನಶೀಲ ಹರಿಕಾರರಿಗೆ ನನ್ನ ವಂದನೆಗಳು!

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


Wernar, S. A (1986). *The Teacher*, Australia: Simon and Schuster

Holt, John. (1967)/. *How Children Learn US*: Pitman Publishing (Perseus Publishing (1995)

*https://www.washingtonpost.com/education/2019/08/30/what-finland-is-really-doing-improve-its-acclaimed-schools/ Accessed on 29.04. 2020*





**ಆಶಾ ಸಿಂಗ್** ಅವರು ಲೇಡಿ ಇರ್ವಿನ್ ಕಾಲೇಜಿನಲ್ಲಿ 34 ವರ್ಷಗಳ ಕಾಲ ಮಕ್ಕಳ ಬೆಳವಣಿಗೆ, ವಿಭಾಗದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ನಂತರ ಅವರು ತಮಗೆ ಬಹಳ ಇಷ್ಟವಾದ, ಆಳವಾದ ಆಸಕ್ತಿಯಿರುವ 'ಮಾನವ ಜೀವನ ಚಕ್ರದ ಆರಂಭಿಕ ವರ್ಷಗಳು' ವಿಷಯದಲ್ಲಿ ಗಮನ ಹರಿಸಿದರು. ಅವರು ಅಂಬೇಡ್ಕರ್ ವಿಶ್ವವಿದ್ಯಾಲಯದ ಯುವ ಮನಸ್ಸುಗಳೊಂದಿಗೆ ಮತ್ತು ಶಾಲೆಗಳಲ್ಲಿ ಸೇವಾನಿರತ ಶಿಕ್ಷಕರಲ್ಲಿ ತಮ್ಮ ಕಲೆ ಆಧಾರಿತ ಕಲಿಕೆಯ ಮೌಲ್ಯವನ್ನು ಹಂಚಿಕೊಳ್ಳುತ್ತಿದ್ದಾರೆ. ಅವರು ಡಿಜಿಟಲ್ ವಯಸ್ಕ-ಮಕ್ಕಳ ಸಂವಾದದ ಪುನರುಜ್ಜೀವಕ್ಕಾಗಿ ವ್ಯಾಪಕವಾಗಿ ಮಕ್ಕಳೊಂದಿಗೆ ಕಥೆಯನ್ನು ಹಂಚಿಕೊಂಡಿದ್ದಾರೆ. ಅವರನ್ನು asha.singh903@gmail.com ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಲತಾ ಕೆ ಸಿ**

# ಮಕ್ಕಳು ಯಾವಾಗ ಮತ್ತು ಹೇಗೆ ಕಲಿಯುತ್ತಾರೆ ಎಂಬುದರ ಅರ್ಥೈಸುವಿಕೆ

ರಿತಿಕಾ ಗುಪ್ತಾ

ಒಂದು ಹೆಣ್ಣು ಮಗು ತನ್ನ ಕೈಯನ್ನು ತದೇಕಚಿತ್ತದಿಂದ ನೋಡುತ್ತ, ಅದನ್ನು ಒಮ್ಮೆ ಅಲುಗಾಡಿಸುತ್ತಾ ತನ್ನ ಬಾಯಿಯ ಸನಿಹ ತಂದು ಬೆರಳುಗಳನ್ನು ಚೀಪುತ್ತದೆ. ಬಾಯಿಯಿಂದ ಕೈಬೆರಳುಗಳನ್ನು ಹೊರತೆಗೆದು ಕೈಯನ್ನು ಮತ್ತೊಮ್ಮೆ ನೋಡಿಕೊಂಡು ಸಣ್ಣಗೆ ಕಿರುಚಿಕೊಳ್ಳುತ್ತದೆ. ಎರಡು ವರ್ಷದ ಪುಟ್ಟ ಮಗು ತನ್ನ ಅಕ್ಕ ಹೇಳಿದ ಎಲ್ಲವನ್ನೂ ಪುನರಾವರ್ತನೆ ಮಾಡುತ್ತದೆ ಮತ್ತು ಕಿಲಕಿಲ ನಗುತ್ತದೆ. ಮರಳಿನ ಮೇಲೆ ಕುಳಿತ ನಾಲ್ಕು ವರ್ಷದ ಮಗು ಒಂದು ಪುಟ್ಟ ಪಾತ್ರೆಯಲ್ಲಿ ಮರಳನ್ನು ತುಂಬಿಸುವುದು ಮತ್ತು ಚೆಲ್ಲುವುದು ಮಾಡುತ್ತಿರುತ್ತದೆ. ಐದು ವರ್ಷದ ಹುಡುಗ ಕೈಯಲ್ಲಿ ಸುತ್ತಿಗೆ ಹಿಡಿದುಕೊಂಡು ತನ್ನ ಮನೆಯ ಸುತ್ತಲೂ ನಾನಾ ವಸ್ತುಗಳಿಗೆ ಅದನ್ನು ಬಡಿಯುತ್ತಾ ತನ್ನ ತಾಯಿಯನ್ನು ನೋಡುತ್ತಿದ್ದಾನೆ. ಆರು ವರ್ಷದ ಹುಡುಗಿಯೊಬ್ಬಳು ತಾನು ಅಮ್ಮನ ಬಾಲವೇನೋ ಎಂಬಂತೆ ಆಕೆಯ ಹಿಂದೆಯೇ ಹೋಗುತ್ತಿದ್ದಾಳೆ. ಹದಿಮೂರು ವರ್ಷ ವಯಸ್ಸಿನ ಮಕ್ಕಳಿಬ್ಬರು ಪರಸ್ಪರ ಹತ್ತಿರ ಕುಳಿತು ಆಟಿಕೆಗಳೊಂದಿಗೆ ಆಟವಾಡುತ್ತಿದ್ದಾರೆ. ಹದಿನಾರು ವರ್ಷದ ಹುಡುಗ ಪದೇಪದೇ ಚೆಂಡನ್ನು ಗೋಡೆಯತ್ತ ಒದೆಯುತ್ತಿದ್ದಾನೆ.

ಮಕ್ಕಳು ಆಗಾಗ ಈ ರೀತಿಯ ಚಟುವಟಿಕೆಗಳಲ್ಲಿ ತೊಡಗಿ-ಕೊಳ್ಳುವುದು ಹಿರಿಯರ ಕಣ್ಣಿಗೆ ಅರ್ಥವಿಲ್ಲದಂತೆ ಕಾಣುತ್ತಿರುತ್ತದೆ. 'ಓಹ್! ಅವನು ಹಗಲುಗನಸು ಕಾಣುತ್ತಿದ್ದಾನೆ', 'ಆತ ಆಟವಾಡುತ್ತಿದ್ದಾನೆ' ಅಥವಾ 'ಆತ ಸುಮ್ಮನೇ ಕಾಲಹರಣ ಮಾಡುತ್ತಿದ್ದಾನೆ' ಎಂಬುದಾಗಿ ಈ ಚಟುವಟಿಕೆಗಳನ್ನು ಸಾಮಾನ್ಯವಾಗಿ ವ್ಯಾಖ್ಯಾನಿಸಲಾಗುತ್ತದೆ. ಮೇಲೆ ಪ್ರಸ್ತಾಪ ಮಾಡಿದ ಪರಿಸ್ಥಿತಿಗಳಲ್ಲಿ ಮಗುವು ಏನನ್ನು ಕಲಿಯಲು ಸಾಧ್ಯ ಎಂದು ಯಾರಾದರೂ ಯೋಚಿಸಬಹುದು. ಕಲಿಕೆಯ ಬಗ್ಗೆ ಮಾತನಾಡುವ ಸಂದರ್ಭದಲ್ಲಿ, ನಾವು ಸ್ವಾಭಾವಿಕವಾಗಿ ಒಂದು ಮಗು ಪುಸ್ತಕಗಳಲ್ಲಿ ತಲ್ಲೀನವಾಗಿರುವ, ಹೋಮ್‌ವರ್ಕ್ ಮಾಡುತ್ತಿರುವ, ದೊಡ್ಡವರ ಮಾತನ್ನು ಕೇಳುತ್ತಿರುವ ಅಥವಾ ಬಾಯಿಪಾಠ ಮಾಡಿದ್ದನ್ನು ಹೇಳುವ ಚಿತ್ರವನ್ನೇ ಕಲ್ಪಿಸಿಕೊಳ್ಳುತ್ತೇವೆ. ಆದರೆ ಕೆಲವು ಸಂದರ್ಭಗಳಲ್ಲಿ ಕಲಿಕೆಯು ಕೇವಲ ಒಂದು ಫಲಿತಾಂಶವಲ್ಲ, ಅದು ನಿರಂತರ ಚಾಲ್ತಿಯಲ್ಲಿರುವ ಪ್ರಕ್ರಿಯೆ ಎಂಬುದನ್ನು ಕೂಡ ನಾವು ತಿಳಿದುಕೊಳ್ಳಬೇಕಾಗುತ್ತದೆ.

ಮನುಷ್ಯ ಜನ್ಮತಃ ಕುತೂಹಲ ಮತ್ತು ಅನ್ವೇಷಿಸುವ ಸ್ವಭಾವದವನು. ಮಕ್ಕಳು ಬಾಲ ವಿಜ್ಞಾನಿಗಳಂತೆ ಅದರಲ್ಲೂ ಶಿಶುಗಳು ಪರಿಶೋಧನೆ ಮಾಡುವ ಪ್ರಯತ್ನದಲ್ಲಿ ಮತ್ತು ಜ್ಞಾನವನ್ನು ಪಡೆಯುವ ಹೊತ್ತಿನಲ್ಲಿ ಪ್ರಯೋಗಗಳನ್ನು ಮಾಡುತ್ತಿರುತ್ತವೆ. ಉದಾಹರಣೆಗೆ, ತನ್ನ ಕೈಗೆ ಸಿಕ್ಕಿದ್ದನ್ನು ಎಸೆಯುವ ಒಂದು ವರ್ಷದ ಹೆಣ್ಣು ಮಗು ಯಾವ ವಸ್ತು ಬೀಳುವಾಗ ಸದ್ದು ಮಾಡುತ್ತದೆ ಮತ್ತು ಸದ್ದು ಮಾಡುವುದಿಲ್ಲ ಹಾಗೂ ಬೇರೆಬೇರೆ ಎತ್ತರದಿಂದ ಎಸೆದರೆ ಏನಾಗುತ್ತದೆ ಎಂಬುದನ್ನು ಕಲಿಯುತ್ತ ಹೋಗುತ್ತದೆ. ಜಗತ್ತು ಹೇಗೆ ನಡೆಯುತ್ತದೆ ಎಂಬುದನ್ನು ಮಕ್ಕಳು ತಮ್ಮ ಸುತ್ತಮುತ್ತಲಿನ ಪರಿಸರದಿಂದಲೇ ಕಲಿಯುತ್ತ ಹೋಗುತ್ತಾರೆ.

**ಮಕ್ಕಳು ಹೇಗೆ ಕಲಿಯುತ್ತಾರೆ?**

- ಅವಲೋಕನ– ಮನೆಯಲ್ಲಿ ತನ್ನ ತಾಯಿಯನ್ನು ಅನುಸರಿಸುವ ಆರು ವರ್ಷದ ಹುಡುಗಿ 'ತಾಯಿಯಂತಾಗುವುದು ಹೇಗೆ' ಎಂಬುದನ್ನು ಅತ್ಯಂತ ಆಸಕ್ತಿಯಿಂದ ಗಮನಿಸುತ್ತಾಳೆ. ಆಕೆ ಮನೆ–ಮನೆ ಆಟವಾಡುವಾಗ ಇದನ್ನು ಮರು–ಅಭಿನಯ ಮಾಡುವುದನ್ನು ಕಾಣಬಹುದಾಗಿದೆ.
- ಅನುಕರಣೆ– ತನ್ನ ಅಕ್ಕನನ್ನು ಅನುಕರಿಸುವ ಎರಡು ವರ್ಷದ ಮಗು ಭಾಷೆಯ ನಿಯಮಗಳನ್ನು ಹಾಗೂ ಉಲ್ಲಾಸದ ಮಿತಿಗಳನ್ನು ಕಲಿಯುತ್ತಿರುತ್ತದೆ.
- ಮೊದಲ ಅನುಭವಗಳು; ಸ್ವಂತ ವಿಚಾರಣೆಯ ಮೂಲಕ ಕಲಿಯುವುದು – ಸುತ್ತಿಗೆಯಿಂದ ಬಡಿದರೆ ತಾಯಿ ಏನು ಹೇಳಬಹುದು ಎಂಬುದಕ್ಕಾಗಿ ಐದು ವರ್ಷದ ಹುಡುಗ ಆಕೆಯನ್ನೇ ತದೇಕಚಿತ್ತದಿಂದ ನೋಡುತ್ತಿದ್ದಾನೆ. ಬೇರೆಬೇರೆ ಕಡೆ ಬಡಿದರೆ ಹೇಗೆ ಬೇರೆಬೇರೆ ಸದ್ದು ಬರುತ್ತದೆ ಎಂಬುದನ್ನೂ ಆತ ಕಲಿಯುತ್ತಿದ್ದಾನೆ.
- ಪ್ರಯೋಗ; ಮರು ಪ್ರಯತ್ನ – ಮಗ್‌ನಲ್ಲಿ ಮರಳನ್ನು ತುಂಬುವುದು ಮತ್ತು ಖಾಲಿ ಮಾಡುವ ಆಟ ಆಡುತ್ತಿರುವ ನಾಲ್ಕು ವರ್ಷದ ಬಾಲಕಿ ಖಾಲಿ ಮತ್ತು ಭರ್ತಿ ಮಾಡುವ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುತ್ತಿದ್ದಾಳೆ ಮತ್ತು ಈ ಸಂದರ್ಭದಲ್ಲಿ ತನ್ನ ಚಲನೆಯನ್ನು ಹೇಗೆ ನಡೆಸಬೇಕು ಎಂಬುದನ್ನು ಅರ್ಥ ಮಾಡಿಕೊಳ್ಳುತ್ತಿದ್ದಾಳೆ. ಕಲಿಕೆಯಲ್ಲಿ ಪರಿಸರದ ಪಾತ್ರ – ತಮ್ಮ ಜೀವನದಲ್ಲಿ ಬರುವ ಇತರ ವ್ಯಕ್ತಿಗಳಿಂದ ಮಕ್ಕಳು ಕಲಿಯುತ್ತಾರೆ; ಇಲ್ಲಿ ಹದಿಮೂರು ವರ್ಷ ವಯಸ್ಸಿನ ಇಬ್ಬರು ಮಕ್ಕಳು ಪರಸ್ಪರ ಒಬ್ಬರಿಗೊಬ್ಬರು ಗಮನಿಸುವ ಮತ್ತು ಕಲಿಯುವ ಪ್ರಕ್ರಿಯೆಯಲ್ಲಿ ತೊಡಗಿದ್ದಾರೆ.
- ಚಿಂತನಶೀಲ ವಿಚಾರಗಳು–ಮೇಲಿನ ಎಲ್ಲ ಉದಾಹರಣೆಗಳಲ್ಲಿ ಚಿಂತನಶೀಲ ವಿಚಾರಗಳು ಸಮಾನವಾಗಿವೆ. ಅದು ಹಾಗೆ ಕಾಣಿಸದೇ ಇದ್ದರೂ ಕೂಡ ಮಕ್ಕಳು ನಿರಂತರವಾಗಿ ತಮ್ಮ ಕಲಿಕೆಯ ಬಗೆಗೆ, ಕಾರಣಗಳು, ಪರಿಣಾಮಗಳ ಬಗೆಗೆ ಹಾಗೂ ತಮ್ಮ ಪರಿಸರದಲ್ಲಿರುವ ವಿಷಯಗಳ ಬಗೆಗೆ ಯೋಚನೆ ಮಾಡುತ್ತಲೇ ಇರುತ್ತಾರೆ.

**ಶಾಲೆಗಳಲ್ಲಿ ಕಲಿಕೆ**

ನಾವೆಲ್ಲರೂ ಕಲಿಯಬೇಕು ಎಂಬ ಉತ್ಕಟವಾದ ಬಯಕೆಯೊಂದಿಗೇ ಹುಟ್ಟಿದ್ದೇವೆ ಅನಿಸುತ್ತದೆ. ಹಾಗಾಗಿ ಕಲಿಕೆಯನ್ನು ಒಂದು ಕೆಲಸ ಎಂದು ಹೇಗೆ ಮತ್ತು ಯಾವಾಗ ಪರಿಗಣಿಸಲು ಸಾಧ್ಯ? ಈ ಹಿನ್ನೆಲೆಯಲ್ಲಿ ಕೆಲವು ಮಕ್ಕಳು ಕಲಿಕೆಯಲ್ಲಿ ಅಸಮರ್ಥರು ಎಂದು ನಾವಾದರೂ ಹೇಗೆ ಊಹಿಸುತ್ತೇವೆ?

ನೀವು ಈಜು ಕಲಿತದ್ದು ಅಥವಾ ಸೈಕಲ್ ತುಳಿಯಲು ಕಲಿತದ್ದನ್ನು ನೆನಪಿಸಿಕೊಳ್ಳಿ. ನಿಮಗೆ ಯಾರಾದರೂ ಅದರ ತಂತ್ರಗಳನ್ನು ಹೇಳಿಕೊಟ್ಟಿದ್ದಾರೆಯೇ? ಇದನ್ನು ನೀವು ಇನ್ನೊಬ್ಬರನ್ನು ನೋಡಿ ಕಲಿತಿದ್ದೀ? ಬಹಳಷ್ಟು ಕಾಲ ಪ್ರಯತ್ನಗಳನ್ನು ನಡೆಸಿ ನಿಮ್ಮದೇ ತಂತ್ರಗಳ ಮೂಲಕ ನೀರಿನಲ್ಲಿ ತೇಲುವುದನ್ನು ಅಥವಾ ಸೈಕಲ್ ಬ್ಯಾಲೆನ್ಸ್ ಮಾಡುವುದನ್ನು ಕಲಿತಿರಾ?

ನಮಗೆಲ್ಲರಿಗೂ ಕಲಿಯುವ ಸಾಮರ್ಥ್ಯವಿದೆ. ಆದರೆ ನಾವು ಕಲಿಯುವ ದಾರಿಗಳೇ ಭಿನ್ನ ಭಿನ್ನವಾಗಿರುತ್ತವೆ. ಕೆಲವು ರೀತಿಯ ಕಲಿಕಾ ಕ್ರಮಗಳನ್ನು ನಾವೇ ಸ್ವಾಭಾವಿಕವಾಗಿ ರೂಢಿಸಿಕೊಳ್ಳುತ್ತೇವೆ ಮತ್ತು ನಮಗೆ ನಮ್ಮದೇ ಆದ ಒಂದು ಗತಿ ಇರುತ್ತದೆ. ಕೆಲವು ಸಂದರ್ಭಗಳಲ್ಲಿ ಉಳಿದವರು ಮಾಡುವುದನ್ನು ನೋಡುತ್ತಲೇ ನಾವು ನಮ್ಮದೇ ದಾರಿಯನ್ನು ಕಂಡುಕೊಳ್ಳುತ್ತೇವೆ. ಈಗ ನಾವು ಒಂದು ತರಗತಿಯನ್ನೇ ಉದಾಹರಣೆಯಾಗಿ ತೆಗೆದುಕೊಳ್ಳೋಣ. ಭಿನ್ನರಾಶಿಗಳಿಗೆ ಸಂಬಂಧಿಸಿದ ಅಧ್ಯಾಯವನ್ನು ಪಾಠ ಮಾಡುವ ಸಂದರ್ಭದಲ್ಲಿ ಕೆಲವು ಮಕ್ಕಳು ತಕ್ಷಣ ಅರ್ಥ ಮಾಡಿಕೊಂಡಂತೆ ಕಂಡುಬಂದರೆ, ಉಳಿದವರಿಗೆ ಅದು ತಕ್ಷಣಕ್ಕೆ ಅರ್ಥವಾಗಿರುವುದಿಲ್ಲ. ಸಮಸ್ಯೆಯನ್ನು ಪರಿಹರಿಸುವಲ್ಲಿ ಇರುವ ದೈಹಿಕ ಅಡೆತಡೆಗಳಿಂದ ಕೆಲವು ಮಕ್ಕಳು ಲಾಭ ಮಾಡಿಕೊಂಡರೆ ಉಳಿದವರು ಸಮಸ್ಯೆಯನ್ನು ಓದಿದ ತಕ್ಷಣ ಪರಿಹರಿಸುವುದಕ್ಕೆ ಆದ್ಯತೆ ನೀಡುತ್ತಾರೆ.  ಒಟ್ಟು ಪ್ರಕ್ರಿಯೆಗೆ ಬದಲಾಗಿ ಕೇವಲ ಫಲಿತಾಂಶದ ಆಧಾರದಲ್ಲಿ ನಮ್ಮ ಕಲಿಕೆಯನ್ನು ಅಳೆಯಲು ಶುರುಮಾಡಿದಾಗ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಮಗುವು ಒಂದು ಲೆಕ್ಕವನ್ನು ಪರಿಹರಿಸಲು ಸಾಧ್ಯವೇ ಅಥವಾ ಇಲ್ಲವೇ ಎನ್ನುವುದರ ಆಧಾರದಲ್ಲಿ ನಾವು ಯಶಸ್ಸು ಹಾಗೂ ಸೋಲನ್ನು ಅಳೆಯಲು ಹೊರಟಾಗ ಇತರ ಪ್ರಮುಖ ಪ್ರಕ್ರಿಯೆಗಳನ್ನು ಮರೆತುಬಿಡುತ್ತೇವೆ;

- ಕೆಲವು ಮಕ್ಕಳು ಕಲಿಯುವ ಸಾಮರ್ಥ್ಯ ಹೊಂದಿದ್ದರೆ ಉಳಿದ ಮಕ್ಕಳಿಗೆ ಆ ಸಾಮರ್ಥ್ಯವಿಲ್ಲ ಎಂದು ನಾವು ನಂಬುವುದಕ್ಕೆ ಆರಂಭಿಸುತ್ತೇವೆ. ಕೆಲವು ಸಂದರ್ಭಗಳಲ್ಲಿ ನಾವು ಇದಕ್ಕೆ ಕಾರಣಗಳನ್ನೂ ಕೊಟ್ಟುಕೊಳ್ಳುತ್ತೇವೆ; ಮಗು ತುಂಬಾ ಚೂಟಿ, ಮನೆಯಲ್ಲಿ ಆತನಿಗೆ ಉತ್ತಮ ವಾತಾವರಣವಿಲ್ಲ, ಆತ ಬುದ್ಧಿವಂತನಲ್ಲ ಅಥವಾ ಕಲಿಕೆಯಲ್ಲಿ ಆತನಿಗೆ ಏಕಾಗ್ರತೆಯ ಕೊರತೆ ಇದೆ... ಹೀಗೆ ಕಾರಣಗಳನ್ನು ಕೊಡುತ್ತೇವೆ.
- ಬೇರೆಬೇರೆ ಮಕ್ಕಳು ಬೇರೆಬೇರೆ ಗತಿಗಳಲ್ಲಿ ಕಲಿಕೆಯನ್ನು ಕರಗತ ಮಾಡಿಕೊಳ್ಳುತ್ತಾರೆ ಎಂಬ ಸಂಗತಿಯನ್ನು ನಾವು ಅರ್ಥ ಮಾಡಿಕೊಳ್ಳಲು ಮರೆಯಬಹುದು.
- ನಮ್ಮ ಮನಸ್ಸು ಕೇವಲ ಫಲಿತಾಂಶದ ಮೇಲೆಯೇ ಕೇಂದ್ರೀಕೃತಗೊಂಡಾಗ, ಮಗುವು ಅರ್ಥ ಮಾಡಿಕೊಳ್ಳಲೇ-ಬೇಕಾದ ವಿಷಯದ ಭಾಗಗಳ ಬಗೆಗೆ ಗಮನ ನೀಡುವುದನ್ನು ನಾವು ಮರೆತುಬಿಡಬಹುದು. ಉದಾಹರಣೆಗೆ, ಮಗುವು ಭಿನ್ನರಾಶಿಗಳನ್ನು ತನ್ನ ದಿನನಿತ್ಯದ ಮಾತುಕತೆ ಮೂಲಕವೇ ತಿಳಿದುಕೊಳ್ಳುವುದನ್ನು ಗಮನಿಸಿ–ನನಗೆ ಅರ್ಧ ಚಾಕಲೇಟನ್ನು ಕೊಡು, ಈ ಚಾಕಲೇಟನ್ನು ನೀವು ಮೂವರು ಸಮನಾಗಿ ಹಂಚಿಕೊಳ್ಳಿ,'–ಆದರೆ ಇದೇ ಸಮಸ್ಯೆಯನ್ನು ಸಂಖ್ಯೆಗಳಲ್ಲಿ ಅರ್ಥ ಮಾಡಿಕೊಳ್ಳಲು ಅಸಮರ್ಥವಾಗುತ್ತದೆ. ಮಗುವು ಏನನ್ನು ಅರ್ಥ ಮಾಡಿಕೊಳ್ಳುತ್ತದೆ ಮತ್ತು ಆ ಮಗು ಎಲ್ಲಿ ಸಿಕ್ಕಿಹಾಕಿಕೊಂಡಿದೆ ಎಂಬುವುದನ್ನು ನಾವು ಅರ್ಥ ಮಾಡಿ-ಕೊಳ್ಳಲು ಸಾಧ್ಯವಾದರೆ ಇಂತಹುದೊಂದು ಅವಲೋಕನವು ತರಗತಿಯಲ್ಲಿ ಸಹಾಯಕವಾಗಬಹುದು ಮತ್ತು ಇದು ನಮ್ಮ ಬೋಧನೆಯ ಶೈಲಿ ಮತ್ತು ಒಟ್ಟು ವಿಷಯವನ್ನು ಬದಲಿಸಬಲ್ಲದು.

**ತರಗತಿಯಲ್ಲಿನ ಕಲಿಕೆ**

ಒಂದು ತರಗತಿಯಲ್ಲಿ ಅನೇಕ ಮಂದಿ ಮಕ್ಕಳಿರುವಾಗ ಒಬ್ಬ ಶಿಕ್ಷಕ ಪ್ರತಿಯೊಬ್ಬ ವಿದ್ಯಾರ್ಥಿಯ ಕಲಿಕೆಯ ವೇಗವನ್ನು ಹೇಗೆ ಅರ್ಥ ಮಾಡಿಕೊಳ್ಳಲು ಸಾಧ್ಯ? ಇದರ ಜೊತೆಗೇ ಫಲಿತಾಂಶಗಳನ್ನು ಅಳೆಯಲು ಅಗತ್ಯವಿರುವ ಮೌಲ್ಯಮಾಪನವನ್ನೂ ಶಿಕ್ಷಕರು ಮಾಡಬೇಕು ಎಂಬುದು ಶಾಲೆಯ ಬಯಕೆಯಾಗಿರುತ್ತದೆ. ಇಂತಹ ಮಾಹಿತಿಯನ್ನು ತರಗತಿಯಲ್ಲಿ ಹೇಗೆ ಬಳಸಲು ಸಾಧ್ಯ? ಈ ಕಲಿಕೆಯನ್ನು ತರಗತಿ ಕೊಠಡಿಗಳಲ್ಲಿ ಹೇಗೆ ನಡೆಸಬಹುದು ಎಂಬುದಕ್ಕೆ ಈ ಕೆಳಗಿನ ಕೆಲವು ಉದಾಹರಣೆಗಳನ್ನು ನೋಡ-ಬಹುದು:

**ಒಬ್ಬರ ಸ್ವಂತ ನಂಬಿಕೆಯನ್ನು ಬದಲಿಸುವುದು:**

ಮಕ್ಕಳು ಸದಾ ಎಚ್ಚರಿಕೆಯಿಂದ ಗಮನಿಸುತ್ತಿರುತ್ತಾರೆ ಮತ್ತು ಅವರು ಪದರಹಿತವಾದ ಸಂಕೇತಗಳನ್ನು ದೊಡ್ಡವರಿಗಿಂತ ಹೆಚ್ಚು ದಕ್ಷತೆಯಿಂದ ಅರ್ಥ ಮಾಡಿಕೊಳ್ಳುತ್ತಾರೆ. 'ನಾನೊಬ್ಬ ದಡ್ಡ' ಎಂಬುದನ್ನು ಮಾತುಗಳಲ್ಲಿ ಹೇಳದೇ ಹೋದರೂ ಶಿಕ್ಷಕರು ಹೀಗೇ ಯೋಚನೆ ಮಾಡುತ್ತಿದ್ದಾರೆ ಎಂಬುದನ್ನು ಅವರು ಗ್ರಹಿಸಬಲ್ಲರು. ಇದು ಮಗುವಿನ ಸ್ವಾಭಿಮಾನವನ್ನು ತಗ್ಗಿಸುವ ಮೂಲಕ ಆತ/ಆಕೆಯ ಕಲಿಕೆಗೆ ಅಡ್ಡಿಯುಂಟು ಮಾಡಬಹುದು. ಇದರಿಂದ ಮಗುವು, 'ನನ್ನಿಂದ ಇದನ್ನು ಮಾಡಲು ಸಾಧ್ಯವಿಲ್ಲ, ನಾನು ಅಷ್ಟು ಚುರುಕಾಗಿಲ್ಲ' ಎಂದು ನಂಬಲು ಆರಂಭಿಸುತ್ತದೆ. ಕೆಲವೊಮ್ಮೆ ಇಂತಹ ನಂಬಿಕೆಗಳೇ ಮಗು ತುಂಟತನದಿಂದ ವರ್ತಿಸಲು ಕಾರಣವಾಗುತ್ತದೆ. ತರಗತಿಯಲ್ಲಿ ಉತ್ತಮ ನಿರ್ವಹಣೆ ತೋರಲು ಸಾಧ್ಯವಿಲ್ಲ ಎಂಬ ಹತಾಶೆಯೇ ಇದಕ್ಕೆಲ್ಲ ಮೂಲವಾಗುತ್ತದೆ ಅಥವಾ 'ನಾನು ಉತ್ತಮ ಕಲಿಕೆಯಿಂದ ಹೆಸರು ಪಡೆಯಲು ಸಾಧ್ಯವಿಲ್ಲ, ಹಾಗಾಗಿ ಎಲ್ಲರಿಗೆ ತೊಂದರೆ ಕೊಟ್ಟು ಹೆಸರು ಮಾಡೋಣ' ಎಂಬ ನಂಬಿಕೆಯನ್ನು ಮಗುವು ಬೆಳೆಸಿಕೊಳ್ಳಬಹುದು. ಮಗುವಿನ ಸಾಮರ್ಥ್ಯಗಳ ಬಗ್ಗೆ ಶಿಕ್ಷಕನಾದವನು ಇಡುವ ನಂಬಿಕೆ ಮಗುವಿನ ಮೇಲೆ ಗಂಭೀರವಾದ ಪರಿಣಾಮವನ್ನೇ ಬೀರಬಲ್ಲದು. 'ನನ್ನಿಂದ ಇದನ್ನು ಮಾಡಲು ಸಾಧ್ಯವಿದೆ ಎಂದು ಶಿಕ್ಷಕರು ಭಾವಿಸಿದ್ದಾರೆ' ಎಂಬ ಸಂಗತಿಯನ್ನು ಗ್ರಹಿಸುವ ಸಾಮರ್ಥ್ಯವನ್ನು ಮಗುವು ಹೊಂದಿರುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಪ್ರತಿಯೊಂದು ಮಗುವಿಗೂ ಕಲಿಯುವ ಸಾಮರ್ಥ್ಯವಿದೆ ಎಂದು ಶಿಕ್ಷಕರು ನಂಬಿದಾಗ ಆತ/ಆಕೆಯ ನಡವಳಿಕೆಯಲ್ಲಿ ಸ್ವಾಭಾವಿಕವಾಗಿಯೇ ಬದಲಾವಣೆ ಬರಲು ಸಾಧ್ಯವಾಗುತ್ತದೆ. ಇಂತಹ ಒಂದು ಬದಲಾವಣೆಯೇ ಮಕ್ಕಳಿಗೆ ಆರಾಮದಾಯಕ ಹಾಗೂ ಉತ್ತೇಜನಕಾರಿ ವಾತಾವರಣವನ್ನು ಸೃಷ್ಟಿಸಬಲ್ಲದು. ಈಗ ಈ ಕೆಳಗಿನ ಉದಾಹರಣೆಗಳನ್ನೇ ನೋಡೋಣ:

ಇದು ರಾಯಪುರದ ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕಿಯ ಅನುಭವವಾಗಿದೆ. ಪ್ರಾಥಮಿಕ ಶಾಲಾ ಮಕ್ಕಳಿಗೆ ಪಾಠ ಮಾಡುವ ಶ್ರೀಮತಿ ಗಾಯತ್ರಿಯವರಿಗೆ, 'ಈ ಮಕ್ಕಳು ಸಾಕಷ್ಟು ಬುದ್ಧಿವಂತರಲ್ಲ' ಎಂದು ಕೆಲವೊಮ್ಮೆ ಅನಿಸಿತ್ತು. ಒಂದು ಮತ್ತು ಎರಡನೇ ತರಗತಿಯಲ್ಲಿಯೂ ವಿದ್ಯಾರ್ಥಿಗಳ ಓದುವ ಮತ್ತು ಬರೆಯುವ ಸಾಮರ್ಥ್ಯ ಕಳಪೆ ಮಟ್ಟದ್ದಾಗಿತ್ತು. ಇದು ಅವರ ಉತ್ಸಾಹವನ್ನು ಕುಂದಿಸಲು ಕಾರಣವಾಗಿತ್ತು ಮತ್ತು ಕೆಲವು ಬಾರಿ ಮಕ್ಕಳ ಮೇಲೆ ಕೋಪಗೊಳ್ಳುವಂತೆ ಮಾಡಿತ್ತು. ಎಳೆಯ ಮಕ್ಕಳಿಗೆ ಹೇಗೆ ಬೋಧನೆ ಮಾಡಬೇಕು ಎಂಬ ತರಬೇತಿ ಕಾರ್ಯಕ್ರಮದಲ್ಲಿ ಭಾಗಿಯಾದ ಆಕೆಯ ಮೇಲೆ ಅದು ಯಾವ ರೀತಿ ಪರಿಣಾಮ ಬೀರಿತು ಎಂಬುದರ ವರದಿ ಇಲ್ಲಿದೆ;

‘ಮಕ್ಕಳು ಹೇಗೆ ಕಲಿಯುತ್ತಾರೆ ಮತ್ತು ಅವರ ಸಾಮರ್ಥ್ಯ ಏನು ಎನ್ನುವ ವಿಚಾರಕ್ಕೆ ಸಂಬಂಧಿಸಿದಂತೆ ಶ್ರೀಮತಿ ಗಾಯತ್ರಿ ಅವರ ಬೋಧನೆಯಲ್ಲಿ ಬಹುಮುಖ್ಯ ಬದಲಾವಣೆ ಕಂಡುಬಂದಿತು. ಮಕ್ಕಳು ತಾವಾಗಿಯೇ ಕಲಿಯುತ್ತಾರೆ ಎಂಬುದನ್ನು ಅರಿತುಕೊಂಡ ಬಳಿಕ ಹೆಚ್ಚಿನ ಪರಿಶೋಧನೆ ಟಿಎಲ್ಎಂಗಳು (ಬೋಧನಾ ಕಲಿಕಾ ಸಾಮಗ್ರಿಗಳು) ಮತ್ತು ಕಲಿಕಾ ಸಾಮಗ್ರಿಗಳನ್ನು ಬಳಕೆ ಮಾಡುವ ಉದ್ದೇಶದಲ್ಲಿ ಅರ್ಥವಿದೆ ಎಂಬುದು ಆಕೆಗೆ ಅರಿವಾಯಿತು. ಮಕ್ಕಳಲ್ಲಿ ನಿಸರ್ಗದತ್ತವಾಗಿ ಇರುವ ಕುತೂಹಲವನ್ನು ತಣಿಸುವಲ್ಲಿ ಈ ಜ್ಞಾನವನ್ನೂ ಆಕೆ ಬಳಸಿಕೊಳ್ಳಬಹುದಾಗಿದೆ; ಮಕ್ಕಳ ಗಮನವನ್ನು ಸೆಳೆಯುವಲ್ಲಿಯೂ ಈ ಸಾಧನ ಹೆಚ್ಚು ಪ್ರಯೋಜನಕಾರಿಯಾಗಿದೆ. ವಿದ್ಯಾರ್ಥಿಗಳನ್ನು ಶಿಕ್ಷೆಗೆ ಒಳಪಡಿಸುವುದು ಮತ್ತು ನಿಂದಿಸುವುದಕ್ಕೆ ಸೀಮಿತವಾಗಿದ್ದ ಆಕೆಯ ಬೋಧನೆಯು ಅವರೊಂದಿಗೆ ಸರಳ ಸಂಭಾಷಣೆಯಲ್ಲಿ ತೊಡಗುವ ಕ್ರಿಯೆಯಾಗಿ ಬದಲಾಯಿತು. ಈ ಬದಲಾವಣೆ ಏಕಾಏಕಿ ಆಗಿರುವಂತಹುದ್ದಲ್ಲ, ಕಾಲಕ್ರಮೇಣ ಆಗಿರುವುದು. ಆದರೆ ಈ ಪ್ರಕ್ರಿಯೆಗೆ ಆಕೆ ನಿಜಕ್ಕೂ ಆಭಾರಿಯಾಗಿದ್ದಾರೆ’.

ಶ್ರೀಮತಿ ಗಾಯತ್ರಿ ಅವರು ಈ ಬೋಧನಾ ವಿಧಾನವನ್ನು ಅಳವಡಿಸಿಕೊಂಡ ಬಳಿಕ ಮಕ್ಕಳ ಕಲಿಕೆ ಮತ್ತು ಕಲಿಕಾ ಪ್ರಕ್ರಿಯೆಯಲ್ಲಿ ಭಾಗಿಯಾಗುವ ಮಟ್ಟದಲ್ಲಿಯೂ ತಕ್ಷಣ ಸಾಕಷ್ಟು ಬದಲಾವಣೆ ಕಂಡುಬಂದಿತು. ಕ್ರಮೇಣ ಒಂದನೇ ತರಗತಿಯಲ್ಲಿರುವ ಮಕ್ಕಳ ಓದುವ ಮತ್ತು ತರಗತಿಯಲ್ಲಿ ಅವರು ಪರಸ್ಪರ ಬೆರೆಯುವ ಪ್ರಮಾಣವೂ ಹೆಚ್ಚಾಯಿತು ಮತ್ತು ಅವರು ಹಿಂದಿಗಿಂತ ಹೆಚ್ಚು ಅರ್ಥ ಮಾಡಿಕೊಂಡಿರುವುದು ಗಮನಕ್ಕೆ ಬಂದಿತು. ತಮಗೂ ತರಗತಿಗಳಲ್ಲಿ ಪಾಠ ಮಾಡುವುದು ಹೆಚ್ಚು ಖುಷಿ ಕೊಡಲು ಆರಂಭವಾಯಿತು ಎಂದು ಆಕೆ ಅಭಿಪ್ರಾಯಪಟ್ಟಿದ್ದಾರೆ. ಇದರ ಜೊತೆಗೇ ಶಾಲೆಯಲ್ಲಿರುವ ಇತರ ಶಿಕ್ಷಕರು ಮತ್ತು ಉಳಿದ ಶಾಲೆಗಳ ಕೆಲವು ಶಿಕ್ಷಕರು ಇದೇ ಬೋಧನಾ ವಿಧಾನವನ್ನು ಅಳವಡಿಸಿಕೊಳ್ಳುವ ಅಪೇಕ್ಷೆ ವ್ಯಕ್ತಪಡಿಸಿದರು.[i] ಮಕ್ಕಳು ಹೇಗೆ ಕಲಿಯುತ್ತಾರೆ, ಹೇಗೆ ಬದಲಾವಣೆ ಹೊಂದುತ್ತಾರೆ ಎನ್ನುವ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುವ ಸಂದರ್ಭದಲ್ಲಿ, ಒಬ್ಬರು ಹೇಗೆ ಬೋಧನೆ ಮಾಡುತ್ತಾರೆ ಎಂಬ ಪ್ರಶ್ನೆ ಬಂದಾಗ ಸ್ವಾಭಾವಿಕವಾಗಿ ಬದಲಾವಣೆ ಕಂಡುಬರಬಹುದು. ಉದಾಹರಣೆಗೆ, ಮಕ್ಕಳು ಎಲ್ಲವನ್ನೂ ಬರೆಯುವಾಗ ಮಾತ್ರ ಕಲಿಯುತ್ತಾರೆ ಎಂದು ರಾಧಾ ನಂಬಿಕೊಂಡಿದ್ದರೆ ಅವರು ತರಗತಿಯಲ್ಲಿ ಬರೆಯುವ ಕೆಲಸಕ್ಕೇ ಹೆಚ್ಚಿನ ಆದ್ಯತೆ ನೀಡುತ್ತಾರೆ. ಆದರೆ ಮಕ್ಕಳು ಪರಿಶೋಧನೆ ಮಾಡುವ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದರಿಂದ ಹೆಚ್ಚು ಕಲಿಯುತ್ತಾ ಹೋಗುತ್ತಾರೆ ಎಂಬ ಬಗ್ಗೆ ಆಕೆಗೆ ನಂಬಿಕೆ ಇದ್ದರೆ, ಅವರು ತರಗತಿಯಲ್ಲಿ ಹೆಚ್ಚು ಹೆಚ್ಚು ಒಗಟುಗಳು, ಪ್ರಯೋಗಗಳು ಮತ್ತು ವಿನೋದದಂತಹ ವಿಧಾನಗಳನ್ನು ಅಳವಡಿಸಿಕೊಳ್ಳಬಹುದು.

**ಅಧ್ಯಾಪನ ಶೈಲಿಯಲ್ಲಿ ಬದಲಾವಣೆ**

ಕೆಲವು ಸಂದರ್ಭಗಳಲ್ಲಿ ಮಗುವು ಕಲಿಕೆಯಲ್ಲಿ ವಿಫಲವಾದರೆ, ಆಕೆ/ಆತನಿಗೆ ಕಲಿಯುವ ಸಾಮರ್ಥ್ಯ ಇಲ್ಲವೇ ಇಲ್ಲ ಎಂದಲ್ಲ, ಬದಲಾಗಿ ಬೋಧನೆಯ ವಿಧಾನ ಮಗುವಿಗೆ ಆಪ್ತವಾಗುತ್ತಿಲ್ಲ ಎಂದು ಅರ್ಥ. ಹಾಗಾಗಿ ಒಬ್ಬರ ಬೋಧನಾ ವಿಧಾನವನ್ನು ಬದಲಿಸಿಕೊಳ್ಳುವುದರಿಂದ ಮತ್ತು ಮಗುವಿನ ಮಟ್ಟಕ್ಕೆ ಇಳಿದು ಬೋಧನೆ ಮಾಡುವುದರಿಂದ ಆ ಮಗುವು ಜಡತ್ವವನ್ನು ಕಳಚಿಕೊಳ್ಳಲು ಸಾಧ್ಯವಾಗುತ್ತದೆ. ಈ ಕೆಳಗಿನ ಉದಾಹರಣೆಗಳು ಇದಕ್ಕೆ ಮಾದರಿಯಾಗಿವೆ:

ಇದು ಆಟಿಸಂ (ತಂತನತೆ) ಸಮಸ್ಯೆ ಇರುವ ಮೂರು ವರ್ಷ ವಯಸ್ಸಿನ ಮಗುವಿಗೆ ಸಂಬಂಧಿಸಿದ ವರದಿ. ಆತ ಯಾರೊಂದಿಗೂ ಮಾತನಾಡುತ್ತಿರಲಿಲ್ಲ, ಯಾವುದರೆಡೆಗೂ ಗಮನ ನೀಡುತ್ತಿರಲಿಲ್ಲ ಅಥವಾ ಯಾರ ಪ್ರಭಾವಕ್ಕೂ ಒಳಗಾಗುತ್ತಿರಲಿಲ್ಲ. ಆತನನ್ನು ವಿಶೇಷ ಅಗತ್ಯಗಳಿರುವ ಮಕ್ಕಳ ಶಾಲೆಗೆ ಕರೆತರಲಾಯಿತು; ಮೂರು ತಿಂಗಳ ಕಾಲ ಶಿಕ್ಷಕರ ಜೊತೆ ನಡೆದ ನೇರಾನೇರ ಕಲಾಪಗಳ ಬಗೆಗೆ ಆತನ ಅನುಭವದ ವರದಿ ಇಲ್ಲಿದೆ.

ಪಾರ್ಥ ಯಾವುದನ್ನೂ ಅಥವಾ ಯಾರಿಂದಲೂ ಕಲಿಯಲು ಉತ್ಸಾಹವಾಗಲಿ ಅಥವಾ ಆಸಕ್ತಿಯಾಗಲಿ ತೋರಿಸುತ್ತಿರಲಿಲ್ಲ. ಆತನನ್ನು ಶಾಲೆಗೆ ಕರೆತಂದಾಗಲೂ ಅವನು ಶಿಕ್ಷಕರ ಮುಂದೆ ಕುಳಿತುಕೊಳ್ಳಲು ನಿರಾಕರಿಸುತ್ತಿದ್ದ. ಒಂದು ಮೂಲೆಯಲ್ಲಿ ನೆಲದ ಮೇಲೆ ಕುಳಿತು ತನ್ನಷ್ಟಕ್ಕೆ ತಾನು ಇದ್ದು ಬಿಡುತ್ತಿದ್ದ. ಆತ ತಕ್ಕಮಟ್ಟಿಗೆ ಆಸಕ್ತಿ ತೋರಿಸುತ್ತಿದ್ದ ಒಂದೇ ಒಂದು ವಿಷಯವೆಂದರೆ ಅದು ಸೂಪರ್‌ಹೀರೋ ಕಾಮಿಕ್ಸ್‌ನಲ್ಲಿ ಮಾತ್ರ. ಓದುವುದು ಹೇಗೆ ಎಂದು ಅವನಿಗೆ ಗೊತ್ತಿಲ್ಲದೇ ಇದ್ದರೂ ಕೂಡ ಮನೆಯಲ್ಲಿ ಕೆಲವು ಕಾಮಿಕ್ಸ್ ಪುಸ್ತಕಗಳನ್ನು ತಿರುವಿ ಹಾಕುತ್ತಿದ್ದ.

ಕೆಲವು ವಾರಗಳ ಕಾಲ ಪಾರ್ಥನ ಗಮನವನ್ನು ಸೆಳೆಯಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದ ಬಳಿಕ, ಶಿಕ್ಷಕರು ತರಗತಿಯಲ್ಲಿ ಆತನ ಕಾಮಿಕ್ಸ್ ಆಸಕ್ತಿಯನ್ನು ಬಳಸಿಕೊಳ್ಳಲು ನಿರ್ಧರಿಸಿದರು. ತನ್ನ ಮುಂದೆ ಬಂದು ಕುಳಿತುಕೋ ಎಂದು ಶಿಕ್ಷಕರು ಪಾರ್ಥನಿಗೆ ಎಂದೂ ಬಲವಂತ ಮಾಡಲಿಲ್ಲ; ಬದಲಾಗಿ ಶಿಕ್ಷಕರೇ ಆತನ ಬಳಿ ಹೋಗಿ ಕುಳಿತು ಕಾಮಿಕ್ ಚಿತ್ರಗಳನ್ನು ಬರೆದರು. ಕಾಮಿಕ್‌ನ ಒಂದು ಸಾಲನ್ನು ಮುಗಿಸಿದ ಶಿಕ್ಷಕರು ಆ ಪೇಪರನ್ನು ಪಾರ್ಥನ ಬಳಿಯಲ್ಲೇ ಬಿಟ್ಟು ತನ್ನ ಸೀಟಿಗೆ ಮರಳಿ ಚಿತ್ರ ಬಿಡಿಸುವುದನ್ನು ಮುಂದುವರಿಸಿದರು. ಇದು ಪಾರ್ಥನಿಗೆ ಚಿತ್ರ ಬಿಡಿಸಲು ಸಿಕ್ಕ ಭಯರಹಿತ ಆಹ್ವಾನವಾಗಿತ್ತು. ಹೀಗೆ ಎರಡು ತಿಂಗಳುಗಳು ಕಳೆದವು. ಕ್ರಮೇಣ ಪಾರ್ಥ ಭಯವನ್ನು ಬಿಟ್ಟು ಶಿಕ್ಷಕರ ಮುಂದೆಯೇ ಬಂದು ಕುಳಿತುಕೊಳ್ಳಲು ಆರಂಭಿಸಿದ. ಶಿಕ್ಷಕರು ಚಿತ್ರಗಳನ್ನು ಬರೆಯುವಾಗ ಪಾರ್ಥ ಮೌನದಿಂದ ಎಲ್ಲವನ್ನೂ ಗಮನಿಸುತ್ತಿದ್ದ; ಕ್ರಮೇಣ ಚಿತ್ರದ ಕಡೆಗೆ ಕೈ ತೋರಿಸಿ ಸದ್ದು ಮಾಡಲು ಶುರುಮಾಡಿದ. ಶಿಕ್ಷಕರು ಆತನ ಆಸಕ್ತಿಯನ್ನು ಸೆಳೆಯುವಲ್ಲಿ ಯಶಸ್ವಿಯಾಗಿದ್ದರು. ತಾನು ಸುರಕ್ಷಿತ ಎಂಬ ಭಾವನೆ ಅವನಲ್ಲಿ ಉಂಟಾಗಿದ್ದರಿಂದ ತಾನಾಗಿಯೇ ಮಾತನಾಡಲು ಆಸಕ್ತಿ ವಹಿಸಿದ. ಇದು ಆರಂಭ. ಇದಾದ ಬಳಿಕ ಶಿಕ್ಷಕರು ಕ್ರಮೇಣ ಆತನೊಂದಿಗೆ ಬೆರೆಯುವುದನ್ನು ಹೆಚ್ಚಿಸಿ ಆತನನ್ನು ನಾನಾ ವಿಧಾನಗಳಲ್ಲಿ ತೊಡಗಿಸಿಕೊಳ್ಳಲು ಯಶಸ್ವಿಯಾದರು.

ಕಲಿಕೆಯಲ್ಲಿ ಅಸಮರ್ಥ ಎಂದು ಎಲ್ಲರಿಂದ ಅನಿಸಿಕೊಂಡ, ಯಾವುದರಲ್ಲಿಯೂ ಆಸಕ್ತಿಯೇ ಇಲ್ಲದ ಹುಡುಗ ಈಗ ಸುಮಾರು ಎಂಟು ವರ್ಷ ವಯಸ್ಸನ್ನು ತಲುಪಿದ್ದು ಸ್ನೇಹಿತರೊಂದಿಗೆ ಆಟವಾಡಲು ಆಸಕ್ತಿ ತೋರುತ್ತಿದ್ದಾನೆ ಮತ್ತು ತನ್ನ ಸುತ್ತಲಿನ ಪರಿಸರದ ಬಗೆಗೆ ಕುತೂಹಲ ಬೆಳೆಸಿಕೊಂಡಿದ್ದಾನೆ. ಇದರಿಂದ ನೆನಪಿಟ್ಟುಕೊಳ್ಳಬೇಕಾದ ಬಹುಮುಖ್ಯ ಅಂಶ ಏನೆಂದರೆ ಮಗುವು ಈಗಿರುವ ವಿಧಾನದಲ್ಲಿ ಕಲಿಯಲು ವಿಫಲವಾಗಿದೆ ಎಂದ ಮಾತ್ರಕ್ಕೆ ಅದು ಕಲಿಕೆಯಲ್ಲಿಯೇ ವಿಫಲವಾಗಿದೆ ಎಂಬ ತೀರ್ಮಾನಕ್ಕೆ ಬಂದುಬಿಡಬಾರದು.

**ಆಸಕ್ತಿ ಹುಟ್ಟಿಸುವುದು ಮತ್ತು ಕುತೂಹಲ ಕಾಯ್ದುಕೊಳ್ಳುವುದು**

ಮಗುವಿನ ಕೊನೆಯಿರದ ಪ್ರಶ್ನೆಗಳ ಸುರಿಮಳೆಯಿಂದ ನೀವು ಬಸವಳಿದು ಹೋಗಿದ್ದರೆ ಮಗುವು ಕಲಿಕೆಯಲ್ಲಿ ಅತೀವ

ಆಸಕ್ತಿಯನ್ನು ಹೊಂದಿದೆ ಎಂಬುದು ನಿಮಗೆ ಅರಿವಾಗಬೇಕು. ಮಕ್ಕಳು ಕುತೂಹಲದ ಮನೋಭಾವವನ್ನು ಬೆಳೆಸಿಕೊಳ್ಳುತ್ತಿದ್ದಾರೆ ಮತ್ತು ಎಲ್ಲವನ್ನೂ ಗಮನಿಸುತ್ತಿದ್ದಾರೆ. ಕೆಲವೊಮ್ಮೆ ತರಗತಿ ಕೊಠಡಿಯ ಕಲಿಕಾ ವಾತಾವರಣವು ಮಕ್ಕಳ ಕಲಿಯುವ ಸ್ವಾಭಾವಿಕ ಬಯಕೆಗೇ ಅಡ್ಡಿಯಾಗುವ ಸಾಧ್ಯತೆ ಇರುತ್ತದೆ. ತರಗತಿಯಲ್ಲಿ ಮಕ್ಕಳು ವಿಫಲರಾಗುವುದಕ್ಕೆ ಬಹುಮುಖ್ಯ ಕಾರಣಗಳಲ್ಲಿ ಒಂದೇನೆಂದರೆ ಮಕ್ಕಳಿಗೆ ಕ್ಲಾಸ್‌ರೂಮ್ ಬೋರ್ ಹೊಡೆದಿರುತ್ತದೆ ಎಂದು ಜಾನ್ ಹೋಲ್ಟ್ ತಮ್ಮ 'ಹೌ ಚಿಲ್ಡ್ರನ್ ಫೇಲ್' (ಮಕ್ಕಳು ಹೇಗೆ ನಪಾಸಾಗುತ್ತಾರೆ) ಎಂಬ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಶಾಲೆಗಳಲ್ಲಿ ಬೇಸರ ಹುಟ್ಟಿಸುವಂತಹ ಪದೇಪದೇ ಪುನರಾವರ್ತನೆಗೊಳ್ಳುವ ಕೆಲವು ಕೆಲಸಗಳಿಂದ ಮಕ್ಕಳಲ್ಲಿ ಅಗಾಧವಾಗಿರುವ ಸಾಮರ್ಥ್ಯಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಲು ಸಾಧ್ಯವಿಲ್ಲ. ಹಾಗಾಗಿ ಮಕ್ಕಳು ಬಹುಬೇಗ ಆಸಕ್ತಿಯನ್ನು ಕಳೆದುಕೊಳ್ಳುತ್ತಾರೆ ಮತ್ತು ವಿಷಯದಲ್ಲಿ ಅವರು ತಮ್ಮನ್ನು ತೊಡಗಿಸಿಕೊಳ್ಳುವುದಿಲ್ಲ. (ಹೋಲ್ಟ್ ಮತ್ತು ಫ್ರಾಮ್ಮೆ–1964). ಇದನ್ನೇ ನಾವು ಕೆಲವೊಮ್ಮೆ 'ಈ ಮಗುವು ಕಲಿಯಲು ಅಸಮರ್ಥ' ಎಂದು ವ್ಯಾಖ್ಯಾನಿಸಿಬಿಡುತ್ತೇವೆ.

ಹಾಗಾದರೆ ಮಕ್ಕಳಲ್ಲಿ ಸ್ವಾಭಾವಿಕವಾಗಿರುವ ಆಸಕ್ತಿ ಮತ್ತು ಕುತೂಹಲವನ್ನು ನಾವು ಸೆಳೆಯುವುದಾದರೂ ಹೇಗೆ?

ಒಳಿದು ದಾರಿ ಏನೆಂದರೆ, 'ಮಕ್ಕಳಿಗೆ ಬೋಧನೆ' ಮಾಡುವುದರ ಜೊತೆಗೆ ಅವರಿಗೇ ಹೊಸದನ್ನು ಕಂಡುಕೊಳ್ಳಲು, ಪರಿಶೋಧಿಸಲು ಮತ್ತು ತಮ್ಮದೇ ಪರಿಕಲ್ಪನೆಗಳನ್ನು ಅನ್ವಯಿಸಲು ಅವಕಾಶ ನೀಡಬೇಕು. ಮಗುವಿನ ಸುತ್ತಮುತ್ತಲಲ್ಲೇ ಇರುವ ಪರಿಕಲ್ಪನೆಗಳಿಗೆ ಹೆಚ್ಚು ಆಸ್ಪದ ನೀಡುವುದು, ಅವರ ಯೋಚನೆಗಳಿಗೆ ಆಹಾರ ಒದಗಿಸುವುದು ಮತ್ತು ಅವರಿಗೆ ಬೋಧನೆ ಮಾಡಿದ ವಿಷಯಗಳ ಬಗೆಗೆ ಮನನ ಮಾಡಲು ಅವಕಾಶ ನೀಡುವುದರಿಂದ ಅವರಲ್ಲಿ ಸ್ವಾಭಾವಿಕವಾಗಿಯೇ ಕುತೂಹಲ ಹೆಚ್ಚಾಗುತ್ತದೆ ಮತ್ತು ಅವರನ್ನು ಪ್ರೇರೇಪಿಸಿದಂತಾಗುತ್ತದೆ. ಶಿಕ್ಷಕಿಯೊಬ್ಬರು ಇವುಗಳನ್ನು ತಮ್ಮ ತರಗತಿ ಕೊಠಡಿಯಲ್ಲಿ ಅಳವಡಿಸಿಕೊಂಡಿರುವ ಒಂದು ಉದಾಹರಣೆ ಇಲ್ಲಿದೆ;

ಇದು ರಾಯ್‌ಪುರದ ಸರಕಾರಿ ಮಾಧ್ಯಮಿಕ ಶಾಲೆಯ ಸಮಾಜ ವಿಜ್ಞಾನ ಶಿಕ್ಷಕಿಯೊಬ್ಬರು ಹಂಚಿಕೊಂಡಿರುವ ಅನುಭವ. ಮಕ್ಕಳು ಪೂರ್ಣ ಸಾಮರ್ಥ್ಯದಿಂದ ಕೆಲಸ ಮಾಡಲು ಅವರಿಗೆ ವಿಶಾಲವಾದ ಕೊಠಡಿಯ ಅಗತ್ಯವಿದೆ ಎಂಬುದು ಶಿಕ್ಷಕಿಯಾದ ಶ್ರೀಮತಿ ಜೋಷಿ ಅವರ ಅಭಿಪ್ರಾಯ. ಕಲಿಕೆಗೆ ಮಕ್ಕಳೊಂದಿಗೆ ನಿರಂತರವಾಗಿ ತೊಡಗಿಕೊಳ್ಳುವುದು ಉತ್ತಮ ಎಂಬುದನ್ನು ಅವರು ಪ್ರತಿಪಾದಿಸುತ್ತಾರಾದರೂ, ಮಕ್ಕಳಿಗೆ ಸಾಕಷ್ಟು ಸ್ವಾತಂತ್ರ್ಯ ಹಾಗೂ ಪರಿಶೋಧನಾತ್ಮಕ ಕಲಿಕೆಯ ಅಗತ್ಯತೆಯ ಬಗ್ಗೆ ಒತ್ತು ನೀಡುತ್ತಾರೆ. ಇದನ್ನು ಚಟುವಟಿಕೆ ಆಧಾರಿತ ಬೋಧನೆಯ ಮೂಲಕ ಸಾಧಿಸಬಹುದು ಎಂಬುದು ಅವರ ನಂಬಿಕೆಯಾಗಿದೆ. ಇದರಿಂದ ಮಕ್ಕಳು ತರಗತಿಯಲ್ಲಿ ಪಡೆದ ಜ್ಞಾನವನ್ನು ತಮ್ಮ ಬದುಕಿನಲ್ಲಿ ಅಳವಡಿಕೊಳ್ಳಲು ಸಾಧ್ಯವಾಗುತ್ತದೆ ಎಂದು ಅವರು ಪ್ರತಿಪಾದಿಸುತ್ತಾರೆ.

**ಅಧ್ಯಾಪನ ವಿಧಾನವನ್ನು ವೈಯಕ್ತಿಕಗೊಳಿಸುವುದು**

'छोटे और बड़े उद्योग' (ಸಣ್ಣ ಮತ್ತು ಬೃಹತ್ ಕೈಗಾರಿಕೆಗಳು) ಎಂಬ ಹಿಂದಿ ಪಾಠವನ್ನು ಬೋಧನೆ ಮಾಡುವ ಸಂದರ್ಭದಲ್ಲಿ ಅವರು ಹತ್ತಿರದ ಪಾರ್ಲೆ–ಜಿ ಮತ್ತು ಜಿಂದಾಲ್ ಕಾರ್ಖಾನೆಗಳಿಗೆ ಮಕ್ಕಳ ಭೇಟಿಯನ್ನು ಆಯೋಜಿಸಿದ್ದರು. ಈ ಕೈಗಾರಿಕೆಗಳಿಗೆ ಭೇಟಿ ನೀಡಿದ ಮಕ್ಕಳು ಬೃಹತ್ ಮತ್ತು ಸಣ್ಣ ಕೈಗಾರಿಕೆಗಳ ನಡುವಿನ ವ್ಯತ್ಯಾಸವೇನು ಎಂಬುದನ್ನು ತಮ್ಮದೇ ಆದ ರೀತಿಯಲ್ಲಿ ಪಟ್ಟಿ ಮಾಡುತ್ತ ಹೋದರು. ಮುದ್ರಣಾಲಯ /ಮಾಧ್ಯಮದ ಬಗ್ಗೆ ಅಧ್ಯಯನ ಮಾಡುವ ಸಂದರ್ಭದಲ್ಲಿ ಇನ್ನೊಂದು ತರಗತಿಯ ವಿದ್ಯಾರ್ಥಿಗಳನ್ನು ಬುಕ್ ಫ್ಯಾಕ್ಟರಿಗೆ ಕರೆದೊಯ್ಯಲಾಯಿತು. ನಾಗರಿಕ ಹಾಗೂ ಸಾಮಾನ್ಯ ಜ್ಞಾನಕ್ಕೆ ಸಂಬಂಧಿಸಿದ ಪಾಠ ಮಾಡುವ ಸಂದರ್ಭದಲ್ಲಿ ತಮ್ಮ ಗ್ರಾಮದಲ್ಲಿಯೇ ಇರುವ ವಿಷಯವೊಂದನ್ನು ಕೈಗೆತ್ತಿಕೊಂಡು ಅದರ ಬಗ್ಗೆ ಸಮೀಕ್ಷೆ ಮಾಡುವಂತೆ ಆಕೆ ವಿದ್ಯಾರ್ಥಿಗಳಿಗೆ ಸೂಚನೆ ನೀಡಿದರು. ಈ ಸಮೀಕ್ಷೆಯ ವಿಷಯಗಳು ಗ್ರಾಮದಲ್ಲಿ ಇರುವ ಸಮಸ್ಯೆಗಳದ್ದಾಗಿದ್ದು ಇವುಗಳ ಬಗ್ಗೆ ಗ್ರಾಮಸ್ಥರ ದೃಷ್ಟಿಕೋನವನ್ನು ದಾಖಲಿಸುವುದಾಗಿತ್ತು ಅಥವಾ ಗ್ರಾಮದ ಜನಸಂಖ್ಯಾ ಸ್ವರೂಪ ಮತ್ತು ಪಂಚಾಯತ್‌ನ ಕಾರ್ಯನಿರ್ವಹಣೆಯ ಬಗ್ಗೆ ಸಮೀಕ್ಷೆ ಮಾಡಬೇಕಾಗಿತ್ತು. ಈ ಸಮೀಕ್ಷೆಗಳನ್ನು ತರಗತಿಯಲ್ಲಿ ಚರ್ಚಿಸಲಾಯಿತು. ವಿದ್ಯಾರ್ಥಿಗಳು ವಿರಾಮದ ವೇಳೆ ಈ ಸಮೀಕ್ಷೆಯ ಬಗ್ಗೆ ತಮ್ಮ ಸಹಪಾಠಿಗಳ ಜೊತೆಗೆ ಚರ್ಚೆ ಮಾಡುವುದು ಕಂಡುಬಂದಿತು.

**ಸ್ವತಂತ್ರ ಹಾಗೂ ಪರಿಶೋಧನಾತ್ಮಕ ಕಲಿಕೆ**

ಶ್ರೀಮತಿ ಜೋಷಿ ಅವರು 45 ನಿಮಿಷಗಳ ಅವಧಿಯಲ್ಲಿ ಎರಡು ತರಗತಿಗಳಿಗೆ ಪಾಠ ಮಾಡಬೇಕಾದ ಸಂದರ್ಭವಿತ್ತು, ಒಂದು ತರಗತಿಯ ವಿದ್ಯಾರ್ಥಿಗಳು ಅವರು ನೀಡಿದ ಚಟುವಟಿಕೆಯನ್ನು ಮಾಡುತ್ತಿರುವಾಗ ಇನ್ನೊಂದು ತರಗತಿಯ ಕಡೆ ಗಮನಹರಿಸಿದರು. ವಿಭಿನ್ನ ರೀತಿಯ ಕೈಗಾರಿಕೆಗಳ ಕುರಿತಂತೆ ಶ್ರೀಮತಿ ಜೋಷಿ ಅವರು ಸುಮಾರು 15 ನಿಮಿಷಗಳ ಕಾಲ ಬೋಧನೆ ಮಾಡಿದರು. ಆ ಬಳಿಕ ಅವರು ವಿದ್ಯಾರ್ಥಿಗಳನ್ನು ಎರಡು ಗುಂಪುಗಳಾಗಿ ವಿಭಜಿಸಿ ಅವರಿಗೆ ಇದೇ ವಿಷಯಕ್ಕೆ ಸಂಬಂಧಿಸಿದಂತೆ ಅವರದ್ದೇ ಪರಿಕಲ್ಪನೆಯಲ್ಲಿ ಕೆಲಸ ಮಾಡುವ ಚಟುವಟಿಕೆ ನೀಡಿದರು. (ನಿಮ್ಮ ಗ್ರಾಮದಲ್ಲಿ ನೀವು ನೋಡಿರುವ ಎಲ್ಲ ಕೈಗಾರಿಕೆಗಳ ಬಗ್ಗೆ ಯೋಚಿಸಿ ನೀವು ಕಲಿತ ವಿಭಾಗಗಳಲ್ಲಿ ಅವುಗಳನ್ನು ವರ್ಗೀಕರಣ ಮಾಡಬೇಕು ಎನ್ನುವ ಕೆಲಸ). ಮಕ್ಕಳಿಗೆ ಅತ್ಯಂತ ಆಪ್ತವಾದ ಕೆಲಸವನ್ನು ನೀಡಿದರೆ ಶಿಕ್ಷಕರು ತರಗತಿಯಲ್ಲಿ ಇಲ್ಲದೇ ಇದ್ದರೂ ಕೂಡ ಆ ಕೆಲಸವನ್ನು ಮಾಡಲು ಅವರಿಗೆ ಅದು ಪ್ರೇರಣೆ ನೀಡುತ್ತದೆ. ಒಂದು ಪರಿಕಲ್ಪನೆಯನ್ನು ಸ್ವತಂತ್ರವಾಗಿ ಪರಿಶೋಧನೆ ಮಾಡಲು ಮಕ್ಕಳಿಗೆ ಅವಕಾಶ ನೀಡಿದರೆ ಮಕ್ಕಳು ಅಂತಹ ಅವಕಾಶವನ್ನು ಅತ್ಯಂತ ಸಂತೋಷದಿಂದಲೇ ಬಳಸಿಕೊಳ್ಳುವುದನ್ನು ನಾವು ಕಾಣಬಹುದು.ii

ಸಾಮಾನ್ಯವಾಗಿ ಅಕಾಲಿಕವಾದ ಮೌಲ್ಯಮಾಪನ ಅಥವಾ ಮಗುವಿನ ಕಲಿಕೆಯ ಸಾಮರ್ಥ್ಯವನ್ನು ಅಂದಾಜು ಮಾಡಲಾಗದ ವಿಧಾನದಲ್ಲಿ ಮೌಲ್ಯಮಾಪನ ಮಾಡಿದಾಗ 'ಈ ಮಗುವು ಕಲಿಯುವುದರಲ್ಲಿ ಹಿಂದಿದೆ ಅಥವಾ ಕಲಿಯುವ ಸಾಮರ್ಥ್ಯ ಇಲ್ಲ' ಎಂಬ ತೀರ್ಮಾನಕ್ಕೆ ಬರಲಾಗುತ್ತದೆ. ಹಾಗಂತ ಪ್ರತಿಯೊಂದು ಮಗುವನ್ನೂ ವಿಭಿನ್ನವಾದ ಮೌಲ್ಯಮಾಪನಕ್ಕೆ ಒಳಪಡಿಸುವುದು ಸಾಧ್ಯವಾಗದೇ ಇರಬಹುದು; ಶಾಲೆಗಳಿಗೆ ಕೆಲವು ಸ್ವರೂಪ ಮತ್ತು ಪ್ರಮಾಣೀಕರಣ ಇರಬೇಕಾಗುತ್ತದೆ. ಕನಿಷ್ಠ ಕೆಲವು ವಿಧಾನದಲ್ಲಿಯಾದರೂ ಮಗುವು ಕಲಿಯುವ ಅವಕಾಶ ಪಡೆಯುವಂತಾಗಲು ಕೆಲವು ರೀತಿಯಲ್ಲಿ ಮೌಲ್ಯ–ಮಾಪನವನ್ನು ಮಾಡುವುದರಲ್ಲಿ ಅರ್ಥವಿದೆ. ಉದಾಹರಣೆಗೆ, ಮೌಖಿಕ, ಸೃಜನಶೀಲ ಅಭಿವ್ಯಕ್ತಿಗಳನ್ನು ಪ್ರದರ್ಶಿಸಲು ಅವಕಾಶ ಇರುವ ಲಿಖಿತ ಪರೀಕ್ಷೆಗಳ ಅವಕಾಶವನ್ನು ಒದಗಿಸುವುದು.

**ಕಲಿಕೆಯಲ್ಲಿನ ಗತಿ ಮತ್ತು ಶೈಲಿಯಲ್ಲಿನ ವ್ಯತ್ಯಾಸ ತಿಳಿಯಲು ಮೌಲ್ಯಮಾಪನ**

ಇವೆಲ್ಲದರ ಜೊತೆಗೆ, ಪ್ರತಿಯೊಂದು ಮಗುವೂ ವಿಭಿನ್ನವಾದ ಗತಿಯಲ್ಲಿ ಕಲಿಯುತ್ತಿರುತ್ತದೆ; ನಿರಂತರ ಹಾಗೂ ಸಮಗ್ರ ಮೌಲ್ಯಮಾಪನದ ಭಾಗವಾಗಿ, ಕೇವಲ ಫಲಿತಾಂಶದ ಮೇಲೆ ಮಾತ್ರ ಗಮನ ಕೇಂದ್ರೀಕರಿಸುವುದರ ಬದಲಿಗೆ ಕಲಿಕೆಯಲ್ಲಿ ಮಕ್ಕಳ ಪ್ರತಿ ಹಂತದ ಪ್ರಗತಿಯನ್ನು ದಾಖಲಿಸಲು ಅನೇಕ ಪ್ರಕ್ರಿಯೆಗಳನ್ನು ಅಳವಡಿಸಿಕೊಳ್ಳಬಹುದಾಗಿದೆ. ಇಲ್ಲಿ ಕೆಲವು ಉದಾಹರಣೆಗಳನ್ನು ಗಮನಿಸಬಹುದು;

ಮಗುವಿನ ಸಾಮರ್ಥ್ಯ ಮತ್ತು ಗತಿಯ ಮೇಲೆ ಕೇಂದ್ರೀಕರಿಸಿದ ಶಿಕ್ಷಕರ ಅಧ್ಯಾಪನದ ಬಗೆಗಿನ ವರದಿಯನ್ನು ಇಲ್ಲಿ ನೀಡಲಾಗಿದೆ. ಒಂದು ಸೆಮಿಸ್ಟರ್‌ನ ಅವಧಿಯಲ್ಲಿ ಕಲಿಯುವ ವಿದ್ಯಾರ್ಥಿಗಳ ಹೆಸರು ಮತ್ತು ಅವರು ಕಲಿಯುವ ಕೌಶಲ್ಯಗಳನ್ನು ಒಂದು ಎಕ್ಸೆಲ್ ಶೀಟ್‌ನಲ್ಲಿ ಬರೆದಿಡಬೇಕು. ಪ್ರತಿ ತರಗತಿಯೂ ಈ ವ್ಯವಸ್ಥೆಯನ್ನು ಹೊಂದಿರಬೇಕು. ವಿದ್ಯಾರ್ಥಿಗಳು ನಾನಾ ವಿಷಯಗಳಿಗೆ ಬೇರೆ ಬೇರೆ ಕಾಲಾವಧಿಯನ್ನು ಪಡೆಯುವ ಸಾಧ್ಯತೆ ಇರುವುದರಿಂದ, ಅವರ ಅಗತ್ಯಕ್ಕೆ ತಕ್ಕಂತೆ ಪ್ರತಿ ವಿಷಯದ ಮೇಲೆ ಸಮಯ ಕಳೆಯಲು ತರಗತಿಯಲ್ಲಿ ಅವಕಾಶ ನೀಡಬೇಕು. ವಿದ್ಯಾರ್ಥಿಗಳ ಪ್ರಗತಿಯನ್ನು ಒಂದು ಟಿಕ್‌ನಿಂದ (ಸರಿ ಗುರುತು) ಎರಡು ಟಿಕ್ ಮಾರ್ಕ್‌ಗಳು ಹಾಗೂ ಸಂಪೂರ್ಣ ಕೌಶಲ್ಯ ಗಳಿಸಿದ ಮೇಲೆ ಮೂರು ಟಿಕ್ ಮಾರ್ಕ್‌ಗಳನ್ನು ನಮೂದಿಸುವ ಮೂಲಕ ದಾಖಲಿಸಬೇಕು. ಇದರಿಂದ ಆ ದಿನದ ತರಗತಿಯಲ್ಲಿ ಮಗು ಏನು ಮಾಡಿರುತ್ತದೋ ಅದು ಭಾಗಶಃ ಆಕೆ/ಆತನ ಚಾರ್ಟ್‌ನ್ನು ಅವಲಂಬಿಸಿರುತ್ತದೆ.[iii]

ಒಟ್ಟಾರೆಯಾಗಿ, ಮಗುವು ಕಲಿಕೆಯಲ್ಲಿ ಯಾಕೆ ವಿಫಲವಾಗುತ್ತದೆ ಎಂಬುದಕ್ಕೆ ಅನೇಕ ಕಾರಣಗಳಿವೆ ಎಂಬುದನ್ನು ನೆನಪಿನಲ್ಲಿಟ್ಟು-ಕೊಳ್ಳಬೇಕು. ಆದರೆ, ಮಕ್ಕಳು ಹೇಗೆ ಕಲಿಯುತ್ತಾರೆ, ಅಧ್ಯಾಪನದ ಕೆಲಸ ಹಾಗೂ ವಿಷಯವನ್ನು ಹೇಗೆ ನಿರ್ವಹಿಸಲಾಗಿದೆ ಮತ್ತು ಮೌಲ್ಯಮಾಪನವನ್ನು ಹೇಗೆ ಮಾಡಲಾಗಿದೆ ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ಮಕ್ಕಳ ಅಭ್ಯುದಯಕ್ಕೆ ಯಾವ ರೀತಿ ಅವಕಾಶ ಕಲ್ಪಿಸಲಾಗಿದೆ ಎನ್ನುವ ನಂಬಿಕೆಯ ಮೇಲೆಯೇ ಇವೆಲ್ಲ ಪ್ರತಿಬಿಂಬಿತವಾಗಿದೆ.

| ವಿದ್ಯಾರ್ಥಿಯ ಹೆಸರು | ಎ–ಝಡ್ | ಹೂವಿನ ಹೆಸರು | ಹಣ್ಣಿನ ಹೆಸರು | ತಿಂಗಳುಗಳು | ಸಂಬಂಧ | ಚಿತ್ರ | ಎಣಿಕೆ |
|---|---|---|---|---|---|---|---|
| ರಾಘವ್ | ✓ | ✓✓ | ✓✓ | ✓ | ✓✓ | ✓ | ✓ |
| ನೇಹಾ | ✓ | ✓✓ | ✓ | ✓✓ | ✓ | ✓✓ | ✓✓ |

[i] *https://practiceconnect.azimpremjiuniversity.edu.in/a-teacher-transformed-through-training/*
[ii] *https://practiceconnect.azimpremjiuniversity.edu.in/teacher-as-the-epicentre-for-change/*
[iii] *https://practiceconnect.azimpremjiuniversity.edu.in/integrating-schools-into-social-fabric-of-community/*


**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**

ಹೋಲ್ಟ್, ಜೆ.ಸಿ., & ಫ್ರಾಮ್ಮೆ ಎ. (1964), ಹೌ ಚಿಲ್ಡ್ರನ್ ಫೇಲ್ (ಸಂ.5), ನ್ಯೂಯಾರ್ಕ್: ಪಿಟ್‌ಮ್ಯಾನ್

*https://practiceconnect.azimpremjiuniversity.edu.in*





**ರಿತಿಕಾ ಗುಪ್ತಾ** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗದಲ್ಲಿ ಉಪನ್ಯಾಸಕಿಯಾಗಿದ್ದಾರೆ. ಮನಶಾಸ್ತ್ರಜ್ಞರಾಗಿರುವ ಇವರು ಕಲೆ ಆಧಾರಿತ ಚಿಕಿತ್ಸಾ ಶಾಸ್ತ್ರಜ್ಞರೂ ಹೌದು. ಮುಖ್ಯವಾಗಿ ಅವರು ಮಾನಸಿಕ ಸೌಖ್ಯ, ಅದರಲ್ಲೂ ವಿಶೇಷವಾಗಿ ಮಕ್ಕಳ ಮಾನಸಿಕ ಸೌಖ್ಯದ ಬಗೆಗಿನ ಪ್ರತಿಬಂಧಕ ಹಾಗೂ ಪ್ರೋತ್ಸಾಹಕ ಉಪಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತುಲನಾತ್ಮಕ ಅಧ್ಯಾಪನಶಾಸ್ತ್ರ, ಶಾಲೆಗಳಲ್ಲಿ ಸಾಮಾಜಿಕ-ಭಾವನಾತ್ಮಕ ಕಲಿಕೆಯ ಸಮಗ್ರತೆ ಮತ್ತು ವ್ಯಕ್ತಿತ್ವವನ್ನು ರೂಪಿಸುವಲ್ಲಿ ಶಿಕ್ಷಣದ ಪರಿಣಾಮಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ಅವರು ಆಸಕ್ತರಾಗಿದ್ದಾರೆ. ಅವರನ್ನು ಈ ಮಿಂಚಂಚೆಯಲ್ಲಿ ಸಂಪರ್ಕಿಸಬಹುದು. ritika.gupta@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** I ಪರಿಶೀಲನೆ: **ಲತಾ ಕೆ ಸಿ**

# ಶಾಲಾ ಮಕ್ಕಳ ಪೌಷ್ಟಿಕತೆಯನ್ನು ಗಮನಿಸಬೇಕಾದ ಅಗತ್ಯತೆ:

ಶ್ರೀಲತಾ ರಾವ್ ಶೇಷಾದ್ರಿ

### ಮಕ್ಕಳಿಗೆ ಉತ್ತಮ ಪೌಷ್ಟಿಕತೆಯ ಅವಶ್ಯಕತೆ

ಭಾರತದ ಒಂದು ಸಾಮಾನ್ಯ ಸರ್ಕಾರಿ ಶಾಲೆಯಲ್ಲಿ ಕಲಿಯುತ್ತಿರುವ ಪುಟ್ಟ ಬಾಲಕಿಯೊಬ್ಬಳನ್ನು ಕಲ್ಪಿಸಿಕೊಳ್ಳಿ. ಆರು ವರ್ಷದ ಆ ಹುಡುಗಿ ಶಾಲೆಗೆ ಹೊರಡಲು ಸಿದ್ಧವಾಗುತ್ತಿದ್ದಾಳೆ. ಬೆಳಗ್ಗೆ ಏಳು ಗಂಟೆಯೊಳಗೆ ಹೊಲದಲ್ಲಿರಲೇಬೇಕಾದ್ದರಿಂದ ಮಗಳ ಜೊತೆಗೆ ತಾಯಿಯೂ ಬೇಗನೇ ಹೊರಡುತ್ತಿದ್ದಾಳೆ. ಆ ಪುಟ್ಟ ಬಾಲಕಿಗಾಗಲೀ ಅಥವಾ ಅವಳ ಸಹೋದರನಿಗಾಗಲೀ ಬೆಳಗಿನ ಉಪಾಹಾರ ಮಾಡಿಕೊಡುವಷ್ಟು ಸಮಯ ಆಕೆಗಿಲ್ಲ. ಬಾಲಕಿಗೆ ಮುಖ ತೊಳೆದುಕೊಂಡು ಶಾಲಾ ಸಮವಸ್ತ್ರ ಧರಿಸುವಷ್ಟೇ ಸಮಯ ಇದೆ. ರಾತ್ರಿ ಮಿಕ್ಕಿದ್ದ ಚೂರೇಚೂರು ಅನ್ನವನ್ನೇ ತಾಯಿ ಇಬ್ಬರೂ ಮಕ್ಕಳಿಗೆ– ಕೆಲವೇ ತುತ್ತು ಅಷ್ಟೇ– ಸಮಾನವಾಗಿ ಹಂಚುತ್ತಾಳೆ. ಆಮೇಲೆ ಅವರು ಶಾಲೆಗೆ ಓಡಿ ಪ್ರಾರ್ಥನಾ ಸಭೆಗೂ ಮುನ್ನ ತಲುಪಿಬಿಟ್ಟರು. ಮಕ್ಕಳು ತರಗತಿ ಕೊಠಡಿಯೊಳಗೆ ಹೋಗಿ ಮೊದಲ ತರಗತಿ ಶುರುವಾಗುವುದಕ್ಕೂ ಮೊದಲೇ ಬಾಲಕಿಗೆ ಎಂದಿನಂತೆ ಹೊಟ್ಟೆ ಚುರುಗುಟ್ಟತೊಡಗಿತು. ಆಕೆಗೆ ಹಸಿವು! ಆದರೆ ಊಟಕ್ಕೆ ಇನ್ನೂ ಹಲವು ಗಂಟೆಗಳು ಬಾಕಿ ಇವೆ! ಆಕೆಗೆ ಇಂದಿನ ದಿನವೂ ಸುದೀರ್ಘವಾಗಲಿದೆ.

ಇದು ಭಾರತದಲ್ಲಿನ ಸುಮಾರು 2.5 ಕೋಟಿ ಮಕ್ಕಳ ದಿನನಿತ್ಯದ ವಾಸ್ತವ. ಶಾಲಾ ಮಕ್ಕಳ ಪೌಷ್ಟಿಕತೆಯ ಮಟ್ಟವು ಗಣನೀಯವಾಗಿ ಅಪಾಯದಲ್ಲಿದ್ದು, ತುರ್ತು ಗಮನ ವಹಿಸಲೇಬೇಕಾದ ಅಗತ್ಯವಿದೆ ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳಿವೆ.

ಶಾಲೆಗೆ ತೆರಳುವ ಮಕ್ಕಳಲ್ಲಿ ಪೌಷ್ಟಿಕತೆಯು ಹಲವು ಕಾರಣಗಳಿಂದ ನಿರ್ಣಾಯಕವಾಗಿರುತ್ತದೆ: ಪೌಷ್ಟಿಕತೆಯು ಮಗುವಿನ ದೈಹಿಕ ಆರೋಗ್ಯ ಮತ್ತು ಸಾಸ್ಥ್ಯದ ದೃಷ್ಟಿಯಿಂದಷ್ಟೇ ವಾಸ್ತವಿಕ ಮೌಲ್ಯವನ್ನು ಒಳಗೊಂಡಿರುವುದಲ್ಲ, ಜೊತೆಗೆ, ಮಗುವಿನ ಕಲಿಕೆಯ ಗುಣಮಟ್ಟ ಮತ್ತು ದೂರಗಾಮಿಯಾಗಿ ಆ ಮಗುವಿನ ಔದ್ಯೋಗಿಕ ಭವಿಷ್ಯದ ದೃಷ್ಟಿಯಿಂದಲೂ ಪೌಷ್ಟಿಕತೆಗೆ ಸಾಧಕವಾದ ಮೌಲ್ಯವಿದೆ. ಇಡೀ ಜೀವಿತಾವಧಿಯಲ್ಲಿ, ಪ್ರತಿ ಹೆಚ್ಚುವರಿ ವರ್ಷದ ಶಿಕ್ಷಣವು ಆತನ ಜೀವನದುದ್ದಕ್ಕೂ ಆದಾಯದಲ್ಲಿ ಶೇಕಡಾ 20ರಷ್ಟು ಹೆಚ್ಚಳಕ್ಕೆ ಕಾರಣವಾಗುವುದನ್ನು ನೋಡುತ್ತೇವೆ. ಇಷ್ಟಾದರೂ, ಭಾರತದಲ್ಲಿ ಶಾಲಾ ವಯಸ್ಸಿನ ಮಕ್ಕಳಲ್ಲಿ ಅಪೌಷ್ಟಿಕತೆಯು ಗಂಭೀರ ಸಮಸ್ಯೆಯಾಗಿ ಮುಂದುವರಿದಿರುವುದನ್ನು ಕಾಣಬಹುದು (ಕೋಷ್ಟಕ–1). ಬಹುತೇಕ ಸರ್ಕಾರಿ ಶಾಲೆಗೆ ದಾಖಲಾಗುವ ಬಡ ಕುಟುಂಬದ ಮಕ್ಕಳಲ್ಲಿ ಸುಮಾರು ಶೇಕಡಾ 30ರಷ್ಟು ಮಂದಿ ವಯಸ್ಸಿಗೆ ತಕ್ಕುದಾದ ಎತ್ತರ ಮತ್ತು ತೂಕ ಹೊಂದದೇ ಇರುವುದು ಸಾಮಾನ್ಯವಾಗಿದ್ದು, ರಕ್ತಹೀನತೆಯಿಂದಲೂ ಬಳಲುತ್ತಿರುತ್ತಾರೆ.

**ಕೋಷ್ಟಕ –1 : ಶಾಲೆಗೆ ಹೋಗುವ ಮಕ್ಕಳಲ್ಲಿ ಪೌಷ್ಟಿಕತೆ**

| | ಅತಿ ಬಡವ | ಬಡ | ಮಧ್ಯಮವರ್ಗ | ಶ್ರೀಮಂತ | ಅತಿ ಶ್ರೀಮಂತ | ಒಟ್ಟು |
|---|---|---|---|---|---|---|
| 5–9ರ ವಯೋಮಾನದ ಬೆಳವಣಿಗೆ ತಡೆಯಿರುವ ಮಕ್ಕಳು* | 30.3 | 26.2 | 22.2 | 18.4 | 12 | 21.9 |
| 10–19ರ ವಯೋಮಾನದ ಕಡಿಮೆ ಬಿಎಂಐ ಉಳ್ಳ ಮಕ್ಕಳು ** | 27.2 | 26.6 | 26 | 22.2 | 18.2 | 24.1 |
| 5–9ರ ವಯೋಮಾನದ ರಕ್ತಹೀನತೆಯುಳ್ಳ ಮಕ್ಕಳು *** | 30.1 | 29.2 | 22.4 | 18.2 | 18.1 | 23.5 |
| ರಕ್ತಹೀನತೆಯುಳ್ಳ 10–19ರ ಹದಿಹರೆಯದ ಮಕ್ಕಳು | 33.4 | 29 | 28.4 | 28.6 | 23.1 | 28.4 |
| ವಿಟಮಿನ್ ಡಿ ಕೊರತೆಯುಳ್ಳ 5–9ರ ವಯಸ್ಸಿನ ಮಕ್ಕಳು | 13.3 | 13.2 | 14.8 | 20.4 | 30.2 | 18.2 |
| ವಿಟಮಿನ್ ಡಿ ಕೊರತೆಯುಳ್ಳ ಹದಿಹರೆಯದ ಮಕ್ಕಳು | 18.9 | 18.8 | 19.8 | 28.7 | 32.9 | 23.9 |

ಮೂಲ: Comprehensive National Nutrition Survey (CNNS) 2016-18

*ಬೆಳವಣಿಗೆಯಲ್ಲಿ ತಡೆ ಅಂದರೆ ವಯಸ್ಸಿಗಿಂತ ಕಡಿಮೆ ಎತ್ತರ

** BMI ಅಂದರೆ Body Mass Index ಮತ್ತು ವಯಸ್ಸಿಗೆ ತಕ್ಕಂತೆ ತೂಕವನ್ನು ಅಳೆಯುವ ಮಾಪನ

*** ಕಬ್ಬಿಣದ ಕೊರತೆಯಿಂದ ಬರುವ ರಕ್ತಹೀನತೆ

ತಾಯಿ ಗರ್ಭಿಣಿ ಇರುವಾಗಲೇ ಮತ್ತು ಆರಂಭದ 24 ತಿಂಗಳಲ್ಲೇ ಮಕ್ಕಳ ಭೌತಿಕ ಮತ್ತು ಬೌದ್ಧಿಕ ಬೆಳವಣಿಗೆಯ ಅಡಿಪಾಯ ಸಿದ್ಧವಾಗಿರುತ್ತದೆ. ಈ ಅವಧಿಯಲ್ಲಿ (ಮೊದಲ 1000 ದಿನಗಳ ಅವಧಿ), ಅಪೌಷ್ಟಿಕತೆ ಮತ್ತು/ಅಥವಾ ಸೂಕ್ಷ್ಮ ಪೌಷ್ಟಿಕಾಂಶಗಳ (Micronutrient deficiencies) ಕೊರತೆಯಿಂದಾಗಿ ಮಗುವಿನ ಬೆಳವಣಿಗೆಗೆ ತೊಡಕಾಗಿ ದುಷ್ಪರಿಣಾಮ ಬೀರಬಹುದು. ಅಂತೆಯೇ, ಸಮರ್ಪಕ ಪೌಷ್ಟಿಕತೆ ಸೂಚಿಸುವ ಸಹಜ ಎತ್ತರ ಅಥವಾ ವಯಸ್ಸಿಗೆ ತಕ್ಕ ಎತ್ತರ–ತೂಕ, ಪೌಷ್ಟಿಕಾಂಶದ ಕೊರತೆಗಳು (ವಿಶೇಷವಾಗಿ ಕಬ್ಬಿಣ, ಅಯೋಡಿನ್‌ನಂತಹ ಸೂಕ್ಷ್ಮ ಪೌಷ್ಟಿಕಾಂಶಗಳು), ಪದೇಪದೇ ಅನಾರೋಗ್ಯಕ್ಕೀಡಾಗದಂತೆ ತಡೆಯಬಲ್ಲ ಸಮಗ್ರ ರೋಗ ನಿರೋಧಕ ವ್ಯವಸ್ಥೆ ಮತ್ತು ಕಲಿಕೆಯ ಪ್ರಕ್ರಿಯೆಯಲ್ಲಿ ಬುದ್ಧಿಪೂರ್ವಕ ಮತ್ತು ಸಾಮಾಜಿಕವಾಗಿ ತೊಡಗಿಸಿಕೊಳ್ಳಲಾಗದಿರುವುದು ಮುಂತಾದ ಹಲವಾರು ಅಂಶಗಳು ಶಾಲಾ ಮಕ್ಕಳಲ್ಲಿ ಮತ್ತು ಹದಿಹರೆಯದವರಲ್ಲಿ ಸಾಮಾನ್ಯ ಬೆಳವಣಿಗೆಯನ್ನು ನಿರ್ಧರಿಸುತ್ತವೆ.

ಸ್ಥೂಲ ಹಾಗೂ ಸೂಕ್ಷ್ಮ ಪೌಷ್ಟಿಕತೆ, ಶುದ್ಧ ಕುಡಿಯುವ ನೀರು ಮತ್ತು ನೈರ್ಮಲ್ಯ ಸೌಕರ್ಯಗಳು ಹಾಗೂ ಆರೋಗ್ಯ, ಪೌಷ್ಟಿಕಾಂಶದ ಶಿಕ್ಷಣ ಶಾಲಾ ಕೇಂದ್ರಿತ ಪೌಷ್ಟಿಕತೆ ಮತ್ತು ಆರೋಗ್ಯದ ಮಧ್ಯಪ್ರವೇಶವು, ಉತ್ತಮ ಆರೋಗ್ಯ ಮತ್ತು ಕಲಿಕೆಯ ದೃಷ್ಟಿಯಿಂದ ಗಮನ ಹರಿಸಲೇಬೇಕಾದ ನಿರ್ಣಾಯಕ ಅಂಶಗಳು. ಅಂತಹ ಮಧ್ಯಪ್ರವೇಶಗಳನ್ನು ಸಮಗ್ರ ಮತ್ತು ಸಮರ್ಪಕವಾಗಿ ಅಳವಡಿಸಿಕೊಂಡಲ್ಲಿ ದೂರಾಲೋಚನೆಯ ಧನಾತ್ಮಕವಾದ ವ್ಯಾಪಕ ಫಲಿತಾಂಶಗಳನ್ನು ಕಾಣಬಹುದು.

**ತರಗತಿಯಲ್ಲಿರುವ ಪೌಷ್ಟಿಕಾಂಶದ ಸಮಸ್ಯೆಗಳನ್ನು ಗುರುತಿಸುವುದು**

ತರಗತಿಯಲ್ಲಿ ಹಸಿದುಕೊಂಡಿರುವುದು ಬಹಳ ಸಾಮಾನ್ಯವಾದ ಸಮಸ್ಯೆಯಾಗಿದ್ದು, ಇದು ಮಗು ಮತ್ತು ಕಲಿಕೆಯ ಪ್ರಕ್ರಿಯೆಗೆ ತೊಂದರೆ ಕೊಡುತ್ತದೆ. ಹಸಿದ ಮಗುವಿನಲ್ಲಿ ಈ ಕೆಳಗಿನ ಕೆಲವು ಚಿಹ್ನೆಗಳು ಮತ್ತು ಲಕ್ಷಣಗಳನ್ನು ಕಾಣಬಹುದು:

- ಸುಸ್ತು ಮತ್ತು ಕಿರಿಕಿರಿಯಾಗುವುದು, ಅತ್ಯಧಿಕ ಆತಂಕ
- ಶಕ್ತಿಯ ಕೊರತೆ
- ಏಕಾಗ್ರತೆ ಸಾಧ್ಯವಾಗದಿರುವುದು
- ಯಾವಾಗಲೂ ನೆಗಡಿ ಕಾಣಿಸುವುದು
- ಖಿನ್ನತೆ, ದುಃಖ, ಕಣ್ಣೀರು
- ಗುಂಪಿನೊಂದಿಗೆ ಬೆರೆಯಲು ನಿರಾಸಕ್ತಿ, ಆಕ್ರಮಣಕಾರಿ ಮನಸ್ಥಿತಿ ಮತ್ತು ವಿಚ್ಛಿದ್ರಕಾರಿ ವರ್ತನೆ
- ಪದೇಪದೇ ಅನಾರೋಗ್ಯ ಅಥವಾ ಗುಣಮುಖರಾಗಲು ವಿಳಂಬವಾಗುವುದು ಸುದೀರ್ಘ ಸಮಯ ತೆಗೆದುಕೊಳ್ಳುವುದು
- ಬೆಳವಣಿಗೆಯಲ್ಲಿ ಕುಂಠಿತ, ದೇಹದ ತೂಕದಲ್ಲಿ ಇಳಿಕೆ, ಮಾಂಸಖಂಡ ಅಥವಾ ಕೊಬ್ಬು ಗಣನೀಯ ಇಳಿಕೆ
- ಕಲಿಕೆಯಲ್ಲಿ ತೊಂದರೆಗಳು

**ಮಕ್ಕಳಲ್ಲಿ ಪೌಷ್ಟಿಕಾಂಶದ ಕೊರತೆಗೆ ಕಾರಣವಾಗುವ ಹಲವು ಅಂಶಗಳಲ್ಲಿ ಕೆಲವು ಹೀಗಿವೆ:**

- ತೀವ್ರವಾದ ಬಡತನ ಮತ್ತು ಕುಟುಂಬದಲ್ಲಿ ಆಹಾರ ಸೇವನೆಯ ಪರ್ಯಾಪ್ತತೆ ಮತ್ತು ವೈವಿಧ್ಯತೆಯನ್ನು ನಿರ್ಧರಿಸುವ ಭೂಮಿಯ ಒಡೆತನ ಮತ್ತು ಮಾತೃಶಿಕ್ಷಣದಂತಹ ಇತರ ಸಮಾಜೋ–ಆರ್ಥಿಕ ಅಂಶಗಳು
- ಶುದ್ಧ ನೀರು ಮತ್ತು ನೈರ್ಮಲ್ಯದ ಕೊರತೆಯಿಂದಾಗಿ ದೊಡ್ಡ ಪ್ರಮಾಣದಲ್ಲಿ ರೋಗ ಹರಡುವಿಕೆಯ ಸಾಧ್ಯತೆ, ಪದೇಪದೇ ಅನಾರೋಗ್ಯಕ್ಕೆ ತುತ್ತಾಗುವುದು ಅದರ ಪರಿಣಾಮವಾಗಿ ಅಪೌಷ್ಟಿಕತೆ ಉಂಟಾಗುವುದು.
- ಮಗುವಿನ ಪೌಷ್ಟಿಕಾಂಶ ಅಗತ್ಯತೆಗಳ ಬಗ್ಗೆ ಸಮುದಾಯದಲ್ಲಿ ತಿಳುವಳಿಕೆ ಮತ್ತು ಜಾಗೃತಿಯ ಕೊರತೆ
- ಸರ್ಕಾರಿ ಕಾರ್ಯಕ್ರಮಗಳ ಕಳಪೆ ಅನುಷ್ಠಾನದ, ಪರಿಣಾಮವಾಗಿ ಮಕ್ಕಳಿಗೆ ಸಮತೋಲಿತ ಆಹಾರ ಲಭ್ಯವಾಗದಿರುವುದು.

ಈ ಎಲ್ಲಾ ಸಮಸ್ಯೆಗಳಿಗೆ ಶಾಲೆಯಿಂದ ಮಾತ್ರ ಪರಿಹಾರ ಸಾಧ್ಯ ಎಂದಲ್ಲ. ಆದರೆ, ತಮ್ಮ ಮಕ್ಕಳ ಪೌಷ್ಟಿಕತೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಶಾಲೆಗಳು ಏನು ಕ್ರಮ ಕೈಗೊಳ್ಳಬಹುದು ಎಂಬುದರ ಬಗ್ಗೆ ಮುಂದಿನ ಭಾಗದಲ್ಲಿ ನೋಡೋಣ.

**ನೀವೇನು ಮಾಡಬಹುದು?**

'ಸಮಗ್ರ ಶಾಲಾ ವಿಧಾನ'

ಮಕ್ಕಳಲ್ಲಿ ಪೌಷ್ಟಿಕತೆಯ ಅವಶ್ಯಕತೆಯನ್ನು ಶಾಲೆಗಳು ಒಂದು ವ್ಯವಸ್ಥಿತ, ನ್ಯಾಯಸಮ್ಮತ ಮತ್ತು ಸೂಕ್ಷ್ಮ ರೀತಿಯಲ್ಲಿ ನಿಭಾಯಿಸುವುದು ನಿರ್ಣಾಯಕ ಅಂಶ. ಇದಕ್ಕಾಗಿಯೇ ವಿಶ್ವ ಆರೋಗ್ಯ ಸಂಸ್ಥೆ (ಡಬ್ಲ್ಯೂ.ಎಚ್.ಒ, 2006) 'ಸಮಗ್ರ ಶಾಲಾ ವಿಧಾನ'ದ (Whole school Approach) ಸಲಹೆ ನೀಡಿತ್ತು.

ಸಂಕ್ಷಿಪ್ತವಾಗಿ ಹೇಳುವುದಾದರೆ, ಇದು ಮಕ್ಕಳ ಪೌಷ್ಟಿಕತೆ, ಆರೋಗ್ಯ ಮತ್ತು ಅವರನ್ನು ಕ್ರಿಯಾಶೀಲರಾಗಿ ತೊಡಗಿಸಿಕೊಳ್ಳುವಂತೆ ಸಂಬಂಧಪಟ್ಟವರೆಲ್ಲರನ್ನು ಒಗ್ಗೂಡಿಸುವ ಒಂದು ಪ್ರಯತ್ನ. ಶಾಲಾ ಶಿಕ್ಷಕರು ಮತ್ತು ಇತರ ಆಹಾರ ಪೂರೈಕೆದಾರರು (ಬಾಣಸಿಗರು, ಸಹಾಯಕರು) ಮಾತ್ರವಲ್ಲದೆ, ಮಕ್ಕಳ ಕುಟುಂಬ, ಸಮುದಾಯ, ಸ್ಥಳೀಯ ಪಂಚಾಯತ್ ಮತ್ತು ಮುಂಚೂಣಿ ಆರೋಗ್ಯ ಕಾರ್ಯಕರ್ತರನ್ನೂ ಇದು ಒಳಗೊಂಡಿರುತ್ತದೆ.

ಚಿತ್ರ 1: 'ಸಮಗ್ರ ಶಾಲಾ ವಿಧಾನ'ವನ್ನು ವಿವರಿಸುತ್ತದೆ.




(Sustain–2005ನಿಂದ ಅಳವಡಿಸಿಕೊಳ್ಳಲಾಗಿದೆ.
ಶಾಲೆಗಳಿಗೆ ಆಹಾರ ಮತ್ತು ಪೌಷ್ಟಿಕತೆ ನೀತಿ, ಡಬ್ಲ್ಯೂ.ಎಚ್.ಒ, 2006, ಪುಟ 10)

ಈ ವಿಧಾನವನ್ನು ಅನುಸರಿಸಿ, ನಿಮ್ಮ ಶಾಲೆಯಲ್ಲಿ ಆರೋಗ್ಯ ಮತ್ತು ಪೌಷ್ಟಿಕತೆಯ ಮಟ್ಟವನ್ನು ಹೆಚ್ಚಿಸಲು ಹಲವು ಕ್ರಮಗಳಿವೆ.

1. ಒಂದು ಪ್ರಧಾನ ಕ್ರಿಯಾಪಡೆಯ ರಚನೆ

ಈಗಾಗಲೇ ಅನೇಕ ಶಾಲೆಗಳಲ್ಲಿ ಶಾಲಾಭಿವೃದ್ಧಿ ಮತ್ತು ಮೇಲ್ವಿಚಾರಣಾ ಸಮಿತಿ (ಎಸ್.ಡಿ.ಎಂ.ಸಿ.)ಗಳು ಅಸ್ತಿತ್ವದಲ್ಲಿವೆ. ವಿವಿಧ ಭಾಗೀದಾರರು ಸದಸ್ಯರಾಗಿರುವುದರಿಂದ ಇದು ಪ್ರಮುಖ ಕ್ರಿಯಾ ಪಡೆಯಾಗಿರುತ್ತದೆ. ಆದರೆ, ಎಸ್.ಡಿ.ಎಂ.ಸಿ. ಸದಾ ಕ್ರಿಯಾಶೀಲವಾಗಿರುವುದಿಲ್ಲ ಮತ್ತು ನಿಯಮಿತವಾಗಿ ಸಭೆ ಸೇರುವುದಿಲ್ಲ. ಎಸ್.ಡಿ.ಎಂ.ಸಿ ಪ್ರತಿ ತಿಂಗಳ ನಿಗದಿತ ದಿನದಂದು ನಿಯಮಿತವಾಗಿ ಸಭೆ ಸೇರುವುದನ್ನು ಖಾತರಿಪಡಿಸಿಕೊಳ್ಳಬೇಕು. ಸಭೆಯ ನಡಾವಳಿಯು ಮೂಲಸೌಕರ್ಯ ಮತ್ತು ನಿರ್ವಹಣೆ (ಶೌಚಾಲಯ, ನೀರು ಪೂರೈಕೆ), ವಿದ್ಯಾರ್ಥಿಗಳ ಕಲ್ಯಾಣ ಮತ್ತು ಸರ್ಕಾರಿ ಕಾರ್ಯಕ್ರಮಗಳ ಅನುಷ್ಠಾನವನ್ನು ಒಳಗೊಂಡಿರಬೇಕು.

**ಗಂಭೀರವಾಗಿ ಮೇಲ್ವಿಚಾರಣೆ ಮಾಡಲೇಬೇಕಾದ ಎರಡು ಸಂಗತಿಗಳೆಂದರೆ:**

• ಮಧ್ಯಾಹ್ನದ ಬಿಸಿಯೂಟದ ಯೋಜನೆ (Mid-Day Meal Scheme -MDMS) ಒಂದರಿಂದ ಎಂಟನೇ ತರಗತಿಯವರೆಗಿನ ಎಲ್ಲಾ ಮಕ್ಕಳಿಗೆ ಶಾಲೆಯಲ್ಲೇ ತಯಾರಿಸಿದ ಮಧ್ಯಾಹ್ನದ ಬಿಸಿಯೂಟವನ್ನು ಈ ಯೋಜನೆಯು ಒದಗಿಸುತ್ತದೆ. ಮಕ್ಕಳಿಗೆ ಪೌಷ್ಟಿಕಾಂಶಯುಕ್ತ ಮತ್ತು ಸಮತೋಲಿತ ಆಹಾರವನ್ನು ಒದಗಿಸುವ ಮೂಲಕ ತರಗತಿಯಲ್ಲಿ ಮಕ್ಕಳ ಹಸಿವು ನೀಗಿಸುವುದು ಈ ಯೋಜನೆಯ ಉದ್ದೇಶ. ಇದರಲ್ಲಿ ಅನ್ನ ಅಥವಾ ಚಪಾತಿ, ಜೊತೆಗೆ ಬೇಳೆ, ತರಕಾರಿಯ ಪದಾರ್ಥವೂ ಒಳಗೊಂಡಿರುತ್ತದೆ. ಅಕ್ಕಿ ಅಥವಾ ಗೋಧಿಯನ್ನು ಸರ್ಕಾರವೇ ನೇರವಾಗಿ ಶಾಲೆಗಳಿಗೆ ಪೂರೈಸುತ್ತದೆ. ಆದರೆ ಬೇಳೆ ಮತ್ತು ತರಕಾರಿಗಳನ್ನು ಪ್ರತಿ ಮಗುವಿನ ಲೆಕ್ಕಾಚಾರದಲ್ಲಿ ಸರ್ಕಾರವೇ ನೀಡುವ ಅತ್ಯಲ್ಪ ಅನುದಾನದಲ್ಲಿ ಶಾಲೆಗಳೇ ಖರೀದಿಸಬೇಕು. ಮಧ್ಯಾಹ್ನದ ಈ ಊಟವನ್ನು ಇನ್ನಷ್ಟು ಪೌಷ್ಟಿಕಾಂಶಯುಕ್ತವಾಗಿಸಲು ಎಸ್.ಡಿ.ಎಂ.ಸಿ ಯು ಸ್ಥಳೀಯ ಪಂಚಾಯತ್ ಅಥವಾ ಊರವರಿಂದ ಧನಸಹಾಯ ಪಡೆಯಬಹುದು. ಕೆಲವು ಕಡೆ ಊರವರು ಅಥವಾ ಸ್ಥಳೀಯ ರೈತರು ಋತುಮಾನಕ್ಕನುಗುಣವಾದ ತರಕಾರಿಗಳು ಮತ್ತು ಹಣ್ಣುಗಳನ್ನು (ಸೀಬೆಹಣ್ಣು, ಪಪ್ಪಾಯಿ ಅಥವಾ ಬಾಳೆಹಣ್ಣಿನಂಥ ಅತಿಹೆಚ್ಚು ಪೌಷ್ಟಿಕಾಂಶವುಳ್ಳ ಸ್ಥಳೀಯ ಹಣ್ಣುಗಳು), ಕಡಲೆಬೀಜದ ಚಿಕ್ಕಿಯಂತಹ ಬೆಳಗಿನ ಉಪಾಹಾರವನ್ನು ಉಚಿತವಾಗಿಯೋ, ಕಡಿಮೆ ದರದಲ್ಲಿಯೋ ಒದಗಿಸುವ ನಿದರ್ಶನಗಳೂ ಉಂಟು. ಅಥವಾ ಶಾಲೆಯಲ್ಲೇ ಕೈತೋಟ ನಿರ್ಮಿಸಿ ತರಕಾರಿ ಬೆಳೆಯುವ ನಿಟ್ಟಿನಲ್ಲಿ ಊರ ದಾನಿಗಳ ನೆರವನ್ನು ಎಸ್.ಡಿ.ಎಂ.ಸಿ.ಯು ಪಡೆಯಬಹುದು. ಇದು ತರಕಾರಿಯ ಖರ್ಚುವೆಚ್ಚವನ್ನು

ನಿಭಾಯಿಸಲು ನೆರವಾಗುವುದರ ಜೊತೆಗೆ, ಮಕ್ಕಳಿಗೆ ಜೀವವಿಜ್ಞಾನ ಮತ್ತು/ಅಥವಾ ಪರಿಸರ ವಿಜ್ಞಾನ ಪಠ್ಯದ ಭಾಗವಾಗಿಯೂ ಸಹಾಯಕವಾದೀತು.

* ಶಾಲಾ ಆರೋಗ್ಯ ಕಾರ್ಯಕ್ರಮ (ಎಸ್.ಎಚ್.ಪಿ.): ಎಸ್.ಎಚ್.ಪಿ.ಯು ಎಲ್ಲಾ ಮಕ್ಕಳಿಗೆ ವಿಟಮಿನ್ ಎ ಮತ್ತು ಕಬ್ಬಿಣದ ಅಂಶವುಳ್ಳ ಪೂರಕ ಔಷಧಿ ಮತ್ತು ಜಂತು ಹುಳ ನಿವಾರಣೆ ಔಷಧವನ್ನು ನೀಡುವುದರ ಜೊತೆಗೆ ಸಾಮಾನ್ಯ ಆರೋಗ್ಯ ತಪಾಸಣೆಯನ್ನು ಮಾಡುತ್ತದೆ. ಇದಕ್ಕಾಗಿ ಎಸ್.ಡಿ.ಎಂ.ಸಿಯು ಸ್ಥಳೀಯ ಆರೋಗ್ಯ ಕೇಂದ್ರ/ಎ.ಎನ್.ಎಂ. ಜೊತೆ ನಿರಂತರ ಸಂಪರ್ಕ ಇರಿಸಿಕೊಂಡು ಮಕ್ಕಳಿಗೆ ನಿಯಮಿತ ಆರೋಗ್ಯ ತಪಾಸಣೆ ಮತ್ತು ಪೂರಕ ಪೋಷಕಾಂಶಗಳ ಪೂರೈಕೆಯಾಗುವಂತೆ ನೋಡಿಕೊಳ್ಳುತ್ತದೆ. ಜೊತೆಗೆ ಈ ಸಂಬಂಧ ಪೂರ್ವ ನಿಗದಿತ ಅವಧಿಯಲ್ಲಿ ಪ್ರತಿ ವಿದ್ಯಾರ್ಥಿಗೂ 'ವಿದ್ಯಾರ್ಥಿ ಆರೋಗ್ಯ ಕಾರ್ಡ್– ನೀಡಿ ನಿರ್ವಹಿಸಿ ನಿಯಮಿತವಾಗಿ ಮಾಹಿತಿ ದಾಖಲಿಸುವುದನ್ನೂ ಖಾತರಿಪಡಿಸುತ್ತದೆ. ಇದರಿಂದ, ಮಕ್ಕಳಲ್ಲಿ ಇರಬಹುದಾದ ಸಣ್ಣಪುಟ್ಟ ಸಮಸ್ಯೆಗಳನ್ನು ಆರಂಭದಲ್ಲೇ ಪತ್ತೆ ಹಚ್ಚಿ ತಕ್ಷಣ ಚಿಕಿತ್ಸೆ ಕೊಡಿಸಬಹುದು ಹಾಗೂ ಮಗು ಶಾಲೆಗೆ ಹೆಚ್ಚು ರಜೆ ಮಾಡುವುದನ್ನು ತಪ್ಪಿಸಬಹುದು. ಇದಕ್ಕೆ ಪೂರಕವಾಗಿ, ನಿಯಮಿತವಾದ ಆರೋಗ್ಯ ತಪಾಸಣೆ ಮತ್ತು ದಾಖಲಾತಿ–ಯಿಂದಾಗಿ ಮಕ್ಕಳ ಬೆಳವಣಿಗೆಯ ಬಗ್ಗೆ ಅಂದರೆ, ಎತ್ತರ ಮತ್ತು ತೂಕ ಇತ್ಯಾದಿ ಮೇಲೆ ನಿಗಾ ಇಟ್ಟು ಮಕ್ಕಳಿಗೆ ಪೌಷ್ಟಿಕಾಂಶಗಳ ಕೊರತೆಯಾಗದಂತೆ ಖಚಿತಪಡಿಸಿಕೊಳ್ಳಬಹುದು.[i]

2. ಮೂಲಸೌಕರ್ಯವನ್ನು ಖಾತ್ರಿಪಡಿಸುವುದು

ಶಾಲೆಗಳಲ್ಲಿ ನೀರು, ನೈರ್ಮಲ್ಯ ಮತ್ತು ಶುಚಿತ್ವದ ಶಿಕ್ಷಣ (Water, Sanitation and Hygiene Education -WASH) ಒಂದು ಕಾರ್ಯತಂತ್ರವಾಗಿದ್ದು, ಎಲ್ಲಾ ಮಕ್ಕಳಿಗೆ ಶುದ್ಧ ನೀರು ಮತ್ತು ನೈರ್ಮಲ್ಯದ ಸೌಲಭ್ಯವನ್ನು ಒದಗಿಸುತ್ತದೆ. ಮತ್ತು ಈ ಸೌಲಭ್ಯ ಯಾಕೆ ಅವಶ್ಯ ಎಂಬುದರ ಬಗ್ಗೆ ಮಕ್ಕಳು ಸಂವೇದನಾ–ಶೀಲರಾಗುವಂತೆ ಮಾಡುತ್ತದೆ. ಮಕ್ಕಳು ತಮ್ಮ ದಿನದ ಹೆಚ್ಚಿನ ಅವಧಿಯನ್ನು ಶಾಲೆಯಲ್ಲಿ ಕಳೆಯುವ ಕಾರಣ 'WASH', ಮಕ್ಕಳ ಕಲಿಕೆ, ಆರೋಗ್ಯ ಮತ್ತು ಘನತೆಯ ಮೇಲೆ ವಿಶೇಷವಾಗಿ ಹೆಣ್ಣು ಮಕ್ಕಳ ವಿಚಾರದಲ್ಲಿ ಗಣನೀಯ ಪರಿಣಾಮ ಬೀರುತ್ತದೆ, (ಯುನಿಸೆಫ್ 2018).[ii]

* ಶೇಕಡಾ 60ರಷ್ಟು ಮಕ್ಕಳಿಗೆ ಮಾತ್ರ ತಮ್ಮ ಮನೆಗಳಲ್ಲಿ ನೈರ್ಮಲ್ಯದ (ಶೌಚಾಲಯ) ವ್ಯವಸ್ಥೆ ಇರುತ್ತದೆ. ಹಾಗಾಗಿ, ಅವರಿಗೆ ಖಾಸಗಿಯಾಗಿ ಸ್ವಚ್ಛ ಶೌಚಾಲಯ ವ್ಯವಸ್ಥೆ ಲಭ್ಯವಿರುವ ಏಕೈಕ ಸ್ಥಳ ಎಂದರೆ ಶಾಲೆಯಾಗಿರುತ್ತದೆ. ಹೆಚ್ಚಿನ ಮಕ್ಕಳಿಗೆ ಮನೆಯಲ್ಲಿ ಶುದ್ಧ ನೀರು ಸಿಕ್ಕಿದರೂ ಅದರ ಗುಣಮಟ್ಟ ಬದಲಾವಣೆಯಿರುತ್ತದೆ. ಶಾಲೆಯಲ್ಲಿ ಶುದ್ಧ ನೀರು ಪೂರೈಸುವ ಕಾರಣ ಕೊಳಕು ನೀರಿನಿಂದ ಎದುರಾಗುವ ಕಾಯಿಲೆಗಳ (ಟೈಫಾಯ್ಡ್, ಕಾಮಾಲೆ) ಪ್ರಮಾಣ ಇಳಿಮುಖವಾಗುತ್ತದೆ.

*ಕೈ ತೊಳೆಯುವ ಹವ್ಯಾಸವನ್ನು ಪರಿಚಯಿಸಿ ಸರಿಯಾಗಿ ಅಭ್ಯಾಸ ಮಾಡಿಸುವುದರಿಂದ ಕೋವಿಡ್ 19 ಸೇರಿದಂತೆ ಹಲವು ಬಗೆಯ ಸಾಂಕ್ರಾಮಿಕ ಕಾಯಿಲೆಗಳು ಹರಡುವುದನ್ನು ತಡೆಯಬಹುದು. ಈ ನಿಟ್ಟಿನಲ್ಲಿ ಭಿತ್ತಿಪತ್ರಗಳ ಮೂಲಕ ಸಂದೇಶ ನೀಡುವುದು ಉತ್ತಮ ಮಾರ್ಗವಾಗಿದೆ.[iii]

* 'WASH' ಹೊರತುಪಡಿಸಿದರೆ, ಆಟದ ಮೈದಾನಗಳು ಮಕ್ಕಳ ಸ್ವಾಸ್ಥ್ಯ ಕಾಪಾಡುವ ನಿಟ್ಟಿನಲ್ಲಿ ದೊಡ್ಡ ಪಾತ್ರ ವಹಿಸುತ್ತವೆ. ಸಾಮಾಜಿಕ, ಭಾವನಾತ್ಮಕ ಮತ್ತು ಬೌದ್ಧಿಕ ಬೆಳವಣಿಗೆಗೆ ಕ್ರೀಡೆ ಒಂದು ಧನಾತ್ಮಕ ಶಕ್ತಿಯಿದ್ದಂತೆ. ಇಂದು ಶಾಲಾ ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುವ ಬೊಜ್ಜಿನ ಸಮಸ್ಯೆಗೂ ಕ್ರೀಡೆ ಅತ್ಯುತ್ತಮ ಪರಿಹಾರ.

3. ಪಠ್ಯಕ್ರಮದಲ್ಲಿ ಪೌಷ್ಟಿಕತೆಯ ಸೇರ್ಪಡೆ

ಈಗಾಗಲೇ ಆಹಾರ ಮತ್ತು ಪೌಷ್ಟಿಕತೆ, ಆರೋಗ್ಯ, ಶುಚಿತ್ವ, ನೈರ್ಮಲ್ಯ ಸಂಬಂಧಿ ವಿಷಯಗಳು ಮತ್ತು ಚಟುವಟಿಕೆಗಳು ಶಾಲಾ ಪಠ್ಯದಲ್ಲಿ ಒಳಗೊಂಡಿದೆ. ತರಗತಿ ಶಿಕ್ಷಣಶಾಸ್ತ್ರದಲ್ಲಿ ಅಳವಡಿಸ–ಬಹುದಾದ ಕೆಲವು ವಿಷಯಾಧಾರಿತ ಸಂಗತಿಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ:

**ಕೋಷ್ಟಕ 2: ಒಂದರಿಂದ ಐದನೇ ತರಗತಿವರೆಗಿನ ಪಠ್ಯಕ್ರಮದಲ್ಲಿ ಪ್ರಾಯೋಗಿಕವಾಗಿ ಅಳವಡಿಸಿಕೊಳ್ಳಬಹುದಾದ ಕೆಲವು ವಿಷಯಾಧಾರಿತ ಅಂಶಗಳು**

| ವಿಷಯಾಧಾರಿತ ಅಂಶಗಳು | ಉಪ ವಿಷಯಗಳು |
|---|---|
| **ಆಹಾರ ಮತ್ತು ಪೌಷ್ಟಿಕತೆ** | • ಮಕ್ಕಳು ಕೆಲ ಆಹಾರವನ್ನು ಇಷ್ಟಪಟ್ಟರೆ, ಮತ್ತೆ ಕೆಲವನ್ನು ಇಷ್ಟಪಡುವುದಿಲ್ಲ ಯಾಕೆ?<br>• ಆಹಾರ ಸೇವನೆಗೂ ಮುನ್ನ ತರಕಾರಿ, ಹಣ್ಣುಗಳನ್ನು ಶುಚಿಗೊಳಿಸುವುದು<br>• ಹಣ್ಣಿನ ರಸ ತಯಾರಿ, ಕಾಳು ಮೊಳಕೆಬರಿಸುವುದು, ಹಣ್ಣಿನ ರಸಾಯನ ತಯಾರಿ<br>• ಪಥ್ಯಾಹಾರದ ಕೋಷ್ಟಕ ತಯಾರಿ<br>• ಶಾಲಾ ಕೈತೋಟದ ಮೂಲಕ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದ ಸುಧಾರಣೆ |
| **ನೀರು ಮತ್ತು ನೈರ್ಮಲ್ಯ** | • ಶಾಲೆ ಮತ್ತು ಗ್ರಾಮದಲ್ಲಿ ಶೌಚಾಲಯದ ಸಮೀಕ್ಷೆ: ಯಾರಲ್ಲದೆ, ಯಾರು ಬಳಸುತ್ತಾರೆ?<br>• ಕುಡಿಯುವ ನೀರಿನ ಶುದ್ಧೀಕರಣ ಮತ್ತು ಶೇಖರಣೆ<br>• ನೀರಿನ ಉಳಿತಾಯ– ನೀರಿನ ಸದ್ಬಳಕೆ ಹೇಗೆ ಇತ್ಯಾದಿ |
| **ವೈಯಕ್ತಿಕ ಶುಚಿತ್ವ** | • ಕೈ ತೊಳೆಯುವುದು,<br>• ಹಲ್ಲುಜ್ಜುವುದು, ಆಹಾರ ಸೇವನೆ ಬಳಿಕ ಬಾಯಿ ಮುಕ್ಕಳಿಸುವುದು<br>• ಉಗುರು ಕತ್ತರಿಸುವುದು,<br>• ದೈನಂದಿನ ದೈಹಿಕ ವ್ಯಾಯಾಮ |
| **ತ್ಯಾಜ್ಯ ನಿರ್ವಹಣೆ** | • ಶಾಲೆ ಮತ್ತು ಮನೆಯ ಸುತ್ತಲಿನ ವಾತಾವರಣ ಶುಚಿಯಾಗಿರಿಸಿಕೊಳ್ಳುವುದು<br>• ಕಸದ ಡಬ್ಬದ ಬಳಕೆ<br>• ಒಣ ಮತ್ತು ಹಸಿ ಕಸ ಬೇರ್ಪಡಿಸುವುದು |
| **ಚಿಕಿತ್ಸೆ** | • ಓಆರ್‌ಎಸ್ ಮಾಡುವುದು<br>• ಔಷಧೀಯ ಸಸ್ಯಗಳನ್ನು ನೆರವುದು, ಪ್ರಾಥಮಿಕ ಆವಶ್ಯಕತೆಗಳಿಗೆ ಸಾಂಪ್ರದಾಯಿಕ ಔಷಧದ ಬಳಕೆ<br>• ಪ್ರಥಮ ಚಿಕಿತ್ಸಾ ಪೆಟ್ಟಿಗೆಯನ್ನು ಬಳಸುವುದು |
| **ಆರೋಗ್ಯದ ನಿಗಾವಣೆ** | • * ಥರ್ಮೋಮೀಟರ್ ಬಳಕೆ<br>• *ಉಸಿರಾಟ ಮತ್ತು ನಾಡಿ ಮಿಡಿತದ ಪರೀಕ್ಷೆ<br>• ನಿಯತವಾಗಿ ಎತ್ತರ ಮತ್ತು ತೂಕವನ್ನು ಪರೀಕ್ಷಿಸಿಕೊಳ್ಳುವುದು, ಬಿಎಂಐ ಲೆಕ್ಕಹಾಕುವುದು ಮತ್ತು ಬೆಳವಣಿಗೆಯ ನಕ್ಷೆಯನ್ನು ನಿರ್ವಹಿಸುವುದು<br>• ಆರೋಗ್ಯ ಕಾರ್ಡನ್ನು ನಿರ್ವಹಿಸುವುದು<br>• ಸ್ನೆಲ್ಲೆನ್ ನಕ್ಷೆಯನ್ನು (Snellen chart) ಬಳಸಿ ಕಣ್ಣಿನ ತಪಾಸಣೆ ಮಾಡುವುದು |

ಈ ಕೋಷ್ಟಕವನ್ನು, ಆರೋಗ್ಯ, ಅಭಿವೃದ್ಧಿ ಮತ್ತು ಸೊಸೈಟಿ (Health, Development and Society team) ತಂಡವು ಕಾರ್ಯ ಮತ್ತು ಶಿಕ್ಷಣ ತಂಡದ ಸಹಭಾಗಿತ್ವದೊಂದಿಗೆ ಅಭಿವೃದ್ಧಿಪಡಿಸಿದೆ. ಕರ್ನಾಟಕ ಸರ್ಕಾರದ ಶಾಲಾ ಪಠ್ಯಪುಸ್ತಕಗಳು ಮತ್ತು ಜಾಗತಿಕವಾಗಿ ಶಾಲೆಗಳಲ್ಲಿನ ಯಶಸ್ವೀ ಉಪಕ್ರಮಗಳ ಮೇಲಿನ ಸಾಹಿತ್ಯವನ್ನು ವಿಶ್ಲೇಷಣೆ ಮಾಡಿ ರಚಿಸಲಾಗಿದೆ.

**ಸೂಚನೆ**: ಈ ಉಪ ವಿಷಯಗಳು ಪಠ್ಯಪುಸ್ತಕಗಳಲ್ಲಿಲ್ಲವಾದರೂ ಅಪೌಷ್ಟಿಕತೆಗೆ ಸಂಬಂಧಿಸಿದ್ದಾದುದರಿಂದ ಇಲ್ಲಿ ಸೇರಿಸಲಾಗಿದೆ.

4. ಸಮುದಾಯದೊಂದಿಗೆ ನಂಟು ಏರ್ಪಡಿಸುವುದು

ಬಹುತೇಕ ಕುಟುಂಬಗಳ ಮಕ್ಕಳು ಶಾಲೆಗೆ ಹಾಜರಾಗುವ ಕಾರಣ ಸಮುದಾಯವು ತಮ್ಮ ಮಕ್ಕಳ ಆರೋಗ್ಯ ಮತ್ತು ಸ್ವಾಸ್ಥ್ಯದ ಮೇಲೆ ಹೂಡಿಕೆ ಮಾಡುತ್ತದೆ. ಸಮುದಾಯವನ್ನು ನೇರವಿಗಾಗಿ ಸಂಪರ್ಕಿಸುವುದರಿಂದ ಶಾಲೆಗೆ ಸಂಪನ್ಮೂಲಗಳ ವಿಸ್ತರಣೆಯಾಗುವುದು ಅಷ್ಟೇ ಅಲ್ಲ; ಶಾಲೆಯ ಮಾಲೀಕತ್ವವನ್ನು ಮತ್ತು ಯಶಸ್ಸನ್ನು ಸಮುದಾಯದೊಂದಿಗೆ ಹಂಚಿಕೊಂಡಂತೆಯೂ ಆಗುತ್ತದೆ. ನಿಯಮಿತವಾಗಿಯೋ, ವಿಶೇಷ ಸಂದರ್ಭದಲ್ಲೋ– ಹೆಚ್ಚುವರಿ ಆಹಾರ ಪೂರೈಸುವುದು– ಊಟದ ಸಮಯದಲ್ಲಿ ಅವರು ಎಲ್ಲಾ ಮಕ್ಕಳು ಸರಿಯಾಗಿ ಆಹಾರ ಸೇವಿಸುತ್ತಿದ್ದಾರೋ ಇಲ್ಲವೋ ಎಂದು ಸ್ವಯಂಪ್ರೇರಣೆಯಿಂದ ಮೇಲ್ವಿಚಾರಣೆ ಮಾಡುವುದು, ಸಂತೋಷಕ್ಕಾಗಿ ಮತ್ತು ಅನುಭವ ಗಳಿಕೆಗಾಗಿ ಮಕ್ಕಳನ್ನು ಹೊರಾಂಗಣಕ್ಕೆ ಕರೆದೊಯ್ಯುವುದು, ತರಕಾರಿ ಹೇಗೆ ಬೆಳೆಯುವುದು, ಮೊಳಕೆ ಬರಿಸುವುದು ಹೇಗೆ ಅಥವಾ ಬೇಯಿಸುವುದು ಹೇಗೆ ಎಂಬ ಮಾಹಿತಿಗಳನ್ನು ವಿವರಿಸುವುದು– ಹೀಗೆ ಭಾಗಿಯಾಗುವ ಮೂಲಕ ಊರವರೂ ಮಕ್ಕಳ ಪೌಷ್ಟಿಕತೆ ಮತ್ತು ಆರೋಗ್ಯದ ಬಗ್ಗೆ ತಮ್ಮ ಕೊಡುಗೆಯನ್ನು ಕೊಡಬಹುದು.

ಉಪಸಂಹಾರ

ಅಂತಿಮವಾಗಿ, ಶಾಲೆಗೆ ಹೋಗುವ ಮಕ್ಕಳ ಆರೋಗ್ಯದ ಜವಾಬ್ದಾರಿ ಸಂಘಟಿತವಾದುದು: ಅವನ/ ಅಥವಾ ಅವಳ ಮಾನಸಿಕ ಮತ್ತು ದೈಹಿಕ ಸ್ವಾಸ್ಥ್ಯವನ್ನು ಬೆಂಬಲಿಸುವಂಥ ನಿರ್ಣಾಯಕ ಸೇವೆಗಳನ್ನು

ಒದಗಿಸುವುದು ಸರ್ಕಾರದ ಹೊಣೆ; ಸರ್ಕಾರವು ಗುಣಮಟ್ಟ ಮತ್ತು ಪಾರದರ್ಶಕವಾಗಿ ಕಾರ್ಯ ನಿರ್ವಹಿಸುವಂತೆ ನೋಡಿಕೊಳ್ಳುವುದು ಸಮುದಾಯದ ಹೊಣೆ ಹಾಗೂ ತಮ್ಮ ಮಕ್ಕಳಿಗೆ ಉತ್ತಮ ಪೋಷಕಾಂಶಯುಕ್ತ ಆಹಾರ ದೊರಕುತ್ತಿದೆ ಎಂಬುದನ್ನು ಖಾತರಿಪಡಿಸಿಕೊಳ್ಳುವುದು ಪೋಷಕರ ಹೊಣೆಯಾಗಿರುತ್ತದೆ.

ಆದಾಗ್ಯೂ, ಮಕ್ಕಳಿಗೆ ಅವಶ್ಯವಿರುವ ಸೇವೆಗಳು ತಲುಪುವುದನ್ನು ಖಾತರಿಪಡಿಸಿಕೊಳ್ಳುವಲ್ಲಿ ಶಾಲೆಗಳು ಪ್ರಧಾನ ಪಾತ್ರ ವಹಿಸುತ್ತವೆ. ಹಲವು ಕಾರಣಗಳಿಗೆ ಇವು ಮಹತ್ವದ್ದು.

* ಬಾಲ್ಯಪೂರ್ವದ ಆರೋಗ್ಯ ಮತ್ತು ಪೌಷ್ಟಿಕತೆ ಕಾರ್ಯಕ್ರಮಗಳು ಮಕ್ಕಳಿಗೆ ಸಿಗುವಂತೆ ಮಾಡುತ್ತದೆ; ಉದಾಹರಣೆಗೆ– ಸಮಗ್ರ ಶಿಶು ಕಲ್ಯಾಣ ಯೋಜನೆ. (Integrated Child Development Scheme).

* ಶಾಲೆಯಲ್ಲಿ ಏಕಕಾಲಕ್ಕೆ ಹಲವಾರು ಮಕ್ಕಳು ಸೇರುವ ಕಾರಣ ಪೌಷ್ಟಿಕತೆಯ ಸೇವೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಾಧ್ಯ.

* ಉತ್ತಮ ಆರೋಗ್ಯ ಮತ್ತು ಪೌಷ್ಟಿಕತೆಯು ಶಾಲೆಯ ಮೂಲ ಉದ್ದೇಶವಾದ ಕಲಿಕೆಯನ್ನು ಉತ್ತೇಜಿಸುತ್ತದೆ ಎಂಬುದು ಈಗಾಗಲೇ ಸಾಬೀತಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ, ಶಾಲೆಯ ಆರೋಗ್ಯ ಮತ್ತು ಪೌಷ್ಟಿಕತೆ ಕಾರ್ಯಕ್ರಮಗಳು ಭಾರತದ ಎಲ್ಲರಿಗೂ ಶಿಕ್ಷಣದ ಗುರಿಯನ್ನು ಸಾಧಿಸಲು ಬೇಕಾದ ಮೂಲಭೂತ ಅವಶ್ಯಕತೆಯಾದ ವಿದ್ಯಾರ್ಥಿಯು 'ಹಾಜರಿ, ಸಿದ್ಧತೆ ಮತ್ತು ಕಲಿಕೆಗೆ ಸಮರ್ಥ'[iv] ಎಂಬುದನ್ನು ಖಾತ್ರಿಪಡಿಸುತ್ತದೆ.


**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**

*i.* *ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಆರೋಗ್ಯ, ಅಭಿವೃದ್ಧಿ ಮತ್ತು ಸಮಾಜ ತಂಡವು ಮಗುವಿನ ಬೆಳವಣಿಗೆ ಮೌಲ್ಯಮಾಪನಕ್ಕೆ ಅವಶ್ಯವಾದ ಕೆಲವು ಸಾಧನಗಳ ಪಟ್ಟಿ ಅಭಿವೃದ್ಧಿಪಡಿಸಿದ್ದು, ಅದನ್ನು ವೀಕ್ಷಿಸಲು ಈ ಕೊಂಡಿಯನ್ನು ಬಳಸಿ: *https://sites.google.com/a/apu.edu.in/the-nutrition-project/teaching-learning-materials*

*ii* *UNICEF (2018). WASH in Schools. https://data.unicef.org/topic/water-and-sanitation/wash-in-schools/ (accessed June 4, 2020).*

*iii* *https://www.nhp.gov.in/hand-washing_pg*

*iv* *Bundy et al. School-based Health and Nutrition Programs. Disease Control Priorities Project 2nd. Edition. https://www.ncbi.nlm.nih.gov/books/NBK11783/*


---




**ಶ್ರೀಲತಾ ರಾವ್ ಶೇಷಾದ್ರಿ** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ ಬೆಂಗಳೂರಿನಲ್ಲಿ ಸಾರ್ವಜನಿಕ ಆರೋಗ್ಯ ಉಪಕ್ರಮ ವಿಭಾಗದಲ್ಲಿ ಪ್ರಾಧ್ಯಾಪಕಿ ಮತ್ತು ಕಾರ್ಯಕ್ರಮ ನಿರೂಪಕಿಯಾಗಿದ್ದಾರೆ. ಅವರು ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿ ಸುಮಾರು ಮೂರು ದಶಕಗಳಿಂದ ಸಂಶೋಧನೆ, ಅಭ್ಯಾಸ ಮತ್ತು ಬೋಧನೆಯಲ್ಲಿ ತೊಡಗಿದ್ದಾರೆ. ಅವರು ಹಲವಾರು ವೃತ್ತಿಪರ ಸ್ಥಾನಗಳಲ್ಲಿ, ದ್ವಿಪಕ್ಷೀಯ ಏಜೆನ್ಸಿಗಳಲ್ಲಿ, ಜಾಗತಿಕ ಸಂಶೋಧನಾ ಉಪಕ್ರಮಗಳು ಮತ್ತು ತಳಮಟ್ಟದಲ್ಲಿ ಸರ್ಕಾರೇತರ ಸಂಸ್ಥೆಗಳು ಮುಂತಾದೆಡೆ ಕಾರ್ಯನಿರ್ವಹಿಸಿದ್ದಾರೆ. ಆರೋಗ್ಯ ನೀತಿ ಮತ್ತು ವ್ಯವಸ್ಥೆಯ ಅಧ್ಯಯನ ಅವರ ಪ್ರಮುಖ ಸಂಶೋಧನಾ ಕ್ಷೇತ್ರವಾಗಿದ್ದು, ಮೌಲ್ಯಮಾಪನದ ಬಗ್ಗೆ ವಿಶೇಷ ಕಾಳಜಿಯನ್ನು ಹೊಂದಿದ್ದಾರೆ. ಶ್ರೀಲತಾ ಅವರು ಪ್ರಾಥಮಿಕ ಶಾಲಾ ಮಕ್ಕಳು ಎದುರಿಸುವ ಪೌಷ್ಟಿಕಾಂಶದ ಕೊರತೆ, ಸಾಂಪ್ರದಾಯಿಕ ಆಹಾರ ಕ್ರಮ ಮತ್ತು ಅವುಗಳ ರೂಪಾಂತರ ಮತ್ತು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಎದುರಿಸುತ್ತಿರುವ ಆರೋಗ್ಯ ಮತ್ತು ಪೌಷ್ಟಿಕಾಂಶದ ಕೊರತೆಗೆ ಕಾರಣವಾಗಿರುವ ಆಡಳಿತಾತ್ಮಕ ಸಮಸ್ಯೆಗಳೂ ಸೇರಿದಂತೆ ಸಾರ್ವಜನಿಕ ಆರೋಗ್ಯ ಸಮಸ್ಯೆಗಳ ಕುರಿತು ಅನೇಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಶ್ರೀಲತಾ ಅವರನ್ನು ಈ ಮುಂದಿನ ಇ–ಮೇಲ್‌ನಲ್ಲಿ ಸಂಪರ್ಕಿಸಬಹುದು: shreelata.seshadri@azimpremjifoundation.org


---


ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**

# ಉದ್ಯಾನಕ್ಕೆ ಚಿಟ್ಟೆಗಳಂತೆ ಕಲಿಕಾ ಬೋಧನಾ ಉಪಕರಣಗಳತ್ತ ಮಕ್ಕಳು ಆಕರ್ಷಿತರಾಗುತ್ತಾರೆ

ಆದಿತ್ಯ ಗುಪ್ತ

ಮಕ್ಕಳ ಮನಸ್ಸೂ ಉದ್ಯಾನದಲ್ಲಿರುವ ಚಿಟ್ಟೆಗಳಂತೆ ವಿವಿಧ ಬಣ್ಣದ ಹೂಗಳೆಡೆಗೆ ಮತ್ತು ಅವುಗಳ ಮನಮೋಹಕ ಸುಗಂಧದೆಡೆ ಆಕರ್ಷಿತವಾಗುತ್ತಾ ಇರುತ್ತದೆ. ಮಕ್ಕಳು ತಮ್ಮ ಸುತ್ತಮುತ್ತಲಿನ ಆಗುಹೋಗುಗಳನ್ನು ಮತ್ತು ಚಟುವಟಿಕೆಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಾರೆ ಮತ್ತು ಬಹಳ ಸಣ್ಣ ಬದಲಾವಣೆಗೂ ಅವರು ಪ್ರತಿಕ್ರಿಯಿಸುತ್ತಾರೆ. ಅವರು ಯಾವುದೇ ಚಟುವಟಿಕೆಯನ್ನು ಅಥವಾ ಬದಲಾವಣೆಯನ್ನು ಅವರದೇ ಗ್ರಹಿಕೆ ಮತ್ತು ಪೂರ್ವಜ್ಞಾನದ ಮೇಲಿನಿಂದ ಅರ್ಥೈಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ ಮತ್ತು ತಮ್ಮದೇ ಆಲೋಚನೆಗಳನ್ನು ರೂಪಿಸಿಕೊಳ್ಳುತ್ತಾರೆ. ಇಲ್ಲಿಂದಲೇ ಶಿಕ್ಷಕರೊಬ್ಬರ ಪಾತ್ರವು ಪ್ರಾರಂಭವಾಗುತ್ತದೆ.

ಹಾಗಾಗಿ, ಶಿಕ್ಷಕರೊಬ್ಬರಿಗೆ ಇರುವ ಇತರೆಲ್ಲ ಪಾತ್ರ ಮತ್ತು ಜವಾಬ್ದಾರಿಗಳ ಜೊತೆಗೆ ಬಹುಶಃ ಇನ್ನೊಂದು ಪಾತ್ರವೂ ಇದೆ– ಎಲ್ಲರನ್ನೂ ಆಕರ್ಷಿಸುವಂತಹ, ಯಥೇಚ್ಛ ಬಣ್ಣಗಳಿಂದ ಅಲಂಕೃತವಾದ ಸುಂದರ ಉದ್ಯಾನವನವನ್ನು ನಿರ್ಮಿಸುವ ಓರ್ವ ಮಾಲಿಯ ಪಾತ್ರ. ಇಲ್ಲಿ, 'ಉದ್ಯಾನವನ' ಎಂಬ ಪದವು ತರಗತಿಯ ಒಳಗೆ ಮತ್ತು ಹೊರಗೆ ಎರಡೂ ಕಡೆ ಮಕ್ಕಳಿಗೆ ಹೊಸದನ್ನು ಕಲಿಯುವುದಕ್ಕೆ ಪ್ರೇರಣೆ ಕೊಡುವ ಬೋಧನಾ–ಕಲಿಕಾ ಪರಿಕರಗಳನ್ನು (TLM) ಸೂಚಿಸುತ್ತದೆ. ಶಿಕ್ಷಕರೊಬ್ಬರು ತರಗತಿ ಕೊಠಡಿಯೊಳಗೆ ಪ್ರವೇಶಿಸಿದಾಗ, ಎಲ್ಲಾ ವಿದ್ಯಾರ್ಥಿಗಳೂ ಆಕೆ/ತ ತನ್ನ ಜೊತೆಗೆ ಏನು ಪರಿಕರ ತಂದಿದ್ದಾಳೆ/ನೆ ಎಂದು ನೋಡುತ್ತಾರೆ, ಮತ್ತು ಹೊಸ ಸಾಮಗ್ರಿಗಳ ಮೇಲಿನ ಅವರ ದೃಷ್ಟಿಯೇ ಅವರನ್ನು ತರಗತಿಯಲ್ಲಿ ಸಂಪೂರ್ಣ ತಲ್ಲೀನರಾಗಿಸುತ್ತದೆ.

6ನೇ ತರಗತಿಯ ವಿದ್ಯಾರ್ಥಿಗಳೊಂದಿಗಿನ ಬೋಧನಾ ಸಾಮಗ್ರಿಗಳ ಅಥವಾ ಮಕ್ಕಳ ಕಲಿಕೆಗೆ ಸಹಾಯ ಮಾಡುವ ಟಿಎಲ್ಎಂಗಳ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯುವ, ನನ್ನ ತರಗತಿ ಅನುಭವದ ಒಂದು ಉದಾಹರಣೆಯನ್ನು ಕೊಡಲು ಬಯಸುತ್ತೇನೆ. ಈ ತರಗತಿಯ ವಿದ್ಯಾರ್ಥಿಗಳಲ್ಲಿ ಏಕಾಗ್ರತೆಯ ಸಮಸ್ಯೆಯನ್ನು ಶಿಕ್ಷಕರು ಆಗಾಗ ಎದುರಿಸಬೇಕಾಗುತ್ತಿತ್ತು. ಪ್ರತಿದಿನ ಅವರ ಕೊನೆಯ ಅವಧಿಯು ಸಮಾಜ ವಿಜ್ಞಾನದ ವಿಷಯವಾಗಿರುತ್ತಿತ್ತು. ಆ ವೇಳೆಗೆ ಬಹುಪಾಲು ಎಲ್ಲಾ ವಿದ್ಯಾರ್ಥಿಗಳು ದಣಿದಿರುತ್ತಿದ್ದರು. ಅದರ ಪರಿಣಾಮವಾಗಿ, ನಾನು ಕೂಡಾ ಬಹಳ ಸಮಸ್ಯೆಗಳನ್ನು ಎದುರಿಸಬೇಕಾಗುತ್ತಿತ್ತು. ಬೋಧನಾ ಸಾಮಗ್ರಿಗಳು ವಿದ್ಯಾರ್ಥಿಗಳಲ್ಲಿ ಹೊಸ ವಿಷಯಗಳನ್ನು ಕಲಿಯುವ ಆಸಕ್ತಿಯನ್ನು ಪ್ರೇರೇಪಿಸಿ ನನ್ನನ್ನು ರಕ್ಷಿಸಿದವು. ಜೊತೆಗೆ ತರಗತಿ ಚಟುವಟಿಕೆಗಳೂ ದೊಡ್ಡ ಮಟ್ಟಿಗೆ ಸುಧಾರಣೆಯಾದವು.

'ಭೂಮಿಯ ಪ್ರಮುಖ ವಿಭಾಗಗಳು (Major Domains of the Earth) ಎಂಬ ವಿಷಯಕ್ಕೆ (ಅಧ್ಯಾಯ 5, ಭೂಗೋಳಶಾಸ್ತ್ರ, ಎನ್‌ಸಿಇಆರ್‌ಟಿ) ನನ್ನ ವಿದ್ಯಾರ್ಥಿಗಳಿಗೆ ಭೂಮಿಯ ನಾಲ್ಕು ವಿಭಾಗಗಳನ್ನು ವಿವರಿಸುವುದಕ್ಕೆ ನಾನು ಕೆಲವು ಬೋಧನಾ ಸಾಮಗ್ರಿಗಳನ್ನು ಅಭಿವೃದ್ಧಿ ಪಡಿಸಿದೆ. ಅವುಗಳೆಂದರೆ:

1. ಜಲ ಚಕ್ರದ ಒಂದು ಮಾದರಿ
2. ಸಾಗರಗಳು ಮತ್ತು ಖಂಡಗಳ ಕುರಿತ ಒಗಟು
3. ಭೂಮಂಡಲದ ನೀರಿನ ಹಂಚಿಕೆಯನ್ನು ವಿವರಿಸಲು ಒಂದು ಪಾತ್ರೆ, ಒಂದು ಗಾಜಿನ ನಳಿಕೆ, ಬಣ್ಣದ ನೀರು ಮತ್ತು ಡ್ರಾಪರ್
4. ಖಂಡಗಳ ಗಾತ್ರಗಳಿಗೆ ಸಂಬಂಧಿಸಿದ ಒಂದು ಹಾಳೆ
5. ನೀರಿನ ಸಂರಕ್ಷಣೆ ಮತ್ತು ಅದರ ರಕ್ಷಣೆಯ ಉಪಾಯದ ಕುರಿತ ಒಂದು ಸಾಕ್ಷ್ಯಚಿತ್ರ ಮತ್ತು ನೀರನ್ನು ಉಳಿಸುವುದಕ್ಕೆ ಇರುವ ದಾರಿಗಳಿಗೆ ಸಂಬಂಧಿಸಿದ ಒಂದು ಕ್ರಿಯಾಪತ್ರ.

ಈ ಬೋಧನಾ ಸಾಮಗ್ರಿಗಳ ಕಾರಣದಿಂದ ಎಲ್ಲಾ ವಿದ್ಯಾರ್ಥಿಗಳೂ ತರಗತಿಯಲ್ಲಿ ಚಟುವಟಿಕೆಯಿಂದ ಭಾಗವಹಿಸಿದರು. ಆ ಕಾರಣದಿಂದ ತರಗತಿಯ ಕಲಿಕಾ ಪ್ರಕ್ರಿಯೆಯು ಆಸಕ್ತಿದಾಯಕವಾಯಿತು. ಮತ್ತು ನನಗೆ ಕಲಿಕೆಯನ್ನು ಆಧರಿಸಿದ ಫಲಿತವನ್ನು ಸುಲಭವಾಗಿ ಸಾಧಿಸುವುದಕ್ಕೂ ಆಯಿತು.

ವಿಷಯವನ್ನು ಕಲಿಯುವುದಕ್ಕೆ ಬಳಸಿದ ಬೋಧನಾ ಸಾಮಗ್ರಿಗಳು ಮತ್ತು ತರಗತಿ ಚಟುವಟಿಕೆಗಳಲ್ಲಿ ಕಲಿಕಾ ಬೋಧನಾ ಸಾಮಗ್ರಿಗಳ ಬಳಕೆಯನ್ನು ಇನ್ನು ಮುಂದೆ ವಿವರವಾಗಿ, ಚಿತ್ರ ಸಹಿತವಾಗಿ ವಿವರಿಸಲಾಗಿದೆ.

**ಜಲಗೋಳ (Hydrosphere)**

ಅ) ಪಾತ್ರೆ, ಗಾಜಿನ ಪ್ರನಾಳ, ಬಣ್ಣದ ನೀರು ಮತ್ತು ಡ್ರಾಪರ್‌ಗಳ ಸಹಾಯದಿಂದ ನಾನು ವಿದ್ಯಾರ್ಥಿಗಳಿಗೆ ಭೂಮಿಯ ಮೇಲಿನ ಒಟ್ಟು ನೀರಿನ ಹಂಚಿಕೆಯನ್ನು ವಿವರಿಸಿದೆ. ಹೀಗೆ ವಿದ್ಯಾರ್ಥಿಗಳು ನೀರಿನ ಹಂಚಿಕೆ ಮತ್ತು ಅದರ ಸ್ವರೂಪಗಳ ಕುರಿತು ಕಲಿತರು. ನಾನು ನೀರಿನ ಮಹತ್ವ, ನೀರಿನ ಕುರಿತು ಅರಿವು ಮತ್ತು ಅದರ ಬಳಕೆಯ ಕುರಿತು ಸೂಕ್ಷ್ಮತೆಯನ್ನು ಬೆಳೆಸುವುದಕ್ಕೆ 'When Every Drop Counts', (https://youtu.be/ WxdtmswwHAk) ಎಂಬ ಸಾಕ್ಷ್ಯಚಿತ್ರ ಒಂದರ ಸಹಾಯವನ್ನು ಪಡೆದೆ. ಅದು ರಾಜಸ್ಥಾನದ ಬಾರ್ಮೇರ್ ಜಿಲ್ಲೆಯ ನೀರಿನ ಕೊರತೆಯ ಮತ್ತು ವಿವಿಧ ನೀರು ಸಂರಕ್ಷಣಾ ವಿಧಾನಗಳ ಚಿತ್ರಣವನ್ನು ನೀಡುತ್ತದೆ. ಆ ನಂತರ ನಾನು ವಿದ್ಯಾರ್ಥಿಗಳಿಗೆ ನೀರನ್ನು ಸಂರಕ್ಷಿಸುವುದು ಹೇಗೆ ಎಂಬ ಕುರಿತು ಒಂದು ಕಾರ್ಯಹಾಳೆಯನ್ನು ನೀಡಿದೆ. ಜೊತೆಗೆ ನೀರಿನ ಸಂರಕ್ಷಣೆಯ ಕುರಿತ ಅವರ ಆಲೋಚನೆಗಳನ್ನೂ ಕೇಳಿಸಿಕೊಂಡೆ. ಎಲ್ಲಾ ವಿದ್ಯಾರ್ಥಿಗಳೂ ಕಾರ್ಯಹಾಳೆಯಲ್ಲಿ ಕೊಟ್ಟ ಮಾಹಿತಿಯ ಬಗೆಗೆ ತಮ್ಮ ಪ್ರತಿಕ್ರಿಯೆಯನ್ನು ನೀಡಿದರು. ಆ ಮೇಲೆ ಅವರ ಹಳ್ಳಿ ಮತ್ತು ಪಟ್ಟಣಗಳಲ್ಲಿ ನೀರಿನ ಸಂರಕ್ಷಣೆಗೆ ಅಳವಡಿಸಿರುವ ವಿಧಾನಗಳ ಕುರಿತು ಬರೆದುಕೊಂಡರು.

ಆ) ಜಲ ಚಕ್ರ: ವಿದ್ಯಾರ್ಥಿಗಳಿಗೆ ನೀರಿನ ರೂಪಗಳಲ್ಲಿ ಆಗುವ ಬದಲಾವಣೆಯನ್ನು ಮತ್ತು ಮಳೆ ಹೇಗೆ ಬರುವುದು ಎಂಬುದನ್ನು ವಿವರಿಸುವುದಕ್ಕೆ ನಾನು ಜಲ ಚಕ್ರದ ಒಂದು ಮಾದರಿಯನ್ನು (ಚಿತ್ರ 1) ತಯಾರಿಸಿದೆ. ಈ ಮಾದರಿಯಲ್ಲಿ ವಿದ್ಯಾರ್ಥಿಗಳು

ವಿಶೇಷ ಆಸಕ್ತಿಯನ್ನು ತೋರಿಸಿದರು ಮತ್ತು ಅದು ಅವರ ಮನಸ್ಸುಗಳಲ್ಲಿ ಅಳಿಸಲಾಗದ ಪ್ರಭಾವವನ್ನು ಉಂಟುಮಾಡಿತು.

**ಭೂ ವಲಯ (Lithosphere)**

ನಾನು ಖಂಡಗಳು, ಅವುಗಳ ಸ್ಥಾನ ಮತ್ತು ಅವುಗಳ ಗಾತ್ರಕ್ಕೆ ಅನುಗುಣವಾದ ಹಾಳೆಗಳಿರುವ ಒಂದು ಒಗಟನ್ನು (ಚಿತ್ರ–2) ಸಿದ್ಧಪಡಿಸಿದೆ. ಇದಕ್ಕೂ ಮುನ್ನ ನಾನು ವಿದ್ಯಾರ್ಥಿಗಳನ್ನು ಐದು ಗುಂಪುಗಳಾಗಿ ವಿಂಗಡಿಸಿದೆ. ಪ್ರತಿ ಗುಂಪಿಗೂ ಒಂದು ಖಂಡಕ್ಕೆ ಸಂಬಂಧಿಸಿದ ಒಗಟಿನ ಹಾಳೆಯನ್ನು, ಅದರ ಗಾತ್ರಕ್ಕೆ ತಕ್ಕಂತೆ ಒದಗಿಸಿದೆ. ಅವರಿಗೆ ಅಲ್ಲಿದ್ದ ಚುಕ್ಕೆಗಳನ್ನು ಜೋಡಿಸುವುದಕ್ಕೆ ಸಮಯವನ್ನು ನಿಗದಿಪಡಿಸಿದೆ. ಎಲ್ಲಾ ವಿದ್ಯಾರ್ಥಿಗಳೂ ಉತ್ಸಾಹದಿಂದ ಈ ಚಟುವಟಿಕೆಯಲ್ಲಿ ಭಾಗಿಗಳಾದರು ಮತ್ತು ಖಂಡಗಳ ಕುರಿತು, ಅದರ ಸ್ಥಾನ ಮತ್ತು ಗಾತ್ರ, ಇತ್ಯಾದಿಗಳನ್ನು ಅರ್ಥ ಮಾಡಿಕೊಂಡರು.



*Figure 1: Water cycle*



*Figure 2: Mahadweep ki paheli*

**ವಿದ್ಯಾರ್ಥಿಗಳ ಪ್ರತಿಕ್ರಿಯೆಗಳು ಮತ್ತು ಅದರಿಂದ ಗಳಿಸಿದ ಅನುಭವಗಳು**

ನನ್ನ ಅನುಭವಗಳನ್ನು ಹಂಚಿಕೊಳ್ಳುವ ಮೊದಲು ನಾನು ಒಂದು ವಿಷಯವನ್ನು ಸ್ಪಷ್ಟಪಡಿಸಲು ಬಯಸುತ್ತೇನೆ. ಎಲ್ಲಾ ಚಿಟ್ಟೆಗಳೂ ಒಂದೇ ಬಗೆಯ ಹೂವಿನ ಕಡೆಗೆ ಆಕರ್ಷಿತಗೊಳ್ಳುವುದಿಲ್ಲ ಮತ್ತು ಅದೇ ಸಮಯದಲ್ಲಿ, ಒಂದು ನಿರ್ದಿಷ್ಟ ಚಿಟ್ಟೆಯು ಯಾವಾಗಲೂ ಒಂದೇ ತೆರನಾದ ಹೂವುಗಳ ಕಡೆಗೆ ಆಕರ್ಷಿತವಾಗುತ್ತದೆ ಎಂದೂ ಇಲ್ಲ. ಬೇರೆ ಬೇರೆ ಚಿಟ್ಟೆಗಳು ಬೇರೆ ಬೇರೆ ಆಕಾರದ, ಗಾತ್ರದ ಮತ್ತು ಸುವಾಸನೆಯ ಹೂವುಗಳೆಡೆಗೆ ಆಕರ್ಷಿತವಾಗುತ್ತವೆ. ಮಕ್ಕಳ ಮನಸ್ಸೂ ಇದೇ ಬಗೆಯಲ್ಲಿ ಕೆಲಸಮಾಡುತ್ತದೆ. ಎಲ್ಲಾ ಮಕ್ಕಳಿಗೂ ಬೇರೆ ಬೇರೆಯದೇ ಆದ ಆಲೋಚಿಸುವ ಮತ್ತು ಅರ್ಥೈಸುವ ಸಾಮರ್ಥ್ಯಗಳಿರುತ್ತವೆ. ಅವರಿಗೆ ಬೇರೆಬೇರೆಯದೇ ಆದ ಅಗತ್ಯಗಳಿವೆ ಮತ್ತು ಅಪೇಕ್ಷೆಗಳಿರುತ್ತವೆ. ಎಲ್ಲರಿಗೂ ಒಂದೇ ಬಗೆಯ ಕಲಿಕಾ ಸಾಮಗ್ರಿಗಳನ್ನು ಅಳವಡಿಸಿ ಕಲಿಕಾ ಫಲಗಳನ್ನು ಪಡೆದುಕೊಳ್ಳುವುದು ಸಾಧ್ಯವಿಲ್ಲ. ಅಂಥ ಒಂದು ಸನ್ನಿವೇಶದಲ್ಲಿ, ನಾವು ವಿದ್ಯಾರ್ಥಿಗಳ ಅಗತ್ಯ ಮತ್ತು ಅಪೇಕ್ಷೆಗಳಿಗೆ ಹೊಂದಾಣಿಕೆ-ಯಾಗುವ ಕ್ರಿಯಾಶೀಲ ಬೋಧನೆಯನ್ನು ಕೈಗೊಳ್ಳುವುದಕ್ಕೆ ಸದಾ ಪ್ರಯತ್ನಿಸುತ್ತಿರಬೇಕು. ಈ ದಿಕ್ಕಿನಲ್ಲಿ ನಮ್ಮ ಕ್ರಿಯೆಗಳು, 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ (NCF2005) ಪ್ರಮುಖ ಅಂಶವಾದ ಮಗು ಕೇಂದ್ರಿತ ಶಿಕ್ಷಣವನ್ನು ಬಲಪಡಿಸುತ್ತದೆ.

ಈ ಪಠ್ಯ ವಿಷಯಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನೂ ವಿದ್ಯಾರ್ಥಿಗಳ ಜೊತೆ ಹಂಚಿಕೊಳ್ಳುವುದಕ್ಕೆ ನನಗೆ ಆರು ತರಗತಿಗಳ ಅವಧಿ ಹಿಡಿಯಿತು. ಆದರೆ ಇದು ಅವರಿಗೆ ಕಲಿಯುವುದರ ಕುರಿತು ಒಂದು ಮರೆಯಲಾಗದ ಅನುಭವವನ್ನು ಕೊಟ್ಟಿತು. ಈ ಚಟುವಟಿಕೆಗಳ ಸಮಯದಲ್ಲಿ ವಿದ್ಯಾರ್ಥಿಗಳು ಹಲವು ಪ್ರಶ್ನೆಗಳನ್ನು ಕೇಳಿದರು. ವಿದ್ಯಾರ್ಥಿಗಳ ಕೆಲವು ಪ್ರತಿಸ್ಪಂದನೆಗಳನ್ನು ಮುಂದೆ ನಿರೂಪಿಸಿದ್ದೇನೆ.

ನಾನು ವಿದ್ಯಾರ್ಥಿಗಳಿಗೆ ಭೂಮಿಯ ಮೇಲಿನ ನೀರಿನ ಹಂಚಿಕೆಯ ಕುರಿತು ಒಂದು ಪ್ರಾತ್ಯಕ್ಷಿಕೆ ಕೊಟ್ಟಾಗ, ವಿದ್ಯಾರ್ಥಿಗಳಿಂದ ಬೇರೆಬೇರೆ ಬಗೆಯ ಪ್ರತಿಕ್ರಿಯೆಗಳು ಬಂದವು. ಉದಾಹರಣೆಗೆ, ಕೆಲವು ವಿದ್ಯಾರ್ಥಿಗಳು ಬಳಸುವುದಕ್ಕೆ ಯೋಗ್ಯವಾಗಿರುವ ನೀರಿನ ಪ್ರಮಾಣ (0.0001 % ಅಥವಾ 1 ಲೀಟರ್ ನೀರಿನಲ್ಲಿ ಒಂದು ಬಿಂದು) ಎಷ್ಟು ಕಡಿಮೆ ಇದೆ ಎಂದು ಆಶ್ಚರ್ಯಪಟ್ಟಿದ್ದರು. ಕೆಲವು ವಿದ್ಯಾರ್ಥಿಗಳು ಬೇಸರಗೊಂಡಿದ್ದರು ಮತ್ತು ಕಳವಳಗೊಂಡಿದ್ದರು.. ಕೊನೆಯಲ್ಲಿ ಎಲ್ಲಾ ವಿದ್ಯಾರ್ಥಿಗಳೂ ನೀರನ್ನು ಪೋಲು-ಮಾಡುವುದಿಲ್ಲ ಮತ್ತು ಬೇರೆಯವರೂ ಹಾಗೆ ಮಾಡದಂತೆ ತಡೆಯುತ್ತೇವೆ ಎಂದು ಭರವಸೆ ಕೊಟ್ಟರು.

ವಿದ್ಯಾರ್ಥಿಗಳು ಜಲ ಚಕ್ರದ ಮಾದರಿಯ ಕುರಿತು ವಿಶೇಷ ಆಸಕ್ತಿಯನ್ನು ತೋರಿಸಿದರು. ಅವರು ಕುತೂಹಲದಿಂದ ಆಸಕ್ತಿದಾಯಕವಾದ ಪ್ರಶ್ನೆಗಳನ್ನು ಕೇಳಿದರು. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದ್ದೇನೆ:

ಪ್ರಶ್ನೆ 1. ಯಾಕೆ ಚಾರ್ಟಿನಲ್ಲಿ ಕೆಲವು ಮೋಡಗಳು ನಗುವಂತೆ ಕಾಣಿಸಿದರೆ, ಮಿಕ್ಕವು ಅಳುವಂತೆ ಕಾಣಿಸುತ್ತವೆ? ಮೋಡಗಳು ಅಳುವಾಗ ನಿಜವಾಗಿಯೂ ಮಳೆ ಬರುವುದೇ?

ಪ್ರಶ್ನೆ 2. ಜಲ ಚಕ್ರದ ಮಾದರಿಯ ಮೇಲೆ ಬರೆಯಲಾದ ಪರಿಭಾಷೆಗಳ ಅರ್ಥವೇನು?

ಪ್ರಶ್ನೆ 3. ಹಸಿರು ಫಲಕದ ಮೇಲಿನ ಜಲ ಚಕ್ರದ ಮಾದರಿಯು ವಿಭಿನ್ನವಾಗಿದೆ. ಅದು ಯಾಕೆ ಹಾಗೆ?

ಪ್ರಶ್ನೆ 4. ಯಾಕೆ ನೀವು ದುಂಡಗಿನ ಫಲಕದ ಮೇಲೆ ಡ್ರಾಯಿಂಗ್ ಮಾಡಿದ್ದೀರಿ? (ಒಬ್ಬ ವಿದ್ಯಾರ್ಥಿಯು ಅದಕ್ಕೆ ಈ ರೀತಿ ವಿವರಿಸಿದ, 'ಮಳೆ ಒಂದು ಚಕ್ರವನ್ನು ಒಳಗೊಂಡಿದೆ. ಬಹುಶಃ ಅದೇ ಕಾರಣಕ್ಕೆ ಇರಬೇಕು.'

ಇದೆಲ್ಲದರ ಹೊರತಾಗಿ, ಕೆಲವು ವಿದ್ಯಾರ್ಥಿಗಳು ಮಾದರಿಯನ್ನು ತಯಾರಿಸುವ ಪ್ರಕ್ರಿಯೆಯನ್ನು ಹೇಳಿಕೊಡಿ ಎಂದು ಕೇಳಿದರು. ಈ ಅನುಭವವು ನನಗೆ ಖುಷಿಕೊಟ್ಟ ವಿಷಯವಾಗಿದೆ.

ಬಹುಶಃ ಅವರು ಈ ರೀತಿಯಲ್ಲಿ ಓದುವುದು ಮತ್ತು ಕಲಿಯುವುದನ್ನು ಆನಂದಿಸಿದ ಕಾರಣ ಮೇಲಿನ ಎಲ್ಲಾ ಪ್ರಶ್ನೆಗಳು ಮತ್ತು ಕುತೂಹಲ ಅವರ ಮನಸ್ಸಿನ ಒಳಗಡೆಯಿಂದ ಎಚ್ಚೆತ್ತು-ಕೊಂಡಿತು. ಆದ ಕಾರಣವೇ ಅವರು ಕಲಿಯುವುದಕ್ಕೆ ಹೆಚ್ಚು ಮನಸ್ಸು ಕೊಡುತ್ತಿದ್ದರು. ಮತ್ತು ಹೆಚ್ಚಿನ ಗಮನಕೊಟ್ಟು ಹೊಸ ವಿಷಯಗಳನ್ನು ಕಲಿಯುವುದೂ ಸಾಧ್ಯವಾಗುತ್ತಿತ್ತು. 'ಖಂಡಗಳು ಮತ್ತು ಅವುಗಳ ಸ್ಥಾನ'ವನ್ನು ಅರ್ಥೈಸಿಕೊಳ್ಳುವುದಕ್ಕೆ ನಾನು ಕೊಟ್ಟ ಒಂದು ಒಗಟನ್ನು ಬಿಡಿಸುವುದರಲ್ಲಿ ಮಕ್ಕಳು ಎಷ್ಟು ತಲ್ಲೀನರಾಗಿದ್ದರು ಎಂದರೆ ಶಾಲೆಯ ವೇಳೆ ಮುಗಿದುಹೋಗಿರುವುದೂ ಅವರ ಗಮನಕ್ಕೆ ಬರಲಿಲ್ಲ. ನಾನು ವೇಳೆ ಆಗಿರುವುದನ್ನು ಅವರಿಗೆ ಹೇಳಿದ ಮೇಲೂ ಕೆಲವು ಮಕ್ಕಳು ಅಲ್ಲೇ ಇದ್ದು, ಒಗಟನ್ನು ಬಿಡಿಸಲು ಬಯಸಿದ್ದರು. ನನಗಂತೂ ಅದು ವಿಶಿಷ್ಟ ಅನುಭವವೇ ಆಗಿತ್ತು. ಸಾಮಾನ್ಯವಾಗಿ ಕೆಲವು ಮಕ್ಕಳು ಕೊನೆಯ ಅವಧಿ ಮುಕ್ತಾಯವಾಗುವ ಮೊದಲೇ ಮನೆಗೆ ಹೊರಡಲು ತವಕಿಸುತ್ತಾರೆ, ಆದರೆ ಆ ದಿನ ಹಾಗೇನೂ ಆಗಲೇ ಇಲ್ಲ.

ತರಗತಿಯ ಚಟುವಟಿಕೆ ನನಗೆ ಒಂದು ಸಂಗತಿಯನ್ನು ಕಲಿಸಿತು: ಮಕ್ಕಳು ಚಿಟ್ಟೆಗಳಂತೆ ಬಣ್ಣದ ಹೂವುಗಳ ಮನಮೋಹಕ ದೃಶ್ಯಕ್ಕೆ (ಇಲ್ಲಿ ಬೋಧನಾ ಸಾಮಾಗ್ರಿಗಳು) ಮತ್ತು ಉದ್ಯಾನವನದೊಳಗೆ ಅವು ಬೀರುವ ಸುಗಂಧಕ್ಕೆ ಸೆಳೆಯಲ್ಪಡುತ್ತಾರೆ. ಅವರು ಹೂವಿನ ಮಕರಂದವನ್ನು ಹೀರುತ್ತಾರೆ.

ವಿವಿಧ ತರಗತಿಯ ಮಕ್ಕಳು ಅವರ ಪಾಠವಿಲ್ಲದ ಅವಧಿಗಳಲ್ಲಿ ಅವರ ತರಗತಿಗೆ ನನ್ನನ್ನು ಕರೆದು ಪಾಠಮಾಡಿ ಎಂದು ಕೇಳಿಕೊಳ್ಳುವಾಗ ಒಬ್ಬ ಶಿಕ್ಷಕನಾಗಿ ನನಗೆ ಅತ್ಯಂತ ಹಿತವಾದ ಅನುಭವ ಉಂಟಾಗುವುದು. ಈ ನನ್ನ ಭಾವನೆಗಳನ್ನು ಪದಗಳಲ್ಲಿ ಹೇಳಿಕೊಳ್ಳುವುದಕ್ಕೆ ಕಷ್ಟ. ಆದರೆ ಅವರಿಗೆ ನನ್ನ ಬೋಧನೆಯ ಪ್ರಕ್ರಿಯೆಗಳು ಮನಮುಟ್ಟುವಂತೆ ಇವೆ ಎಂಬ ಒಂದು ವಿಚಾರವನ್ನು ಖಂಡಿತವಾಗಿಯೂ ಇದು ತೆರೆದು ತೋರಿಸುತ್ತದೆ. ಅದು ನನಗೆ ಯಾವುದೇ ಮಹಾ ಸಾಧನೆಗೂ ಕಡಿಮೆಯಿಲ್ಲದ ಸಂಗತಿ ಮತ್ತು ಬೋಧನಾ ಉಪಕರಣಗಳು ಈ ದಿಸೆಯಲ್ಲಿ ದೊಡ್ಡ ಮಟ್ಟದಲ್ಲಿ ಕಾಣಿಕೆ ನೀಡಿವೆ.



**ಆದಿತ್ಯ ಗುಪ್ತ** ಅವರು ಧಮ್‌ತರಿಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಶಿಕ್ಷಕರಾಗಿದ್ದಾರೆ. ಅವರು ಭೂಗೋಳಶಾಸ್ತ್ರದಲ್ಲಿ ಪದವಿ ಪಡೆದಿದ್ದಾರೆ ಮತ್ತು 2019ರಿಂದ ಸಮಾಜವಿಜ್ಞಾನ ಬೋಧಕರಾಗಿದ್ದಾರೆ. ಶಿಕ್ಷಕರಾಗಿ ಅವರು ಸಮಾಜ ವಿಜ್ಞಾನದ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಯನ್ನು ಸಂವಾದ ಮತ್ತು ಆತ್ಮೀಯವಾಗಿ ನಡೆಸುವುದನ್ನು ಇಷ್ಟಪಡುತ್ತಾರೆ. ಅವರ ಇನ್ನಿತರ ಆಸಕ್ತಿಗಳು ಕವನ, ಕಥೆಗಳನ್ನು ಬರೆಯುವುದು ಮತ್ತು ಬ್ಲಾಗಿಂಗ್. ಇವರನ್ನು :

adityatin.gupta@azimpremjifoundation.org ಇಲ್ಲಿ ಸಂಪಕಿಸಬಹುದು.

---

ಅನುವಾದ: **ರಾಮಕೃಷ್ಣ ಭಟ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಕಲಿಕೆಗಾಗಿ ವಿನೋದದ ಬಳಕೆ

ಅಂಕಿತ್ ಶುಕ್ಲಾ

ತರಗತಿಯಲ್ಲಿಯ ಕಲಿಕೆಗೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಬ್ಬರ, ಅಂದರೆ ಈ ಎರಡೂ ಕಡೆಯ ನಿರಂತರ ಪ್ರಯತ್ನ ಬೇಕಾಗುತ್ತದೆ. ಅಲ್ಲೊಂದು ಪ್ರೇರಣಾದಾಯಕವಾದ ವಾತಾವರಣ ಇರಬೇಕಾಗುತ್ತದೆ. ಯಾಕೆಂದರೆ ನೀಡಲಾದ ಕಾರ್ಯ ಚಟುವಟಿಕೆಯ ಸ್ವರೂಪ, ಕಲಿಕಾರ್ಥಿಯ ನಿರೀಕ್ಷೆಗಳು, ಮಾಹಿತಿಗಳನ್ನು ಪ್ರಸ್ತುತಪಡಿಸುವ ರೀತಿ-ಇವೆಲ್ಲವೂ ಕಲಿಕೆಯ ಮೇಲೆ ಪರಿಣಾಮವನ್ನು ಬೀರುತ್ತದೆ. ಕಲಿಕೆಯ ವಿಭಿನ್ನ ಆಯಾಮಗಳನ್ನು ಮತ್ತು ಉದಾಹರಣೆಗಳು, ಕಲಿಕಾ ಚಟುವಟಿಕೆಗಳು ಹಾಗೂ ಮಕ್ಕಳು ತೊಡಗಿಸಿಕೊಂಡಿರುವ ಕಲಿಕಾ ಪ್ರಕ್ರಿಯೆಯ ನಾನಾ ಮಾರ್ಗಗಳ ಮೂಲಕ ಅದರ ಕಾರ್ಯ-ಸಾಧ್ಯತೆಯನ್ನು ನಾವು ಸುಲಭವಾಗಿ ಕಾಣಬಹುದಾಗಿದೆ. ಕಳೆದ ಸುಮಾರು ಮೂರು ವರ್ಷಗಳ ಕಾಲ ನಾನು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನೊಂದಿಗೆ ಕಾರ್ಯನಿರ್ವಹಿಸಿದ ಬಳಿಕ ಹಾಗೂ ನನಗೆ ನಿಯೋಜಿಸಿದ ಜಿಲ್ಲೆಯಲ್ಲಿ ಅನೇಕ ಶಾಲೆಗಳಿಗೆ ಭೇಟಿ ನೀಡಿದ ನಂತರ ಈ ಸತ್ಯಗಳನ್ನು ಮನಗಂಡಿದ್ದೇನೆ.

2019ರಲ್ಲಿ ಛತ್ತೀಸ್‌ಗಢ ಸರ್ಕಾರವು, ಬೇಸಿಗೆ ರಜೆಗಳಲ್ಲಿ ಶಾಲೆಗಳನ್ನು ತೆರೆಯಬೇಕು ಮತ್ತು ಶಾಲೆಗಳಲ್ಲಿಯೇ ಬೇಸಿಗೆ ಶಿಬಿರದ ರೀತಿಯಲ್ಲಿ ಅನೇಕ ವಿನೋದದ ಚಟುವಟಿಕೆಗಳನ್ನು ನಡೆಸಬೇಕು ಎಂದು ತಿಳಿಸಿತು. ಇದರ ಪರಿಣಾಮವಾಗಿ ಒಂದೇ ಶಾಲಾ ಕ್ಯಾಂಪಸ್‌ನಲ್ಲಿ ಮೂರು ಶಾಲೆಗಳ ವಿದ್ಯಾರ್ಥಿಗಳ ಜೊತೆಗೆ ತೊಡಗಿಸಿಕೊಳ್ಳಲು ನನಗೆ ಸಾಧ್ಯವಾಯಿತು. ನಾನು ಶಾಲೆಗೆ ಹೋದ ತಕ್ಷಣ ನಾವೆಲ್ಲ ಹಳೆಯ ಮಿತ್ರರು ಎನ್ನುವ ರೀತಿಯಲ್ಲಿ ವಿದ್ಯಾರ್ಥಿಗಳೆಲ್ಲ ನನ್ನೆಡೆಗೆ ಧಾವಿಸಿ ಬಂದರು. ಕೆಲವು ಹುಡುಗರು ಫುಟ್‌ಬಾಲ್‌ನಲ್ಲಿ ತಲ್ಲೀನರಾಗಿದ್ದರೆ ಕೆಲವರು ಕ್ರಿಕೆಟ್ ಆಟದಲ್ಲಿ ನಿರತರಾಗಿದ್ದರು. ಇಡೀ ಆಟದ ಮೈದಾನದಲ್ಲಿ ಹುಡುಗಿಯರ ಸುಳಿವೇ ಇರದುದು ನನಗೆ ಒಗಟಾಗಿ ಕಾಣಿಸಿತು. ಅವರೆಲ್ಲರೂ ತಮ್ಮ ತಮ್ಮ ತರಗತಿಗಳಲ್ಲಿಯೇ ಉಳಿದಿದ್ದರು.

ನಾವು ಮುಖ್ಯೋಪಾಧ್ಯಾಯರ ಕಚೇರಿಗೆ ತೆರಳಿದೆವು. ಅವರು ನಮ್ಮನ್ನು ಸ್ವಾಗತಿಸಿ ಕೆಲವು ಹುಡುಗರಿಗಳಿಗೆ ಹಾಲ್‌ನ ಬಾಗಿಲು ತೆರೆಯುವಂತೆ ತಿಳಿಸಿದರು. ಹಾಲ್‌ನಲ್ಲಿ ವಿದ್ಯಾರ್ಥಿಗಳೆಲ್ಲ ಸೇರಲು ಆರಂಭಿಸಿದರು ಮತ್ತು ಕೆಲವೇ ನಿಮಿಷಗಳಲ್ಲಿ ಆ ಹಾಲ್ ಹುಡುಗ-ಹುಡುಗಿಯರಿಂದ ತುಂಬಿ ಹೋಯಿತು. ನನ್ನನ್ನು ಪರಿಚಯ ಮಾಡಿಕೊಂಡು, ಶಾಲೆಗೆ ಬಂದ ಉದ್ದೇಶವನ್ನು ನಾನು ಹೇಳಿದೆ.

**ಬದಲಾವಣೆಯ ಗಾಳಿ**

ಮೊದಲ ದಿನ ನಾನು ಅವರನ್ನು ಗುಂಪುಗಳಾಗಿ ವಿಂಗಡಿಸಿದೆ. ತಲಾ ಸುಮಾರು ಒಂಭತ್ತು ವಿದ್ಯಾರ್ಥಿಗಳನ್ನು ಒಳಗೊಂಡ ಹತ್ತು ಗುಂಪುಗಳನ್ನು ರಚಿಸಲಾಯಿತು. ನಾನು ಪ್ರತಿಯೊಂದು ಗುಂಪಿಗೂ ಕಥೆ ಪುಸ್ತಕಗಳನ್ನು ವಿತರಿಸಿ, ಆ ಕಥೆಗಳನ್ನು ಓದಿ ಪರಸ್ಪರ ಚರ್ಚೆ ಮಾಡುವಂತೆ ತಿಳಿಸಿದೆ. ಕಥೆಯಲ್ಲಿ ಬರುವ ಪಾತ್ರಗಳು, ಕಥಾಹಂದರ (plot), ಸಂಭಾಷಣೆಗಳು ಇತ್ಯಾದಿಗಳ ಬಗ್ಗೆ ಚರ್ಚೆ ನಡೆಸಬಹುದು ಎಂದು ಹೇಳಿದೆ. ಈ ಚರ್ಚೆಗಳ ಆಧಾರದಲ್ಲಿ ಅವರು ಒಂದು ನಾಟಕವನ್ನು ರಚಿಸಬೇಕಾಗಿತ್ತು. ಗುಂಪಿನ ಪ್ರತಿಯೊಬ್ಬರೂ ಕಥೆಗಳನ್ನು ಓದಿ ಚರ್ಚೆ ಮಾಡಿದ ಬಳಿಕ ಸಹಮತದ ಆಧಾರದಲ್ಲಿ ಒಂದು ನಾಟಕದ ಅಂತಿಮ ಕರಡನ್ನು ಸಿದ್ಧಪಡಿಸಿದರು.

ಎರಡನೇ ದಿನ, ನಾವು ದೊಡ್ಡ ಗುಂಪಿನಲ್ಲಿ ಕಥೆಯನ್ನು ಸಂಕ್ಷಿಪ್ತವಾಗಿ ಹಂಚಿಕೊಳ್ಳುವ ಮತ್ತು ಪಾತ್ರಗಳನ್ನು ಗುರುತಿಸುವ ಕೆಲಸದಲ್ಲಿ ನಿರತರಾದೆವು. ಪ್ರತಿಯೊಂದು ಗುಂಪು ಕೂಡ ತಮ್ಮ ಕಥೆಯನ್ನು ಹಂಚಿಕೊಂಡಿದ್ದು ಮಾತ್ರವಲ್ಲದೆ ಅವುಗಳಲ್ಲಿರುವ ನಾನಾ ಪಾತ್ರಗಳ ಬಗ್ಗೆಯೂ ಮಾತನಾಡಿದರು. ಇದೆಲ್ಲದರ ಫಲಿತಾಂಶವಾಗಿ ಒಂದು ಗೊಂಬೆಯಾಟ ಮೂಡಿಬಂದಿತು.

**ಗೊಂಬೆಯಾಟ**

ಇದಾದ ಬಳಿಕ ಅವರು ತಮ್ಮ ಕಥೆಗಳಿಗೆ ತಕ್ಕಂತೆ ಗೊಂಬೆಗಳನ್ನು ಸಿದ್ಧಪಡಿಸಲು ಆರಂಭಿಸಿದರು. ಮೊದಲು ಆ ಪಾತ್ರದ ಮುಖದ ಚಿತ್ರವನ್ನು ಅವರು ಬರೆಯಬೇಕು. ಉದಾಹರಣೆಗೆ ಕಥೆಯಲ್ಲಿ ಸಿಂಹ ಇದ್ದರೆ ಅವರು ಮೊದಲು ಸಿಂಹದ ಮುಖವನ್ನು ಚಿತ್ರಿಸಿ ಅದಕ್ಕೆ ಬಣ್ಣವನ್ನು ಹಾಕಬೇಕಾಗಿತ್ತು. ಅದಾದ ನಂತರ ಅದಕ್ಕೆ ಆಧಾರವಾಗಿ ಒಂದು ಕಾರ್ಡ್‌ಬೋರ್ಡ್‌ನ್ನು ಅಂಟಿಸುವುದು. ಹೀಗೆ ಅಂಟಿಸಿದ ಬಳಿಕ ಗೊಂಬೆಗೆ ಒಂದು ಕೋಲನ್ನು ಜೋಡಿಸುವುದು. ಇದರೊಂದಿಗೆ ಪ್ರದರ್ಶನಕ್ಕೆ ಬೇಕಾದ ಅವರ ಗೊಂಬೆಗಳು ಸಿದ್ಧವಾಗಿಬಿಟ್ಟವು! ಮೂರನೇ ದಿನವೇ ನಮ್ಮ ನಾಟಕ ಪ್ರದರ್ಶನಗೊಂಡಿತು.

ರಂಗವೇದಿಕೆ ಸಿದ್ಧಗೊಂಡಿತು. ವಿದ್ಯಾರ್ಥಿಗಳು ಒಂದು ಪರದೆಯ ಹಿಂದೆ ಕೋಲುಗಳಿಗೆ ಅಂಟಿಸಿದ ಗೊಂಬೆಗಳೊಂದಿಗೆ ಸಿದ್ಧರಾದರು. ಮುಂಭಾಗದಲ್ಲಿ ಕೇವಲ ಗೊಂಬೆಗಳು ಮಾತ್ರ ಕಾಣಿಸುವ ಹಾಗೆ ವಿದ್ಯಾರ್ಥಿಗಳು ಪರದೆಯ ಹಿಂದೆ ನಿಂತಿದ್ದರು. ಪ್ರತಿಯೊಂದು ಗುಂಪೂ ಒಂದಾದ ಮೇಲೊಂದರಂತೆ ಬಂದು ಗೊಂಬೆ-ಯಾಟವನ್ನು ಪ್ರದರ್ಶಿಸಿತು. ಮೊದಲನೆಯ ಗೊಂಬೆಯಾಟ-ಪ್ರಾಮಾಣಿಕ ಸೌದೆ ಕಡಿಯುವಾತ. ವಿದ್ಯಾರ್ಥಿಗಳು ತಮ್ಮ ಮನಸ್ಸಿನಲ್ಲಿರುವ ಎಲ್ಲ ವಿವರಗಳೊಂದಿಗೆ ಅತ್ಯಂತ ಸುಂದರವಾಗಿ ಗೊಂಬೆಯಾಟವನ್ನು ಪ್ರದರ್ಶಿಸಿದರು. ಆ ಬಳಿಕ ಅವರು ತಾವು ಪ್ರದರ್ಶಿಸಿದ ಪಾತ್ರಗಳ ಜೊತೆಗೆ ತಮ್ಮನ್ನು ತಾವು ಪರಿಚಯ ಮಾಡಿಕೊಂಡರು. ಗೊಂಬೆಯಾಟ ಪ್ರದರ್ಶನವಾದ ಬಳಿಕ ಒಂದು ಪ್ರಶ್ನೋತ್ತರ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಎಲ್ಲ ಕೊಡಲಿಗಳನ್ನೂ ಮನುಷ್ಯ ತೆಗೆದುಕೊಂಡಿದ್ದರೆ ಏನಾಗುತ್ತಿತ್ತು? ಯಾಕೆ ಆತ ಕೇವಲ ಕಬ್ಬಿಣದಿಂದ ಮಾಡಿದ ಕೊಡಲಿಯನ್ನೇ ಆಯ್ಕೆ ಮಾಡಿಕೊಂಡ? ಮುಂತಾದ ಕೆಲವು ಪ್ರಶ್ನೆಗಳು ಎದುರಾದವು. ಈ ಚರ್ಚೆ ನಿಜ ಜೀವನದ ಘಟನೆಗಳ ಬಗೆಗೂ ವಿದ್ಯಾರ್ಥಿಗಳು ಯೋಚಿಸುವಂತೆ ಅನುವು ಮಾಡಿಕೊಟ್ಟಿತು.

ನಾಲ್ಕನೇ ದಿನ ಇದ್ದ ನಾಟಕದ ಹೆಸರು–ದೊಡ್ಡವರು ಯಾರು? ಪ್ರೇಕ್ಷಕರಿಂದಲೇ ವ್ಯಕ್ತವಾದ ಈ ಕಥೆಯ ನೀತಿ ಏನೆಂದರೆ ಗಾತ್ರ–ಆಕಾರದ ಆಧಾರದಲ್ಲಿ ಯಾರೊಬ್ಬರನ್ನೂ ನಿರ್ಲಕ್ಷಿಸುವಂತಿಲ್ಲ. ಈ ಭೂಮಿಯ ಮೇಲಿರುವ ಪ್ರತಿಯೊಂದು ಜೀವಿಗೂ ಸಮಾನವಾದ ಗೌರವ ಮತ್ತು ಘನತೆ ಇದೆ. ಈ ಗೊಂಬೆಯಾಟ ಪ್ರದರ್ಶನದ ಬಳಿಕ ವಿದ್ಯಾರ್ಥಿಗಳು ಖುಷಿಯಿಂದ ಕುಣಿದಾಡಿದರು.

**'ಬಾಲ್ ಅಖ್‌ಬಾರ್' (ಮಕ್ಕಳ ಸುದ್ದಿ ಪತ್ರಿಕೆ)**

ಮುಂದಿನ ಚಟುವಟಿಕೆಯಾಗಿ ಅವರ ಗ್ರಾಮದಲ್ಲಿಯೇ ನಡೆಯುವ ಹೊಸ ವಿಷಯಗಳನ್ನು ಗಮನಿಸುವಂತೆ ಮಕ್ಕಳನ್ನು ನಾನು ಕೇಳಿಕೊಂಡೆ. ಮರುದಿನ ಅವರ ಬಳಿ ಹೇಳಿಕೊಳ್ಳಲು ಅನೇಕ ಸಂಗತಿಗಳಿದ್ದವು. ನಾನು ಮೊದಲಿಗೆ ಅವರೊಂದಿಗೆ ಸುದ್ದಿ ಪತ್ರಿಕೆಯ ವಿಭಾಗಗಳಾದ ಸುದ್ದಿ, ವರದಿಗಳು, ಜಾಹೀರಾತು ಇತ್ಯಾದಿಗಳ ಬಗ್ಗೆ ಚರ್ಚೆ ಮಾಡಿದೆ. ಮತ್ತೆ ಅವರನ್ನು ಗುಂಪುಗಳಾಗಿ ವಿಂಗಡಿಸಿದೆ ಮತ್ತು ತಮ್ಮ ಬಳಿ ಇರುವ ಸುದ್ದಿಗಳನ್ನು ಬರೆಯುವಂತೆ ಅವರಿಗೆ ತಿಳಿಸಿದೆ.

ಮಕ್ಕಳು ಸೂಕ್ಷ್ಮ ವಿವರಗಳನ್ನೂ ಗಮನಿಸಿದ್ದನ್ನು ತಿಳಿದು ಅಚ್ಚರಿಯಾಯಿತು. ಹಲವು ವಿದ್ಯಾರ್ಥಿಗಳು ಹಿಂದಿನ ದಿನ ಬಿದ್ದ ಮಳೆಯ ಬಗ್ಗೆಯೇ ಬರೆದರು. ಅವರಲ್ಲಿ ಕೆಲವರು ತರಕಾರಿ ಮತ್ತು ಹಣ್ಣಿನ ಅಂಗಡಿಗಳನ್ನು ಹೊಂದಿದ್ದರಿಂದ ಮಳೆ ಯಾವ ರೀತಿ ಪರಿಣಾಮ ಬೀರಿತು ಎಂಬ ಬಗ್ಗೆ ವಿವರಿಸಿದ್ದರು.




ಆ ಬಳಿಕ ಜಾಹೀರಾತುಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ವಿದ್ಯಾರ್ಥಿಗಳು ಬರೆದಿದ್ದರು. ಶಾಂಪೂ, ಔಷಧಿಗಳು ಮುಂತಾದ ಜಾಹೀರಾತುಗಳನ್ನು ಪ್ರಸ್ತಾಪ ಮಾಡಿದ್ದ ಅವರಲ್ಲಿ ಒಬ್ಬರು ಒಂದು ಶಾಲೆಯ ಜಾಹೀರಾತನ್ನು ಬರೆದು ಅಲ್ಲಿ ಒದಗಿಸಲಾಗುವ ಸೌಲಭ್ಯಗಳನ್ನು ವಿವರಿಸಿದ್ದರು. ನನ್ನ ಗಮನ ಸೆಳೆದ ಇನ್ನೊಂದು ಜಾಹೀರಾತು– ತಂಬಾಕು. ಅದರಲ್ಲಿ ತಂಬಾಕು ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ಬೊಟ್ಟು ಮಾಡಲಾಗಿತ್ತು.

ಇವೆಲ್ಲ ಮಾಹಿತಿಗಳನ್ನು ವಿದ್ಯಾರ್ಥಿಗಳಿಂದ ಸಂಗ್ರಹಿಸಿದ ಬಳಿಕ ಮುಂದಿನ ಹಂತ ಈ ವಿಚಾರಗಳನ್ನು ಪತ್ರಿಕೆಯ ರೂಪದಲ್ಲಿ ಪ್ರಕಟಿಸುವುದು. ಈ ಲೇಖನಗಳನ್ನೆಲ್ಲ ಒಂದು ಚಾರ್ಟ್ ಪೇಪರ್ ಮೇಲೆ ಅಂಟಿಸುವ ಕೆಲಸ ಮಾಡಲಾಯಿತು. ಇದಕ್ಕಾಗಿ ಒಂದು 'ಪ್ರಕಟಣಾ ತಂಡ'ವನ್ನು ರಚಿಸಲಾಯಿತು. ಒಂದು ಪತ್ರಿಕೆಯನ್ನು ವಿನ್ಯಾಸಗೊಳಿಸುವ ಜವಾಬ್ದಾರಿಯನ್ನು ಈ ತಂಡಕ್ಕೆ ಒಪ್ಪಿಸಲಾಯಿತು. ಈ ತಂಡದಲ್ಲಿದ್ದ ವಿದ್ಯಾರ್ಥಿಗಳು ಚಾರ್ಟ್ ಪೇಪರ್ ಮೇಲೆ ಸುದ್ದಿಗಳು ಮತ್ತು ಜಾಹೀರಾತು ತುಣುಕುಗಳನ್ನು ಅಂಟಿಸುವ ಕೆಲಸವನ್ನು ನಿರ್ವಹಿಸಿದರು. ಇದರಿಂದ ಒಡಮೂಡಿದ್ದು 'ಬಾಲ್ ಅಖ್‌ಬಾರ್'– ಮಕ್ಕಳೇ ಮಾಡಿದ ಸುದ್ದಿ ಪತ್ರಿಕೆ! ಅದನ್ನು ತರಗತಿಯಲ್ಲಿ ಪ್ರದರ್ಶಿಸಿದಾಗ ಮಕ್ಕಳಿಗೆ ದೊಡ್ಡದೇನೋ ಸಾಧನೆ ಮಾಡಿದ ಖುಷಿ.

**ಮಕ್ಕಳ ಕಲಿಕೆ**

ಈ ಚಟುವಟಿಕೆಗಳಿಂದಾಗಿ ವಿದ್ಯಾರ್ಥಿಗಳ ಅಭಿವ್ಯಕ್ತಿಗೆ ವಿಪುಲವಾದ ಅವಕಾಶ ಸಿಕ್ಕಿದ್ದನ್ನು ಶಿಕ್ಷಕರು ಮತ್ತು ನಾನು ಗಮನಿಸಿದೆ. ಈ ಚಟುವಟಿಕೆಗಳು ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಒಳಗೊಳ್ಳುವಂತೆ ಮಾಡಿತು. ಜೊತೆಗೆ ತಮ್ಮ ಅಭಿಪ್ರಾಯಗಳನ್ನು, ಯೋಚನೆಗಳನ್ನು ಎಲ್ಲರ ಮುಂದೆ ಮಂಡಿಸಲು ಅವರಿಗೆ ಧೈರ್ಯವನ್ನೂ ಮೂಡಿಸಿತು. ಗೊಂಬೆಯಾಟ ಮತ್ತು ಅದರ ಅಭ್ಯಾಸ ಇನ್ನಷ್ಟು ಉತ್ತಮವಾಗಿ ಮಾಡಬೇಕು ಎಂಬ ಆಸಕ್ತಿ ಅವರಲ್ಲಿ ಮೂಡಿಸಿತು. ಅವರು ಕಥೆಗಳನ್ನು ತಮಗೆ ತಿಳಿದ ರೀತಿಯಲ್ಲಿ ಸುಧಾರಣೆ ಮಾಡಿದರು. ಇದು ಭಾಷೆಯನ್ನು ಕಲಿಯುವ ಉತ್ತಮ ಮಾರ್ಗವಾಗಿ ಪರಿಣಮಿಸಿತು. ಭಾಷಾ ಕಲಿಕೆಯಲ್ಲಿನ ಉದ್ದೇಶಗಳು ಈಡೇರುವುದೇ ಹಾಗೆ– ವಿದ್ಯಾರ್ಥಿಗಳು ತಮ್ಮ ಮುಂದಿನ ಸಂಗತಿಗಳನ್ನು ದೃಶ್ಯೀಕರಿಸಲು ಸಾಧ್ಯವಾದರೆ ಅವರು ಹೆಚ್ಚು ಸೃಜನಶೀಲ ಮತ್ತು ಕಲ್ಪನಾತ್ಮಕವಾಗಿರಲು ಅವಕಾಶ ಮಾಡುತ್ತದೆ. ಗೊಂಬೆಯಾಟ ಪ್ರದರ್ಶನದ ಸಂದರ್ಭದಲ್ಲಿ ವಿದ್ಯಾರ್ಥಿಗಳು ಅವರದೇ ಕಲ್ಪನೆಗಳು ಮತ್ತು ಯೋಚನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾಗುವ ಮೂಲಕ ಇದನ್ನು ಸಾಧಿಸಿರುವಂತೆ ಕಂಡುಬಂದಿತು.

'ಬಾಲ್ ಅಖ್‌ಬಾರ್' ಚಟುವಟಿಕೆಯು ಮಕ್ಕಳು ಹೆಚ್ಚು ಎಚ್ಚರಿಕೆಯಿಂದ ಹಾಗೂ ಗಮನವಿಟ್ಟು ಕೆಲಸ ಮಾಡಲು ಕಲಿಸಿತು. ತಮ್ಮ ಸುತ್ತ ಘಟಿಸಿದ, ಸಾಮಾನ್ಯವಾಗಿ ಯಾರ ಗಮನಕ್ಕೂ ಬಾರದೇ ಇರುವ ಪ್ರತಿಯೊಂದು ಸಂಗತಿಯ ಅತಿ ಸಣ್ಣ ವಿವರಗಳನ್ನೂ ಅವರು ಗಮನಿಸಿದ್ದರು. ಚಾರ್ಟ್ ಪೇಪರ್ ಮೇಲೆ ಸುದ್ದಿಗಳನ್ನು ಅಂಟಿಸುವ ಮೂಲಕ ಅವರಲ್ಲಿ ಸ್ಥಾನಿಕ ಪ್ರಜ್ಞೆ ಮೂಡುವಂತೆ ಮಾಡಿತು; ಗಣಿತವನ್ನು ಕಲಿಸುವ ಸಂದರ್ಭದಲ್ಲಿ ಇಂತಹ ಪ್ರಯೋಗಗಳನ್ನು ಮಾಡಲಾಗುತ್ತದೆ. ಸುದ್ದಿ ಮತ್ತು ಜಾಹೀರಾತುಗಳ ರೂಪದಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಳ್ಳುವುದರಿಂದ ಅವರಿಗೆ ತಮ್ಮ ಯೋಚನೆಗಳನ್ನು ವ್ಯಕ್ತಪಡಿಸಲು ಅವಕಾಶ ಸಿಕ್ಕಂತಾಯಿತು.

ಇವೆಲ್ಲ ಅನುಭವಗಳಿಂದ ನನಗೆ ತಿಳಿದುಬಂದ ಅಂಶವೇನೆಂದರೆ ಕಲಿಕೆ ಎಲ್ಲಿ ಕೂಡ ನಡೆಯಬಹುದು; ಅದು ಕ್ಲಾಸ್‌ರೂಂ ಇರಬಹುದು ಅಥವಾ ಆಟದ ಮೈದಾನವೂ ಆಗಿರಬಹುದು. ಈ ಸಂದರ್ಭದಲ್ಲಿ ನಾವು ಗಮನದಲ್ಲಿ ಇಟ್ಟುಕೊಳ್ಳಬೇಕಾದ ಸಂಗತಿ ಏನೆಂದರೆ ಸುತ್ತಮುತ್ತಲಿನ ವಾತಾವರಣವನ್ನು ಕಲಿಕಾ–ಸ್ನೇಹಿಯನ್ನಾಗಿ ಮತ್ತು ಸಂಪೂರ್ಣವಾಗಿ ಭಯಮುಕ್ತವಾಗಿರುವಂತೆ ನೋಡಿಕೊಳ್ಳಬೇಕು. ಪ್ರತಿಯೊಂದು ಮಗುವಿಗೂ ಯಾವುದೇ ವೇದಿಕೆಯಲ್ಲಿ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸೂಕ್ತ ಅವಕಾಶವನ್ನು ನೀಡಬೇಕು. ಇದರಿಂದ ಕಲಿಕೆಯೂ ಸಾಧ್ಯವಾಗುತ್ತ ಹೋಗುತ್ತದೆ.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**

*What Did You Ask at School Today?* Kamala Mukunda

*How People Learn: Introduction to learning Theories*; developed by Linda-Darling Hammond, Kim Austin, Suzanne Orcutt, and Jim Rosso

---



**ಅಂಕಿತ್ ಶುಕ್ಲಾ** ಅವರು 2017ರಲ್ಲಿ ಧಮ್‌ತರಿಯಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಫೆಲೋ ಆಗಿ ಸೇರಿಕೊಂಡರು. ಪ್ರಸ್ತುತ ರಾಯ್‌ಗಢ ಬ್ಲಾಕ್ (ಛತ್ತೀಸ್‌ಗಢ)ನಲ್ಲಿ ಕಾರ್ಯನಿರ್ವಹಿಸುತ್ತಿರುವ ಅವರು ಗಣಿತಶಾಸ್ತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಶುಕ್ಲಾ ಅವರು ಉತ್ತರ ಪ್ರದೇಶ ತಾಂತ್ರಿಕ ವಿಶ್ವವಿದ್ಯಾಲಯ, ಲಖನೌ ಇಲ್ಲಿ ತಮ್ಮ ಎಂಬಿಎ ಮತ್ತು ಬಿಟೆಕ್ ಪೂರೈಸಿದ್ದಾರೆ. ಫೌಂಡೇಷನ್ ಅನ್ನು ಸೇರಿಕೊಳ್ಳುವುದಕ್ಕೂ ಮುನ್ನ ಅವರು, ಬಟಿಂಡಾದಲ್ಲಿ 'ಪಂಜಾಬ್ ಮತ್ತು ಹರ್ಯಾಣದ ಹತ್ತಿ ಬೆಳೆಯುವ ಜಿಲ್ಲೆಗಳಲ್ಲಿ ಮಕ್ಕಳ ಹಕ್ಕುಗಳನ್ನು ಬಲಪಡಿಸುವುದು' ಎಂಬ ಯೋಜನೆಯ ಕಾರ್ಯಕ್ರಮ ನಿರ್ವಾಹಕರಾಗಿ ಕಾರ್ಯನಿರ್ವಹಿಸಿದ್ದರು. ಮತ್ತು ಭಾರತದ ಮೂರು ರಾಜ್ಯಗಳಲ್ಲಿ ಕ್ಷಯರೋಗ ಮತ್ತು ಡಯಾಬಿಟಿಸ್ ಮೆಲಿಟಸ್ ನಡುವಿನ ನಂಟಿಗೆ ಸಂಬಂಧಿಸಿದಂತೆ 'ಜಾಗರಣ್ ಪೆಹಲ್' ಮೂಲಕ ಮಾಡಲಾದ ಮಲ್ಟಿ ಮೀಡಿಯಾ ಪ್ರಚಾರದಲ್ಲಿ ಜಿಲ್ಲಾ ಯೋಜನ ಸಮನ್ವಯಕಾರರಾಗಿ ಕೆಲಸ ಮಾಡಿದ್ದಾರೆ. ಅವರನ್ನು ankit.shukla@azimpremjifoundation.org ನಲ್ಲಿ ಸಂಪರ್ಕಿಸಬಹುದು:

---

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಬಹುಭಾಷಾ ಸನ್ನಿವೇಶದಲ್ಲಿ ಕಲಿಕೆ

ಬಿನಯ್ ಪಟ್ಟನಾಯಕ್

**ಹಿನ್ನೆಲೆ**

ಜಾರ್ಖಂಡ್ ಒಂದು ಬಹುಭಾಷೆಗಳ ರಾಜ್ಯ. ಅಲ್ಲಿ ಸುಮಾರು ಹತ್ತೊಂಬತ್ತು ಸ್ಥಳೀಯ ಮತ್ತು ಪ್ರಾದೇಶಿಕ ಭಾಷೆಗಳನ್ನು ಮಾತನಾಡುವ ಸುಮಾರು 32ಕ್ಕಿಂತಲೂ ಹೆಚ್ಚು ಸ್ಥಳೀಯ ಸಮುದಾಯಗಳಿವೆ. ಇವುಗಳಲ್ಲಿ ಕೆಲವು ಮುಖ್ಯ ಸಂಪರ್ಕ ಭಾಷೆಗಳು ರಾಜ್ಯದಲ್ಲಿ ಚಾಲ್ತಿಯಲ್ಲಿರುವ ಬೇರೆ-ಬೇರೆ ಸ್ಥಳೀಯ ಭಾಷೆಗಳ ನಡುವೆ ಸೇತುವಿನಂತೆ ಕಾರ್ಯನಿರ್ವಹಿಸುತ್ತವೆ. ರಾಜ್ಯದಲ್ಲಿ ಒಂಬತ್ತು "ವಿಶೇಷವಾಗಿ ದೌರ್ಬಲ್ಯಪೀಡಿತ ಸ್ಥಳೀಯ ಪಂಗಡಗಳಿದ್ದು (Particularly Vulnerable Indigenous Groups-PVTGs) ಅವುಗಳಲ್ಲಿ ಕೆಲವು ಪಂಗಡಗಳ ಭಾಷೆಗಳು ಅತ್ಯಂತ ಅಪಾಯದ ಅಂಚಿನಲ್ಲಿವೆ.

ಇವೆಲ್ಲಾ ಸಮುದಾಯಗಳಿಂದ ಬರುವ ಮಕ್ಕಳ ಮನೆಮಾತು, ಶಾಲಾ ಭಾಷೆಯಾದ ಹಿಂದಿಗಿಂತ ತೀರಾ ಭಿನ್ನವಾಗಿರುವ ಕಾರಣಕ್ಕೆ ಶಾಲೆಯ ಆರಂಭಿಕ ವರ್ಷಗಳಲ್ಲಿ ಭಾರೀ ಕಲಿಕಾ ತೊಂದರೆಗಳನ್ನು ಎದುರಿಸುತ್ತಾರೆ. ರಾಜ್ಯದಲ್ಲಿ ಪ್ರಾಥಮಿಕ ಶಾಲೆಗಳನ್ನು ಪ್ರವೇಶಿಸುವ ಮಕ್ಕಳ ಸರಾಸರಿ ಮೂರನೇ ಒಂದರಷ್ಟು ಮಕ್ಕಳು ಆರಂಭಿಕ ಹಂತದಲ್ಲಿಯೇ ಶಾಲೆ ತೊರೆಯುತ್ತಾರೆ. ಇದು ದೇಶದಲ್ಲೇ ಶಾಲೆ ತೊರೆಯುವ ಮಕ್ಕಳ ಅತಿಹೆಚ್ಚಿನ ಪ್ರಮಾಣವಾಗಿದೆ. ಶಾಲೆಯಲ್ಲಿ ಮುಂದುವರಿಯುವ ಮಕ್ಕಳು ಎಂಟನೇ ತರಗತಿಗೆ ಬರುವ ವೇಳೆಗಾಗಲೇ ಬಹಳಷ್ಟು ಹತಾಶರಾಗಿರುತ್ತಾರೆ. ಅವರು ತಮ್ಮ ಪಠ್ಯಪುಸ್ತಗಳ ವಿಷಯವನ್ನಾಗಲೀ, ತಮ್ಮ ಮನೆ ಹಾಗು ಸಮುದಾಯಗಳ ಕಲಿಕಾ ಅನುಭವಗಳನ್ನು ಸಂಪೂರ್ಣವಾಗಿ ತಳ್ಳಿಹಾಕಿ ತಮಗೆ ಹಿಂದಿ ಭಾಷೆಯಲ್ಲಿ ಪಾಠಮಾಡುವ, ಹಿಂದಿ ಭಾಷೆಯಲ್ಲಿ ಮಕ್ಕಳಿಗೆ ಪರೀಕ್ಷೆಗಳನ್ನು ನೀಡುವ ಶಿಕ್ಷಕರನ್ನಾಗಲೀ ಅರ್ಥಮಾಡಿಕೊಳ್ಳಲಾಗದೆ ಶಾಲೆಯಲ್ಲಿ ಮುಂದುವರಿಯಲು ಹೆಣಗಬೇಕಾಗುತ್ತದೆ. ಆದ್ದರಿಂದ, "ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಪರಿಷತ್" (NCERT), ASERನಂತಹ ರಾಷ್ಟ್ರೀಯ ಸಾಧನೆಯ ಸರ್ವೇಕ್ಷಣಗಳ ವರದಿಯಲ್ಲಿ ಜಾರ್ಖಂಡ್ ರಾಜ್ಯದ ಮಕ್ಕಳ ಕಲಿಕಾ ಫಲಿತಾಂಶಗಳು ಪಟ್ಟಿಯ ಕೊನೆಯನ್ನು ಅಲಂಕರಿಸುವುದು ಯಥಾಪ್ರಕಾರ ನಡೆದೇ ಇದೆ. ಉಳಿದಂತೆ, ಸ್ಥಳೀಯ ಪಠ್ಯಪುಸ್ತಕಗಳು ದೊರೆಯದೇ ಇರುವುದು ಹಾಗು ರಾಜಕೀಯ ಅಸ್ಥಿರತೆಗಳೂ ಮಕ್ಕಳ ಕಳಪೆ ಸಾಧನೆಗೆ ಕಾರಣಗಳಾಗುತ್ತವೆ.

ಕುತೂಹಲಕಾರಿ ಸಂಗತಿಯೆಂದರೆ, ಈ ರಾಜ್ಯವು ಹನ್ನೆರಡು ಸ್ಥಳೀಯ (ಬುಡಕಟ್ಟು) ಮತ್ತು ಪ್ರಾದೇಶಿಕ ಭಾಷೆಗಳನ್ನು ಹಿಂದಿ ಹಾಗು ಆಂಗ್ಲಭಾಷೆಗಳ ನಂತರದ ರಾಜ್ಯದ ಅಧಿಕೃತ ಭಾಷೆಗಳೆಂದು ಅಧಿಸೂಚನೆ ಹೊರಡಿಸಿದೆ. ಇಷ್ಟಾಗಿಯೂ, ರಾಜ್ಯದ 40,000 ಪ್ರಾಥಮಿಕ ಶಾಲೆಗಳ ತರಗತಿಗಳಲ್ಲಿ ಮಕ್ಕಳ ಮಾತೃಭಾಷೆಯ ಬಳಕೆಗೆ ಯಾವುದೇ ಅವಕಾಶ ಇರಲಿಲ್ಲ. ಆಡಳಿತ ವರ್ಗವಾದರೋ ಅತಿಹೆಚ್ಚು ಇರುವ ಶಾಲೆ ತೊರೆಯುವ ಮಕ್ಕಳ ಪ್ರಮಾಣದ ಕುರಿತಾಗಲೀ, ಕನಿಷ್ಠ ಕಲಿಕಾ-ಫಲಿತಾಂಶಗಳ ವಿಚಾರವಾಗಿ-ಯಾಗಲೀ, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಆತಂಕ ಹುಟ್ಟಿಸುವ ಗೈರುಹಾಜರಿಯನ್ನು ಕುರಿತಾಗಲೀ ತಲೆಕೆಡಿಸಿಕೊಂಡಂತೆ ಇರಲಿಲ್ಲ. ರಾಜ್ಯದ ಬಹುಸಂಖ್ಯಾತ ಮಕ್ಕಳಿಗೆ ಸಂಬಂಧಿಸಿದ ಈ ಗಂಭೀರ ಸಮಸ್ಯೆಗಳ ಬಗ್ಗೆ ಎಲ್ಲೂ, ಯಾವ ವಿಧದ ಚರ್ಚೆಯೂ ಆಗಿರಲಿಲ್ಲ.

ಶಾಲೆಯ ಆರಂಭಿಕ ವರ್ಷಗಳಲ್ಲಿ ಮಕ್ಕಳ ಕಲಿಕಾ-ಅನುಭವವನ್ನು ಹಾಗು ಮಕ್ಕಳು ಶಾಲೆ ತೊರೆಯಲು ಇರುವ ಕಾರಣಗಳನ್ನು ಅರ್ಥಮಾಡಿಕೊಳ್ಳಲು ತಂಡವೊಂದನ್ನು ರಚಿಸಿ ಅದನ್ನು "ಮಾತೃಭಾಷಾ ಆಧಾರಿತ ಕ್ರಿಯಾತ್ಮಕ ಭಾಷಾ ಕಲಿಕೆ" (Mother-tongue based Active Language Learning -M-TALL) ಎಂದು ಹೆಸರಿಸಲಾಯಿತು.

'ಮಾತೃಭಾಷಾ ಆಧಾರಿತ ಕ್ರಿಯಾತ್ಮಕ ಭಾಷಾ ಕಲಿಕೆ' ಹಾಗು ಅದರ ಉಪಕ್ರಮಗಳು

ಶಾಲೆಗಳು, ಸಮುದಾಯಗಳು ಹಾಗು ಅಲ್ಲಿನ ಮಕ್ಕಳು ನೀಡಿದ ಹಿಮ್ಮಾಹಿತಿಯ ಆಧಾರದ ಮೇಲೆ ಭಾಷೆಗಳ ಆದ್ಯತೆಯನ್ನು ಸೂಚಿಸುವ ವರ್ಣ-ಚಿಹ್ನೆಗಳಿಂದ ಕೂಡಿದ ರಾಜ್ಯದ ಭಾಷಾ ನಕಾಶೆಯನ್ನು ರಚಿಸಲಾಯಿತು. ಈ ಪ್ರಯತ್ನದಿಂದ ಹೊರಹೊಮ್ಮಿದ ತಥ್ಯವೆಂದರೆ, ಇದಕ್ಕೆ ಪ್ರತಿಸ್ಪಂದಿಸಿದ ಶೇಕಡಾ 96ರಷ್ಟು ಮಂದಿ ಪ್ರಾಂತೀಯ ಆಡುಭಾಷೆಗಳಲ್ಲಿ ವ್ಯವಹರಿಸಿದರೆ, ಶೇಕಡಾ 4ರಷ್ಟು ಮಂದಿ ಮಾತ್ರ ತಮ್ಮ ಮಾತೃಭಾಷೆಯಾಗಿ ಹಿಂದಿಯಲ್ಲಿ ವ್ಯವಹರಿಸುತ್ತಿದ್ದರು. ಆದರೆ, ತಮ್ಮ ಪೋಷಕರೊಂದಿಗೆ ವ್ಯವಹರಿಸುವಾಗ, ಆಡುವಾಗ ಅಥವಾ ದೈನಂದಿನ ವ್ಯವಹಾರಗಳಲ್ಲಿ ನಿರತರಾಗಿರುವಾಗ ಬಹುತೇಕ ಮಕ್ಕಳು ತಮ್ಮದೇ ಪ್ರಾದೇಶಿಕ ಉಪಭಾಷೆಗಳನ್ನು, ಮನೆಯ ಆಡುಭಾಷೆಗಳನ್ನು ಬಳಸುತ್ತಿದ್ದರು. ಹೀಗಾಗಿ, ಬಹಳಷ್ಟು ಬಾರಿ ಭಾಷಾ ಭಿನ್ನತೆಗಳ ಕಾರಣದಿಂದ ಮಕ್ಕಳು ಕಲಿಕಾ-ಅಡಚಣೆಗಳನ್ನು ಎದುರಿಸುತ್ತಿದ್ದು, ಅದು ಬೇಸರಕ್ಕೆ ಎಡೆಮಾಡಿ, ಶಾಲೆ ತೊರೆಯುವುದರಲ್ಲಿ ಪರ್ಯಾಪ್ತಿ ಕಾಣುತ್ತಿತ್ತು ಎಂಬ ವಿಷಯ ನಿಚ್ಚಳವಾಯಿತು.

**ಸಚಿತ್ರ ಶಬ್ದಕೋಶಗಳ ಅಭಿವೃದ್ಧಿ**

ಈ ಫಲಿತಗಳ ಬಗೆಗೆ ವಿಚಾರ ಮಾಡುತ್ತಾ ಪ್ರತಿ ಸಮುದಾಯದಲ್ಲೂ ಮಕ್ಕಳು ತಮ್ಮ ಆರಂಭಿಕ ವರ್ಷಗಳಲ್ಲಿ ಏನನ್ನು ಮಾಡಲು ಇಚ್ಛಿಸುತ್ತಾರೆ ಎಂಬುದನ್ನು ಅರ್ಥಮಾಡಿಕೊಳ್ಳಲು ಬೇರೆ-ಬೇರೆ ಭಾಷಾತಜ್ಞರ ತಂಡಗಳೊಂದಿಗೆ ಚರ್ಚೆಗಳನ್ನು ಹಮ್ಮಿಕೊಳ್ಳಲಾಯಿತು.

ಅಂತಹ ಮಕ್ಕಳ ಸ್ನೇಹಿ ಕ್ಷೇತ್ರಗಳನ್ನು ಮಕ್ಕಳ ಮಾತೃಭಾಷೆ ಆಧಾರಿತ ಶಾಲಾ ಭಾಷಾ ತಯಾರಿ ಉಪಕ್ರಮಗಳ ಯೋಜನೆಗೆ ಪ್ರಸ್ತುತವಾದ ಸ್ಥೂಲ ವಿಷಯಗಳಾಗಿ ಕಲೆಹಾಕಲಾಯಿತು. ಮಕ್ಕಳು ಆಡಲು,

ಹಾಡಲು, ಕುಣಿಯಲು, ತಮ್ಮ ಸುತ್ತಲಿನ ನಾನಾ ರೀತಿಯ ಜನರೊಂದಿಗೆ, ತಮ್ಮ ಸ್ನೇಹಿತರೊಂದಿಗೆ ಚರ್ಚಿಸಲು, ಆಟಿಕೆಗಳನ್ನು ಮಾಡಲು, ಅನ್ವೇಷಿಸಲು, ಕಥೆಗಳನ್ನು ಕೇಳಲು ಮತ್ತು ಹೇಳಲು, ಸಚಿತ್ರ ಕಥೆ ಪುಸ್ತಕಗಳನ್ನು ಓದಲು ಬಯಸುತ್ತಾರೆ ಎಂಬುದನ್ನು ಕಂಡುಕೊಂಡೆವು. ಜೊತೆಗೆ ನಾವು ಮಕ್ಕಳ ಅಚ್ಚುಮೆಚ್ಚಿನ ಕಥೆಗಳು, ಹಾಡು, ಕುಣಿತ, ಗಾದೆ–ಒಗಟು, ಚಿತ್ರ, ಆಟಿಕೆ, ಆಟ, ಕಲೆ ಹಾಗು ಕರಕುಶಲ ವಸ್ತುಗಳು ಮತ್ತು ಇತರ ಅನುಭವಗಳನ್ನು ಕಲೆಹಾಕಿದೆವು.

2014ರಲ್ಲಿ, "ಮಾತೃಭಾಷಾ ಆಧಾರಿತ ಕ್ರಿಯಾತ್ಮಕ ಭಾಷಾ ಕಲಿಕೆ" ಕಾರ್ಯಕ್ರಮವು "ನನ್ನ ಭಾಷೆಯಲ್ಲಿ ನನ್ನ ಜಗತ್ತು" (Meri Bhasha Mein Meri Duniya) ಎಂಬ ದ್ವಿಭಾಷಾ ಸಚಿತ್ರ ಶಬ್ದಕೋಶಗಳನ್ನು ಒಂಬತ್ತು ಸ್ಥಳೀಯ ಹಾಗು ಪ್ರಾಂತೀಯ ಭಾಷೆಗಳಲ್ಲಿ ಅಂಗನವಾಡಿಗಳಲ್ಲಿ ಬಳಸಲು ಮತ್ತು ಶಿಕ್ಷಕರ ಹಾಗು ಮಕ್ಕಳ ಸಣ್ಣ ಗುಂಪುಗಳೊಂದಿಗೆ (ಹೆಚ್ಚು ವಿಭಿನ್ನ ಭಾಷಾ ಪರಿಸರಗಳಿಂದ ಮಕ್ಕಳಿದ್ದಷ್ಟೂ ಹೆಚ್ಚು ಪ್ರಯೋಜನಕಾರಿ) ಒಡನಾಡುವ ಪೋಷಕರ ಬಳಕೆಗಾಗಿ ಹೊರತಂದಿತು. ಮಕ್ಕಳು ಜೊತೆಗೂಡಿ, ಒಂದು ಪುಟವನ್ನು ತೆರೆದು, ಅಲ್ಲಿನ ಚಿತ್ರದ ವಿವಿಧ ಅಂಶಗಳನ್ನು ತಮ್ಮ ಮಾತೃಭಾಷೆಗಳಲ್ಲಿ ಚರ್ಚಿಸುವುದು ಹಾಗು ಆ ಪುಟದ ಪ್ರತಿ ವಸ್ತುವಿನೊಡನೆ ಅಥವಾ ಘಟನೆಯೊಡನೆ ತನ್ನ ಅನುಭವವನ್ನು ಹಂಚಿಕೊಳ್ಳುವುದು ಇದರ ಉದ್ದೇಶವಾಗಿತ್ತು. ಇದರಿಂದ ಪ್ರತಿ ಮಗುವಿಗೆ ಹಾಗು ಸಂಬಂಧಪಟ್ಟ ಶಿಕ್ಷಕರಿಗೆ ಅಥವಾ ಪೋಷಕರಿಗೆ ಬಳಸಲು ಸಮೃದ್ಧ ಸ್ಥಳೀಯ ಕಲಿಕಾ ಸಂಪನ್ಮೂಲವು ದೊರಕಿದಂತಾಯಿತು. ಇದು ಚಿತ್ರ ಹಾಗು ಪಠ್ಯದೊಂದಿಗಿನ, ಸಹಪಾಠಿಗಳು, ಶಿಕ್ಷಕರು ಹಾಗು ಪೋಷಕರ ನಡುವಿನ ಸಂವಾದಕ್ಕೆ ಅವಕಾಶ ಒದಗಿಸಿತು. ಇದು ಮಗುವಿನ (ಅಥವಾ ಮಕ್ಕಳ) ಭಾಷಾ ಕಲಿಕಾ ಕೌಶಲಗಳಿಗೆ ಭದ್ರ ಬುನಾದಿಯನ್ನು –ಮೊದಲು ಮಗುವಿನ ಮಾತೃಭಾಷೆಯಲ್ಲಿ, ಬಳಿಕ ಅದನ್ನು ಬಿಡದೆ ಅನುಸರಿಸಿ ಹಿಂದಿ ಮತ್ತಿತರ ಭಾಷೆಗಳಲ್ಲಿ–ಒದಗಿಸಲು ನೆರವಾಯಿತಲ್ಲದೆ, ಮಗುವಿನ ಜ್ಞಾನ, ಕೌಶಲಗಳು, ಮನೋಭಾವಗಳಲ್ಲಿ ಸಮೃದ್ಧಿಯನ್ನು ತರಲು, ವಿಷಯದ ಪರಿಕಲ್ಪನೆಯಲ್ಲಿ ಮಗುವಿನ ಆಸಕ್ತಿಯನ್ನು ಸೆಳೆಯಲು ನೆರವಿಗೆ ಬಂತು. ಇದೆಲ್ಲವನ್ನೂ, ಗುಂಪಿನ ಭಾಷಾ ವೈವಿಧ್ಯದ ಹಂತ ಹಾಗು ಗುಂಪಿನೊಂದಿಗಿನ ಒಡನಾಟಗಳ ಸ್ತರ ಮತ್ತು ದಿಕ್ಕಿಗೆ ಅನುಗುಣವಾಗಿ ಸಾಧಿಸಿತು.

ತರುವಾಯ, ಮೇಲಿನ ಪ್ರತಿ ವಿಷಯದ ಚಿತ್ರಗಳನ್ನೂ ವಿಭಿನ್ನ ಭಾಷಾ ತಂಡಗಳಿರುವ ಮಕ್ಕಳ ಜೊತೆ ಸಣ್ಣ ಪ್ರಮಾಣದ ಚರ್ಚೆಯಲ್ಲಿ ಕಲಿಕೆಯ ಪ್ರಾಥಮಿಕ ಸಾಮಗ್ರಿಯಾಗಿ ಬಳಸಲಾಯಿತು. ಈ ಚಿತ್ರಗಳಿಗೆ ಹೊಂದಿಕೊಂಡಂತೆ ತಮ್ಮ ಅನುಭವ ಮತ್ತು ವಿಚಾರಗಳನ್ನು ತಮ್ಮದೇ ಭಾಷೆಗಳಲ್ಲಿ ಹಂಚಿಕೊಳ್ಳುವಂತೆ ಅಂಗನವಾಡಿ ಕಾರ್ಯಕರ್ತೆಯರು ಹಾಗು ಶಿಕ್ಷಕರು ಮಕ್ಕಳನ್ನು ಹುರಿದುಂಬಿಸಿದರು.

ಭವಿಷ್ಯದಲ್ಲಿ ಬಳಸಿಕೊಳ್ಳಲು ಅನುಕೂಲವಾಗುವಂತೆ ಮಕ್ಕಳು ಬಳಸಿದ ಹೊಸ ಪದಗಳನ್ನು ಕಲಿಕಾ ಸುಗಮಗಾರರು (Facilitators) ಗುರುತು ಮಾಡಿಕೊಂಡರು. ಮಕ್ಕಳಿಂದ ಬಂದ ಹೊಸ ಕಥೆ ಹಾಗು ಪದಗಳನ್ನು ಮುಂದೆ ತರಗತಿಯಲ್ಲಿ ಬಳಸಲು ಸುಗಮಗಾರರು ಅವುಗಳನ್ನು ಗುರುತುಮಾಡಿ–ಕೊಳ್ಳಬೇಕಿತ್ತು. ಇದಕ್ಕಾಗಿ ಕೊಠಡಿಯ ಎರಡು ಮೂಲೆಗಳಲ್ಲಿ ಎರಡು ಪ್ರತ್ಯೇಕ ಪೆಟ್ಟಿಗೆಗಳನ್ನು (ಭಾಷಾ ಬುಟ್ಟಿ, ಭಾಷಾ ಭಂಡಾರ) ಇಡಲಾಯಿತು. ಈ ರೀತಿ ದೊರೆತ ಪದ ಹಾಗು ಕಥೆಗಳನ್ನು ಕ್ರಮೇಣ ಕಲೆಹಾಕುವ ಪ್ರಕ್ರಿಯೆಯು ಸಂಬಂಧಪಟ್ಟ ಸುಗಮಗಾರರಿಗೆ ತಮ್ಮದೇ ಸಂಸ್ಥೆಗಳಲ್ಲಿ ಶಬ್ದಕೋಶ, ಕಥೆಪುಸ್ತಕ ಹಾಗು ಹಾಡಿನ ಪುಸ್ತಕಗಳ ರೂಪದಲ್ಲಿ ಬಳಸಬಹುದಾದ ಕಲಿಕಾ ಸಂಪನ್ಮೂಲಗಳನ್ನು ರಚಿಸಿಕೊಳ್ಳಲು ಅನುವು ಮಾಡಿಕೊಟ್ಟಿತು. ಮಕ್ಕಳ ಮಾತೃ–ಭಾಷೆಗಳಲ್ಲಿ ನಡೆದ ಪ್ರಾಥಮಿಕ ಚರ್ಚೆಗಳಿಂದ ಮಕ್ಕಳು ತಮ್ಮ ಮೂಲಭೂತ ಭಾಷಾ ಕಲಿಕಾ ಕೌಶಲಗಳನ್ನು ಬಲಪಡಿಸಿಕೊಳ್ಳಲು ಅನುಕೂಲವಾಯಿತು. ಮಕ್ಕಳು ತಮ್ಮ ಪ್ರಾಥಮಿಕ ಭಾಷಾ ಕಲಿಕಾ ಕೌಶಲಗಳನ್ನು ಬಳಸಿಕೊಂಡು ಹಿಂದಿ ಭಾಷಾ ಸಂವಹನದ ಪ್ರಾಥಮಿಕ ತತ್ತ್ವಗಳನ್ನು ಕಲಿಯಲು ಅನುಕೂಲವಾಗಲೆಂದು ಕ್ರಮೇಣ ಈ ಚರ್ಚೆಗಳನ್ನು ಹಿಂದಿ ಭಾಷೆಯಲ್ಲಿ ನಡೆಸುವುದನ್ನು ಪ್ರೋತ್ಸಾಹಿಸಲಾಯಿತು. ಈ ಯೋಜನೆಯು ಇಡೀ ಸಮುದಾಯದ ಜನಪ್ರಿಯತೆಯನ್ನು ಗಳಿಸಿತು. ದೇಶದ ಯಾವುದೇ ಭಾಗದ ಗ್ರಾಮೀಣ ಜನರ ಹಾಗು ಮಕ್ಕಳ ಸಾಮಾಜಿಕ ಜೀವನದ ಅಂಶಗಳನ್ನು ಕುರಿತು ಚರ್ಚೆಗಳನ್ನು ಸುಗಮಗೊಳಿಸಲು ದ್ವಿಭಾಷಾ ಸಚಿತ್ರ ಶಬ್ದಕೋಶಗಳಿಗೆ ಇರುವ ಸಾಮರ್ಥ್ಯ ಹೇರಳವಾಗಿದೆ.

**ನುಡಿ ಕಟ್ಟೆ (Bhasha Puliya)**

ಶಾಲಾಪೂರ್ವ ಶಿಕ್ಷಣವನ್ನು ಮಕ್ಕಳ ಮೊದಲ ನುಡಿಯಲ್ಲಿ ದಾಟಿಸುವುದು ಉತ್ತಮ ಎಂಬುದು ಸಾರ್ವತ್ರಿಕ ಭಾವನೆಯಾಗಿದೆ. ಇದಕ್ಕಾಗಿ 2015ರಲ್ಲಿ M-TALL ("ಮಾತೃಭಾಷಾ ಆಧಾರಿತ ಕ್ರಿಯಾತ್ಮಕ ಭಾಷಾ ಕಲಿಕೆ")ಯು "ನುಡಿ ಕಟ್ಟೆ" (Bhasha Puliya) ಎಂಬ ಮಕ್ಕಳ ಭಾಷಾ ತಯಾರಿಯ ಕಂತೆಯನ್ನು ಅಭಿವೃದ್ಧಿಗೊಳಿಸಿದೆ. ಇದು ಮಕ್ಕಳ ಮನೆಯ ಆಡುಭಾಷೆಗಳು ಮತ್ತು ಜಾರ್ಖಂಡ್ ರಾಜ್ಯದ ಅಂಗನವಾಡಿ ಹಾಗು ಪ್ರಾಥಮಿಕ ಶಾಲೆ ಭಾಷೆಗಳ ನಡುವೆ ಸಂಪರ್ಕಸೇತುವಾಗಿ ಕೆಲಸಮಾಡುತ್ತದೆ. ಮಕ್ಕಳು ಈ ಕಲಿಕಾ ಚಟುವಟಿಕೆಗಳಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಳ್ಳಲು ಹಾಗು ತನ್ಮೂಲಕ, ಶಾಲಾಪೂರ್ವ ಶಿಕ್ಷಣ ಕಾರ್ಯಕ್ರಮದ ಮೂಲಘಟಕ ರೂಪದ ಅಪೇಕ್ಷಿತ ಕೌಶಲಗಳನ್ನು ಗಳಿಸಲು ಆಗುವಂತೆ ಒಂದು ಸರಣಿ ರೂಪದ ಮಗುಸ್ನೇಹಿ ಕಲಿಕಾ ಚಟುವಟಿಕೆಗಳನ್ನು ಈ ಕಂತೆಯೊಂದಿಗೆ ಕ್ರಮಬದ್ಧವಾಗಿ ಅಂತರ್ಗತಗೊಳಿಸ ಲಾಗಿದೆ.

ಕಲಿಕೆಯ ಹನ್ನೆರಡು ಮುಖ್ಯ ಹಂತಗಳನ್ನು ಚಟುವಟಿಕೆ ಮಾರ್ಗದರ್ಶಕ 12 ಪುಸ್ತಕಗಳ ಮೂಲಕ ಒಳಗೊಳ್ಳಲಾಯಿತು. ಈ ಹನ್ನೆರಡು ಪುಸ್ತಕಗಳನ್ನೂ ಅಳವಡಿಸಿಕೊಂಡು ಒಂದು ಸರಣಿಕ್ರಮದಲ್ಲಿ ಎಲ್ಲಾ ಚಟುವಟಿಕೆಗಳನ್ನೂ ಸ್ಪರ್ಶಿಸುವ ಕಲಿಕೆಯ ಏಣಿಗಳನ್ನು ರೂಪಿಸಲಾಯಿತು. ಜೊತೆಗೆ, ಮಕ್ಕಳ ಕಲಿಕೆಯ ಪ್ರಗತಿಯನ್ನು ತಿಳಿಯಲು ಪ್ರತ್ಯೇಕ ಕಲಿಕಾ ಮೂಲ್ಯಾಂಕನದ ಮಾದರಿಗಳನ್ನು, ಚಟುವಟಿಕೆ ಪ್ರಗತಿ ಪಟ್ಟಿಯನ್ನು, ನುಡಿಕಟ್ಟೆಯನ್ನು ಪರಿಚಯಿಸುವ ಮಾರ್ಗದರ್ಶಕ ಪುಸ್ತಕವನ್ನು, ಸಂಪೂರ್ಣ ವರ್ಷದ ಶೈಕ್ಷಣಿಕ ಕ್ಯಾಲೆಂಡರ್ ಒಂದನ್ನು ಹಾಗು ಜಾನಪದ ಕಥೆ ಮತ್ತು ಹಾಡುಗಳನ್ನು ಕ್ರಮಬದ್ಧವಾಗಿ ಜೋಡಿಸಬಹುದಾದ ಕಡತಗಳನ್ನು ಅಭಿವೃದ್ಧಿಗೊಳಿಸಲಾಯಿತು.

ಈ ಕಾರ್ಯಕ್ರಮವು ಮಕ್ಕಳ ಶಾಲಾ ತಯಾರಿ ಹಾಗು ಭಾಷಾ ಕಲಿಕೆಯ ಕೌಶಲಗಳ ಮೇಲೆ ಮಹತ್ತ್ವಪೂರ್ಣ ಪ್ರಭಾವ ಬೀರಿದ್ದು ಮಾತ್ರವೇ ಅಲ್ಲದೆ, ಪ್ರತಿ ಮಗುವೂ ಕಲಿಕಾ ಪ್ರಕ್ರಿಯೆಯಲ್ಲಿ ನಲಿವಿನಿಂದ ಪಾಲ್ಗೊಳ್ಳಲು, ಭಾಷಾ ಕಲಿಕೆಯ ಕೌಶಲಗಳನ್ನು ಗಳಿಸಲು ಹಾಗು ವರ್ಣಮಾಲೆ, ಸಂಖ್ಯೆಗಳ ಪರಿಚಯ ಪಡೆಯಲು ಹಾಗು ವಿಷಯಾಧಾರಿತ ಕಲಿಕೆಯನ್ನು ಎದುರುನೋಡುವ ಶಾಲಾ ದಿನಗಳಿಗಾಗಿ ಸಜ್ಜಾಗಲು ಮಾತೃಭಾಷಾ–ಆಧಾರಿತ ಶಾಲಾಪೂರ್ವ

ಶಿಕ್ಷಣವು ಎಷ್ಟು ಅನುಕೂಲಕಾರಿ ಎಂಬುದಕ್ಕೆ ಸ್ಪಷ್ಟ ಸಾಕ್ಷ್ಯಾಧಾರವನ್ನು ಒದಗಿಸಿತು. ಮಕ್ಕಳು ತಂಡಗಳಲ್ಲಿ ಕಲಿಕಾ ಚಟುವಟಿಕೆಗಳಲ್ಲಿ ಭಾಗವಹಿಸುವುದು ಹೇಗೆ, ಒಟ್ಟಾಗಿ ಕಲೆತು ಕಲಿಯುವುದು ಹೇಗೆ ಎಂಬುದನ್ನು ಕೂಡಾ ಕಲಿಯುತ್ತಾರೆ.

**ಕಾರ್ಯಕ್ರಮಗಳ ಯಶಸ್ಸು**

ಭಾಷಾ ಕಲಿಕೆಗೆ ಬಹುಬಗೆಯ ವಿಧಾನದ ಅಗತ್ಯವಿದೆ ಎಂಬುದು ಈಗ ದೃಢಪಟ್ಟಿದೆ. ಸಮುದಾಯದ ಭಾಷಾ ಕಾರ್ಯಕರ್ತರೊಂದಿಗೆ ಸಾಹಿತಿಗಳು ಕುಳಿತು, ಅವರ ಸಮುದಾಯದಲ್ಲಿ ಮಾಡಬಹುದಾದ ಹಾಗು ಅವರ ಪ್ರದೇಶದಲ್ಲಿನ ಮಕ್ಕಳು ಸಕ್ರಿಯವಾಗಿ ಭಾಗವಹಿಸಲು ಸಾಧ್ಯವಿರುವ ಪ್ರಧಾನ ಚಟುವಟಿಕೆಗಳ ಪಟ್ಟಿ ತಯಾರು ಮಾಡಿದರು. ಉದಾಹರಣೆಗೆ, ಬೇಸಿಗೆಯಲ್ಲಿ ವಿವಿಧ ಹಬ್ಬ ಹಾಗು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು, ಬಗೆ–ಬಗೆಯ ಸಂತೆಗಳಿಗೆ, ಹೊಲ–ಗದ್ದೆಗಳಿಗೆ, ಹಣ್ಣಿನ ತೋಟಗಳಿಗೆ ಖುಷಿಯಿಂದ ಭೇಟಿ ನೀಡುವುದು ಮತ್ತು ಬೇಸಿಗೆ ಹಬ್ಬಗಳನ್ನು ಆಚರಿಸಲು ಹತ್ತಿರದ ಪ್ರದೇಶಗಳಿಗೆ ಭೇಟಿ ನೀಡುವುದು ಎಲ್ಲವೂ ಮಕ್ಕಳ ದಿನನಿತ್ಯದ ಜೀವನದ ಭಾಗಗಳಾಗಿದ್ದು, ಶೈಕ್ಷಣಿಕ ವರ್ಷದ ಮೊದಲ ಭಾಗದಲ್ಲಿ ಕಲಿಕೆಗೆಂದು ನಿಗದಿಪಡಿಸಿದ ಪರಿಕಲ್ಪನೆಗಳನ್ನು ಮಕ್ಕಳು ಕಲಿಯಲು ಇವು ನೆರವಿಗೆ ಬರುತ್ತವೆ. ಉದಾಹರಣೆಗೆ, ಒಂದನೇ ತರಗತಿಯ ಮಕ್ಕಳಿಗೆ ಹಾಡುವ, ಜೊತೆಗೂಡಿ ಆಡುವ, ಕಥೆ ಕೇಳುವ, ಅನುಭವಗಳನ್ನು ಹಂಚಿಕೊಳ್ಳುವ, ಚಿತ್ರಬಿಡಿಸುವ ಹಾಗು ಚಿತ್ರಗಳನ್ನು ಅರ್ಥಮಾಡಿಕೊಳ್ಳುವ ಇವೇ ಮೊದಲಾದ ವಿಶಾಲ ವ್ಯಾಪ್ತಿಯ ಆಸಕ್ತಿದಾಯಕ ಕಲಿಕಾ ಚಟುವಟಿಕೆಗಳಲ್ಲಿ ಭಾಗವಹಿಸಲು ಅನುವು ಮಾಡಿಕೊಡಲಾಗುತ್ತದೆ. ಆ ಮೂಲಕ ಅವರು ಶಾಲೆಯ ಕಲಿಕಾ ಚಟುವಟಿಕೆಗಳಲ್ಲಿ ಇನ್ನೂ ಹೆಚ್ಚಿನ ಆಸಕ್ತಿ ತೋರಲು ಸಾಧ್ಯವಾಗುತ್ತದೆ.

ಭಾಷಾ ವಿಷಯಗಳನ್ನು ಅಭಿವೃದ್ಧಿಗೊಳಿಸುವವರು ಸಾಮುದಾಯಿಕ ಹಬ್ಬಗಳಿಗೆ ಹಾಗು ವೃತ್ತಿಗಳಿಗೆ ಸಂಬಂಧಿಸಿದ ಸಂದರ್ಭ, ಕಥೆ, ಪದ್ಯ, ಒಗಟು ಮೊದಲಾದವುಗಳನ್ನು ಗುರುತಿಸುವಂತೆಯೇ, ಗಣಿತ ವಿಷಯದ ವಿನ್ಯಾಸಕರು ರಂಗೋಲಿ, ಗೋಡೆ ವಿನ್ಯಾಸಗಳು, ಸಮುದಾಯದ ವೃತ್ತಿಗಳಿಗೆ ಸಂಬಂಧಿಸಿದ ವಸ್ತುಗಳ ಆಕಾರ ಹಾಗು ಗಾತ್ರಗಳ ಮೂಲಕ ಮಕ್ಕಳನ್ನು ಗಣಿತೀಯ ಅನ್ವೇಷಣೆ, ಚಿಂತನೆ, ಚರ್ಚೆಗಳಲ್ಲಿ ತೊಡಗುವಂತೆ ಮಾಡುವ ಆಸಕ್ತಿದಾಯಕ ಕಲಿಕಾ ಚಟುವಟಿಕೆಗಳ ಆಯೋಜನೆ ಮಾಡಿದ್ದರು.

**ಚಟುವಟಿಕೆ ಆಧಾರಿತ ಕಲಿಕಾ ಪಥಗಳು**

ಎಲ್ಲಾ ಮಕ್ಕಳೂ ಸಂಭ್ರಮ ಸಡಗರಗಳಿಂದ ತಮ್ಮನ್ನು ತೊಡಗಿಸಿಕೊಳ್ಳುವಂತಹ ಬಹುಬಗೆಯ ಕಲಿಕಾ ಚಟುವಟಿಕೆಗಳನ್ನು ಶೈಕ್ಷಣಿಕ ವರ್ಷದ ವಿವಿಧ ತ್ರೈಮಾಸಿಕಗಳಿಗೂ ವಿನ್ಯಾಸ–ಗೊಳಿಸಲಾಗಿತ್ತು. ಪುಸ್ತಕದ ಪ್ರತಿ ಅಧ್ಯಾಯವೂ ಮಕ್ಕಳು ಜೀವನದ ವೈವಿಧ್ಯವನ್ನು ಸವಿಯುವಂತೆ ಮಾಡುವ ವಿವಿಧ ರೀತಿಯ ಕಲಿಕಾ ಯೋಜನೆಗಳನ್ನು ಒಳಗೊಳ್ಳುವಂತೆ ವಿನ್ಯಾಸಗೊಳಿಸಲಾಗಿದ್ದು, ಮಕ್ಕಳು ಪೂರ್ವನಿರ್ಧಾರಿತ ಕಲಿಕೆಯ ಗುರಿಗಳನ್ನು ತಲುಪಲು ಬೇಕಿರುವಷ್ಟನ್ನು ಕಲಿಯಲು ಸಾಧ್ಯವಾಗುವಂತಿತ್ತು. ಉದಾಹರಣೆಗೆ, ಭಾಷಾ ಪುಸ್ತಕಗಳ ರಚನೆಕಾರರು ವಿಷಯವನ್ನು ಕಥೆ, ಹಾಡು, ಗಾದೆ, ಒಗಟು, ನಾಟಕ ಹಾಗು ರೂಪಕಗಳ ರೂಪದಲ್ಲಿ ವಿನ್ಯಾಸಗೊಳಿಸಿ ಭಾಷೆಯ ಶ್ರೀಮಂತಿಕೆಯನ್ನು ಪರಿಚಯಿಸಲು ಮುಂದಾದರು. ಇವು ಮಕ್ಕಳನ್ನು ನಲಿವಿನಿಂದ ಕೂಡಿದ ಸೃಜನಾತ್ಮಕ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡುತ್ತಾ, ತನ್ಮೂಲಕ, ವಿಷಯದ ಸೌಂದರ್ಯ ಮತ್ತು ವೈವಿಧ್ಯವನ್ನು ಕಂಡುಕೊಳ್ಳಲು ನೆರವು ನೀಡುವಂತಿದ್ದವು. ಇವೆಲ್ಲದರಲ್ಲಿ ಪಾಲ್ಗೊಳ್ಳುತ್ತಾ, ಮಕ್ಕಳು ತಮಗೆ ಪರಿಚಯವಿರುವ ಸ್ಥಳೀಯ ಅನುಭವ ಹಾಗು ಘಟನೆಗಳನ್ನೇ ಬಳಸಿ ತಾವು ಕಲಿಕೆಯಲ್ಲಿ ಸೃಜನಾತ್ಮಕವಾಗಿ ತೊಡಗಿಸಿ–ಕೊಳ್ಳುವಂತೆ ವಿಷಯವನ್ನು ಹೇಗೆ ರೂಪಿಸಲಾಗಿದೆ ಎಂದು ಕೂಡ ಕಂಡುಕೊಳ್ಳುತ್ತಾರೆ.

**ಸಮುದಾಯ ಬೆಂಬಲಿತ ಬೋಧನ ಪ್ರಕ್ರಿಯೆಗಳು**

ಕಥೆಗಾರರು, ಗಾಯಕರು, ನೃತ್ಯಪಟುಗಳು, ಸಂಗೀತಗಾರರು, ಕವಿಗಳು, ಕಲಾವಿದರು, ಗಾದೆ–ಒಗಟು ಇತ್ಯಾದಿಗಳ ಭಂಡಾರವೇ ಆಗಿರುವಂತಹ ಸಮುದಾಯದ ಸಂಪನ್ಮೂಲ ವ್ಯಕ್ತಿಗಳು ಶಾಲೆಗಳೊಂದಿಗೆ ಸಹಕರಿಸುವುದನ್ನು ಹಾಗು ಅವರೆಲ್ಲರೂ ಶಾಲೆಗಳಿಗೆ ಭೇಟಿ ನೀಡಿ ತಮ್ಮ ಚಟುವಟಿಕೆಗಳನ್ನು ಶಾಲಾ ಶಿಕ್ಷಕರ ಜೊತೆಗೂಡಿ ನಿರ್ವಹಿಸುವುದರ ಮೂಲಕ ಬೋಧನಾ ಪ್ರಕ್ರಿಯೆಗೆ ಹೊಸ ಆಯಾಮವನ್ನು ತರುವುದನ್ನೇ ಪಠ್ಯಪುಸ್ತಕ ಲೇಖಕರು ಗುರಿಯಾಗಿ ಇರಿಸಿಕೊಂಡರು. ಮಕ್ಕಳು ತಮಗೆ ಪರಿಚಯವಿರುವ ವ್ಯಕ್ತಿಗಳು, ತಮ್ಮ ಸಂಬಂಧಿಕರು ಶಾಲೆಯಲ್ಲಿ ಶಿಕ್ಷಕರ ಪಾತ್ರದಲ್ಲಿ ಕಾಣಿಸಿಕೊಳ್ಳುವುದನ್ನು ಕಂಡು ಮೂಕವಿಸ್ಮಿತರಾಗುತ್ತಾರೆ. ಸಮುದಾಯದ ಸಂಪನ್ಮೂಲ ವ್ಯಕ್ತಿಗಳು ತಮ್ಮ ಸಮೃದ್ಧ ಕೌಶಲಗಳೊಂದಿಗೆ ತರಗತಿಯ ಕಲಿಕೆಯ ಗುರಿಗಳ ಕಡೆಗೆ ಮಕ್ಕಳನ್ನು ನಿರ್ದೇಶಿಸುವಲ್ಲಿ ತಮ್ಮ ಜ್ಞಾನ ಹಾಗು ಕೌಶಲಗಳ ಪ್ರದರ್ಶನಕ್ಕೆ ಒಂದು ಅವಕಾಶ ಕಂಡುಕೊಳ್ಳುವಂತಾಗುತ್ತದೆ. ಈ ಸಮುದಾಯ–ಆಧಾರಿತ ವಿಧಾನವು ಶಾಲೆಯ ಬೋಧನಕಲಾ ಪ್ರಕ್ರಿಯೆಗಳನ್ನು ಗಮನಾರ್ಹವಾಗಿ ಶ್ರೀಮಂತಗೊಳಿಸುತ್ತದೆ.

**ಶ್ರೇಣೀಕೃತ ವಾಚನ ಸಂಪನ್ಮೂಲಗಳು**
**(Graded reading resources)**

ಮೊದಲನೇ ತರಗತಿಗಾಗಿ ಸುಮಾರು ಇಪ್ಪತ್ತು ದೊಡ್ಡ ಕಥೆ–ಪುಸ್ತಕಗಳಿದ್ದು, ಅವುಗಳಲ್ಲಿ ಭಾಷೆ ಹಾಗು ಗಣಿತಕ್ಕೆ ಸಂಬಂಧಿಸಿದಂತೆ ಅನೇಕ ಶಿಶುಸ್ನೇಹಿಯಾದ ರೋಚಕ ಕಥೆಗಳಿವೆ. ದೊಡ್ಡ ಅಕ್ಷರಗಳಲ್ಲಿ ಸಂಕ್ಷೇಪ ಮಾಹಿತಿ ಒದಗಿಸುವ ಈ ಕಥೆ ಪುಸ್ತಕಗಳಿಗೆ ಆಕರ್ಷಕ ವರ್ಣರಂಜಿತ ಚಿತ್ರಗಳನ್ನು ರಚಿಸಲಾಗಿದೆ. ಮಕ್ಕಳಿಗೆ ಪುಸ್ತಕದ ಚಿತ್ರಗಳನ್ನು ತೋರಿಸಿ ಅಲ್ಲಿರುವ ಬೆಕ್ಕು, ಮರ, ತಾಯಿ ಇತ್ಯಾದಿ ಪಠ್ಯಕ್ಕೆ ಅವರನ್ನು ಪರಿಚಯಿಸಲು ಶಿಕ್ಷಣ ಸುಗಮಗಾರರು ಈ ಪುಸ್ತಕಗಳನ್ನು ಬಳಸುತ್ತಾರೆ. ಇವುಗಳನ್ನು ಬಳಸಿಕೊಂಡು ವರ್ಣಮಾಲೆಯ ಅಕ್ಷರಗಳು ಮತ್ತು ಸಂಖ್ಯೆಗಳನ್ನು ತಮ್ಮ ಮೊದಲ ವರ್ಷದಲ್ಲೇ ಕ್ರಮೇಣ ಪರಿಚಯ ಮಾಡಿಕೊಳ್ಳುತ್ತಾರೆ. ಎರಡನೇ ವರ್ಷಕ್ಕಾಗಿ ಮತ್ತೂ ಇಪ್ಪತ್ತು ಸಣ್ಣ ಕಥೆ ಪುಸ್ತಕಗಳಿದ್ದು, ಅವುಗಳಲ್ಲಿ ಹೆಚ್ಚಿನ ಪಠ್ಯವೂ, ಗಾತ್ರದಲ್ಲಿ ಸಣ್ಣದಾದ ವರ್ಣಮಯ ಚಿತ್ರಗಳೂ ಇವೆ. ಮಕ್ಕಳ ವಾಚನಾಭ್ಯಾಸವನ್ನು ಉತ್ತಮಗೊಳಿಸಲು ಅವುಗಳನ್ನು ವಿನ್ಯಾಸಗೊಳಿಸಲಾಗಿದೆ.

ಮುಖ್ಯ ಪರಿಕಲ್ಪನೆಗಳನ್ನು ಪರಿಚಯಿಸುವ ಅಲ್ಲಿನ ಚಟುವಟಿಕೆಗಳು ಮಕ್ಕಳ ವಯಸ್ಸಿಗೆ ಸೂಕ್ತವಾಗಿವೆಯೇ, ರೋಚಕತೆ ಕಾಯ್ದುಕೊಂಡಿವೆಯೇ, ಸಂದರ್ಭೋಚಿತವಾಗಿಯೂ, ಆಸಕ್ತಿದಾಯಕವಾಗಿಯೂ ಇವೆಯೇ ಎಂಬುದರ ಬಗ್ಗೆ ವಿಷಯ ವಿನ್ಯಾಸಕರು ಎಚ್ಚರವಹಿಸಿದ್ದರು. ಮಕ್ಕಳಿಗೆ ಯಾವುದೇ ಅಧ್ಯಾಯವೂ ಉದ್ದವಾಗಿ ತೋರದಂತೆ, ಅಲ್ಲಿನ ಪಠ್ಯವು ಕಠಿಣವಾಗಿಯೂ ಇರದಂತೆ ಸಮತೋಲನ ಕಾಯ್ದುಕೊಳ್ಳಲಾಗಿದೆ. ಜೊತೆಗೆ, ಶಿಕ್ಷಕರಿಗೆ ಸೂಚನೆಗಳನ್ನೂ, ಇತರ ವಿವರಣೆಗಳನ್ನೂ

ಅದು ಒಳಗೊಂಡಿದೆ. ಸಮುದಾಯಗಳಲ್ಲಿ ಮಕ್ಕಳ ಜೀವನ ಹಾಗು ಅನುಭವಗಳನ್ನು ಚಿತ್ರಿಸುವ ವರ್ಣಚಿತ್ರಗಳು ಮಕ್ಕಳ ಮತ್ತು ಶಿಕ್ಷಣ ಸುಗಮಗಾರರ ಚಿಂತನೆ, ಹರ್ಷಾನುಭವಗಳನ್ನು ಉದ್ದೀಪಿಸುವಂತೆ ರಚಿತವಾಗಿವೆ.

**ಮಕ್ಕಳು ಹೇಗೆ ಕಲಿಯಬಹುದು**

ಪ್ರತಿ ಮಗುವೂ ಕಲಿಯುವುದನ್ನು ಖಾತ್ರಿಪಡಿಸಲು ಮಾತೃಭಾಷಾ ಆಧಾರಿತ ಬಹುಭಾಷಾ ಶಿಕ್ಷಣ  ಕಾರ್ಯಕ್ರಮವು (Multi-Lingual Education-MTB-MLE) ಕಾರ್ಯಗತವಾಗಿರುವ ಶಾಲೆಗಳ ಕೆಲವು ಪ್ರಮುಖ ಲಕ್ಷಣಗಳೆಂದರೆ: ಉಲ್ಲಾಸಭರಿತ ಭೌತಿಕ ಹಾಗು ಶೈಕ್ಷಣಿಕ ವಾತಾವರಣ, ಚೆನ್ನಾಗಿ ಮನನಮಾಡಲ್ಪಟ್ಟ ಬೋಧನಕಲೆಯ ಯೋಜನೆಗಳು ಮತ್ತು ಪ್ರಕ್ರಿಯೆಗಳು ಹಾಗು ಸಮುದಾಯದ ಸಂಪನ್ಮೂಲ ತಂಡಗಳೊಂದಿಗೆ ಕಲಿಕೆ ಸಂಬಂಧವಾಗಿ ಸಹಕಾರ. ಇದರೊಂದಿಗೆ 'ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ' (DIET), ವಲಯ ಸಂಪನ್ಮೂಲ ಕೇಂದ್ರಗಳು (BRC), 'ಕ್ಲಸ್ಟರ್ ಸಂಪನ್ಮೂಲ ಸಂಚಾಲಕ'ರ (CRC) ಹಾಗು ಸರ್ಕಾರೇತರ ಸಂಘಟನೆಗಳ ಬೆಂಬಲವನ್ನೂ ಒಳಗೊಂಡಿದೆ. ಶಾಲೆಯನ್ನು ಗ್ರಾಮ / ಸಮುದಾಯದ ಸಂಶೋಧನೆಯ ಹಾಗು ನವೀಕರಣದ ಕೇಂದ್ರವಾಗಿ ಕಾಣಲಾಗುತ್ತದೆ. ಕೆಲವು ಮುಖ್ಯ ಲಕ್ಷಣಗಳು ಇಂತಿವೆ:

**ಸಜ್ಜುಗೊಂಡಿರುವ ಶಾಲೆ ಮತ್ತು ಸಮಾಜ**

ಪಠ್ಯಪುಸ್ತಕಗಳೊಂದಿಗೆ ನಾವು ಪರಿಕಲ್ಪನಾ ಟಿಪ್ಪಣಿಗಳು ಹಾಗು ತರಬೇತಿಯ ಘಟಕಗಳನ್ನು ರಚಿಸಿಕೊಂಡೆವು. ಸ್ಥಳೀಯರ ಜನಸಂಖ್ಯೆ ಹೆಚ್ಚಾಗಿ ಇರುವ ಹತ್ತು ಜಿಲ್ಲೆಗಳಲ್ಲಿ ಸ್ಥಳೀಯ ಭಾಷೆಗಳಲ್ಲಿ ಮಾತನಾಡುವ ಮಕ್ಕಳು ಮಾತ್ರ ಇರುವ ಸುಮಾರು ಒಂದು ಸಾವಿರ ಶಾಲೆಗಳನ್ನು ಭಾಷಾವಾರು ಸಮೀಕ್ಷೆಯ ಮೂಲಕ ಆರಿಸಿಕೊಳ್ಳಲಾಯಿತು. ಮೊದಲಿಗೆ, ಹೊಸ ಪಠ್ಯಪುಸ್ತಕಗಳನ್ನು ಬಳಸಿ ಮಾತೃಭಾಷಾ ಆಧಾರಿತ ಬಹುಭಾಷಾ ಶಿಕ್ಷಣ ಕಾರ್ಯಕ್ರಮದ (Multi-Lingual Education-MTB-MLE) ಉಪಕ್ರಮಕ್ಕಾಗಿ ಸರ್ಕಾರದ ಯೋಜನೆಯನ್ನು ಶಿಕ್ಷಕರು ಹಾಗು ಸಮುದಾಯದ ಸದಸ್ಯರಿಗೆ ಪರಿಚಯಿಸಲು ಈ ಶಾಲಾ ಪ್ರದೇಶಗಳಲ್ಲಿ ಸೂಕ್ತ ಪರಿಸರ–ನಿರ್ಮಾಣದ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳಲಾಯಿತು. ಈ ಶಾಲೆಗಳ ಶಿಕ್ಷಕರಿಗೆ ಈ ನೂತನ ವಿಧಾನಕ್ಕೆ ಸಂಬಂಧಿಸಿದ ವಿಷಯ ಹಾಗು ಬೋಧನಕಲೆಯ ಪ್ರಕ್ರಿಯೆಗಳ ಬಗ್ಗೆ ತರಬೇತಿ ನೀಡಿ ಅವನ್ನು ಪರಿಚಯ ಮಾಡಿಕೊಡಲಾಯಿತು.

**ಸಮಗ್ರ ಸಮುದಾಯವನ್ನು ತೊಡಗಿಸುವ ಕಾರ್ಯ**

ಕಥೆಗಾರರು, ಗಾಯಕರು, ನೃತ್ಯಪಟುಗಳು, ಸಂಗೀತಗಾರರು, ಗಾದೆ–ಒಗಟುಗಳ ರಚನಕಾರರು, ಆಟಿಕೆಗಳ ತಯಾರಕರು, ಹಾಸ್ಯನಟರು ಇವರೇ ಮೊದಲಾದವರನ್ನು ಒಳಗೊಂಡ ಸಮುದಾಯ ಸಂಪನ್ಮೂಲ ತಂಡಗಳನ್ನು ಪ್ರತಿ ಶಾಲೆಯಲ್ಲೂ ಅಣಿಗೊಳಿಸಲಾಯಿತು. ಶಾಲೆ ಮತ್ತು ಸಮುದಾಯ ಸಂಪನ್ಮೂಲ ತಂಡಗಳ ನಡುವೆ ನಡೆದ ಗೋಷ್ಠಿಗಳು ವಿವಿಧ ವಿಷಯಗಳಲ್ಲಿ ಬೋಧನಕಲೆಯ ಪ್ರಕ್ರಿಯೆಗಳನ್ನು ಸುಗಮಗೊಳಿಸುವಲ್ಲಿ ಸಂಪನ್ಮೂಲ ವ್ಯಕ್ತಿಗಳ ಪಾತ್ರಗಳನ್ನು ಪಠ್ಯಪುಸ್ತಕಗಳೊಡನೆ ಬೆಸೆಯುವ ಕೆಲಸವನ್ನು ನೆರವೇರಿಸಿದವು. ಬಳಿಕ, ಒಂದು ನಿರ್ದಿಷ್ಟ ಶಾಲೆಗೆ ಯಾವ ತಂಡವು ಅಲ್ಲಿನ ಮಕ್ಕಳೊಡನೆ ಕೆಲಸಮಾಡಲು, ಅವರು ಅಪೇಕ್ಷಿಸುವ ಜ್ಞಾನ ಹಾಗು ಕೌಶಲಗಳನ್ನು ದಾಟಿಸಲು ಅಗತ್ಯವಿರುವ ತಯಾರಿ ಮಾಡಿಕೊಂಡು ಭೇಟಿ ನೀಡುತ್ತವೆ ಎಂಬುದರ ಬಗ್ಗೆ ಸೂಚನೆಯಿರುವ ಒಂದು ಶೈಕ್ಷಣಿಕ ಕ್ಯಾಲೆಂಡರನ್ನು ಶಾಲೆಗಳು ರೂಪಿಸಿದವು.

**ಸರ್ಕಾರದ ಭಾಗೀದಾರಿಕೆ**

ಈಗ ಜಾರ್ಖಂಡ್ ಸರ್ಕಾರವು ಈ ಸಾಮಗ್ರಿ ಹಾಗು ತರಬೇತಿಯ ಪ್ರಯೋಜನ ಪಡೆದು ಮಾತೃಭಾಷಾ ಆಧಾರಿತ ಬಹುಭಾಷಾ ಶಿಕ್ಷಣ ಕಾರ್ಯಕ್ರಮವನ್ನು (Mothertongue based Multi-lingual Education-MTB-MLE) ರಾಜ್ಯದ ಹತ್ತು ಜಿಲ್ಲೆಗಳ ಸುಮಾರು ಒಂದು ಸಾವಿರ ಶಾಲೆಗಳಲ್ಲಿ ಜಾರಿಗೆ ತಂದಿದೆ. ಇದಕ್ಕಾಗಿ ಪ್ರಾಥಮಿಕ ಶಾಲಾ ಹಂತದ  ಪಠ್ಯಪುಸ್ತಕಗಳನ್ನು ಪ್ರಸ್ತುತ ಲೇಖಕನ ಮಾರ್ಗದರ್ಶನದಲ್ಲಿ ಏಳು ಸ್ಥಳೀಯ ಹಾಗು ಪ್ರಾದೇಶಿಕ ಭಾಷೆಗಳಲ್ಲಿ ಅಭಿವೃದ್ಧಿಗೊಳಿಸಲಾಯಿತು. ಭಾಷೆ ಹಾಗು ಗಣಿತದ ಪಠ್ಯಪುಸ್ತಕಗಳು ಮಕ್ಕಳು, ಶಿಕ್ಷಕರು ಮತ್ತು ಸಮುದಾಯಗಳ ಸದಸ್ಯರಲ್ಲಿ ಉತ್ಸಾಹ ಹಾಗು ಆಸಕ್ತಿಗಳ ಭಾರಿ ಅಲೆಯನ್ನೇ ಹುಟ್ಟುಹಾಕಿದೆ. ಈ ಸಮುದಾಯ–ಆಧಾರಿತ ವಿಧಾನವು ಕ್ರಿಯಾಶೀಲ ವಿದ್ಯಾರ್ಥಿಗಳು, ಉತ್ಸುಕ ಶಿಕ್ಷಕರು ಹಾಗು ಜೀವಂತಿಕೆಯಿಂದ ತುಂಬಿತುಳುಕುವ ಸಮುದಾಯ ಬೆಂಬಲಿತ ಚಟುವಟಿಕೆಗಳ ಮೂಲಕ ಶಾಲೆಗಳು ಪರಿವರ್ತನೆಯ ಹಾದಿ ತುಳಿಯುವಂತೆ ಮಾಡಿದೆ.

**ಮುಕ್ತಾಯ**

ಮಾತೃಭಾಷಾ ಆಧಾರಿತ ಬಹುಭಾಷಾ ಶಿಕ್ಷಣದ ಕಾರ್ಯಕ್ರಮವು ಶಾಲೆಗಳಲ್ಲಿ ಪರಿವರ್ತನೆ ತಂದುದಲ್ಲದೇ, ಇದರಲ್ಲಿ ತೊಡಗಿಸಿ–ಕೊಂಡಿರುವ ಸ್ಥಳೀಯ ಸಮುದಾಯಗಳಲ್ಲಿ ಪ್ರಚಂಡ ಉತ್ಸಾಹ, ಸಂಭ್ರಮಗಳನ್ನು ಹುಟ್ಟುಹಾಕಿದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ದಾಖಲಾತಿ ಹಾಗು ಹಾಜರಿಗಳೆರಡೂ ಗಣನೀಯವಾಗಿ ಸುಧಾರಿಸಿದ್ದರೆ, ಶಾಲೆ ತೊರೆಯುವ ಮಕ್ಕಳ ಪ್ರಮಾಣವೂ ಈ ಶಾಲೆಗಳಲ್ಲಿ ಗಣನೀಯವಾಗಿ ಕುಸಿದಿದೆ. ಒಂದು ಕಾಲದಲ್ಲಿ ಬಿಕೋ ಎನ್ನುತ್ತಿದ್ದ ತರಗತಿ ಕೊಠಡಿಗಳಲ್ಲಿ ಈಗ ನವಚೈತನ್ಯ, ಉತ್ಸಾಹ, ಸಮುದಾಯದ ಬೆಂಬಲದ ಬಲ ಹಾಗು ಕಲಿಕಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಹುರುಪು ಕಾಣಿಸುತ್ತಿದೆ. ಸಮುದಾಯದ ಸದಸ್ಯರ ಸಕ್ರಿಯ ಸಹಕಾರ, ಜಾನಪದ ಆಧರಿತ ಪಠ್ಯವಿಷಯಗಳ ಮೂಲಕ ತರಗತಿಯ ಪ್ರಕ್ರಿಯೆಗಳಲ್ಲಿ ನವಚೈತನ್ಯದ ಸಂಚಾರವಾಗಿದ್ದು, ಅದರ ಅಂತಿಮ ಪರಿಣಾಮವಾದ ಸಾಮಾಜಿಕ ಬದಲಾವಣೆಗಳನ್ನು ತಂದಿದೆ. ಈ ಪುಸ್ತಕಗಳಿಗೆ ಪ್ರಸ್ತುತ ಸ್ಥಳೀಯ ಸಾಂದರ್ಭಿಕ ಸಂಪನ್ಮೂಲಗಳನ್ನು ಸೇರಿಸಿಕೊಳ್ಳುವುದರ ಮೂಲಕ ಅವುಗಳನ್ನು ಯಾವುದೇ ರಾಷ್ಟ್ರೀಯ ಭಾಷೆಯಲ್ಲಿ ಅಳವಡಿಸಿ–ಕೊಳ್ಳಬಹುದಾಗಿದೆ.



**ಬಿನಯ್ ಪಟ್ಟನಾಯಕ್** ಅವರು ಜಾರ್ಖಂಡ್ ರಾಜ್ಯದ ಆಖ್ರಾ ಎಂಬಲ್ಲಿರುವ M-TALL ನ (ಮಾತೃಭಾಷಾ ಆಧಾರಿತ ಕ್ರಿಯಾತ್ಮಕ ಭಾಷಾ ಕಲಿಕೆ) ಸ್ಥಾಪಕರಾಗಿದ್ದಾರೆ. ಪ್ರಸ್ತುತ ಅವರು ಬಿಹಾರದ ವಿಶ್ವ ಬ್ಯಾಂಕ್ ನೆರವಿನ ಯೋಜನೆ 'ಶಿಕ್ಷಕ ಪರಿಣಾಮಕಾರಿತ್ವದ ವರ್ಧನೆಯ (Enhancing Teacher Effectiveness in Bihar) ಅನುಷ್ಠಾನಕ್ಕೆ ಬೆಂಬಲವಾಗಿರುವ ಕಾರ್ಯಾಲಯ ತಂಡದ (Implementation Support Agency -ISA) ನಾಯಕರಾಗಿ ದುಡಿಯುತ್ತಿದ್ದಾರೆ. ಅವರು ಭಾರತದಲ್ಲಿ ವಿಶ್ವಬ್ಯಾಂಕ್‌ನ ಹಿರಿಯ ಶೈಕ್ಷಣಿಕ ಸಲಹೆಗಾರರಾಗಿದ್ದಾರೆ. ಇದಕ್ಕೂ ಮೊದಲು ಅವರು ಯೂನಿಸೆಫ್‌ನಲ್ಲಿ ಶಿಕ್ಷಣತಜ್ಞರಾಗಿ ನವದೆಹಲಿ ಹಾಗು ಜಾರ್ಖಂಡ್ ರಾಜ್ಯದ ಕಚೇರಿಗಳಲ್ಲಿ ಎಂಟು ವರ್ಷಕ್ಕೂ ಮೇಲ್ಪಟ್ಟು ಸೇವೆ ಸಲ್ಲಿಸಿದ್ದಾರೆ. ಅದಕ್ಕೂ ಮೊದಲು, ಭಾರತ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯದ ರಾಷ್ಟ್ರೀಯ ತಾಂತ್ರಿಕ ಬೆಂಬಲ ತಂಡದ (Technical Support Group -TSG) ಮುಖ್ಯ ಸಲಹೆಗಾರರಾಗಿ (ಗುಣಮಟ್ಟದ ಶಿಕ್ಷಣ) ಸುಮಾರು ಹತ್ತು ವರ್ಷಗಳ ಕಾಲ ಕಾರ್ಯನಿರ್ವಹಿಸಿದ್ದಾರೆ. ಅವರು ವಿಜ್ಞಾನ ಹಾಗು ಶಿಕ್ಷಣದ ವಿಚಾರವಾಗಿ ಮಕ್ಕಳಿಗಾಗಿ, ಶಿಕ್ಷಕರಿಗಾಗಿ ಸುಮಾರು 180 ಕ್ಕೂ ಮಿಕ್ಕು ಪುಸ್ತಕಗಳನ್ನು ಬರೆದಿದ್ದಾರೆ, ಅನುವಾದಿಸಿದ್ದಾರೆ. ಇಷ್ಟೇ ಅಲ್ಲದೆ, ಅನೇಕ ರಾಜ್ಯಗಳಲ್ಲಿ ಬಳಕೆಯಾಗುತ್ತಿರುವ ಪಠ್ಯಕ್ರಮ ಹಾಗು ಪಠ್ಯಪುಸ್ತಕಗಳ ವಿಚಾರವಾಗಿ ಇವರು ಮಾಡಿರುವ ಸಾಧನೆಯು ಅನೇಕ ರಾಷ್ಟ್ರೀಯ ಹಾಗು ರಾಜ್ಯಪ್ರಶಸ್ತಿಗಳನ್ನು ಇವರ ಮುಡಿಗೇರಿಸಿದೆ. ಇವರನ್ನು binaypattanayak@outlook.com ನಲ್ಲಿ ಸಂಪರ್ಕಿಸಬಹುದು

ಅನುವಾದ: **ಕುಶಾಲ್ ಬಿ. ಎಸ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

**ಶಿಕ್ಷಕರು ಎಲ್ಲ ಮಕ್ಕಳಿಗೂ ಒಂದೇ ಬಗೆಯ ವಿಷಯವನ್ನು, ಒಂದೇ ವೇಳೆಗೆ, ಏಕಪ್ರಕಾರದ ವಿಧಾನದಿಂದ ಬೋಧಿಸಿ, ಒಂದೇ ತೆರನ ಫಲಿತಾಂಶಗಳನ್ನು ಪಡೆಯಬೇಕು ಎಂದು ಇನ್ನೂ ನಾವು ನಿರೀಕ್ಷಿಸುತ್ತೇವೆ. ಇದು ಸೋಲಲೆಂದೇ ವಿನ್ಯಾಸಗೊಳಿಸಿದಂತಹ ವಿಚಾರವಾಗಿದೆ; ಏಕೆಂದರೆ, ಉಳಿದಂತೆ ಬಹು ಚುರುಕಾಗಿಯೂ, ಸಮರ್ಥರಾಗಿಯೂ ಇರುವ ಬಹುದೊಡ್ಡ ಪ್ರಮಾಣದ ಮಕ್ಕಳು ಒಂದಲ್ಲ ಒಂದು ಕಾರಣಕ್ಕೆ ಕಲಿಕಾ ಪ್ರಕ್ರಿಯೆಯಿಂದ ಹೊರಗೆ ಉಳಿಯುವುದನ್ನು ಖಾತ್ರಿ ಪಡಿಸಿರುವುದಷ್ಟೇ ಇದರ ಸಾಧನೆ.**

**–ಸುಬೀರ್ ಶುಕ್ಲ, ಸ್ಪಂದನಶೀಲ ಶಾಲೆಗಳೇಕೆ ಬೇಕು?, ಪು.110**

# ಎಲ್ಲರಿಗೂ ಇಂಗ್ಲಿಷ್ | ಮೊದಲ ತಲೆಮಾರಿನ ಕಲಿಕಾರ್ಥಿಗಳಿಗೆ ಕಾರ್ಯಕ್ರಮಗಳು

ಚಂದ್ರಾ ವಿಶ್ವನಾಥನ್

**ಹಿನ್ನೆಲೆ**

ಇಂಗ್ಲಿಷ್ ಕೌಶಲಗಳು ಎಲ್ಲರಿಗಾಗಿ– ಇದು **ಇಎಲ್ಎಫ್ (ELF)** ಲರ್ನಿಂಗ್ ಸೊಲ್ಯೂಷನ್‌ನ ಧ್ಯೇಯವಾಗಿದೆ. ಗ್ರಾಮೀಣ ಮತ್ತು ನಗರ ಪ್ರದೇಶದ ಮಕ್ಕಳ ನಡುವಿನ ಶೈಕ್ಷಣಿಕ ಅಂತರವನ್ನು ಕಡಿಮೆ ಮಾಡಲು ನಾವು ಸ್ಥಾಪಿಸಿದ ಸಂಘಟನೆಯಾಗಿದೆ. ಬಹುತೇಕ ಇಂಗ್ಲಿಷ್ ಕಲಿಕಾ ಕಾರ್ಯಕ್ರಮಗಳು **ಹೇಗೆ** ಎನ್ನುವುದರ ಬಗೆಗೆ ಅಂದರೆ, ಇಂಗ್ಲಿಷ್ ಭಾಷಾ ಕಲಿಕೆಗೆ ಪಠ್ಯ ವಿಷಯದ ವಿನ್ಯಾಸ ಹೇಗೆ? ಎನ್ನುವುದರತ್ತ ಗಮನ ವಹಿಸುತ್ತವೆ. ಆದರೆ ನಾವು **ಏಕೆ** ಎನ್ನುವದರಿಂದ ಅಂದರೆ – ಏಕೆ ಇಂಗ್ಲಿಷ್ ಕಲಿಯಬೇಕೆಂದು ಬಯಸುತ್ತೇವೆ ಎಂಬ ಪ್ರಶ್ನೆಯನ್ನಿರಿಸಿಕೊಂಡು ಕಾರ್ಯಕ್ರಮವನ್ನು ಆರಂಭಿಸಿದೆವು. ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದು ಮತ್ತು ಉತ್ತಮ ಉದ್ಯೋಗ ಅವಕಾಶಗಳನ್ನು ಗಿಟ್ಟಿಸುವುದು ಯೋಗ್ಯ ಕಾರಣಗಳಾಗಿದ್ದರೂ, ಮಕ್ಕಳು ತಮ್ಮ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳುವುದು ಅತಿ ಮುಖ್ಯವಾದ ಕಾರಣವಾಗಿದೆ.

ಕಡಿಮೆ ಆದಾಯದ ಕುಟುಂಬಗಳಿಂದ ಬಂದ ದೊಡ್ಡ ಸಂಖ್ಯೆಯ ಮಕ್ಕಳ ಜೊತೆ ಕಾರ್ಯನಿರ್ವಹಿಸುವಾಗ ಸ್ಪಷ್ಟವಾಗುವುದೇನೆಂದರೆ, ಇತರ ಕೌಶಲಗಳಲ್ಲಿ ಕ್ಷಮತೆ ಇದ್ದರೂ ಇಂಗ್ಲೀಷ್‌ನಲ್ಲಿ ಮಾತನಾಡಲಾಗದ ಮಕ್ಕಳು, ಇಂಗ್ಲಿಷ್ ಬಲ್ಲ ಮಕ್ಕಳ ಎದುರು ಕೀಳರಿಮೆ ಅನುಭವಿಸುತ್ತಾರೆ.

ಒಂದು ವೇಳೆ ಇಂಗ್ಲಿಷ್ ತರಗತಿಗಳು ವ್ಯಾಕರಣ ಮತ್ತು ಉಚ್ಚಾರಣೆಯ ನಿಯಮಗಳ ಬಗೆಯೇ ಕಟ್ಟುಬಿದ್ದಿದ್ದರೆ, ಭಾಷೆಯ ಬಗೆಗೆ ಮಕ್ಕಳು ಇನ್ನೂ ಹೆಚ್ಚು ಭಯ ಪಡುತ್ತಾರೆ. ಇದು ಬಹುಸಂಖ್ಯಾತ ಮೊದಲ ತಲೆಮಾರಿನ ಕಲಿಕಾರ್ಥಿಗಳು ಇಂಗ್ಲಿಷ್ ಕೌಶಲಗಳನ್ನು ಗಳಿಸುವುದರಲ್ಲಿ ಸೋಲಲು ಕಾರಣವಾಗುತ್ತದೆ. ಒಂದು ವೇಳೆ, ಅಂತಿಮವಾಗಿ ಕೆಲವು ಮಕ್ಕಳು ಕೌಶಲಗಳನ್ನು ಕಲಿತರೂ, ಅವರಲ್ಲಿ ಇಂಗ್ಲಿಷ್‌ನಲ್ಲಿ ಸರಳವಾದ ಸಂಭಾಷಣೆ ನಡೆಸುವುದಕ್ಕೂ ಆತ್ಮವಿಶ್ವಾಸದ ಕೊರತೆ ಕಾಣುತ್ತದೆ.

**ಮೊದಲ ತಲೆಮಾರಿನ ಕಲಿಕಾರ್ಥಿಗಳಿಗೆ ಇಂಗ್ಲಿಷ್**

ಇಂಗ್ಲಿಷ್ ಭಾಷೆ ಕಲಿಯುವ ಪ್ರಕ್ರಿಯೆಯಲ್ಲಿಯೇ ಮಕ್ಕಳು ಆತ್ಮವಿಶ್ವಾಸವನ್ನೂ ಬೆಳೆಸುವಂತೆ ಕಲಿಯುವುದು ಹೇಗೆ ಸಾಧ್ಯ ಎಂಬ ಕುರಿತು ನಾವು ಸಂಶೋಧನೆ ನಡೆಸುವುದಕ್ಕೆ ಪ್ರಾರಂಭಿಸಿದೆವು. ತಮಿಳುನಾಡಿನ ಗ್ರಾಮೀಣ ಭಾಗದ 48 ಸರಕಾರಿ ಶಾಲೆಗಳ ಶಿಕ್ಷಕರೊಂದಿಗೆ ನಮ್ಮ ಪ್ರಥಮ ಪ್ರಯತ್ನವು ಪ್ರಾರಂಭವಾಯಿತು. ಈ ತರಗತಿಗಳಲ್ಲಿ ಶಿಕ್ಷಕರು ಎರಡು ಮುಖ್ಯ ನಿಯಮಗಳನ್ನು ಅನುಸರಿಸುತ್ತಿದ್ದರು– ಒಂದು, ಮಕ್ಕಳನ್ನು ತಪ್ಪುಮಾಡುವುದಕ್ಕೆ ಬಿಡುವುದು, ಮತ್ತು ಎರಡನೆಯದು, ಇಂಗ್ಲಿಷ್ ಭಾಷೆಯೊಳಗೆ ಅವರು ಮಾತನಾಡುವುದಕ್ಕೆ ಪ್ರಯತ್ನಿಸುವಾಗ ಸ್ಥಳೀಯ ಭಾಷೆಯ ಪದಗಳನ್ನು ಸೇರಿಸಿಕೊಳ್ಳಲು ಬಿಡುವುದು.



ಮಕ್ಕಳು ಸರಳವಾಗಿ ಇಂಗ್ಲಿಷ್ ಓದಲು ಕಲಿಯಲು ಕೆಲವು ತಂತ್ರಗಳನ್ನು ಅಭಿವೃದ್ಧಿಪಡಿಸುವುದಕ್ಕೂ ನಾವು ಪ್ರಾರಂಭಿಸಿದೆವು. ವಿಶೇಷವಾಗಿ ಇಂಗ್ಲಿಷನ್ನು ಮೊದಲ ಬಾರಿಗೆ ಶಾಲೆಗಳಲ್ಲಿ ಕಲಿಯಲು ಬಂದ ಮಕ್ಕಳ ಜೊತೆಗೆ ಇದನ್ನು ಪ್ರಯೋಗಿಸಿದೆವು. ಇಂಗ್ಲಿಷ್‌ನಂಥ ಒಂದು ಭಾಷೆಯಲ್ಲಿ, ಬಹಳ ಪದಗಳು ಶಾಬ್ದಿಕ ((Phonics) ನಿಯಮಗಳನ್ನು ಪಾಲಿಸುವುದಿಲ್ಲ. ಇದರಿಂದ ಓದನ್ನು ಕಲಿಯಲು ಪ್ರಯತ್ನಿಸುವ ಮಕ್ಕಳು ಬಹಳ ಬೇಗನೆ ಹತಾಶೆಗೆ ಒಳಗಾಗುತ್ತಾರೆ. ಅವರು ಇಂಗ್ಲೀಷ್ ಭಾಷೆ ಯಾವುದೇ ಸಾಮಾನ್ಯ ತರ್ಕಗಳನ್ನೂ ಅನುಸರಿಸುವುದಿಲ್ಲ ಎಂಬ ಅವಸರದ ತೀರ್ಮಾನಕ್ಕೆ ಬರುತ್ತಾರೆ. ಹಾಗಾಗಿ ತಾವು ಇಂಗ್ಲಿಷ್ ಓದುವುದನ್ನು ಕಲಿಯುವ ಸಂಭವವೇ ಇಲ್ಲ ಎಂದೇ ಭಾವಿಸುತ್ತಾರೆ. ಹಲವು ಮಂದಿ ಶಿಕ್ಷಕರ ಜೊತೆ ಕೆಲಸಮಾಡುತ್ತಾ ಇಂಗ್ಲಿಷ್ ಓದುವುದನ್ನು ಕಲಿಯುವುದಕ್ಕೆ ಸರಳವಾದ ಶಾಬ್ದಿಕ ಆಧಾರಿತ ವಿಧಾನವೊಂದನ್ನು ನಾವು ಅಭಿವೃದ್ಧಿಪಡಿಸಿದೆವು.

ಸದ್ಯ ಭಾರತದಲ್ಲಿ, 115 ಶಾಲೆಗಳಲ್ಲಿ ಇಎಲ್ಎಫ್ ಇಂಗ್ಲೀಷ್ ಕಾರ್ಯಕ್ರಮವನ್ನು ಬಳಕೆ ಮಾಡಲಾಗುತ್ತಿದೆ. ಇವುಗಳಲ್ಲಿ ಮಿಜೋರಾಂನ 40 ಸರಕಾರೀ ಶಾಲೆಗಳು ಮತ್ತು ಅಸ್ಸಾಂನ ಎರಡು ಶಾಲೆಗಳು ಸೇರಿದ್ದರೆ, ಉಳಿದವು (73) ತಮಿಳುನಾಡಿನಲ್ಲಿವೆ. ಶಿಕ್ಷಕರು ತಮ್ಮ ಮುಂದೆ ಸ್ಪಷ್ಟ ಗುರಿಗಳನ್ನು ಇರಿಸಿ, ಎಲ್ಲಾ ಮಕ್ಕಳೂ ಕಲಿಯುವ ಸಾಮರ್ಥ್ಯ ಇರುವವರು ಎಂದು ನಂಬಿ ಮುಂದೆ ಹೋದಾಗ ದೊಡ್ಡ ಮಟ್ಟದ ಫಲಿತಾಂಶಗಳನ್ನು ಸಾಧಿಸಲಾಗಿದೆ ಎಂಬುದು ಕಾರ್ಯಕ್ರಮದ ವೇಳೆ ಮತ್ತೆಮತ್ತೆ ಸಾಬೀತಾದ ಅಂಶವಾಗಿದೆ.

**ವಿಧಾನ**

ಸಾಮಾನ್ಯವಾಗಿ ಪ್ರತಿ ತರಗತಿಯೂ ಒಂದು ಆಡಿಯೋ ಅಥವಾ ವೀಡಿಯೋ ಪಾಠದಿಂದ ಪ್ರಾರಂಭವಾಗುತ್ತದೆ. ಇದರ ನಂತರ ಸಂಭಾಷಣೆಯನ್ನು ಉತ್ತೇಜಿಸುವಂಥ ವೃತ್ತದ ಅವಧಿ ಚಟುವಟಿಕೆಗಳು (Circle-time activities) ಮತ್ತು ಚಿಕ್ಕ ಗುಂಪು ಚಟುವಟಿಕೆಗಳು ನಡೆಯುತ್ತವೆ. ಪ್ರಶ್ನೆ ಮತ್ತು ಉತ್ತರದ ಅಭ್ಯಾಸಗಳು




ಜೋಡಿ ತಂಡಗಳಲ್ಲಿ ನಡೆಯುವಂತೆ ನೋಡಿಕೊಂಡು ಪ್ರತಿ ಮಗುವೂ ಮಾತನಾಡುವ ಅವಕಾಶವನ್ನು ಪಡೆಯುವಂತೆ ನೋಡಿಕೊಳ್ಳಲಾಗುತ್ತದೆ. ಪಾತ್ರಾಭಿನಯ ಮತ್ತು ಹಾಡುಗಳು ಮಕ್ಕಳಿಗೆ ಅವರ ಇಂಗ್ಲಿಷ್ ಕುರಿತ ಭಯವನ್ನು ಮೀರಿನಿಲ್ಲುವುದಕ್ಕೆ ನೆರವಾಗುತ್ತವೆ. ನಾಲ್ಕು ತಿಂಗಳ ಅಲ್ಪ ಅವಧಿಯಲ್ಲಿ 51 ಶೇಕಡಾ ಮಕ್ಕಳು ಇಂಗ್ಲಿಷ್‌ನಲ್ಲಿ ಸಾಮಾನ್ಯ ಸಂಭಾಷಣಾ ಪ್ರಶ್ನೆಗಳಿಗೆ ಪ್ರತಿಕ್ರಿಯೆ ನೀಡುವ ಮಟ್ಟಕ್ಕೆ ಬೆಳೆದು ನಿಂತುದನ್ನು ನಾವು ನೋಡಿದ್ದೇವೆ.

ನಾವು ಓದುವ ಕೌಶಲವನ್ನು 8 ಸರಳವಾದ ಹಂತಗಳಾಗಿ ವಿಭಾಗಿಸಿಕೊಂಡಿದ್ದೇವೆ. ಪ್ರಾರಂಭದಲ್ಲಿ ಅಕ್ಷರಗಳ ಧ್ವನಿ, ನಂತರ ಹಂತಹಂತವಾಗಿ ಪದಗಳಿಗೆ, ವಾಕ್ಯಗಳಿಗೆ, ವಾಕ್ಯವೃಂದಗಳಿಗೆ ಮತ್ತು ಕಥೆಗಳಿಗೆ ಮುಂದುವರಿಯುತ್ತೇವೆ. ಪ್ರತಿ ಹಂತದಲ್ಲೂ ಕೆಲವು ಹೊಸ ಧ್ವನಿಗಳನ್ನು, ಧ್ವನಿ ಸಂಯೋಜನೆಗಳನ್ನು ಮತ್ತು ಪದಗಳನ್ನು ಪರಿಚಯಿಸುತ್ತೇವೆ. ಪ್ರತಿ ಹಂತದಲ್ಲೂ ವಿಷಯಗಳನ್ನು ಎಚ್ಚರಿಕೆಯಿಂದ ಗುಂಪಿನ ಮಟ್ಟಕ್ಕೆ ಅನುಗುಣವಾಗಿ ಆಯ್ದುಕೊಳ್ಳುತ್ತೇವೆ. ಆ ಮೂಲಕ ಮಗು ಹೊಸ ಪದಗಳನ್ನು ಮಾತ್ರ ಎದುರಿಸುತ್ತದೆ. ಮಗು ಈಗಾಗಲೇ ಪರಿಚಯಿಸಿಕೊಂಡ ಧ್ವನಿಗಳಿಂದ ಆ ಪದಗಳನ್ನು ಓದುವುದು ಸಾಧ್ಯವಿದೆ. ಪ್ರತಿ ಹಂತದಲ್ಲೂ ಕೆಲವು ದೃಷ್ಟಿಗೋಚರ ಪದಗಳನ್ನೂ ಪರಿಚಯಿಸಲಾಗುತ್ತಿತ್ತು. ಆ ಮೂಲಕ ಮಗು ಬೇಗನೆ ವಾಕ್ಯ ಮತ್ತು ವಾಕ್ಯವೃಂದಗಳನ್ನು ಓದುವ ಕಡೆಗೆ ತಯಾರಾಗುತ್ತಿತ್ತು.

ಈ ಲೇಖನದಲ್ಲಿ, ಈ ನಮ್ಮ ಪ್ರಯಾಣದ ಕೆಲವು ಕಲಿಕೆಗಳನ್ನು ಮತ್ತು ಈ ಚಿಂತನೆಗಳನ್ನು ಶಿಕ್ಷಕರು ತಮ್ಮ ಇಂಗ್ಲಿಷ್ ತರಗತಿಗಳಲ್ಲಿ ಹೇಗೆ ಅಳವಡಿಸಬಹುದು ಎಂಬುದನ್ನು ಹಂಚಿಕೊಳ್ಳುತ್ತೇವೆ.

**ಇಂಗ್ಲೀಷ್ ಸಂಭಾಷಣೆಯ ತರಗತಿ**

ಮಾತಿಗೆ ಮೊದಲು ಆಲಿಸುವುದು

ಮಕ್ಕಳಿಗೆ ಏನಾದರೂ ಹೇಳುವಂತೆ ಕೇಳುವ ಮೊದಲು, ಮಕ್ಕಳಿಂದ ಶಿಕ್ಷಕರು ಏನನ್ನು ನಿರೀಕ್ಷಿಸುವರೋ ಅದನ್ನು ಶಿಕ್ಷಕರು ಪ್ರದರ್ಶಿಸಬೇಕು ಮತ್ತು ಮಕ್ಕಳು ಅದನ್ನು ನೋಡಬೇಕು. ಇದನ್ನು ನಾವು ನಮ್ಮ ತರಗತಿಗಳಲ್ಲಿ ಸಂವಾದಾತ್ಮಕ ವೀಡಿಯೋಗಳ ಮೂಲಕ ಮಾಡುತ್ತೇವೆ. ಆದರೆ ಶಿಕ್ಷಕರು ನಿಜ ಜೀವನದ ಉದಾಹರಣೆಗಳನ್ನು ಬಳಸುವುದೂ ಸಾಧ್ಯವಿದೆ ಅಥವಾ ಸರಳ ಭಿತ್ತಿಪತ್ರಗಳ (ನೋಡಿ ಮತ್ತು ಹೇಳಿ / Show and tell) ಸಹಾಯವನ್ನೂ ಪಡೆಯಬಹುದು. ಉದಾಹರಣೆಗೆ, ಮಕ್ಕಳು ಸರಳವಾದ ಒಂದು ಸಂಭಾಷಣೆಯನ್ನು ತರಗತಿಯ ಒಳಗಿರುವ ವಸ್ತುಗಳ ಮೇಲೆ ಅಭ್ಯಾಸ ಮಾಡಬೇಕು ಎಂದು ನಾವು ಬಯಸುವುದಾದರೆ, ಶಿಕ್ಷಕರು ಈ ರೀತಿಯಾಗಿ ಪ್ರಾರಂಭಿಸುತ್ತಾರೆ: ಇದು ಏನು? ಇದು ಒಂದು ಪೆನ್. ಅದು ಏನು? ಅದು ಒಂದು ಪೆನ್. (What is this? This is a pen. What is that? That is a fan)




ಶಿಕ್ಷಕಿ ಆ ವಸ್ತುವಿನ ಕಡೆಗೆ ಬೆರಳು ತೋರಿಸಿ ಪ್ರಶ್ನೆಗಳನ್ನು ಕೇಳುತ್ತಾರೆ. ಮಕ್ಕಳು ಇಂಗ್ಲಿಷ್‌ನಲ್ಲಿ ಹೆಸರು ತಿಳಿದಿರುವ ವಸ್ತುಗಳನ್ನೇ ಅವರು ಆಯ್ದುಕೊಳ್ಳುತ್ತಾರೆ. ಉದಾಹರಣೆಗೆ, 'ಫ್ಯಾನ್ ಮತ್ತು ಟೇಬಲ್' ಪದಗಳು. ಯಾವುದು ಈಗಾಗಲೇ ಮಕ್ಕಳ ಶಬ್ದ ಮತ್ತು ಜ್ಞಾನಕೋಶದಲ್ಲಿ ಆಳವಾಗಿ ಬೇರೂರಿದೆಯೋ ಅಂತಹ ಪದಗಳನ್ನು ಆಯ್ದುಕೊಳ್ಳಬೇಕು. ವೆಲ್ಲೂರಿನ ಒಂದು ಸರಕಾರೀ ಶಾಲೆಯಲ್ಲಿ ಮಕ್ಕಳು ಈ ಪದಗಳು ತಮಿಳು ಭಾಷೆಯವು ಎಂದರಲ್ಲದೆ ಅದಕ್ಕೆ ತಮಿಳು ಭಾಷೆಯಲ್ಲಿ ಸಮಾನಾರ್ಥಕ ಪದಗಳಿಲ್ಲ ಎಂದರು!

ಈ ಚಟುವಟಿಕೆಯ ವೇಳೆ, ಶಿಕ್ಷಕಿಯರು ಮಕ್ಕಳು ಪ್ರತಿಕ್ರಿಯೆ ಕೊಡುವುದನ್ನು ನಿರೀಕ್ಷಿಸುವುದಿಲ್ಲ. ಆಕೆಯೇ ಪ್ರಶ್ನೆಗಳನ್ನು ಕೇಳುತ್ತಾರೆ ಮತ್ತು ಉತ್ತರಿಸುತ್ತಾರೆ. ಆ ವೇಳೆ ಮಕ್ಕಳು ಆಲಿಸುತ್ತಾರೆ. ಮಕ್ಕಳು ಅರ್ಥಮಾಡಲಿ ಎಂದು ಶಿಕ್ಷಕಿಯರು ಪ್ರತಿ ಪದವನ್ನೂ

ಮಕ್ಕಳ ಮಾತೃಭಾಷೆಯಲ್ಲಿ ತರ್ಜುಮೆಮಾಡಿ ಹೇಳುವುದನ್ನು ನಾವು ಉತ್ತೇಜಿಸುವುದಿಲ್ಲ. ಬದಲಾಗಿ ಶಿಕ್ಷಕಿಯರು ಮಕ್ಕಳನ್ನು ಉತ್ತೇಜಿಸುವಂಥ ಚಲನವಲನಗಳನ್ನು, ಚಿತ್ರಗಳನ್ನು ಮತ್ತು ಮುಖದಲ್ಲಿ ಅಭಿವ್ಯಕ್ತಿಗಳನ್ನು ಮಾಡಿ ತೋರಿಸುತ್ತಾರೆ. ಆ ರೀತಿಯಾಗಿ ತರ್ಜುಮೆ ಮಾಡದೆ ತಾವು ಹೇಳುವುದು ಏನು ಎಂಬುದನ್ನು ತಿಳಿದುಕೊಳ್ಳಲು ಸಹಾಯಮಾಡುತ್ತಾರೆ.

**ವೃತ್ತದ ಅವಧಿ ಚಟುವಟಿಕೆಗಳು (Circle time practice)**

ಶಿಕ್ಷಕರು ಹೇಳುವುದನ್ನು ಆಲಿಸಿದ ನಂತರದಲ್ಲಿ, ಒಂದು ವೃತ್ತದಲ್ಲಿ ನಿಂತು ಪ್ರಶ್ನೆಗಳನ್ನು ಕೇಳುವ ಮತ್ತು ಉತ್ತರಗಳನ್ನು ನೀಡುವ ಅಭ್ಯಾಸ ಮಾಡುವುದಕ್ಕೆ ಮಕ್ಕಳು ಸಿದ್ಧವಾಗುತ್ತಾರೆ. ಮೊದಲ ಮಗು ತನ್ನ ಪಕ್ಕದವಳ/ನನ್ನು ಒಂದು ಪ್ರಶ್ನೆ ಕೇಳುತ್ತದೆ. ಅದನ್ನು ಉತ್ತರಿಸಿದ ನಂತರ, ಎರಡನೆ ಮಗುವಿನ ಪ್ರಶ್ನೆ ಕೇಳುವ ಸರದಿ ಆರಂಭವಾಗುತ್ತದೆ. ಪ್ರಶ್ನೆಗಳು ಮತ್ತು ಉತ್ತರಗಳು ವೃತ್ತದಲ್ಲಿ ಸರದಿಯಲ್ಲಿ ಸಾಗುತ್ತಾ ಪ್ರತಿ ಮಗುವಿಗೂ ಮಾತನಾಡುವ ಅವಕಾಶವನ್ನು ಸೃಷ್ಟಿಸುತ್ತದೆ. ಈ ಹಂತದಲ್ಲಿ ತಪ್ಪುಗಳನ್ನು ಸರಿಪಡಿಸುವುದಕ್ಕೆ ಇಲ್ಲ. ಮಕ್ಕಳು ಹಿಂಜರಿದರೆ, ಶಿಕ್ಷಕರು ಇನ್ನೋರ್ವ ಮಗುವಿನ ಜೊತೆ ಪಾತ್ರಾಭಿನಯ ಕೈಗೊಳ್ಳುತ್ತಾರೆ ಮತ್ತು ಸಂಭಾಷಣೆಯನ್ನು ಮತ್ತೊಮ್ಮೆ ಪ್ರದರ್ಶಿಸುತ್ತಾರೆ.

**ಚಿಕ್ಕ ತಂಡಗಳಲ್ಲಿ ಅಭ್ಯಾಸ**

ಶಿಕ್ಷಕರು 4–5 ಮಕ್ಕಳಿರುವ ಗುಂಪುಗಳನ್ನು ರಚಿಸುತ್ತಾರೆ. ಈಗ ಮಕ್ಕಳು ಚಿಕ್ಕ ತಂಡಗಳಲ್ಲಿ ತಾವು ಕಲಿತ ಸರಳ ಸಂಭಾಷಣೆಗಳನ್ನು ಅಭ್ಯಾಸ ಮಾಡುತ್ತಾರೆ. ಚಿಕ್ಕ ತಂಡಗಳಲ್ಲಿ ಮಕ್ಕಳು ತಮ್ಮನ್ನು ಗಮನಿಸುವ ದೊಡ್ಡವರು ಒಬ್ಬರು ಇದ್ದಾರೆ ಎಂದು ಆತಂಕ-ಪಡುವುದಿಲ್ಲ. ಅವರು ಮಾತನಾಡುವುದನ್ನು ಪ್ರಯತ್ನಿಸಬಹುದು, ನಗಬಹುದು ಮತ್ತು ಸಂತಸದಲ್ಲಿ ಇರಬಹುದು. ಶಿಕ್ಷಕರು ಕ್ರಮೇಣ ಮಕ್ಕಳ ಧ್ವನಿಗಳ ಗುಂಯ್ಗುಡುವಿಕೆಗೆ ಹೊಂದಿಕೊಳ್ಳುತ್ತಾರೆ. ಕೊನೆಗೂ ಇಂಗ್ಲೀಷ್ ಸಂಭಾಷಣೆಯ ತರಗತಿಯು ನಿಶ್ಶಬ್ದವಾಗಿ ಇರುವುದು ಸಾಧ್ಯವಿಲ್ಲ!

**ಚಿತ್ರಗಳನ್ನು ವಿವರಿಸುವುದು**

ಜಾನ್ ಹಾಲ್ಟ್ ಹೇಳಿದ ಹಾಗೆ, ಏನಾದರೂ ಹೇಳು ಎಂದು ಮಕ್ಕಳಿಗೆ ಕೇಳಿದಾಗ, ಅವರಿಗೆ ಪ್ರತಿಕ್ರಿಯಿಸುವುದಕ್ಕೆ ಸಾಧ್ಯವಾಗುವುದು ಅವರಿಗೆ ಹೇಳುವುದಕ್ಕೆ ಏನಾದರೂ ಇದ್ದರೆ ಮಾತ್ರ. ನಾವು ಮಕ್ಕಳಿಗೆ ಒಂದು ಘಟನೆಯನ್ನು ವಿವರಿಸುವುದಕ್ಕೆ ಕೇಳಿದರೆ ಅಥವಾ ಯಾವುದಾದರೂ ವಿಷಯದ ಮೇಲೆ ಅವರ ಅಭಿಪ್ರಾಯವನ್ನು ತಕ್ಷಣದಲ್ಲಿ ಕೊಡಲು ಹೇಳಿದರೆ, ಆಲೋಚನೆಗಳನ್ನು ಒಗ್ಗೂಡಿಸಿಕೊಳ್ಳಲು ಮತ್ತು ಅಭಿವ್ಯಕ್ತಿಸಿಕೊಳ್ಳುವುದಕ್ಕೆ ಅವರಿಗೆ ಕಷ್ಟ ಆಗಬಹುದು.

ಸಂಭಾಷಣೆಗಳನ್ನು ಪ್ರಾರಂಭಿಸುವುದಕ್ಕೆ ಚಿತ್ರಗಳು ಉತ್ತಮ ಸಾಧನಗಳು. ನಾವು ಚಿತ್ರಗಳನ್ನು ಮಕ್ಕಳಿಗೆ ಪ್ರಶ್ನೆಗಳನ್ನು ಕೇಳಲು ಮತ್ತು ಅವರು ನೋಡಿದ್ದನ್ನು ವಿವರಿಸಲು ಸಹಾಯಮಾಡುವುದಕ್ಕೆ ಬಳಸುತ್ತೇವೆ. ಮಕ್ಕಳು ಅವರಾಗಿಯೇ ಮಾತನಾಡುವುದಕ್ಕೆ ಮುಂದೆ ಬರದೇ ಇದ್ದರೆ ಶಿಕ್ಷಕರು ಸರಳ ಪ್ರಶ್ನೆಗಳನ್ನು ಕೇಳಿ ಅವರನ್ನು ಪ್ರೇರೇಪಿಸಬಹುದು– ಚಿತ್ರದಲ್ಲಿ ಯಾರಿದ್ದಾರೆ, ಅವರು ಎಲ್ಲಿದ್ದಾರೆ? ಅವರು ಏನು ಮಾಡುತ್ತಿದ್ದಾರೆ? (Who is in the picture? Where are they? What are they doing?)

ತರಗತಿಯಲ್ಲಿ ನಾವು ಬಳಸುವ ಚಿತ್ರಗಳು ಮಗುವಿನ ಸಂದರ್ಭಕ್ಕೆ ಹೊಂದಿಕೆಯಾಗುವಂತೆ ಇದ್ದರೆ, ಅದು ಅತ್ಯುತ್ತಮವಾಗುತ್ತದೆ. ಮಗುವಿಗೆ ಪರಿಚಿತವಿರುವ ಅದರ ಪರಿಸರದ ವಸ್ತುಗಳನ್ನು ಮತ್ತು ದೃಶ್ಯಾವಳಿಗಳನ್ನು ಬಳಸಿಯೂ, ಇಂಗ್ಲಿಷ್ ಭಾಷೆಯು ಮಗುವಿಗೆ ಬಹಳ ಅಪರಿಚಿತ ಎನಿಸದಂತೆ ಮತ್ತು ಅದು ತನ್ನ ವಾಸಸ್ಥಳಕ್ಕೆ ಹತ್ತಿರವೇ ಇದೆ ಎಂದು ಕಾಣುವಂತೆ ಮಾಡಬಹುದು.

**ಕ್ರಮಾನುಗತಿ ಮತ್ತು ಕಥೆ ಹೇಳುವುದು**

ಕಥೆ ಹೇಳುವುದು, ಸಂವಹನದಲ್ಲಿ ಬಹಳ ಮುಖ್ಯವಾದ ಅಂಶವಾದ ಕ್ರಮಾನುಗತಿಯ ಕೌಶಲಗಳನ್ನು ಬೆಳೆಸುತ್ತದೆ. ಪ್ರತಿ ಮಗುವಿಗೂ ಒಂದು ಕಥೆಯ ಕಾರ್ಡು ನೀಡಲಾಗುತ್ತದೆ. ಆಕೆ/ಆತ ಆ ಕಾರ್ಡಿನ ಚಿತ್ರದ ಕುರಿತಾಗಿ ಒಂದು ಅಥವಾ ಎರಡು ವಾಕ್ಯಗಳನ್ನು ಹೇಳುವುದಕ್ಕೆ ಪ್ರಯತ್ನಿಸುತ್ತಾಳೆ/ನೆ. ತಂಡವಾಗಿ ಒಂದು ಕಥೆಯನ್ನು ಹೇಗೆ ಹೇಳುವುದು ಎಂಬುದನ್ನು ಅವರು ಕಲಿಯುತ್ತಾರೆ.

ಸರಳವಾದ ವೀಡಿಯೋಗಳು (How-to videos) ಮಕ್ಕಳಿಗೆ ಒಂದರ ಮೇಲೆ ಒಂದಾಗಿ ಸಹಾಯವಾಗುವಂಥ ಪರಿಣಾಮಕಾರಿ ಕಲಿಯುವ ದಾರಿಗಳನ್ನು ತೋರಿಸುತ್ತವೆ. ಉದಾಹರಣೆಗೆ, ಆಟವಾಡುವ ಕಡ್ಡಿ ಗೊಂಬೆಗಳನ್ನು ಹೇಗೆ ಮಾಡುವುದು ಎಂಬ ವೀಡಿಯೋವು ಮಕ್ಕಳನ್ನು ಈ ಮುಂದಿನಂತೆ ಮಾತುಕತೆಯಾಡುವುದಕ್ಕೆ ಪ್ರೋತ್ಸಾಹಿಸುತ್ತದೆ:

ಹಂತ 1: ಒಂದು ಚಾರ್ಟ್ ಪೇಪರ್ ತೆಗೆದುಕೊಳ್ಳಿ
ಹಂತ 2: ಅದರ ಮೇಲೆ ಒಂದು ನಾಯಿಯ ಚಿತ್ರವನ್ನು ಬರೆಯಿರಿ.
ಹಂತ 3: ಆ ಚಿತ್ರವನ್ನು ಕತ್ತರಿಸಿ.
ಹಂತ 4: ಅದನ್ನು ಒಂದು ಐಸ್‌ಕ್ರೀಂ ಕಡ್ಡಿಯ ತುದಿಗೆ ಅಂಟಿಸಿ.
ಹಂತ 5: ನಿಮ್ಮ ಆಟದ ಕಡ್ಡಿ ಗೊಂಬೆ ರೆಡಿಯಾಯಿತು.

**ಪಾತ್ರಾಭಿನಯ**

ಆತ್ಮವಿಶ್ವಾಸವನ್ನು ಬೆಳೆಸುವುದಕ್ಕೆ ಸಭಿಕರ ಮುಂದೆ ನಿಂತು ಮಾತನಾಡುವುದಕ್ಕಿಂತ ಉತ್ತಮವಾದ ವಿಧಾನ ಬೇರೆ ಯಾವುದೂ ಇರದು. ಮಕ್ಕಳು ಪಾತ್ರಾಭಿನಯಕ್ಕೆ ಬೇಕಾದ ತುಂಬ ಸರಳವಾದ ಸಂಭಾಷಣೆಗಳನ್ನು ಕಲಿತು ನೆನಪಿಟ್ಟುಕೊಳ್ಳುತ್ತಾರೆ. ತಂಡಗಳಲ್ಲಿ ಅಭ್ಯಾಸ ಮಾಡಿದ ಮೇಲೆ, ಮಕ್ಕಳು ತರಗತಿಯಲ್ಲಿ ಪಾತ್ರಾಭಿನಯವನ್ನು ಪ್ರದರ್ಶಿಸುತ್ತಾರೆ. ಈ ಪಾತ್ರಾಭಿನಯಗಳು ಕಡಿಮೆ ಅವಧಿಯವು ಆಗಿರಬೇಕು ಮತ್ತು ಸರಳವಾದ ಮತ್ತು ಪುನರಾವರ್ತಿತ ಸಂಭಾಷಣೆಗಳಿಂದ ಕೂಡಿರಬೇಕು. ಅವು ನೆನಪಿಟ್ಟುಕೊಳ್ಳುವುದಕ್ಕೂ ಸುಲಭವಾಗಿರಬೇಕು. ಅಲ್ಲಿ ರಂಗಭೂಮಿಯ ಪರಿಕರಗಳಾಗಲೀ, ವೇಷಭೂಷಣಗಳಾಗಲೀ ಅಥವಾ ಪರಿಣಿತ ಸಂಭಾಷಣೆಗಳಾಗಲೀ ಮಹತ್ವದವು ಅಲ್ಲ. ಅವುಗಳ ಮಹದುದ್ದೇಶ ಸಭಿಕರ ಮುಂದೆ ಪ್ರದರ್ಶಿಸಿ ಆತ್ಮವಿಶ್ವಾಸವನ್ನು ಗಳಿಸುವುದು ಮಾತ್ರವೇ ಆಗಿರುತ್ತದೆ.

**ಇಂಗ್ಲಿಷನ್ನು ಸರಾಗ ಓದುವುದು**

ಮಾತನಾಡುವುದು ಭಾರೀ ಪ್ರಮಾಣದಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸುವಾಗ, ಮಕ್ಕಳು ಇಂಗ್ಲಿಷ್ ಪಠ್ಯವನ್ನೂ ಸರಾಗ ಓದುವುದನ್ನು ಕಲಿಯುವುದು ಅಗತ್ಯವಾಗಿದೆ. ಇದು ಶಾಲೆಯಲ್ಲಿ ಅವರಿಗೆ ಸಹಾಯಮಾಡುವುದು ಮಾತ್ರವಲ್ಲ ಜೊತೆಗೆ ಸ್ವತಂತ್ರವಾಗಿ ಅವರಿಗೆ ಇಷ್ಟವಾಗುವ ಕತೆಗಳನ್ನು ಮತ್ತು ಪುಸ್ತಕಗಳನ್ನು ಓದುವುದನ್ನೂ

ಸಾಧ್ಯಮಾಡುತ್ತದೆ. ಅದೇ ವೇಳೆ ಗ್ರಹಿಸಿ ಅರ್ಥಮಾಡಿಕೊಳ್ಳುವ ಮತ್ತು ಪದಗಳನ್ನು ಬಳಸುವ ಅವರ ಕೌಶಲಗಳನ್ನು ಹೆಚ್ಚಿಸುತ್ತಾ ಹೋಗುತ್ತದೆ.

ಹಲವಾರು ಶಾಬ್ದಿಕ ಕಾರ್ಯಕ್ರಮಗಳು ಅಕ್ಷರ ಮತ್ತು ಶಬ್ದದ ಸಂಬಂಧ ಮತ್ತು ಧ್ವನಿಗಳ ಸಮ್ಮಿಲನವನ್ನೂ ಕಲಿಸುತ್ತವೆ. ಆದರೆ ಅಂತಹ ಕೆಲವು ಕಾರ್ಯಕ್ರಮಗಳಷ್ಟೇ ಮಕ್ಕಳನ್ನು ಮೂರು ಅಕ್ಷರಗಳ ಪದಗಳನ್ನು ಓದುವುದರಿಂದ ಮುಂದಕ್ಕೆ ಕೊಂಡೊಯ್ಯುತ್ತವೆ. ಮಕ್ಕಳು ದೊಡ್ಡ ಪದಗಳನ್ನು ಮತ್ತು ವಾಕ್ಯಗಳನ್ನೂ ಓದುವುದಕ್ಕೆ ಕಲಿಯಬೇಕಿರುವಾಗ, ಶಾಬ್ದಿಕ ವಿಧಾನವನ್ನು ಬಹಳ ಸಲ ಕೈಬಿಡಲಾಗುತ್ತದೆ. ಆಗ ಅವರಿಗೆ ನೋಡಿ ಓದುವುದನ್ನು ಕಲಿಸಲಾಗುತ್ತದೆ ಮತ್ತು ಕಾಗುಣಿತಗಳನ್ನು ಕಂಠಪಾಠ ಮಾಡಲು ಕಲಿಸಲಾಗುತ್ತದೆ. ಇದರ ಪರಿಣಾಮವಾಗಿ ಬಹಳ ಮಕ್ಕಳು ಸರಾಗ ಓದುವುದನ್ನು ಸಾಧಿಸುವಲ್ಲಿ ವಿಫಲರಾಗುತ್ತಾರೆ. ನಮ್ಮ ಕಾರ್ಯಕ್ರಮದಲ್ಲಿ, ಶಾಬ್ದಿಕ ವಿಧಾನವನ್ನು ನಾವು ಮಕ್ಕಳನ್ನು ಅಕ್ಷರಗಳಿಂದ ಚಿಕ್ಕ ಪದಗಳನ್ನು ಓದುವ ಮಟ್ಟಕ್ಕೆ ಕರೆದೊಯ್ಯುವುದು ಮಾತ್ರವಲ್ಲ, ಮುಂದುವರೆಸಿ ವಾಕ್ಯಗಳನ್ನು, ಪುಟ್ಟ ವಾಕ್ಯವೃಂದಗಳನ್ನು ಮತ್ತು ಕಥೆಗಳನ್ನು ಓದುವುದರ ಕಡೆಗೂ ಕರೆದೊಯ್ಯುತ್ತೇವೆ.

ಮಕ್ಕಳು ಇಂಗ್ಲಿಷ್ ಮಾತನಾಡಲು ಕಲಿಯುವಾಗ ಬಹಳ ಮಟ್ಟಿನ ಆತ್ಮವಿಶ್ವಾಸವನ್ನು ಬೆಳೆಸುವ ಅಗತ್ಯವಿರುವಂತೆ, ಮಕ್ಕಳು ಇಂಗ್ಲಿಷ್ ಓದಲು ಮೊದಲ ಹೆಜ್ಜೆಗಳನ್ನು ಇಡುವಾಗಲೂ ಅಂತಹುದೇ ಕ್ರಮಗಳ ಅಗತ್ಯವಿರುತ್ತದೆ. ಈ ಆತ್ಮವಿಶ್ವಾಸವನ್ನು ಬೆಳೆಸುವುದಕ್ಕೆ ಸಹಾಯ ಮಾಡುವಂತಹ ತಂತ್ರಗಳು ಹಲವು ಇವೆ. ಕೆಲವನ್ನು ಈ ಕೆಳಗೆ ಕೊಡಲಾಗಿದೆ:

**ಆಟವಾಡುವುದು ಮತ್ತು ಓದುವುದು**

ಆಟಗಳು ಮಕ್ಕಳಿಗೆ ಪದಗಳನ್ನು ಓದುವುದಕ್ಕೆ ಸಹಾಯಮಾಡುವ ಬಹಳ ದೊಡ್ಡ ವಿಧಾನಗಳಾಗಿದೆ.

ಶಿಕ್ಷಕರು ಸರಳವಾದ ಚಿತ್ರಗಳ ಮತ್ತು ಪದಗಳ ಕಾರ್ಡುಗಳನ್ನು ತಯಾರು ಮಾಡಿಕೊಳ್ಳಬಹುದು. ಅವನ್ನು ನೋಡಿ ನೆನಪಿಸಿಕೊಂಡು ಜೊತೆ ಮಾಡುವ (Memory Match) ಆಟಕ್ಕೆ ಬಳಸಬಹುದು. ಬಿಂಗೋ ಕಾರ್ಡ್ ಆಟಗಳನ್ನು ಮಕ್ಕಳು ಮತ್ತೆ ಮತ್ತೆ ಆಡುವುದಕ್ಕೆ ಇಷ್ಟಪಡುತ್ತಾರೆ.






**ಪದ ಬಿಂಗೋ:**
ಶಿಕ್ಷಕರು ಪದಜಾಲವನ್ನು ರಚಿಸುತ್ತಾರೆ. ಮಕ್ಕಳಿಗೆ ಚಿತ್ರಗಳನ್ನು ತೋರಿಸಿ ಅವನ್ನು ಹೆಸರಿಸುವ ಪದವನ್ನು ಹೊಡೆದು ಮಾಡಲು ಹೇಳುತ್ತಾರೆ. ಪೂರ್ತಿ ಮಾಡಿದ ಅಡ್ಡ ಅಥವಾ ನೇರ ಸಾಲಿಗೆ ಅಂಕಗಳನ್ನು ನೀಡಲಾಗುತ್ತದೆ.






**ನೆನಪಿಸಿ ಹೊಂದಿಸು:**
ಮಕ್ಕಳು ಚಿಕ್ಕ ಗುಂಪುಗಳಲ್ಲಿ ನೆನಪಿಸಿ ಹೊಂದಿಸುವ ಆಟವನ್ನು ಚಿತ್ರ ಮತ್ತು ಅದನ್ನು ಹೆಸರಿಸುವ ಪದವನ್ನು ಜೋಡಿಸಿ ಆಡಬೇಕು.







ಇಎಲ್‌ಎಫ್ ವಾಕ್ಯ ನಿರ್ಮಾಣಕ್ಕೆ ಫ್ಲಿಫ್ ಪುಸ್ತಕವನ್ನು (Flip-book) ಬಳಕೆ ಮಾಡಲಾಗುತ್ತದೆ. ಇದು ಮಕ್ಕಳಿಗೆ ಪದಗಳನ್ನು ಓದುವುದರಿಂದ ವಾಕ್ಯಗಳನ್ನು ಓದುವ ಕಡೆಗೆ ಹೋಗಲು ನೆರವಾಗುತ್ತದೆ. ಶಿಕ್ಷಕರು ತಮ್ಮದೇ ಆದ ಫ್ಲಿಫ್ ಪುಸ್ತಕದ ಪ್ರತಿಗಳನ್ನು ಹಳೇ ಕ್ಯಾಲೆಂಡರ್ ಅಥವಾ ಸ್ಪೈರಲ್ ನೋಟ್ ಪ್ಯಾಡ್‌ಗಳನ್ನು ಬಳಸಿ ತಯಾರಿಸಿಕೊಳ್ಳಬಹುದು. ಮಕ್ಕಳು ಎಡ ಅಥವಾ ಬಲದ ಅರ್ಧ ಭಾಗವನ್ನು ಸರಿಸಿ ವಾಕ್ಯದ ಪ್ರಾರಂಭ ಭಾಗವನ್ನು ಅಥವಾ ವಾಕ್ಯದ ಕೊನೆಯ ಭಾಗವನ್ನು ಪರ್ಯಾಯವಾಗಿ ಬದಲಾಯಿಸಿಕೊಳ್ಳಬಹುದು ಮತ್ತು ಆಗ ರೂಪುಗೊಳ್ಳುವ ಹೊಸ ವಾಕ್ಯವನ್ನು ಓದಬಹುದು. ಈ ಚಟುವಟಿಕೆಯನ್ನು ತಂಡವಾಗಿಯೂ, ವೈಯುಕ್ತಿಕವಾಗಿಯೂ ಕೈಗೊಳ್ಳಬಹುದು.

ಪುನರಾವರ್ತಿಸು, ಪುನರಾವರ್ತಿಸು, ಪುನರಾವರ್ತಿಸು
ಪುನರಾವರ್ತನೆಯ ಪಠ್ಯಗಳು ಆರಂಭಿಕ ಓದುಗರಿಗೆ ಹೆಚ್ಚು ಓದುವುದಕ್ಕೆ ಆತ್ಮವಿಶ್ವಾಸವನ್ನು ನೀಡುತ್ತವೆ.

ಆಕೆ ನೆಗೆಯುವುದಕ್ಕೆ ಇಷ್ಟಪಡುತ್ತಾಳೆ.
ಆಕೆ ಹಾರುವುದಕ್ಕೆ ಮತ್ತು ಜಿಗಿಯುವುದಕ್ಕೆ ಇಷ್ಟಪಡುತ್ತಾಳೆ
ಆಕೆ ಮಳೆಯಲ್ಲಿ ನೆಗೆಯುವುದಕ್ಕೆ ಮತ್ತು ಜಿಗಿಯುವುದಕ್ಕೆ ಇಷ್ಟಪಡುತ್ತಾಳೆ.
ಅವಳು ಇಡೀ ದಿನ ಮಳೆಯಲ್ಲಿ ನೆಗೆಯುವುದಕ್ಕೆ ಮತ್ತು
ಜಿಗಿಯುವುದಕ್ಕೆ ಇಷ್ಟಪಡುತ್ತಾಳೆ.

ಓದುವಿಕೆಯನ್ನು ಸರಳಗೊಳಿಸುವ ವಿಸ್ತೃತ ವಾಕ್ಯಗಳು

| | | | |
|---|---|---|---|
| ಅವುಗಳು | | | |
| ಅವುಗಳು | ಸ್ಕರ್ಟ್‌ಗಳು • | | |
| ಅವುಗಳು | ಹಳೆಯ | ಸ್ಕರ್ಟ್‌ಗಳು • | |
| ಅವುಗಳು | ಹಳೆಯ | ಹಸಿರು | ಸ್ಕರ್ಟ್‌ಗಳು • |

ವಾಕ್ಯವನ್ನು ವಿಸ್ತರಿಸಿ
ಮಕ್ಕಳು ವಾಕ್ಯ ರಚಿಸಿ ಮತ್ತು ಓದಲು ನೆರವಾಗುವಂತೆ ಸರಳವಾದ ಕಾರ್ಡ್‌ಗಳ ಬಳಕೆ

ಸರಳವಾಗಿರಲಿ
ಆರಂಭಿಕ ಓದುಗರಿಗೆ ಬಳಕೆ ಭಾಷೆಯಲ್ಲಿರುವ ಪದಗಳನ್ನು ಒಳಗೊಂಡ ಸರಳವಾದ ಪಠ್ಯಗಳ ಅಗತ್ಯವಿದೆ. ವಾಕ್ಯಗಳು ಕಿರಿದಾಗಿರಬೇಕಿದ್ದು. ಅಕ್ಷರ ಗಾತ್ರ ದೊಡ್ಡದಾಗಿರಬೇಕು ಮತ್ತು ಪದಗಳ ನಡುವೆ ಸಾಕಷ್ಟು ಬಿಳಿಯಾದ ಖಾಲಿ ಜಾಗವಿರಬೇಕು.

| **ಆರಂಭಿಕ ಓದುಗರಿಗೆ ಸೂಕ್ತವಾದ ವಾಕ್ಯಗಳು** | **ಆರಂಭಿಕ ಓದುಗರಿಗೆ ಸೂಕ್ತವಲ್ಲದ ವಾಕ್ಯಗಳು** |
|---|---|
| ಮೀರಾಳಿಗೆ ಒಂದು ಹೊಸ ಪೆನ್ ದೊರಕಿತು.<br>ಆ ಪೆನ್ನು ಕೆಂಪಗಿತ್ತು.<br>ಅವಳು ಅದನ್ನು ತನ್ನ ಬ್ಯಾಗಿನ ಒಳಗೆ ಇಟ್ಟುಕೊಂಡಳು.<br>ಮೀರಾಳಿಗೆ ತನ್ನ ಹೊಸ ಪೆನ್ ಇಷ್ಟವಾಯಿತು. | ಮೀರಾ ಡಿಪಾರ್ಟ್‌ಮೆಂಟಲ್ ಸ್ಟೋರ್‌ನಿಂದ ಒಂದು ಹೊಸ ಪೆನ್ನನ್ನು ಕೊಂಡಳು.<br>ಆ ಪೆನ್ನು ಹೊಳಪಾಗಿ ಮತ್ತು ನಯವಾಗಿದ್ದು ಮತ್ತು ಅದಕ್ಕೆ ಚಿನ್ನದ ಬಣ್ಣದ ನಿಬ್ ಇತ್ತು.<br>ಮೀರಾಳ ತಾಯಿ ಅದನ್ನು ಅವಳ ಪೆನ್ಸಿಲ್ ಬಾಕ್ಸಿನ ಒಳಗೆ ಇಟ್ಟುಕೊಳ್ಳಲು ಹೇಳಿದರು ಮತ್ತು ಅದನ್ನು ಸುರಕ್ಷಿತವಾಗಿ ಇಟ್ಟುಕೊಳ್ಳುವುದಾಗಿ ಮಾತು ಕೊಡುವಂತೆ ಕೇಳಿದರು. |

**ತರಗತಿಯ ಹೊರಗಿನ ಇಂಗ್ಲಿಷ್**

ಮಕ್ಕಳು ಇಂಗ್ಲಿಷನ್ನು ತರಗತಿಯ ಹೊರಗೆಯೂ ಬಳಸುವುದನ್ನು ನಾವು ಹೇಗೆ ಖಾತರಿಪಡಿಸುವುದು?

ನಾವು ಕೆಲಸ ಮಾಡಿದ ಶಾಲೆಗಳಲ್ಲಿ 'ನಡೆಯಿರಿ ಮಾತನಾಡಿರಿ' (Walk 'n' Talk) ಅನ್ನುವ ಕಾರ್ಯಕ್ರಮವನ್ನು ಪರಿಚಯಿಸಿದ್ದೆವು. ಇದರ ಉದ್ದೇಶ ಇಂಗ್ಲಿಷನ್ನು ತರಗತಿಯ ಹೊರಗೆ ಮತ್ತು ಮಕ್ಕಳ ಮನೆಗಳಿಗೆ ಒಯ್ಯುವುದಾಗಿತ್ತು. ಮಕ್ಕಳು ಶಾಲೆ ಮುಗಿಸಿ ಮನೆಗೆ ಹಿಂದಿರುಗಿದ ಮೇಲೂ ಇಂಗ್ಲಿಷ್ ಬಳಸಬೇಕು ಎಂದು ನಾವು ಬಯಸಿದ್ದೆವು. ಆದರೆ ಇಂಗ್ಲಿಷ್ ಬಲ್ಲ ಒಬ್ಬರೂ ಇಲ್ಲದ ಸಮುದಾಯಗಳಲ್ಲಿ ಇದನ್ನು ಸಾಧಿಸುವುದು ಹೇಗೆ?

'ನಡೆಯಿರಿ ಮಾತನಾಡಿರಿ' ಕಾರ್ಯಕ್ರಮದಲ್ಲಿ, ಸಂಜೆ ಮಕ್ಕಳು ಶಾಲೆಯಿಂದ ಮನೆಗಳಿಗೆ ಹಿಂದಿರುಗಿದ ಮೇಲೆ, ಅವರ ನೆರೆಹೊರೆಯಲ್ಲಿ ಗುಂಪಾಗಿ ಓಡಾಡುತ್ತಾರೆ ಮತ್ತು ವಯಸ್ಕರೊಂದಿಗೆ ಇಂಗ್ಲೀಷಿನಲ್ಲಿ ಪ್ರಶ್ನೆಗಳನ್ನು ಕೇಳುತ್ತಾ ಹೋಗುತ್ತಾರೆ. ಮಕ್ಕಳಿಗೆ ಪ್ರಶ್ನೆಗಳನ್ನು ತಮಿಳಿಗೆ ತರ್ಜುಮೆ ಮಾಡುವ ಅವಕಾಶ ಇದೆ. ಆ ರೀತಿಯಾಗಿ ಪೋಷಕರಿಗೆ, ಅಜ್ಜ-ಅಜ್ಜಿಯರಿಗೆ ಮತ್ತು ಉಳಿದ ವಯಸ್ಕರಿಗೆ ಇಂಗ್ಲೀಷಿನಲ್ಲಿ ಹೇಗೆ ಪ್ರತಿಕ್ರಿಯೆ ಕೊಡುವುದು ಎಂದು 'ಕಲಿಸು'ತ್ತಾರೆ. ಮಕ್ಕಳು ತಾವು ತಿಳಿದಿರುವ ಸ್ವಲ್ಪ ಇಂಗ್ಲೀಷನ್ನು ಹಿರಿಯರಿಗೆ 'ಕಲಿಸಿದಾಗ', ಇಡೀ ಸಮುದಾಯವೇ ಅವರ ಬಗೆಗೆ ಹೆಮ್ಮೆಯನ್ನು ಅನುಭವಿಸಲು ಪ್ರಾರಂಭಿಸುತ್ತದೆ. ಇದು ಮಕ್ಕಳ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ.

ಪ್ರತಿ ಸಾಧನೆಗಳನ್ನು ಸಂಭ್ರಮಿಸುವುದು

ಇಂಗ್ಲಿಷ್ ಭಾಷೆಯನ್ನು ಕಲಿಯುವುದರ ಗುರಿ ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳುವುದು ಎಂದಾದರೆ, ಆಗ ಮಕ್ಕಳ ಕಲಿಕಾ ಸಾಧನೆಯನ್ನು ಪ್ರತಿ ಹಂತದಲ್ಲೂ ಸಂಭ್ರಮಿಸಬೇಕು. ಸಾಮಾನ್ಯವಾಗಿ, ಪ್ರತಿ ತರಗತಿಯ ಮುಂಚೂಣಿಯ ಸಾಧಕರಿಗೆ ಮಾತ್ರ ಬಹುಮಾನ ಅಥವಾ ಮೆಚ್ಚುಗೆಯ ಮಾತುಗಳು ಸಿಗುತ್ತವೆ. ಆದರೆ ನಾವು ಪ್ರತಿ ಮಗುವೂ ಇಂಗ್ಲಿಷ್ ಕಲಿಯಬೇಕು ಎಂದು ಬಯಸುತ್ತೇವಾದರೆ, ಆಗ ನಾವು ಪ್ರಗತಿಯನ್ನು ಸಂಭ್ರಮಿಸಬೇಕೇ ಹೊರತು ಕ್ಷಮತೆಯ ಮಟ್ಟವನ್ನಲ್ಲ.

ಪ್ರತಿ ಅವಧಿಯ ಕೊನೆಗೆ ನಾವು ಮಕ್ಕಳಿಗೆ ಒಂದು ಕೌಶಲ ಮೇಳವನ್ನು ಆಯೋಜಿಸುತ್ತೇವೆ. ಇಡೀ ಶಾಲೆ ಹಬ್ಬದ ವಾತಾವರಣದಲ್ಲಿ ಕಂಗೊಳಿಸುತ್ತದೆ. ಶಾಲೆಯೊಳಗಿನ ಎಲ್ಲಾ ಸ್ಥಳಗಳಲ್ಲೂ ಅಕ್ಷರಗಳ ಸ್ಟಾಲುಗಳು, ಪದಗಳ ಸ್ಟಾಲುಗಳು, ವಾಕ್ಯದ ಸ್ಟಾಲುಗಳು ಮತ್ತು ಚಿತ್ರದ ಸ್ಟಾಲುಗಳು ಸ್ಥಾಪಿತವಾಗಿರುತ್ತವೆ. ಮಕ್ಕಳು ಅವರ ಮಟ್ಟಕ್ಕಿರುವ ಯಾವುದೇ ಸ್ಟಾಲನ್ನೂ ಆಯ್ದುಕೊಳ್ಳಬಹುದು. ಆ ಸ್ಟಾಲನಲ್ಲಿರುವ ಕಾರ್ಡುಗಳನ್ನು ಓದಲು ಪ್ರಯತ್ನಿಸಬಹುದು. ಅವರು ಒಂದು ಚಿತ್ರದ ಕಾರ್ಡನ್ನು ಆರಿಸಿಕೊಳ್ಳಬಹುದು, ಅದರ ಬಗೆಗೆ ಕೇಳಿದ ಪ್ರಶ್ನೆಗಳಿಗೆ ಉತ್ತರಿಸಬಹುದು. ಅವರು ಹೆಚ್ಚಿನ ಪ್ರಶ್ನೆಗಳನ್ನು ಸರಿಯಾಗಿಯೇ ಉತ್ತರಿಸಿದರೆ, ಅವರಿಗೆ ಅವರ ದಿನಚರಿಯಲ್ಲಿ ಅಥವಾ ಕಾರ್ಡಿನಲ್ಲಿ ಅಂಟಿಸಿಕೊಳ್ಳುವ ಒಂದು ಸ್ಟಿಕರ್ ಲಭಿಸುತ್ತದೆ. ಕೆಲವು ಶಾಲೆಗಳಲ್ಲಿ ಪೋಷಕರನ್ನೂ ಆಮಂತ್ರಿಸಿ ಅವರ ಮಕ್ಕಳ ಪ್ರಗತಿಯನ್ನು ವೀಕ್ಷಿಸುವ ವ್ಯವಸ್ಥೆಯೂ ಇದೆ. ಪ್ರತಿ ಸಾಧನೆಯೂ, ಅದೆಷ್ಟೇ ಚಿಕ್ಕದಿದ್ದರೂ, ಸಂಭ್ರಮಾಚರಣೆಗೆ ಅರ್ಹವೇ ಆಗಿರುತ್ತದೆ.

ಪ್ರತಿ ಮಗುವೂ, ಅದರ ಸಾಮಾಜಿಕ ಅಥವಾ ಆರ್ಥಿಕ ಹಿನ್ನೆಲೆ ಏನೇ ಇದ್ದರೂ ಅದು ಇಂಗ್ಲಿಷ್ ಕಲಿಯುವ ಸಾಮರ್ಥ್ಯ ಹೊಂದಿದೆ ಎಂದು ನಂಬಿದರಷ್ಟೇ ಸಾಲದು. ತಮಗೆ ಆ ಸಾಮರ್ಥ್ಯವಿದೆ ಎಂದು ಮಕ್ಕಳೂ ನಂಬುವಂತೆ ಮಾಡಬೇಕು. ನಾವು ಮಕ್ಕಳ ಆತ್ಮವಿಶ್ವಾಸವನ್ನು ಅವರ ಕೌಶಲದ ಜೊತೆಗೆ ಹೆಚ್ಚಿಸಿದಾಗ ತಾವು ಬಯಸಿದ ಏನನ್ನೇ ಆದರೂ ಸಾಧಿಸಬಲ್ಲ ಆತ್ಮವಿಶ್ವಾಸ ಇರುವ ಹೊಸ ತಲೆಮಾರಿನ ಮಕ್ಕಳನ್ನು ಬೆಳೆಸಿಬಿಡುತ್ತೇವೆ.





**ಚಂದ್ರಾ ವಿಶ್ವನಾಥನ್**: ಇಎಲ್ಎಫ್ ಲರ್ನಿಂಗ್ ಸೊಲ್ಯೂಷನ್‌ನ ಸ್ಥಾಪಕ ನಿರ್ದೇಶಕಿ. ಈ ಸಂಸ್ಥೆಯು ಭಾರತದ ಎಲ್ಲಾ ಭಾಗದ ಮಕ್ಕಳಲ್ಲಿ, ಯುವಕರಲ್ಲಿ ಮತ್ತು ವಯಸ್ಕರಲ್ಲೂ ಇಂಗ್ಲಿಷ್ ಕೌಶಲಗಳನ್ನು ಬೆಳೆಸುವ ಗುರಿಯನ್ನು ಹೊಂದಿದೆ. ವಿಶೇಷವಾಗಿ ಮೊದಲ ತಲೆಮಾರಿನ ಇಂಗ್ಲಿಷ್ ಕಲಿಕಾರ್ಥಿಗಳ ಅವಶ್ಯಕತೆಗಳನ್ನು ಗಮನಿಸಿ ಕೆಲಸ ಮಾಡಲಾಗುತ್ತದೆ. ಚಂದ್ರಾ ಮತ್ತು ಅವರ ಇಎಲ್ಎಫ್ ಇಂಗ್ಲಿಷ್ ತಂಡವು ಇಂಗ್ಲಿಷ್ ಕಲಿಕೆಗೆ ಬೇಕಾದ ಹಲವು ಬಗೆಯ ಹೊಸ ಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸಿವೆ. ಅವನ್ನು ನೂರಕ್ಕೂ ಹೆಚ್ಚಿನ ಶಾಲೆಗಳಲ್ಲಿ ಶಿಕ್ಷಕರು ಮತ್ತು ಮಕ್ಕಳು ಬಳಸುತ್ತಾರೆ. ಚಂದ್ರಾ ಅವರು ಏಯ್ಡ್ ಇಂಡಿಯಾ (AID INDIA) ಎಂಬ ಲಾಭ ರಹಿತ ಒಂದು ಶಿಕ್ಷಣ ಸಂಸ್ಥೆಯ ಭಾಗವಾಗಿ, ಶೈಕ್ಷಣಿಕ ಸಂಶೋಧನೆ, ಪಠ್ಯಕ್ರಮ, ಸರಕಾರೀ ಶಾಲೆಗಳಲ್ಲಿ ತರಬೇತಿ ಮತ್ತು ಕಾರ್ಯಕ್ರಮಗಳ ಅನುಷ್ಠಾನದ ಕುರಿತು 20 ವರ್ಷಗಳಿಗೂ ಹೆಚ್ಚಿನ ಅನುಭವವನ್ನು ಗಳಿಸಿದ್ದಾರೆ. ತಮಿಳುನಾಡು ಸರಕಾರದ ಸರ್ವ ಶಿಕ್ಷಾ ಅಭಿಯಾನಕ್ಕಾಗಿ ಪ್ರಾಥಮಿಕ ಶಿಕ್ಷಣದ ಸಂಪನ್ಮೂಲ ವ್ಯಕ್ತಿಯಾಗಿ ಮತ್ತು ತರಬೇತುದಾರರಾಗಿ, ಶಾಲೆಗಳಲ್ಲಿ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಜೊತೆಗೆ ಕಾರ್ಯನಿರ್ವಹಿಸಿ ದ್ದಾರೆ. ಅವರು ಮಕ್ಕಳ ಕಲಿಕಾ ಫಲಗಳ ಸಾಧನೆಯ ಸುಧಾರಣೆಗಾಗಿ ಸರಕಾರೀ ಶಾಲೆಗಳ ಸುಮಾರು 10,000ಕ್ಕೂ ಹೆಚ್ಚಿನ ಶಿಕ್ಷಕರ ಜೊತೆಗೆ ಕೆಲಸ ಮಾಡಿದ್ದಾರೆ. ಇವರನ್ನು: chandra.aid@gmail.com ನಲ್ಲಿ ಸಂಪರ್ಕಿಸಬಹುದು.

ಅನುವಾದ: **ರಾಮಕೃಷ್ಣ ಭಟ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಭಾಗಾಕಾರವೆಂದರೆ ಮಕ್ಕಳು ಏಕೆ ಹೆದರುತ್ತಾರೆ?

ಗೋಮತಿ ರಾಮಮೂರ್ತಿ

ಐದು ವರ್ಷದ ಹಿಂದೆ, ನಾನು ನನ್ನ ಶಾಲೆಯಲ್ಲಿ ಗಣಿತ ಪ್ರಯೋಗಾಲಯ ಎಂಬ ಒಂದು ಪ್ರಬಂಧವನ್ನು ಪ್ರಸ್ತುತಪಡಿಸುತ್ತಿದ್ದೆ. ಪ್ರಸ್ತುತಿಯ ನಂತರದ ಚರ್ಚೆಯಲ್ಲಿ ಯಾರೋ ನನ್ನನ್ನು ಕೇಳಿದರು: 'ಬೇರೆಲ್ಲ ಅಂಕಗಣಿತದ ಕ್ರಿಯೆಗಳಲ್ಲಿ ನಾವು ಒಂದು ಅಂಕಿಯಿಂದ ಆರಂಭಿಸಿದರೆ ಭಾಗಾಕಾರದಲ್ಲಿ ಮಾತ್ರ ಗರಿಷ್ಠ ಸ್ಥಾನಬೆಲೆಯಿಂದೇಕೆ ಆರಂಭಿಸುತ್ತೇವೆ?'

ನನ್ನ ಉತ್ತರ, 'ಸ್ಥಾನಬೆಲೆಯ ಕುರಿತು ನಿಮ್ಮ ಅರ್ಥೈಸುವಿಕೆ ಉತ್ತಮವಾಗಿದ್ದರೆ, ಈ ಕ್ರಿಯೆಗಳನ್ನು ಬಿಡಿ ಸಂಖ್ಯೆಯಿಂದಲೇ ಆರಂಭಿಸಬೇಕು ಎಂಬ ಅಗತ್ಯವಿಲ್ಲ. ಹಿಂದುಮುಂದಾಗಿಯೂ ಇರಬಹುದು. ಹಾಗೆಯೇ ಭಾಗಾಕಾರದಲ್ಲಿಯೂ ಎರಡು ಕಡೆಯಿಂದಲೂ ನೀವು ಭಾಗಿಸಬಹುದು.'

ಇನ್ನೂ ಆ ಪ್ರಶ್ನೆಯು ನನ್ನ ಮನಸ್ಸಿನ ಒಂದು ಮೂಲೆಯಲ್ಲಿ ಇದೆ. ಒಂದು ಕ್ರಮಾವಳಿಯನ್ನು ರಚಿಸುವುದಕ್ಕಾಗಿ ಅಂಕಗಣಿತದ ನಾಲ್ಕು ಮೂಲ ಕ್ರಿಯೆಗಳನ್ನು ನಾವು ನಿಯಮಗಳನ್ನಾಗಿ ಅನುಸರಿಸುತ್ತೇವೆ. ಆದರೆ ಈ ನಿಯಮಗಳು ಕಠಿಣ ಮತ್ತು ವೇಗವಾಗಿರುವುದಿಲ್ಲ.

ಎಲ್ಲ ಅಂಕಗಣಿತದ ಕಾರ್ಯಗಳಲ್ಲಿ ಭಾಗಾಕಾರವು ಬಹಳ ಕಠಿಣವಾದ ಭಾಗವಾಗಿದೆ ಹಾಗೂ ಬಹಳಷ್ಟು ನಿಯಮಗಳನ್ನು ಒಳಗೊಂಡಿರುವುದರಿಂದ ಮಕ್ಕಳು ಇದಕ್ಕೆ ಹೆದರುತ್ತಾರೆ. ಅದರಲ್ಲಿಯೂ ಬಹು ಉದ್ದದ ಭಾಗಾಕಾರವು ಪ್ರಾಥಮಿಕ ಹಂತದ ಮಕ್ಕಳಿಗೆ ಅತಿ ಕಠಿಣವಾದುದು. ಶಾಲೆಗಳಲ್ಲಿ ಭಾಗಾಕಾರದ ನಿಯಮಗಳನ್ನು/ಕ್ರಮಾವಳಿಗಳನ್ನು ಬಳಸಲು ಆರಂಭಿಸಿದಾಗ ಭಾಗಾಕಾರದ ನಿಜವಾದ ಅರ್ಥವನ್ನು ನಾಟುವಂತೆ ಬೋಧಿಸಲು ಸೋತಿರುತ್ತೇವೆ. ಭಾಗಾಕಾರದ ನಿಯಮಗಳು ಒಂದು ಪ್ರಕ್ರಿಯೆಯಾಗಿದ್ದು, ಆದರೆ ಆ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ತರ್ಕ ಹಾಗೂ ಗಮನವಿಟ್ಟು ನಿರ್ಣಯಿಸುವ ಕೆಲಸದ ಅವಶ್ಯಕತೆ ಇದೆ.

**ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದು**

ಒಬ್ಬ ಪ್ರಜ್ಞಾವಂತ ವಿಜ್ಞಾನಿ ಹಾಗೂ ಲೇಖಕರಾಗಿರುವ ಡೇನಿಯಲ್ ವಿಲ್ಲಿಂಗ್ಹ್ಯಾಮ್ ಕೊಡುವ ಉದಾಹರಣೆಗಿಂತ ಬೇರೊಂದು ಉತ್ತಮ ಉದಾಹರಣೆ ನನಗೆ ಕಾಣಿಸಿಗುತ್ತಿಲ್ಲ. ಇವರು ಹೇಳುವುದೇನೆಂದರೆ ಅಮೇರಿಕಾದ ಶೇಕಡಾ 25ರಷ್ಟು ಆರನೇ ತರಗತಿಯ ಮಕ್ಕಳ ಪ್ರಕಾರ = ಚಿಹ್ನೆಯ ಅರ್ಥವೆಂದರೆ ಉತ್ತರವನ್ನು ಇಲ್ಲಿ ಬರೆಯಿರಿ ಎಂದಾಗಿರುತ್ತದೆ (ಎಸಿಟಿ, ಅಮೆರಿಕನ್ ಎಜುಕೇಟರ್). ಆದರೆ ಅವರು = ಚಿಹ್ನೆಯು ಸಮಾನ ಅಥವಾ ಗಣಿತೀಯ ಸಮಾನತೆಯಾಗಿರುತ್ತದೆ ಎನ್ನುವುದನ್ನು ಅರ್ಥ ಮಾಡಿ-ಕೊಂಡಿರುವುದಿಲ್ಲ.

ತರಗತಿಯಲ್ಲಿ ಯಾವುದರ ಅಗತ್ಯವಿದೆ? ಎನ್‌ಸಿಎಫ್ (2005) ತನ್ನ ಗಣಿತದ ನಿಲುವು ಪ್ರಬಂಧದಲ್ಲಿ (position paper) ಮಹತ್ವಾಕಾಂಕ್ಷೆಯುಳ್ಳ ಹಾಗೂ ಪರಸ್ಪರ ಹೊಂದಾಣಿಕೆಯಿರುವ ಪಠ್ಯಕ್ರಮವನ್ನು ಶಿಫಾರಸ್ಸು ಮಾಡುತ್ತದೆ ಮತ್ತು ಗಣಿತದ ಕಲಿಕೆ ಪ್ರತಿಯೊಂದು ಮಗುವಿನ ಹಕ್ಕು ಎಂದು ಹೇಳುತ್ತದೆ. ಇದಕ್ಕಾಗಿ, ಶಾಲಾ ಗಣಿತವು ಚಟುವಟಿಕೆ ಆಧಾರಿತವಾಗಿರಬೇಕೆಂದು ಪ್ರತಿಪಾದಿಸುತ್ತದೆ.

ಹೀಗಾಗಿ ಭಾಗಾಕಾರದಲ್ಲಿ 'ಗಣಿತ' ಎಂಬ ಕಲ್ಪನೆಯನ್ನು ಸಾಕಾರಗೊಳಿಸಲು ಹಾಗೂ ನನ್ನ ತರಗತಿಯಲ್ಲಿರುವ ಪ್ರತಿಯೊಂದು ಮಗುವು ಇದನ್ನು ಕಲಿಯುವಂತೆ ಮಾಡಲು ನನ್ನ ಭಾಗಾಕಾರ ತರಗತಿಯಲ್ಲಿ ಚಟುವಟಿಕೆ ಆಧಾರಿತ ವಿಧಾನವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದ್ದೇನೆ. ನನ್ನ ಎಲ್ಲ ವಿದ್ಯಾರ್ಥಿಗಳು ಭಾಗಾಕಾರವನ್ನು ಸುಲಭವಾಗಿ ಕಲಿಯುವಂತೆ ಮಾಡುತ್ತೇನೆ ಎಂದು ಖಾತರಿಪಡಿಸುತ್ತೇನೆ. ಈ ಲೇಖನದಲ್ಲಿ ಈ ಎಲ್ಲಾ ಕಲ್ಪನೆಗಳನ್ನು ಪ್ರಸ್ತುತಪಡಿಸಲಾಗಿದೆ.

**ಭಾಗಕಾರವು ಮಕ್ಕಳಿಗೇಕೆ ಕಠಿಣವೆನಿಸುತ್ತದೆ?**

ಸಮಸ್ಯೆ ಇರುವುದು ಮಕ್ಕಳಲ್ಲಿ ಅಲ್ಲ, ಆದರೆ ಇದನ್ನು ಕಲಿಸುವ ವಿಧಾನದಲ್ಲಿ ಸಮಸ್ಯೆಯಿದೆ. ಈ ಕೆಳಗೆ ಕೆಲವು ಪ್ರಶ್ನೆಗಳನ್ನು ಪಟ್ಟಿಮಾಡಲಾಗಿದೆ, ನಮ್ಮ ತರಗತಿಯ ಬೋಧನೆಯಲ್ಲಿ ಇವುಗಳಿಗೆ ಪರಿಹಾರ ಕಂಡುಕೊಳ್ಳುತ್ತಿದ್ದೇವೆಯೇ ಯೋಚಿಸಿ.

1. ಭಾಗಾಕಾರ ಎಂದರೇನು?
2. ದೈನಂದಿನ ಜೀವನದಲ್ಲಿ ಇದನ್ನು ಎಲ್ಲಿ ಬಳಸಲಾಗುತ್ತದೆ?
3. ದೈನಂದಿನ ಜೀವನದ ಯಾವುದೇ ಒಂದು ಸಂದರ್ಭದಲ್ಲಿ ನಾವು 4 ಅಥವಾ 5 ಅಂಕಿಯ ಸಂಖ್ಯೆಯನ್ನು ಮೂರಂಕಿಯ ಸಂಖ್ಯೆಯಿಂದ ಭಾಗಿಸುತ್ತೇವೆಯೇ? (ಬಹು ಸಂಖ್ಯಾ ಎಣಿಕೆ)
4. ಅಂತಹ ಸಂದರ್ಭ ಬಂದಾಗ ಎಷ್ಟು ಜನ ಕ್ಯಾಲ್ಕುಲೇಟರ್ ಇಲ್ಲದೆ ಇದನ್ನು ಮಾಡುತ್ತಾರೆ?

ಒಂದು ಮುಖ್ಯವಾದ ಅಂಶವನ್ನು ಇಲ್ಲಿ ಹೇಳಬಯಸುತ್ತೇನೆ. ಶಾಲೆಯಲ್ಲಿ ಈ ಪರಿಕಲ್ಪನೆಗಳನ್ನು ಔಪಚಾರಿಕವಾಗಿ ಕಲಿಯುವ ಮುಂಚೆಯೇ ಮಕ್ಕಳು ಭಾಗಾಕಾರ ಹಾಗೂ ಭಿನ್ನರಾಶಿಗಳನ್ನು ಒಳಗೊಂಡಂತೆ ಮೂಲ ಅಂಕಗಣಿತವನ್ನು ತಮ್ಮ ದೈನಂದಿನ ಜೀವನದಲ್ಲಿ ಬಳಸಲು ಸಮರ್ಥರಾಗಿರುತ್ತಾರೆ (ಪಾರ್ಮಾರ್, 2003; ಮಿಕ್ಸ್ ಮತ್ತು ಇತರರು, 1999). ಎನ್‌ಸಿಟಿಎಂ (ನ್ಯಾಷನಲ್ ಕೌನ್ಸಿಲ್ ಆಫ್ ಟೀಚರ್ಸ್ ಆಫ್ ಮ್ಯಾಥಮೆಟಿಕ್ಸ್)ನ ಒಂದು ಪ್ರಕಟನೆಯ ಪ್ರಕಾರ ವಿದ್ಯಾರ್ಥಿಗಳು ವಿಷಯವನ್ನು ಅರ್ಥಮಾಡಿಕೊಂಡಲ್ಲಿ ಒಂದು ಸಮಸ್ಯೆಯ ಪರಿಹಾರಕ್ಕೆ ಬೇಕಾದ ಮಾರ್ಗವನ್ನು ತಾವೇ ಹುಡುಕಿಕೊಳ್ಳುತ್ತಾರೆ. ಭಾಗಾಕಾರದ ಬೋಧನೆ-ಕಲಿಕೆಯನ್ನು ಹೆಚ್ಚು ಅರ್ಥಪೂರ್ಣವಾಗಿಸಲು ಬಹಳಷ್ಟು ಮಾರ್ಗಗಳಿವೆ. ನನ್ನ ಶಾಲೆಯ ನಾಲ್ಕನೇ ತರಗತಿಯ ಮಕ್ಕಳೊಂದಿಗೆ ಇವನ್ನು ಪ್ರಯತ್ನಿಸಲಾಗಿದೆ. ನಮ್ಮ ಶಾಲೆಯು ಬಾಲಕಿಯರ ಪ್ರಾಥಮಿಕ ಶಾಲೆಯಾಗಿದ್ದು ಇಲ್ಲಿ ಬರುವ ಬಹಳಷ್ಟು

ವಿದ್ಯಾರ್ಥಿಗಳು ಬಡತನ ರೇಖೆಗಿಂತ ಕೆಳಗಿರುವ ಕುಟುಂಬದಿಂದ ಬಂದವರಾಗಿರುತ್ತಾರೆ.




ಕೆಲವು ವಿಧಾನಗಳು

ಸರಣಿ

ಮೂರನೇ ತರಗತಿಯಲ್ಲಿ ಈಗಾಗಲೇ ಅವರು ಗುಂಪುಗಳನ್ನು ಬಳಸಿ ಭಾಗಿಸುವುದನ್ನು ಕಲಿತಿರುವುದರಿಂದ, ಸರಣಿಗಳನ್ನು ಉಪಯೋಗಿಸಿ ಭಾಗಿಸಲು ಮಕ್ಕಳಿಗೆ ಹೇಳಿದೆ. ಎಣಿಕೆಯನ್ನು ಉಪಯೋಗಿಸಿ ಸರಣಿಗಳನ್ನು (ಸಾಲು) ಮಾಡಲಾಗುತ್ತದೆ. ಮಕ್ಕಳು ಸಾಧ್ಯವಿರುವ ಎಲ್ಲ ಸರಣಿಗಳನ್ನು ಕೊಟ್ಟಿರುವ ಒಂದು ಸಂಖ್ಯೆಗೆ ಮಾಡಿ ಅಪವರ್ತ್ಯಗಳನ್ನು ಬರೆಯುತ್ತಾರೆ. ಮಕ್ಕಳು ಹೆಚ್ಚು ಹೆಚ್ಚು ಸರಣಿಗಳನ್ನು ಮಾಡಿದಾಗ ಅವರು ಒಂದು ಸಂಖ್ಯೆಯ ಅಪವರ್ತ್ಯಗಳ ಪರಿಕಲ್ಪನೆಗೆ ಹೆಚ್ಚು ಪರಿಚಿತರಾಗುತ್ತಾರೆ.

ಸಾಂಪ್ರದಾಯಿಕ ಪದ್ಧತಿಯಲ್ಲಿ, ಕಲಿಕೆಯ ಅಂಶಗಳಲ್ಲಿಯೂ ಗುಣಾಕಾರದ ಮಗ್ಗಿಗಳ ಆಧಾರದಲ್ಲಿಯೇ ಎಲ್ಲವೂ ನಿಂತಿದೆ. ಸರಣಿಯ ರೀತಿಯಲ್ಲಿ ಮಾಡಿದಾಗ ಮಕ್ಕಳು ಚೆನ್ನಾಗಿ ಗ್ರಹಿಸುತ್ತಾರೆ ಹಾಗೂ 16ನ್ನು ಮೂರರ ಸಾಲುಗಳನ್ನಾಗಿ ಮಾಡಲು ಸಾಧ್ಯವಿಲ್ಲ. ಏಕೆಂದರೆ ಮೂರರ ಐದು ಸಾಲುಗಳು ಮತ್ತು ಒಂದು (15 +1) ಬರುತ್ತದೆ ಎಂದು ಬಲ್ಲರು. ಈ ಎಲ್ಲವೂ ಒಂದು ಸಣ್ಣ ಅವಧಿಯಲ್ಲಿಯೇ ಆಗುತ್ತದೆ. ಒಳ್ಳೆಯ ಗ್ರಹಿಕೆಯು ಸಂಖ್ಯೆಗಳ ಉತ್ತಮ ಪರಿಕಲ್ಪನೆಯನ್ನು ಮೂಡಿಸುತ್ತದೆ ಎಂಬುದನ್ನು ಇದು ತಿಳಿಸುತ್ತದೆ.

**ಗಣಿತ ಮಾಲಾ**

ಗಣಿತದಲ್ಲಿ ಅಂಕಿಗಳ ಜ್ಞಾನವನ್ನು ಹೆಚ್ಚಿಸುವುದಕ್ಕಷ್ಟೇ ಸಂಖ್ಯಾರೇಖೆ ಭಾಗಾಕಾರವನ್ನು ಬಳಸುತ್ತಾರೆ. ದೈನಂದಿನ ಜೀವನದಲ್ಲಿ ಇದು ಒಂದು ಅಮೂರ್ತ ಕಲ್ಪನೆಯಾಗಿರುವುದರಿಂದ ಸಂಖ್ಯಾರೇಖೆ ಭಾಗಾಕಾರವು ಒಂದು ದುಃಸ್ವಪ್ನವಾಗಿದೆ. ವಿದ್ಯಾರ್ಥಿಗಳಿಗೆ ಎಲ್ಲಿಂದ ಆರಂಭಿಸಬೇಕು ಎನ್ನುವುದೇ ಅರ್ಥವಾಗುವುದಿಲ್ಲ ಹಾಗೂ ನಿರಂತರವಾಗಿರಬೇಕು ಮತ್ತು ಮಧ್ಯದಲ್ಲಿ ಎಲ್ಲೂ ತುಂಡಾಗಬಾರದು ಎನ್ನುವುದೇ ತಿಳಿದಿರುವುದಿಲ್ಲ ಎಂಬುದನ್ನು ಈ ಸಚಿತ್ರ ವಿವರಣೆಯು ತೋರಿಸಿಕೊಡುತ್ತದೆ. ಸಂಖ್ಯಾರೇಖೆಯ ಬಗ್ಗೆ ಒಂದು ಉತ್ತಮವಾದ ಚಿತ್ರಣವನ್ನು ಗಣಿತಮಾಲಾ ಕಟ್ಟಿಕೊಡುತ್ತದೆ. ಇದು ಕಾಲ್ಪನಿಕತೆಯ ಅಂಶವನ್ನು ಕಡಿಮೆ ಮಾಡುತ್ತದೆ. ವಿದ್ಯಾರ್ಥಿಗಳು ಗಣಿತಮಾಲಾ ಉಪಯೋಗಿಸಿದಾಗ ಸಂಖ್ಯಾ ರೇಖೆಯ ಅರಿವನ್ನು ಹೆಚ್ಚಿಸಿಕೊಳ್ಳುತ್ತಾ ಕಡಿಮೆ ತಪ್ಪುಗಳನ್ನು ಮಾಡುತ್ತಾರೆ.

**ಆಂಶಿಕ ಭಾಗಲಬ್ಧ ವಿಧಾನ**

ನನ್ನ ಅನುಭವದಲ್ಲಿ ವಿದ್ಯಾರ್ಥಿಗಳು ಹಣವನ್ನು ನಿರ್ವಹಿಸುವುದರ ಮೂಲಕ ಸಂಕಲನ, ವ್ಯವಕಲನ, ಗುಣಾಕಾರ ಅಥವಾ ಭಾಗಾಕಾರವಿರಬಹುದು ಯಾವುದೇ ಪರಿಕಲ್ಪನೆಯನ್ನು ಸುಲಭವಾಗಿ ಕಲಿಯುತ್ತಾರೆ. ಇದಕ್ಕಾಗಿ ನಾನು ಆಟಿಕೆ ಹಣವನ್ನು ಬಳಸುತ್ತೇನೆ. ತರಗತಿಯನ್ನು ಐದು ಗುಂಪುಗಳಾಗಿ ವಿಭಜಿಸಿ ಅವುಗಳಿಗೆ ಘನಾಕೃತಿ, ಘನ, ಸಿಲಿಂಡರು, ಶಂಕು ಹಾಗೂ ಗೋಳ ಮುಂತಾಗಿ ವಿವಿಧ ಆಕಾರಗಳ ಹೆಸರನ್ನು ಕೊಡಲಾಗುತ್ತದೆ.






132 ಅನ್ನು ಎರಡರಲ್ಲಿ ಭಾಗಿಸುವುದು ಮೊದಲನೆಯ ಲೆಕ್ಕ. ಈ ಲೆಕ್ಕವನ್ನು ಬಿಡಿಸುವುದಕ್ಕೆ ಎರಡು ಕಡ್ಡಿಗಳಿರುವ ಚಿತ್ರವನ್ನು ಬರೆದು ಒಂದೊಂದರ ಪಾಲನ್ನು ಅವುಗಳ ಮುಂದೆ ಬರೆಯುತ್ತಾರೆ. ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಮಕ್ಕಳು ಸ್ವಂತ ವಿಧಾನಗಳನ್ನು ಹುಡುಕಿಕೊಳ್ಳುತ್ತಾರೆ ಎಂಬುದು ಕಂಡುಬಂದಿದೆ. ಹಾಗಾಗಿ ತರಗತಿಯಲ್ಲಿ ಗಣಿತದ ಸಮಸ್ಯೆಗಳನ್ನು ಪರಿಹರಿಸುವುದು ಮಕ್ಕಳ ನಿಜಜೀವನದ ಪರಿಸ್ಥಿತಿಗಳಿಗೆ ಸಂಬಂಧ ಹೊಂದಿದ್ದು ಅವುಗಳೊಂದಿಗೆ ಗುರುತಿಸಿಕೊಳ್ಳುವಂತೆ ಇರಬೇಕು (ವರ್ಸ್ಚಾಫೆಲ್ ಮತ್ತು ಇತರರು 2006). ಮೊದಲಿಗೆ ಅವರು ಒಂದು ನೂರನ್ನು ಎರಡು ಐವತ್ತುಗಳಾಗಿ ಭಾಗಿಸಿದರು. ಆನಂತರ ಮೂವತ್ತನ್ನು ಎರಡು ಹದಿನೈದುಗಳಾಗಿ ಭಾಗಿಸಿ ಕೊನೆಯದಾಗಿ ಎರಡನ್ನು ಎರಡು ಬಿಡಿಗಳಾಗಿ ಭಾಗಿಸಿದರು. ಪ್ರತಿಯೊಬ್ಬರಿಗೂ ಸಿಗುವ ಪಾಲನ್ನು ಎಣಿಸಿ, ಭಾಗಲಬ್ಧವನ್ನು ಲೆಕ್ಕಹಾಕಿ ಶೇಷವು ಉಳಿದಿಲ್ಲ ಎಂದು ಕಂಡುಕೊಂಡರು.

ಗಣಿತದ ಒಂದು ಮುಖ್ಯ ಅಂಶವೆಂದರೆ ದಾಖಲೀಕರಣ. ಇದಾಗದಿದ್ದರೆ ಕಲಿಕೆ ಅಪೂರ್ಣವೆನಿಸುತ್ತದೆ. ಚಟುವಟಿಕೆಯ ಮೂಲಕ ಪರಿಕಲ್ಪನೆಯನ್ನು ಕಲಿತಂತಾಗುತ್ತದೆ ಹಾಗೂ ದಾಖಲೀಕರಣದ ಮೂಲಕ ಪ್ರಕ್ರಿಯೆಯನ್ನು ಕಲಿತಂತಾಗುತ್ತದೆ. ಪರಿಕಲ್ಪನೆ ಹಾಗೂ ಪ್ರಕ್ರಿಯೆ ಎರಡೂ ಜೊತೆ ಜೊತೆಯಲ್ಲಿ ಹೋದಾಗಲಷ್ಟೇ ಸಂಬಂಧ ಕಲ್ಪಿಸಿಕೊಳ್ಳುವುದಕ್ಕೆ ಹಾಗೂ ಅರ್ಥೈಸಿಕೊಳ್ಳುವುದಕ್ಕೆ ಸುಲಭವಾಗುವುದು. ಮಕ್ಕಳು ತಾವಾಗಿಯೇ ಉತ್ತರವನ್ನು ಕಂಡುಕೊಳ್ಳುತ್ತಾರೆ ಆದರೆ ಶಿಕ್ಷಕರು ಎದುರುಗೊಳ್ಳ-ಬಹುದಾದ ತಕರಾರುಗಳನ್ನು ನಿವಾರಿಸಿ ಆ ಚಟುವಟಿಕೆಯಲ್ಲಿ ಎಲ್ಲ ಮಕ್ಕಳ ಸಮಾನ ಭಾಗವಹಿಸುವಿಕೆಯನ್ನು ಖಚಿತಪಡಿಸಿಕೊಳ್ಳಬೇಕು.

**ಕೆಲವು ಸಾಮಾನ್ಯವಾದ ತಪ್ಪುಗಳು**

ಭಾಗಕಾರದ ಒಂದು ಮುಖ್ಯ ಭಾಗವಾದ ವ್ಯವಕಲನದಲ್ಲಿ ಮಕ್ಕಳು ತಪ್ಪುಗಳನ್ನು ಮಾಡಬಹುದು. ಉದಾಹರಣೆಗೆ, 125 ರಲ್ಲಿ 80 ನ್ನು ಕಳೆದಾಗ ಭಾಗಲಬ್ಧವು 100ಕ್ಕಿಂತ ಕಡಿಮೆ ಇರಬೇಕು. ಆದಾಗ್ಯೂ ಕೆಲವೊಮ್ಮೆ ಮಕ್ಕಳು ಇದನ್ನು ಅರ್ಥಮಾಡಿಕೊಳ್ಳುವುದಿಲ್ಲ. ಏಕೆಂದರೆ ಇಲ್ಲಿ ವ್ಯವಕಲನದ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳದೆ ಇರುವುದರಲ್ಲಿ ಸಮಸ್ಯೆಯಿದೆ. ಇದನ್ನು ಪರಿಹರಿಸದೆ ಮಗುವಿಗೆ ಭಾಗಾಕಾರವನ್ನು ಕಲಿಸುವ ಎಲ್ಲ ಪ್ರಯತ್ನವೂ ವ್ಯರ್ಥವಾಗುತ್ತದೆ. ಮೊದಲನೆಯ ಹಂತ ವ್ಯವಕಲನವನ್ನು ಕಲಿಸುವುದಾಗಿದೆ.

ಕೆಲವೊಮ್ಮೆ ಮಕ್ಕಳೂ ತಮ್ಮ ಕೆಲಸವನ್ನು ಮಾಡುವಾಗ ಅಸಡ್ಡೆಯಿಂದ ತಪ್ಪುಗಳನ್ನು ಮಾಡುತ್ತಾರೆ. ಉದಾಹರಣೆಗೆ ಭಾಗಿಸಬೇಕಾದ ಸಂಖ್ಯೆಯ ಕೆಲವು ಅಂಕಿಗಳನ್ನು ಬಿಟ್ಟುಬಿಡುವುದು. ಶಿಕ್ಷಕರು ಈ ತಪ್ಪುಗಳ ಕಡೆಗೆ ಎಚ್ಚರದಿಂದಿದ್ದು ಇವುಗಳ ಹಿಂದಿರುವ ಮೂಲ ಪರಿಕಲ್ಪನೆಗಳನ್ನು ವಿವರಿಸುವುದಕ್ಕೆ ಸಿದ್ಧರಾಗಿರಬೇಕು.

**ಪ್ರತಿಯೊಂದು ಮಗುವು ಭಾಗಾಕಾರವನ್ನು ಕಲಿಯಬಹುದು**

ಭಾಗಾಕಾರವನ್ನು ಕಲಿಸುವಾಗ ನನಗಾದ ಒಂದು ಉತ್ತಮ ಅನುಭವವನ್ನು ನಾನು ಹಂಚಿಕೊಳ್ಳಬಯಸುತ್ತೇನೆ. ನನ್ನ ವಿದ್ಯಾರ್ಥಿಯೊಬ್ಬಳಿಗೆ ಅವಳ ಮನೆಪಾಠದ ಶಿಕ್ಷಕರು ಒಂದು ಭಾಗಾಕಾರದ ಲೆಕ್ಕವನ್ನು ಕೊಟ್ಟಿದ್ದರು. ತರಗತಿಯಲ್ಲಿ ಹೇಳಿಕೊಟ್ಟ ವಿಧಾನವನ್ನು ಬಳಸಿ ಅವಳು ಲೆಕ್ಕವನ್ನು ಬಿಡಿಸಿದ್ದಳು. ಆದರೆ ಅವಳ ಮನೆಪಾಠದ ಶಿಕ್ಷಕರು ಇದನ್ನು ಅರ್ಥಮಾಡಿಕೊಳ್ಳದೆ ಅವಳು ತಪ್ಪು ಮಾಡಿದ್ದಾಳೆ ಎಂದು ಹೇಳುತ್ತಾ ಅದನ್ನು ಹೊಡೆದುಹಾಕಿ, ತಮಗೆ ಗೊತ್ತಿದ್ದ ದೀರ್ಘ ಭಾಗಾಕಾರ ವಿಧಾನವನ್ನು ಬಳಸಿ ಲೆಕ್ಕವನ್ನು ಬಿಡಿಸಿದರು. ಈ ವಿದ್ಯಾರ್ಥಿಯು ತನ್ನ ಶಿಕ್ಷಕರಿಗೆ ಇದನ್ನು ವಿವರಿಸಿ 'ನಮ್ಮಿಬ್ಬರಿಗೂ ಒಂದೇ ಉತ್ತರ ಬಂದಿದೆ' ಎಂದು ಸೂಚಿಸಿದಳು. ಶಿಕ್ಷಕರು ಇದನ್ನು ಒಪ್ಪಿ ಅವಳಿಗೆ ಮೆಚ್ಚುಗೆಯನ್ನು ಸೂಚಿಸಿದರು. ಇದೇ ವಿದ್ಯಾರ್ಥಿಯು ಈಗ ಅಂತಾರಾಷ್ಟ್ರೀಯ ಗಣಿತ ಒಲಂಪಿಯಾಡ್ ಪರೀಕ್ಷೆಯಲ್ಲಿ ತರಗತಿಗೆ ಮೊದಲಿಗಳಾಗಿದ್ದಾಳೆ ಹಾಗೂ ಐಎಂಓ 2020 ರ ಪರೀಕ್ಷೆಯ ಎರಡನೆಯ ಸುತ್ತಿಗೆ ಆಯ್ಕೆಯಾಗಿದ್ದಾಳೆ.

ಭಾಗಾಕಾರವನ್ನು ಕಲಿಯುವ ಸಣ್ಣ ಪರಿಧಿಯಲ್ಲಿ ಆಗಲೀ ಅಥವಾ ವಿಶಾಲ ಪರಿಧಿಯಲ್ಲಿ ಗಣಿತದ ಕಲಿಕೆ ಇರಬಹುದು, ಮಕ್ಕಳ ಕಲಿಕೆಯ ಮೇಲೆ ಹಲವಾರು ಅಂಶಗಳು ಪರಿಣಾಮ ಬೀರುತ್ತವೆ. ಶಿಕ್ಷಕರು ಹಾಗೂ ಬೋಧನಾ ವಿಧಾನದ ಬಗೆಗಿನ ಅವರ ಜ್ಞಾನ, ಸೂಕ್ತವಲ್ಲದ ವಿಧಾನಗಳ ಬಳಕೆ ಹಾಗೂ ಅರಿವಿನ ಕೊರತೆ, ತರಗತಿಯ ಸನ್ನಿವೇಶಗಳು ಹಾಗೂ ಇತರ ಅಂಶಗಳು ಮಕ್ಕಳ ಕಲಿಕೆಯ ಮೇಲೆ ಪರಿಣಾಮ ಬೀರುತ್ತವೆ.

ಮಕ್ಕಳಿಗೆ ಅದರಲ್ಲಿಯೂ ಹೆಣ್ಣುಮಕ್ಕಳಿಗೆ ಗಣಿತವು ಕಷ್ಟಕರ ಎಂಬುವ ನಂಬಿಕೆ ಇದೆ. ಇದು ಲಿಂಗ ಪಕ್ಷಪಾತ ಅಷ್ಟೇ. ಅರ್ನೆಸ್ಟ್ ಅವರ 1976ರ ಅಧ್ಯಯನವು ಪ್ರಾಥಮಿಕ ಶಾಲಾ ಮಕ್ಕಳಲ್ಲಿ ಲಿಂಗ ತಾರತಮ್ಯಗಳು ಹಾಗೂ ಅವರ ಶಿಕ್ಷಕರ ವರ್ತನೆಗಳು ಇದರ ಮೇಲೆ ಗಮನಹರಿಸುತ್ತದೆ. ಗಣಿತಶಾಸ್ತ್ರದಲ್ಲಿ ಹೆಂಗಸರಿಗಿಂತ ಗಂಡಸರು ಉತ್ತಮರು ಎನ್ನುವುದು ಸ್ಪಷ್ಟವಾಗಿ ಒಂದು ತಪ್ಪು ಕಲ್ಪನೆ ಹಾಗೂ ಸಾಮರ್ಥ್ಯದ ಕೊರತೆಗಿಂತ ಸಾಂಸ್ಕೃತಿಕ ಪ್ರಭಾವಗಳಿಂದಾಗಿ ವೃತ್ತಿಪರ ಮಹಿಳಾ ಗಣಿತಜ್ಞರ ಕೊರತೆಯಿದೆ ಎನ್ನುವುದರೊಂದಿಗೆ ಈ ಅಧ್ಯಯನವು ಕೊನೆಗೊಳ್ಳುತ್ತದೆ.

ಗಣಿತದ ಕಲಿಕೆಯು ಪ್ರತಿಯೊಬ್ಬರ ಹಕ್ಕು ಹಾಗೂ ಪ್ರತಿಯೊಂದು ಮಗುವಿಗೂ ಇದು ಸಾಧ್ಯ ಎಂದು ಸಾಬೀತುಪಡಿಸಲು ಹೆಣ್ಣುಮಕ್ಕಳ ಶಾಲೆಯಲ್ಲಿ ಶಿಕ್ಷಕನಾಗಿ ಕೆಲಸ ಮಾಡುತ್ತಿರುವ ನಾನು ಈ ಅವಕಾಶವನ್ನು ಬಳಸಿಕೊಂಡೆ. ಅವಕಾಶವಂಚಿತ ಸಮುದಾಯಗಳಿಂದ ಬರುವ ಹೆಣ್ಣುಮಕ್ಕಳಿಗೆ ಗಣಿತಶಾಸ್ತ್ರದಲ್ಲಿ ಉತ್ತಮ ಸಾಧನೆಗಳನ್ನು ಮಾಡಲು ಅವಕಾಶಗಳನ್ನು ಒದಗಿಸಬೇಕಾಗಿರುವುದು ನಮ್ಮ ಮುಂದಿರುವ ಅತ್ಯಂತ ಪ್ರಮುಖ ಸಾಮಾಜಿಕ ಪರಿವರ್ತನೆಯಾಗಿದೆ. ನಾನು ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತನಾಗಿದ್ದೇನೆ.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


https://www.academia.edu/11106660/TACKLING_THE_DIVISION_ALGORITHM

https://grantwiggins.wordpress.com/2014/04/23/conceptual-understanding-in-mathematics/

http://www.ncert.nic.in/html/pdf/schoolcurriculum/position_papers/math.pdf

http://faculty.etsu.edu/gardnerr/math-honors/theses/Horton-Thesis.pdf

'Developing mathematical power in whole number operations' published by NCTM


---




**ಗೋಮತಿ ರಾಮಮೂರ್ತಿ** ಅವರು ಪುದುಚೆರಿಯ ಸವರಾಯಲು ನಯಾಗರ್ ಸರ್ಕಾರಿ ಬಾಲಕಿಯರ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು 16 ವರ್ಷಗಳ ಬೋಧನಾ ಅನುಭವವನ್ನು ಹೊಂದಿದ್ದಾರೆ ಮತ್ತು ಪುದುಚೆರಿಯಲ್ಲಿ ಸಿಬಿಎಸ್ಇ (CBSE) ಪಠ್ಯಕ್ರಮದ ನಿರ್ವಹಣೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಇವರು ತನ್ನ ಶಾಲೆಯಲ್ಲಿ ಗಣಿತ ಪ್ರಯೋಗಾಲಯವನ್ನು ನಡೆಸುತ್ತಿದ್ದಾರೆ ಮತ್ತು ಸಂಪೂರ್ಣವಾಗಿ ಮಕ್ಕಳ ಕೊಡುಗೆಯಿಂದ ಕೂಡಿದ ದ್ವಿಭಾಷಾ ಮಕ್ಕಳ ಗಣಿತ ಪತ್ರಿಕೆ 'ARRAY'ನ ಸಂಪಾದಕಿಯಾಗಿದ್ದಾರೆ. ಪರಿಕಲ್ಪನಾ ತಿಳುವಳಿಕೆಗಾಗಿ ಗಣಿತದ ಬೋಧನೆ ಮತ್ತು ಕಲಿಕೆಯಲ್ಲಿ ವಿವಿಧ ಬೋಧನಾ ವಿಧಾನಗಳನ್ನು ಪ್ರಯೋಗಿಸುವುದರಲ್ಲಿ ಇವರು ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದಾರೆ. ಎಸ್‌ಸಿಇಆರ್‌ಟಿ(ತಮಿಳುನಾಡು)ಯಲ್ಲಿ ಪಠ್ಯಪುಸ್ತಕ ರಚನೆ ಸಮಿತಿಯ ಸದಸ್ಯರು ಕೂಡ ಆಗಿದ್ದಾರೆ. ಒಂದನೇ ತರಗತಿ ಗಣಿತ ಪಠ್ಯಕ್ರಮವನ್ನು ರಚಿಸುವ ಲೇಖಕರಲ್ಲಿ ಒಬ್ಬರಾಗಿ ಸಾಕಷ್ಟು ಕೊಡುಗೆಯನ್ನು ಸಹಾ ನೀಡಿದ್ದಾರೆ. ಇವರನ್ನು gomurama@gmail.com ನಲ್ಲಿ ಸಂಪರ್ಕಿಸಬಹುದು.


ಅನುವಾದ: **ವಿನಯಾ ವಿಠ್ಠಲ** । ಪರಿಶೀಲನೆ: **ಲತಾ ಕೆ.ಸಿ**

# ಒಂದೇ ಸೂತ್ರದ ಹೆಣಿಕೆ | ಮಕ್ಕಳು, ಸಮುದಾಯ ಹಾಗು ಶಿಕ್ಷಕರು

ಜಗಮೋಹನ್ ಸಿಂಗ್ ಕಟೈಥ್

'ಹೊಟ್ಟೆ ಖಾಲಿಯಾದಾಗ ಮನಸ್ಸಿಟ್ಟು ಕಲಿಯಲು ಸಾಧ್ಯವೇ?' ಎಂಬ ಮಾತನ್ನು ನಾವು ಬಹುಬಾರಿ ಕೇಳುತ್ತೇವೆ. ಇಂತಹ ಮಾತುಗಳು ಏನನ್ನು ಹೇಳುತ್ತವೆ? ಔಪಚಾರಿಕ ಶಾಲಾ ಶಿಕ್ಷಣಕ್ಕೂ ಮಿಗಿಲಾಗಿ ಬದುಕುಳಿಯುವಿಕೆಯೇ ಮೊದಲು ಎಂಬುದನ್ನು ಇದು ಖಚಿತವಾಗಿ ಸೂಚಿಸುತ್ತದೆ. ಹಸಿವನ್ನು ನೀಗಿಸುವುದೇ ಬದುಕಿನ ಪ್ರಮುಖ ಕಾಳಜಿಯಾಗಿರುವ ಕುಟುಂಬಗಳಿಂದ ಬರುವ ಮಕ್ಕಳನ್ನು ಅಥವಾ ಹೊಟ್ಟೆ ತುಂಬಿಸಿಕೊಳ್ಳಲು ಜೀವನೋಪಾಯ ಮಾರ್ಗವನ್ನು ಹುಡುಕುವ ಕುಟುಂಬದ ಮಕ್ಕಳನ್ನು ಶೈಕ್ಷಣಿಕ ವಲಯಗಳಲ್ಲಿ 'ಮೊದಲ ಪೀಳಿಗೆಯ ಕಲಿಕಾರ್ಥಿಗಳು' ಎನ್ನುತ್ತಾರೆ. ಅವರನ್ನೇಕೆ ಮೊದಲ ಪೀಳಿಗೆಯ ಕಲಿಕಾರ್ಥಿಗಳೆಂದು ಕರೆಯುತ್ತಾರೆಂದು ಯಾರಿಗೆ ಗೊತ್ತು? ಏಕೆಂದರೆ ಬಹುಶಃ ನಮ್ಮಲ್ಲಿ ಶಾಲೆಗಳನ್ನು ಮಾತ್ರ ಏಕೈಕ ಕಲಿಕಾ ಮಾರ್ಗವೆಂದು ಪರಿಗಣಿಸಿದ್ದು ಕಾರಣವಿರಬಹುದು. ತಮ್ಮ ಮಕ್ಕಳು ಈಗ ಓದಲು ಮತ್ತು ಬರೆಯಲು ಕಲಿತರೆ ಮುಂದಿನ 15-20 ವರ್ಷಗಳಲ್ಲಿ ಅವರು ಕಡಿಮೆ ಶ್ರಮದ ಉತ್ತಮ ಕೆಲಸ ಮಾಡಿ ತಮ್ಮ ಕಲಿಕೆಯ ಲಾಭವನ್ನು ಪಡೆಯಲು ಸಫಲರಾಗುತ್ತಾರೆಂಬುದನ್ನು ಪ್ರಾಯಶಃ ಅವರ ತಂದೆತಾಯಿಗಳು ಅರಿಯುವಲ್ಲಿ ಅಸಮರ್ಥರಾಗಿರಬಹುದು. ಇದು ಆಲೋಚನಾ ಸಾಮರ್ಥ್ಯದ ಕೊರತೆಯೋ ಅಥವಾ ಇದರಿಂದ ಈ ಆಯ್ಕೆಯನ್ನು ಪರಿಗಣಿಸಲು ತಡೆ ಒಡ್ಡುವ ಪರಿಣಾಮವಿರಬಹುದೇ, ಯಾರು ಬಲ್ಲರು? ಏನೇ ಆಗಲಿ, ಫಲಿತಾಂಶ ಮಾತ್ರ ಒಂದೇ ಬಗೆಯದ್ದು: ಇಂತಹವರಿಗೆ ಶಿಕ್ಷಣವು ಯಾವಾಗಲೂ ಎರಡನೆಯ ಆದ್ಯತೆಯಾಗಿರುತ್ತದೆ.

ಸಾಮಾನ್ಯವಾಗಿ, ಮಕ್ಕಳಿಗೆ ಮನೆ ಕೆಲಸ (Homework) ಎಂದರೆ ಅಕ್ಷರಗಳನ್ನು ಗುಂಡಾಗಿ ಬರೆಯುವುದು, ಪದ್ಯಗಳನ್ನು ಬಾಯಿಪಾಠ ಮಾಡುವುದು, ಪ್ರಶ್ನೆಗಳಿಗೆ ಉತ್ತರಿಸುವುದು ಇವೆಲ್ಲವನ್ನು ಒಳಗೊಂಡಿರುತ್ತವೆ. ಆದರೆ ಈ ಹಳ್ಳಿ ಮಕ್ಕಳ 'ಮನೆ ಕೆಲಸ' ಒಂದು ವಿಚಿತ್ರ ರೀತಿಯದ್ದಾಗಿರುತ್ತದೆ. ಅವರ ಪಾಲಿಗೆ ಮನೆ ಕೆಲಸ ಎಂದರೆ ಶಾಲೆಯಿಂದ ಮನೆಗೆ ಹಿಂದಿರುಗಿದ ಬಳಿಕ ಕಟ್ಟಿಗೆ ತರುವುದು, ಹುಲ್ಲು ಕತ್ತರಿಸುವುದು, ಜಾನುವಾರುಗಳ ಆರೈಕೆ, ತಮ್ಮ ಒಡಹುಟ್ಟಿದವರ ಪಾಲನೆ, ಪೋಷಣೆ, ತಂದೆತಾಯಿಗಳು ಮನೆಯಲ್ಲಿ ಇಲ್ಲದಾಗ ಮನೆ ನೋಡಿಕೊಳ್ಳುವುದು, ಧಾನ್ಯಗಳ ಕೊಯ್ಲು, ಕಟಾವು, ಧಾನ್ಯಗಳನ್ನು ವಿಂಗಡಿಸುವುದು ಇತ್ಯಾದಿ ಆಗಿರುತ್ತದೆ. ಹುಡುಗಿಯರಾದರೆ ಯಥಾಪ್ರಕಾರ ಅಡುಗೆ ತಯಾರಿಯ ಕೆಲಸ ನಿಶ್ಚಿತವಾಗಿರುತ್ತದೆ. ಇಲ್ಲಿನ ಮಕ್ಕಳಿಗೆ ಈ ಕೆಲಸಗಳು ತಮ್ಮ ಶಾಲೆಯಲ್ಲಿ ನೀಡಲಾದ ಮನೆಕೆಲಸಕ್ಕಿಂತ ಹೆಚ್ಚು ಸಹಜ ಹಾಗೂ ಅಗತ್ಯವೆನಿಸುತ್ತದೆ. ಶಾಲೆಯಲ್ಲಿ ನೀಡುವಂತಹ ಮನೆಕೆಲಸಗಳು ಅವರಿಗೆ ಬಹಳ ಕೃತಕವೆನಿಸುತ್ತದೆ ಮತ್ತು ತಮ್ಮ ವಾಸ್ತವ ಬದುಕಿನಿಂದ ಬಹಳ ದೂರವಾದದ್ದು ಎಂದು ಅನಿಸುತ್ತದೆ. ಅವನ್ನು ಪೂರ್ಣಗೊಳಿಸಲು ಅವರು ಸಾಕಷ್ಟು ಹೆಣಗಾಡಬೇಕಾಗುತ್ತದೆ. ತಮ್ಮ ಪರಿಚಿತ ಆಲೋಚನೆಗಳಿಂದ ಮತ್ತು ಸ್ವಾಭಿವ್ಯಕ್ತಿಗಳಿಂದ ದೂರವಾಗಿ ಹೊಸ ವಿಧಾನಗಳಿಗೆ, ವಿನ್ಯಾಸಗಳಿಗೆ ಅವರು ಒಗ್ಗಬೇಕಾಗುತ್ತದೆ. ಈ ಹೊಸ ವಿನ್ಯಾಸ ಅವರಿಗೆ ಬಹಳ ಸಂಕೀರ್ಣವೆನಿಸುತ್ತದೆ ಮತ್ತು ತಮ್ಮ ದೈನಂದಿನ ಬದುಕಿನೊಂದಿಗೆ ಅದನ್ನು ಸಂಪರ್ಕಿಸಲು ಅಸಾಧ್ಯವೆನಿಸುತ್ತದೆ. ಈ ಹಿನ್ನೆಲೆಯಿಂದ ಬರುವ ಬಹಳಷ್ಟು ಮಕ್ಕಳು ಕನಿಷ್ಟ ಪಕ್ಷ ಪ್ರಾಥಮಿಕ ಹಂತಗಳಲ್ಲಾದರೂ ಬಹುತೇಕ ಸರ್ಕಾರಿ ಶಾಲೆಗಳಲ್ಲಿ ಓದುತ್ತಾರೆ. ಆದ್ದರಿಂದಲೇ ಸರ್ಕಾರವು ಪ್ರತಿಯೊಬ್ಬರಿಗೂ ಶಿಕ್ಷಣವು ಸಿಗುವಂತೆ ಖಚಿತಪಡಿಸುವ ಹೊಣೆಗಾರಿಕೆಯನ್ನು ಹೊಂದಿದೆ.

**ಜನಪ್ರಿಯ ಗ್ರಹಿಕೆಗಳು**

ಓಹ್! ನಾನು ಪಾತ್ರಗಳು ಮತ್ತು ಹೊಣೆಗಾರಿಕೆಗಳ ಬಗ್ಗೆ ಹೇಳಿದೆ. ಈಗ ನಾವು ಇಲ್ಲಿಯ ಸಂಬಂಧಪಟ್ಟ ವಿಷಯಕ್ಕೆ ಬರೋಣ. ಸರ್ಕಾರಿ ಶಾಲೆಗಳಲ್ಲಿ ಓದುವ ಮಕ್ಕಳ ಬಗ್ಗೆ, ಅಂದರೆ ಈ ಹಿಂದೆ ಉಲ್ಲೇಖಿಸಿದ ಹಿನ್ನೆಲೆಯಿಂದ ಬರುವ ಮಕ್ಕಳು ನಿರೀಕ್ಷಿತ ಕಲಿಕಾ ಮಟ್ಟಕ್ಕೆ ತಲುಪುವುದಿಲ್ಲ ಎಂದು ಅನೇಕ ಬಾರಿ ಹೇಳಲಾಗುತ್ತದೆ ಎನ್ನಲು ನಾನು ಪ್ರಯತ್ನಿಸುತ್ತಿದ್ದೆ. ಐದರಿಂದ ಏಳನೆಯ ತರಗತಿಗಳಲ್ಲಿ ಓದುವ ಈ ಮಕ್ಕಳು ಅಕ್ಷರಗಳನ್ನು ಗುರುತಿಸಲು ಕಷ್ಟಪಡುತ್ತಾರೆ. ಹಲವು ಸಂಘಟನೆಗಳು ಇಂತಹ ಸಂಶೋಧನಾ ಫಲಿತಾಂಶವನ್ನೇ ಮುಖ್ಯವಾಗಿ ತೋರಿಸುತ್ತವೆ. ಇದರ ಪರಿಹಾರಕ್ಕಾಗಿ ರಾಷ್ಟ್ರೀಯ ಸಮಾವೇಶಗಳನ್ನು ಆಯೋಜಿಸಲಾಗುತ್ತದೆ. ಈ ಕುರಿತಂತೆ ಸರ್ಕಾರವೂ ಕೂಡ ಸಂಶೋಧನೆಗಳನ್ನು ನಡೆಸುತ್ತದೆ. ಹಲವಾರು ಸಂಶೋಧನಾ ಲೇಖನಗಳು ಈ ವಿದ್ಯಾರ್ಥಿಗಳು ಕಲಿಕೆಯಲ್ಲಿ ತಮ್ಮ ತರಗತಿಯ ಮಟ್ಟಕ್ಕೆ ತಕ್ಕಂತೆ ಇಲ್ಲ ಎಂದು ಸಾಬೀತುಪಡಿಸಲೆಂದೇ ಮೀಸಲಾಗಿವೆ.

ಈ ಇಡೀ ಪ್ರಕ್ರಿಯೆಯು ಸಂಪೂರ್ಣವಾಗಿ ಶಿಕ್ಷಕರಿಬ್ಬರನ್ನೇ ಆರೋಪಿಸಲು ಪ್ರಯತ್ನಿಸುತ್ತದೆ. ಶಿಕ್ಷಕರು ತಮ್ಮ ಕೆಲಸವನ್ನು ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ; ಅವರು ಸಾಕಷ್ಟು ರಜೆ ತೆಗೆದುಕೊಳ್ಳುತ್ತಾರೆ ಎಂಬೆಲ್ಲಾ ದೋಷಾರೋಪಗಳನ್ನು ನಾವು ಕಾಣುತ್ತೇವೆ. ಆದರೆ ಶಿಕ್ಷಕರ ಗೈರುಹಾಜರಿಯ ಕುರಿತ ನಮ್ಮ ಸಂಶೋಧನೆಯು ಬೇರೆಯದನ್ನೇ ತೋರಿಸುತ್ತದೆ. ಶಿಕ್ಷಕರು ತಮ್ಮ ಮೇಲೆ ಹೊರೆಸುವ ವಿವಿಧ ಆಡಳಿತಾತ್ಮಕ ಕಾರ್ಯಗಳಿಂದಾಗಿ ಶಾಲೆಗಳಿಂದ ಹೊರಗಿರಬೇಕಾಗುತ್ತದೆ ಎಂಬುದನ್ನು ಅದು ಸೂಚಿಸಿದೆ. ಶಿಕ್ಷಕರಲ್ಲಿ ಮಕ್ಕಳ ಕಲಿಕೆಯ ಮಟ್ಟ ಕಡಿಮೆಯಿರಲು ಕಾರಣವನ್ನು ಕೇಳಿದಾಗ ಅವರು ಮಕ್ಕಳ ಹಿನ್ನೆಲೆ, ಬಡತನ ಮತ್ತು ಗೈರುಹಾಜರಿಯ ಮೇಲೆ ಆರೋಪಿಸುತ್ತಾರೆ. ಸ್ವಲ್ಪಮಟ್ಟಿಗೆ ಇದೂ ಕೂಡ ಕಾರಣವಿರಬಹುದೆಂಬುದರಲ್ಲಿ ತಥ್ಯವಿದೆ. ಅವರು ಸರ್ಕಾರದ ನೀತಿಗಳು ಮತ್ತು ಯೋಜನೆಗಳನ್ನೂ ಕೂಡ ದೂರುತ್ತಾರೆ. ಆದರೆ ನನ್ನ ದೀರ್ಘಕಾಲದ ಅನುಭವ ಹಾಗೂ ಅವಲೋಕನವು ಬೇರೆಯದೇ ಚಿತ್ರಣವನ್ನು ತೋರಿಸುತ್ತದೆ. ವಾಸ್ತವ ಸನ್ನಿವೇಶ ಏನೇ ಇದ್ದರೂ ಹಲವಾರು ಸರ್ಕಾರಿ ಶಿಕ್ಷಕರು ಉತ್ತಮವಾಗಿ, ಉತ್ಸಾಹದಿಂದ ಸಮರ್ಥವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದು ಕೇವಲ ನನ್ನ ನಂಬಿಕೆ ಮಾತ್ರವಲ್ಲ, ಹಲವು ಹಳ್ಳಿ ಜನರು ಮತ್ತು ಸಮುದಾಯಗಳ ನಂಬಿಕೆಯಾಗಿದೆ. ಇದರಿಂದಾಗಿಯೇ ಅವರು ಇಂತಹ ಶಿಕ್ಷಕರ ವರ್ಗಾವಣೆಯನ್ನು ನಿಲ್ಲಿಸಲು ಅಥವಾ ಅವರನ್ನು

ತಮ್ಮ ಶಾಲೆಯಿಂದ ಬೀಳ್ಕೊಡಲು ನಿರಾಕರಿಸುತ್ತಾರೆ. ಅವರನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಸಮಾನ ಪರಿಸ್ಥಿತಿಯಲ್ಲಿ ಕೆಲವು ಶಿಕ್ಷಕರು ಚೆನ್ನಾಗಿ ಕೆಲಸ ಮಾಡಬಲ್ಲರು ಮತ್ತು ಕೆಲವು ಶಿಕ್ಷಕರು ಅಸಮರ್ಥರಾಗಿರುತ್ತಾರೆಂಬುದು ಈ ಸಂದರ್ಭದಲ್ಲಿ ಗಮನಿಸ-ಬೇಕಾದ ಅಂಶವಾಗಿದೆ. ಉತ್ತಮ ಫಲಿತಾಂಶಕ್ಕಾಗಿ ಉತ್ತಮ ಸಾಧನೆ ಮಾಡುತ್ತಿರುವ ಶಿಕ್ಷಕರು ಏನು ಮಾಡುತ್ತಿದ್ದಾರೆ? ಈ ಶಿಕ್ಷಕರು ಅನುಸರಿಸುವ ಪ್ರಕ್ರಿಯೆಯನ್ನು ನಾವು ಅರ್ಥಮಾಡಿಕೊಂಡರೆ ನಮಗೆ ಉತ್ತಮ ಫಲಿತಾಂಶಗಳನ್ನು ಪಡೆಯುವ ಭರವಸೆಯ ಕಿರಣಗಳು ಗೋಚರವಾಗುತ್ತವೆ.

ಈ ಪರಿಣಾಮಕಾರಿ ಶಿಕ್ಷಕರತ್ತ ನೋಡಿದರೆ, ಖಂಡಿತವಾಗಿ ನನಗೆ ಅವರೆಲ್ಲರ ದೈನಂದಿನ ಅಭ್ಯಾಸಗಳಲ್ಲಿ ಸಾಮ್ಯತೆಯನ್ನು ಕಾಣಬಹುದಾಗಿದೆ. ಈಗ ನಾನು ನನ್ನದೇ ಬೋಧನಾ ಅಭ್ಯಾಸಗಳ ಬಗ್ಗೆ ಯೋಚಿಸಿದಾಗ ನಾನೂ ಕೂಡ ಈ ಶಿಕ್ಷಕರ ಪೈಕಿ ಒಬ್ಬನೆಂದು ಅನಿಸುತ್ತದೆ. ಅವರ ಹಲವಾರು ಪ್ರಕ್ರಿಯೆಗಳನ್ನು ನಾನೂ ನಿರ್ವಹಿಸಿದ್ದೇನೆ. ಆದ್ದರಿಂದ, ನಾನು ಈ ಪ್ರಕ್ರಿಯೆಗಳನ್ನು ಸ್ಪಷ್ಟಪಡಿಸಲು ಪ್ರಯತ್ನಿಸುವಾಗ ವೈಯಕ್ತಿಕ ಅನುಭವಗಳು, ಪೂರ್ವಾಗ್ರಹಗಳನ್ನು ಸಂಪೂರ್ಣವಾಗಿ ಬೇರ್ಪಡಿಸುವುದು ಬಹಳ ಕಷ್ಟ. ನಾನು ಈ ಶಿಕ್ಷಕರ ಸಾಮಾನ್ಯ ಅಥವಾ ವಿಶೇಷ ಕಾರ್ಯಚಟುವಟಿಕೆಗಳನ್ನು ಸೂಕ್ತವಾಗಿ ಪ್ರಸ್ತುತಪಡಿಸದಿರಬಹುದು. ಆದರೂ, ನನ್ನ ತಿಳುವಳಿಕೆಯ ಮಟ್ಟಿಗೆ ಆ ಅಭ್ಯಾಸಗಳನ್ನು ವಿವರಿಸಲು ಪ್ರಯತ್ನಪಟ್ಟಿರುವೆ.

**ಇತರರ ಸಂತೋಷದಲ್ಲಿ ಭಾಗಿಯಾಗುವುದು**

ಶಾಲೆಗಳಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುವ ಶಿಕ್ಷಕರು ಸಂತೋಷದ ಹಾಗೂ ಶುಭ ಸಮಾರಂಭಗಳಂತಹ ಸಂದರ್ಭಗಳಲ್ಲಿ ತಮ್ಮ ವಿದ್ಯಾರ್ಥಿಗಳ ಮನೆಗಳಿಗೆ ಭೇಟಿ ನೀಡುತ್ತಾರೆಂದು ನಾನು ಗಮನಿಸಿದ್ದೇನೆ. ಉದಾಹರಣೆಗೆ, ಮಗು ಹುಟ್ಟಿದ ಸಂದರ್ಭ, ಹುಟ್ಟುಹಬ್ಬ, ಮದುವೆ, ಅಥವಾ ಇತರೆ ಸಮಾರಂಭಗಳಲ್ಲಿ ಅವರು ಭೇಟಿ ನೀಡುತ್ತಾರೆ. ವಿದ್ಯಾರ್ಥಿಗಳ ಮನೆಯಲ್ಲಿ ಹಸು ಕರುವನ್ನು ಹಾಕಿದಾಗ ಕೂಡ ಅವರ ಮನೆಗಳಿಗೆ ಹೋಗುತ್ತಾರೆ. ಶಿಕ್ಷಕರಿಗೆ ಭೇಟಿ ನೀಡಲು ಸಾಧ್ಯವಾಗದಿದ್ದರೆ ಮಕ್ಕಳ ಕುಟುಂಬಗಳು ಹಲವು ಬಾರಿ ಗಿಣ್ಣನ್ನು (ಹಸು ಕರು ಹಾಕಿದಾಗ ಮೊದಲ ದಿನದ ಹಾಲಿನಲ್ಲಿ ತಯಾರಿಸುವ ತಿನಿಸು) ಕಳುಹಿಸುತ್ತಾರೆ. ಇಂತಹ ಸಂತೋಷ ಸನ್ನಿವೇಶಗಳಲ್ಲಿ ಭಾಗಿಯಾದಾಗ ಮಕ್ಕಳು ಮತ್ತು ಅವರ ತಂದೆತಾಯಿಗಳೊಂದಿಗೆ ಬಾಂಧವ್ಯವುಂಟಾಗುವುದು ಮಾತ್ರವಲ್ಲ, ಮಕ್ಕಳು ಮತ್ತು ಕುಟುಂಬ ಸದಸ್ಯರ ಜೊತೆಗೆ ಇರುವ ಸಂಬಂಧದ ಬಗ್ಗೆಯೂ ತಿಳಿಯುತ್ತದೆ. ಅಂದರೆ, ಪರಸ್ಪರ ಮಕ್ಕಳ ತಂದೆತಾಯಿಯರ ನಡುವೆ, ಅವರ ಅಜ್ಜಿಅಜ್ಜಂದಿರ ನಡುವೆ, ಚಿಕ್ಕಮ್ಮ, ಚಿಕ್ಕಪ್ಪ, ದೊಡ್ಡಪ್ಪ, ದೊಡ್ಡಮ್ಮಂದಿರ ನಡುವೆ, ತಂದೆತಾಯಿ ಮತ್ತು ಮಕ್ಕಳ ನಡುವಿನ ಸಂಬಂಧ, ಈ ಎಲ್ಲವೂ ಮಗುವಿನ ಭಾವನಾತ್ಮಕ, ಗ್ರಹಿಕಾತ್ಮಕ ಹಾಗೂ ಚಲನಾತ್ಮಕ ಸಾಮರ್ಥ್ಯಗಳ ಮೇಲೆ ಪ್ರಭಾವ ಬೀರುತ್ತದೆ. ಈ ಎಲ್ಲ ಸಂಬಂಧಗಳ ತಿಳುವಳಿಕೆಯು ಶಿಕ್ಷಕರ ಕಾರ್ಯತಂತ್ರದ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ. ಇದು ಯಾವ ರೀತಿ ಅಥವಾ ಯಾವ ಮಟ್ಟದಲ್ಲಿ ಮಗುವಿಗೆ ನೆರವನ್ನು ನೀಡಬೇಕು, ಅವರು ಎಷ್ಟು ಸಂವೇದನಶೀಲರಾಗಬೇಕು, ಮಗುವಿಗೆ ಯಾವ ರೀತಿಯ ಪ್ರೇರಣೆ ಬೇಕು ಎಂಬ ಬಗ್ಗೆ ತಾವು ರೂಪಿಸುವ ಕಾರ್ಯತಂತ್ರದ ಮೇಲೆ ಪರಿಣಾಮ ಬೀರುತ್ತದೆ. ಮಗುವು ಏಕೆ ಅರ್ಥ ಮಾಡಿಕೊಳ್ಳುತ್ತಿಲ್ಲ ಎಂದು ತಿಳಿಯಲು ಕಾರಣವನ್ನು ವಿಶ್ಲೇಷಿಸಲು ಮತ್ತು ಆ ಸಮಸ್ಯೆಗಳಿಗೆ ಪರಿಹಾರ ಕಂಡುಹುಡುಕಲು ನೆರವಾಗುತ್ತದೆ. ಅವರು ಯಾವುದಕ್ಕೂ ಹೆಚ್ಚು ಪ್ರಯತ್ನ ಮಾಡಬೇಕಿಲ್ಲ. ಅವರು ಕೇವಲ ಈ ಎಲ್ಲ ವಿಷಯಗಳ ಬಗ್ಗೆ ಗಮನಹರಿಸಿದರೆ ಸಹಜವಾಗಿಯೇ ಎಲ್ಲವೂ ತಿಳಿಯುತ್ತದೆ.

ಪೋಷಕರ ಸಂಭ್ರಮದಲ್ಲಿ ಭಾಗವಹಿಸುವ ಮೂಲಕ ಅವರನ್ನು ಗೌರವಿಸಿದಾಗ ಪೋಷಕರು ಶಿಕ್ಷಕರಿಗೆ ಪ್ರೀತಿಯ ಮಳೆಯನ್ನೇ ಸುರಿಸುತ್ತಾರೆ. ಅವರ ಪ್ರೀತಿಯು ಹಲವಾರು ರೀತಿಯಲ್ಲಿ ವ್ಯಕ್ತವಾಗುತ್ತದೆ. ಕಟಾವಿನ ಸಮಯದಲ್ಲಿ ಬೆಳೆಗಳನ್ನು ನೀಡುವ ರೂಪದಲ್ಲಾಗಲೀ, ಹಣ್ಣು ತರಕಾರಿಗಳನ್ನು ಕೊಡುವುದು, ಮರದಲ್ಲಿ ಬಿಟ್ಟ ಮೊದಲ ಹಣ್ಣನ್ನು ಅವರಿಗಾಗಿ ಮೀಸಲಿಡುವುದು, ಕೆಲವೊಮ್ಮೆ ಗಿಣ್ಣನ್ನು ನೀಡುವುದರ ಮೂಲಕವೂ ಈ ಪ್ರೀತಿಯು ಬಿಂಬಿತವಾಗುತ್ತದೆ. ಶಿಕ್ಷಕರಿಗೆ ಪೋಷಕರು ತೋರಿಸುವ ಪ್ರೀತಿ, ಗೌರವ ಮತ್ತು ಬೋಧನಾ ಅಭ್ಯಾಸಗಳ ನಡುವೆ ನಿಕಟ ಸಂಬಂಧವಿದೆ. ಇದನ್ನು ಅನುಭವಿಸಬೇಕು, ಕೇವಲ ವಿವರಣೆ ನೀಡುವುದಲ್ಲ. ಇಲ್ಲೇ ತರ್ಕವು ಗೌಣವಾಗುತ್ತದೆ.

**ಸಂಕಷ್ಟದ ಕಾಲದಲ್ಲಿ ಅವರಿಗೆ ಬೆಂಬಲ**

ಪೋಷಕರ ಸಂತೋಷದ ಕ್ಷಣಗಳಲ್ಲಿ ಮಾತ್ರ ಭಾಗಿಯಾಗದೆ, ಅವರ ನೋವಿನ, ದುಃಖದ, ಸಂಕಷ್ಟದ ಸಮಯದಲ್ಲೂ ಅವರೊಂದಿಗಿ-ರುವುದು ಉತ್ತಮ ಶಿಕ್ಷಕರ ಮತ್ತೊಂದು ಗುಣವಾಗಿದೆ. ಮನೆಯಲ್ಲಿ ಒಬ್ಬರಿಗೆ ಅನಾರೋಗ್ಯವಿದ್ದರೆ ಶಿಕ್ಷಕರು ಅವರ ಮನೆಗೆ ಹೋಗುತ್ತಾರೆ ಅಥವಾ ದೂರವಾಣಿ ಮೂಲಕ ವಿಚಾರಿಸುತ್ತಾರೆ. ಕುಟುಂಬದಲ್ಲಿ ಯಾರಾದರೂ ಸಾವಿಗೀಡಾದರೆ ಅಥವಾ ಏನಾದರೂ ನಷ್ಟವಾದರೆ– ಕುಟುಂಬ ಸದಸ್ಯ, ದನ, ಭೂಮಿ ಅಥವಾ ಫಸಲು ಏನೇ ಆಗಿರಬಹುದು – ಆ ಬಗ್ಗೆ ವಿಚಾರಿಸುತ್ತಾರೆ, ಸಾಂತ್ವನ ಹೇಳುತ್ತಾರೆ. ಇಷ್ಟೇ ಅಲ್ಲದೆ ಕುಟುಂಬದ ಮಧ್ಯೆ ಬರುವ ವೈಮನಸ್ಯ, ಜಗಳಗಳ ಬಗ್ಗೆ ಕೂಡ ಕಾಳಜಿ ವಹಿಸುತ್ತಾರೆ. **ಅದು ಒಬ್ಬರ ಜೊತೆ ಮಾತನಾಡುವ ಅಥವಾ ಆಲಿಸುವ, ಸಂಬಂಧಗಳನ್ನು ಬೆಸೆಯುವ ರೀತಿಯಲ್ಲಿ ಮನೋಭಾವವೇ ಸಂಪೂರ್ಣವಾಗಿ ಬದಲಾಗುವಂತಹ ಒಂದು ಸರಳ ಕೆಲಸವಾಗಿರಬಹುದು**. ತಮಾಷೆಯೆಂದರೆ, ಇದಕ್ಕೆ ಯಾವುದೇ ವಿಶೇಷ ಪ್ರಯತ್ನ ಬೇಕಿಲ್ಲ. ಸಂಬಂಧದ ಅರಿವಾದಾಗ ಅದನ್ನು ಭಾವಿಸಿದಾಗ ಪ್ರಯತ್ನ ಪೂರ್ವಕವಾಗಿ ಪ್ರಶ್ನೆಗಳನ್ನು ಕೇಳುವ ಅಗತ್ಯವಿರುವುದಿಲ್ಲ, ಎಲ್ಲವೂ ಸಹಜವಾಗಿ ನಡೆಯುತ್ತದೆ. ಈ ಶಿಕ್ಷಕರು ಲಾಕ್‌ಡೌನ್‌ಗಳ ಸಮಯದಲ್ಲಿಯೂ ಕೂಡ ಮಕ್ಕಳೊಂದಿಗೆ ಸಂಪರ್ಕದಲ್ಲಿರುತ್ತಾರೆ. ಅವರ ಮನೆಗಳಲ್ಲಿನ ಸಮಸ್ಯೆಗಳ ಬಗ್ಗೆ ಸಹಾನುಭೂತಿ ಸೂಚಿಸುತ್ತಾರೆ. ಯಾವಾಗಲೂ ಅವರಿಗೆ ಸಹಾಯ ಮಾಡಲು ಸಿದ್ಧರಿರುತ್ತಾರೆ. ಈ ಗುಣವು ನೇರವಾಗಿ ಕಲಿಕೆಯೊಂದಿಗೆ ಯಾವ ಸಂಬಂಧವೂ ಹೊಂದಿಲ್ಲದಿದ್ದರೂ ಇದು ಒಬ್ಬ ಶಿಕ್ಷಕರು ಉತ್ತಮವಾಗಿ ಹೆಚ್ಚು ಪರಿಣಾಮಶೀಲರಾಗಿ ಕಾರ್ಯನಿರ್ವಹಿಸಲು ಖಂಡಿತ ನೆರವಾಗುತ್ತದೆ.

**ಹಳ್ಳಿಯ ಆಗುಹೋಗುಗಳಲ್ಲಿ ಭಾಗಿಯಾಗುವುದು**

ಇಂತಹ ಶಿಕ್ಷಕರು ಪೋಷಕರೊಂದಿಗೆ ಮಾತ್ರವಲ್ಲ, ಇನ್ನು ವಿಶಾಲ ಸ್ತರದಲ್ಲಿ ಊರಿನವರ ಜೊತೆಗೂ ಈ ಬಗೆಯ ಸಂಬಂಧವನ್ನು ಬೆಳೆಸಿಕೊಳ್ಳುತ್ತಾರೆಂಬುದನ್ನು ನಾನು ಬಹುಬಾರಿ ಗಮನಿಸಿದ್ದೇನೆ. ಪ್ರಾರ್ಥನಾ ಸಭೆಗಳು ಮತ್ತು ಧಾರ್ಮಿಕ ಹಬ್ಬಗಳಲ್ಲಿ ಅವರು ಒಂದಲ್ಲ ಒಂದು ರೀತಿಯಲ್ಲಿ ಭಾಗಿಯಾಗುತ್ತಾರೆ. ಊರಿನ ಹೆಂಗಸರು ಮಹಿಳಾ ಶಿಕ್ಷಕರ ಜೊತೆಗೆ ತಮ್ಮ ವೈವಾಹಿಕ ವಿಚಾರಗಳು ಮತ್ತು ಸಂಕಟಗಳನ್ನು ಹಂಚಿಕೊಳ್ಳುತ್ತಾರೆ. ತಮ್ಮ ಆರೋಗ್ಯ ಸಮಸ್ಯೆಗಳು ಮತ್ತು ಕಾಯಿಲೆಗಳ ಬಗ್ಗೆ ಕೂಡ ಹಂಚಿಕೊಳ್ಳುತ್ತಾರೆ. ಶಿಕ್ಷಕರೂ ಕೂಡ ಔಷಧಿಗಳನ್ನು ಒದಗಿಸುವ ಅಥವಾ ಸಲಹೆ ನೀಡುವ

ಮೂಲಕ ತಮ್ಮ ಪಾತ್ರವನ್ನು ನಿರ್ವಹಿಸುತ್ತಾರೆ. ಈ ರೀತಿಯ ಅನ್ಯೋನ್ಯ ಆತ್ಮೀಯ ಸಂಬಂಧವು ಮಗುವಿನ ಕಲಿಕೆಯ ಮೇಲೆ ನೇರವಾಗಿ, ಪರಿಣಾಮ ಬೀರುವುದಿಲ್ಲವಾದರೂ ಶಾಲೆಯೊಂದಿಗೆ ಸಮುದಾಯದ ಸಂಬಂಧದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಹಳ್ಳಿಗಳ ಜನರು ಶಾಲೆಯನ್ನು ತಮ್ಮದೆಂದು ಪರಿಗಣಿಸುತ್ತಾರೆ ಮತ್ತು ಸಾಧ್ಯವಾಗುವ ಎಲ್ಲ ರೀತಿಯಲ್ಲಿ ಶಾಲೆಯನ್ನು ಉತ್ತಮಗೊಳಸಲು ಪ್ರಯತ್ನಿಸುತ್ತಾರೆ. ಅವರು ಶಾಲೆಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಅಗತ್ಯಬಿದ್ದಾಗ ಶಾಲೆಗಾಗಿ ಕೆಲಸ ಕೂಡ ಮಾಡುತ್ತಾರೆ. ಇಂತಹ ಅನ್ಯೋನ್ಯ ಆತ್ಮೀಯ ಸಂಬಂಧ ಸ್ಥಾಪಿತವಾಗಿರದ ಸ್ಥಳಗಳಲ್ಲಿ ನಾವು ಬಹುಬಾರಿ ಶಾಲೆಯಲ್ಲಿ ಕಳ್ಳತನ ನಡೆಯುವುದು ಅಥವಾ ಶಾಲೆಯ ಆಸ್ತಿಗೆ ಹಾನಿಯಾಗಿರುವುದನ್ನು ಕಾಣುತ್ತೇವೆ. ಶಾಲೆಯಲ್ಲಿ ದಾಂಧಲೆ ನಡೆಸಿರುವುದನ್ನು ಕಾಣುತ್ತೇವೆ. ಬಹುಬಾರಿ ಶಾಲೆ ಮತ್ತು ಸಮುದಾಯದ ನಡುವೆ ಪರಸ್ಪರ ಅಪನಂಬಿಕೆ ಮತ್ತು ಅನುಮಾನವನ್ನು ನಾವು ಕಾಣುತ್ತೇವೆ. ಈ ವಿಷಯಗಳು ಕೈ ಮೀರಿ ವೈಮನಸ್ಯ ತೀವ್ರವಾಗಿ ಪ್ರತಿಭಟನೆಗಳು ಹಾಗೂ ಔಪಚಾರಿಕ ದೂರುಗಳವರೆಗೂ ಹೋಗಬಹುದು.

**ಶಾಲಾ ಚೌಕಟ್ಟಿಗೂ ಮೀರಿ ಮಕ್ಕಳೊಂದಿಗೆ ಸಂಬಂಧ**

ಇಂತಹ ಶಿಕ್ಷಕರು ಕೇವಲ ಶಾಲಾ ಸಮಯದಲ್ಲಿ ಮಾತ್ರ ಮಕ್ಕಳ ಜೊತೆಗೆ ತಮ್ಮ ಸಂಬಂಧವನ್ನು ಸೀಮಿತಗೊಳಿಸುವುದು ಸಾಧ್ಯವಿಲ್ಲ ಎಂದು ನಾನು ಕಂಡುಕೊಂಡಿದ್ದೇನೆ. ಶಾಲೆ ಮುಚ್ಚಿದ ದಿನಗಳಲ್ಲೂ ಅವರು ಮಕ್ಕಳೊಂದಿಗೆ ಸಂಪರ್ಕವನ್ನು ಇಟ್ಟುಕೊಂಡಿರುತ್ತಾರೆ. ಅವರು ಸಹಜವಾಗಿ ಮಕ್ಕಳ ದೈನಂದಿನ ಚಟುವಟಿಕೆಗಳ ಬಗ್ಗೆ ತಿಳಿಯಲು ಆಸಕ್ತರಾಗಿರುತ್ತಾರೆ. ಆಗಾಗ್ಗೆ ಅವರು ಶಾಲೆ ಮುಗಿದ ನಂತರ ಮಕ್ಕಳಿಗಾಗಿ ಕೋಷ್ಟಕಗಳನ್ನು ಮಾಡಲು ತಾವೇ ಖುದ್ದಾಗಿ ಬಣ್ಣಗಳು, ಪೆನ್ಸಿಲ್, ನೋಟ್‌ಬುಕ್ ಮತ್ತು ಪುಸ್ತಕಗಳನ್ನು ಒಟ್ಟುಗೂಡಿಸುತ್ತಾರೆ. ಪಾಠ ಮಾಡಲು ಪರಿಕರಗಳನ್ನು ಮತ್ತು ಚಟುವಟಿಕೆಗಳನ್ನು ತಯಾರಿಸುತ್ತಾರೆ. ಒಮ್ಮೆ ಒಬ್ಬ ಶಿಕ್ಷಕರು ನನಗೆ ಹೇಳಿದ್ದು 'ನಾನು ನಮ್ಮ ಮಕ್ಕಳ ಶಾಲೆಯಲ್ಲಿ ಎಸೆದು ಬಿಟ್ಟ ಸೀಮೆಸುಣ್ಣದ ತುಂಡುಗಳು, ಪೆನ್ಸಿಲ್ ತುಂಡುಗಳು ಮತ್ತು ನೋಟ್ ಬುಕ್ಕುಗಳನ್ನು ಜಾಗರೂಕತೆಯಿಂದ ಸಂಗ್ರಹಿಸಿ ಅವುಗಳನ್ನು ನನ್ನ ಶಾಲೆಯಲ್ಲಿ ಬಳಸುತ್ತೇನೆ. ಬೇಡವೆಂದು ಬಿಟ್ಟ ವಸ್ತುಗಳನ್ನು ನನ್ನ ಶಾಲೆಯಲ್ಲಿ ಸುಲಭವಾಗಿ ಬಳಸಬಹುದು. ಪೆನ್ಸಿಲನ್ನು ಸ್ವಲ್ಪ ಚೂಪುಮಾಡಿದರೆ ಅದು ಚೆನ್ನಾಗಿ ಕೆಲಸ ಮಾಡುತ್ತದೆ. ಸಣ್ಣ ಪೆನ್ಸಿಲ್ ಅಥವಾ ಸೀಮೆಸುಣ್ಣದ ತುಂಡಿನಿಂದ ಕೈಹಿಡಿತ ಸ್ಥಿರವಾಗಲು ಕೈ ಹಿಡಿಯಲು ಅಭ್ಯಾಸವಾಗುತ್ತದೆ.'

**ಕಲಿಸಲು ಮತ್ತು ಕಲಿಯಲು ಸಿದ್ಧತೆ**

ನಾನು ಈ ಶಿಕ್ಷಕರಲ್ಲಿ ಇನ್ನೊಂದು ಸಾಮಾನ್ಯ ಒತ್ತಡವನ್ನು ಕೂಡ ಗುರುತಿಸಿದ್ದೇನೆ: ಎಲ್ಲರಿಗೂ ಒಂದಲ್ಲ ಒಂದು ರೀತಿಯಲ್ಲಿ ನಿರಂತರವಾಗಿ ಮಕ್ಕಳ ಕಲಿಕೆಯ ಬಗ್ಗೆ ಕಾಳಜಿಯಿರುತ್ತದೆ. ಮಕ್ಕಳಿಗೆ ಏನನ್ನಾದರೂ ಕಲಿಯಲು ಸಾಧ್ಯವಾಗದಿದ್ದರೆ ಅವರು ಉತ್ತರಕ್ಕಾಗಿ ಹುಡುಕುತ್ತಾರೆ. ಈ ಕಾಳಜಿಯು ಅವರಿಗೆ ಇನ್ನೂ ಹೆಚ್ಚು ಕಲಿಯಲು ಪ್ರೇರಣೆ ನೀಡುತ್ತದೆ. ಇದರಿಂದ ಅವರಿಗೆ ಹಲವಾರು ವೇದಿಕೆಗಳಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಲು ಕಾರಣವಾಗುತ್ತದೆ. ಒಳ್ಳೆಯದು ಅಥವಾ ಕೆಟ್ಟ ಅಭ್ಯಾಸಗಳಂತೆ ಅವು ಒಟ್ಟಿಗೆ ಹೆಣೆದುಕೊಂಡಿರುತ್ತವೆ. ಒಂದು ಕೆಟ್ಟ ಅಭ್ಯಾಸವು ಇನ್ನೊಂದನ್ನು ಪ್ರಚೋದಿಸುತ್ತದೆ ಮತ್ತು ಒಳ್ಳೆಯ ಒಂದು ಅಭ್ಯಾಸವು ಇನ್ನೊಂದಕ್ಕೆ ಎಡೆಮಾಡಿಕೊಡುತ್ತದೆ. ಇದೇ ರೀತಿ ಈ ಶಿಕ್ಷಕರಲ್ಲೂ ನಡೆಯುತ್ತದೆ. ಅವರ ಸಿದ್ಧತೆ ಮತ್ತು ಸಮರ್ಪಣಾ ಮನೋಭಾವವು ಅವರಿಗೆ ಕಲಿಯಲು ಪ್ರೇರಣೆ ನೀಡುತ್ತದೆ.

**ವಿಶಾಲ ಮನಸ್ಸಿನಿಂದ ಕಾಣುವುದು**

ಪರಿಣಾಮಕಾರಿ ಶಿಕ್ಷಕರು ಈ ಎಲ್ಲ ಅಭ್ಯಾಸಗಳನ್ನು ಅಳವಡಿಸಿ-ಕೊಳ್ಳುತ್ತಾರೆ ಎಂದು ನಾನು ಹೇಳುತ್ತಿಲ್ಲ. ಆದರೆ ಬಹುಬಾರಿ ಈ ಎಲ್ಲಾ ಅಭ್ಯಾಸಗಳನ್ನು ಪ್ರಯತ್ನಿಸುವುದನ್ನು ನಾವು ಹೆಚ್ಚಾಗಿ ಕಾಣುತ್ತೇವೆ. ಆದರೆ, ಪ್ರಗತಿಪರ ಹಾಗೂ ಸೃಜನಶೀಲ ತರಗತಿ ಅಭ್ಯಾಸಗಳು ಮಾತ್ರ ನಾವು ಮಾತನಾಡುತ್ತಿರುವ ಹಿನ್ನೆಲೆಯಿಂದ ಬರುವ ಮಕ್ಕಳ ಉತ್ತಮ ಫಲಿತಾಂಶಕ್ಕೆ ಎಡೆಮಾಡಿಕೊಡುವುದು ಎಂಬುದರ ಬಗ್ಗೆ ನನಗೆ ಅನುಮಾನವಿದೆ ಅಥವಾ ನಾನು ಇಂಥ ಬದಲಾವಣೆಯನ್ನು ನೋಡಿಲ್ಲ ಎಂದು ಹೇಳಬಹುದೇನೋ. ಆದರೆ ಕಲಿಕಾ ಪ್ರಕ್ರಿಯೆಯಲ್ಲಿ ಮಾತ್ರ ನಿರತರಾಗಿರದೆ ಮೇಲೆ ಹೇಳಿದ ಪಾತ್ರಗಳನ್ನು ವಹಿಸಿರುವ ಅಥವಾ ಕಾರ್ಯನಿರ್ವಹಿಸಿರುವವರು ಉತ್ತಮ ಫಲಿತಾಂಶಕ್ಕೆ ಕಾರಣರಾಗುವುದಂತೂ ನಿಜ. ಶಿಕ್ಷಣವನ್ನು ಸಾಕ್ಷರತೆ ಹಾಗೂ ಪುಸ್ತಕೀಯ ಜ್ಞಾನವನ್ನು ನೀಡುವ ಪಾತ್ರ ಎನ್ನುವುದನ್ನು ಮೀರಿ ಒಬ್ಬ ವ್ಯಕ್ತಿಯನ್ನು ಅತ್ಯುತ್ತಮವಾಗಿ ರೂಪಿಸುವ ಪಾತ್ರವಾಗಿ ನೋಡುವುದು ಅನಿವಾರ್ಯ. ಈ ರೀತಿಯ ತಿಳುವಳಿಕೆಯು ಜನರೊಂದಿಗೆ ವ್ಯವಹರಿಸುವ ಮೂಲಕ ಮಾತ್ರ ಬೆಳೆಯುತ್ತದೆ. ಪೋಷಕರೊಂದಿಗೆ ವ್ಯವಹರಿಸುವುದು ಮತ್ತು ಅವರೊಂದಿಗೆ ಒಳ್ಳೆಯ ಬಾಂಧವ್ಯ ಬೆಳೆಸಿಕೊಂಡರೆ ಇದು ಮಕ್ಕಳ ಜೊತೆಗೆ ಹೇಗೆ ಕೆಲಸಮಾಡುವುದು ಮತ್ತು ಅವರೊಂದಿಗೆ ಯಾವ ರೀತಿಯ ಕೆಲಸ ಮಾಡುವುದೆಂಬ ಚಿಂತನೆಯ ಬೀಜಗಳು ಮೊಳಕೆಯೊಡೆಯುತ್ತವೆ, ತಿಳುವಳಿಕೆ ಮೂಡುತ್ತದೆ.

ಎರಡನೆಯದಾಗಿ, ಶಾಲೆಯು ತನ್ನದೇ ಗುರುತಿರುವ ಅನನ್ಯ ಅಸ್ತಿತ್ವ ಹೊಂದಿದ್ದರೂ, ಅದು ಸಮಾಜದ ಒಂದು ಭಾಗವೇ ಹೊರತು ಪ್ರತ್ಯೇಕವಲ್ಲ ಎನ್ನುವುದನ್ನು ಕಡ್ಡಾಯವಾಗಿ ಅರ್ಥ-ಮಾಡಿಕೊಳ್ಳಬೇಕು. ನಾವು ಎಲ್ಲರೊಂದಿಗೆ ಸಂಪರ್ಕದಲ್ಲಿದ್ದು ಪರಸ್ಪರ ಅರ್ಥ ಮಾಡಿಕೊಂಡಾಗ ಮಾತ್ರ ಉತ್ತಮ ಶಿಕ್ಷಣವು ಸಾಧ್ಯವಾಗುತ್ತದೆ. ಶಾಲೆಗಳನ್ನು ಪ್ರತ್ಯೇಕವಾಗಿ ಅರ್ಥಮಾಡಿ-ಕೊಳ್ಳಬಾರದು. ಈ ರೀತಿಯಾಗಿ ಅರ್ಥ ಮಾಡಿಕೊಳ್ಳುವುದೆಂದರೆ ಆನೆಗೆ ಸಮಾಧಿ ತೋಡಲು ಒಂದು ಟೀ ಚಮಚದಿಂದ ಅಗೆದಂತಾಗುತ್ತದೆ. ವಿಶಾಲಾರ್ಥದಲ್ಲಿ ಒಂದು ಮಗು ಸಮಾಜ ಹಾಗೂ ಕುಟುಂಬದ ಒಂದು ಭಾಗ. ಒಬ್ಬ ಮಗುವನ್ನು ಅರ್ಥಮಾಡಿಕೊಳ್ಳಲು ಮಕ್ಕಳು, ಕುಟುಂಬ ಹಾಗೂ ಸಮಾಜದ ನಡುವಿನ ಸಂಬಂಧವನ್ನು ಸೂಕ್ತವಾಗಿ ಅರ್ಥ ಮಾಡಿಕೊಳ್ಳಬೇಕು. ಈ ಸಂಬಂಧವನ್ನು ನಾವು ಅಲಕ್ಷಿಸಿದರೆ ನಾವು ವಾಸ್ತವವನ್ನು ತಿಳಿಯಲಾರೆವು. ಒಂದು ವೇಳೆ ನಮಗೆ ವಾಸ್ತವವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದಿದ್ದರೆ, ಶಿಕ್ಷಕರು ಹಾಗೂ ಮಕ್ಕಳ ನಡುವಿನ ಸಂಬಂಧವು ಪರಿಣಾಮಕಾರಿ ಕಲಿಕೆಗೆ ಎಡೆಮಾಡಿ-ಕೊಡುವುದಿಲ್ಲ. ಯಾರಾದರೂ ಕೇವಲ 9ರಿಂದ 3 ಗಂಟೆವರೆಗೆ ಕೆಲಸ ಬೇಕು ಎಂದು ಭಾವಿಸಿ ಶಿಕ್ಷಕ ಹುದ್ದೆಗೆ ಸೇರಿದರೆ ಪರವಾಗಿಲ್ಲ. ಆದರೆ ಪರಿಣಾಮಕಾರಿ ಬೋಧನೆಗೆ ಈ ಪ್ರಕ್ರಿಯೆಯನ್ನು ಇಡಿಯಾಗಿ ಅರ್ಥಮಾಡಿಕೊಳ್ಳಬೇಕು. ನಾವು ಸೌಹಾರ್ದ ಸಂಬಂಧವನ್ನು ಬೆಳೆಸಿಕೊಳ್ಳಬೇಕಾದರೆ ಅರ್ಥ ಮಾಡಿಕೊಳ್ಳಬೇಕಾದರೆ ಪ್ರಯಾಸ ಪೂರ್ವಕ ಪ್ರಯತ್ನಗಳೇನೂ ಬೇಕಿಲ್ಲ. ಇದು ತಂತಾನೇ ನಮಗೆ ಬರುತ್ತದೆ. ಇದು ಒಬ್ಬ ಶಿಕ್ಷಕರ ಸಂವೇದನಶೀಲತ್ವ ಹಾಗೂ ಪರಿಣಾಮಕಾರಿತ್ವವನ್ನು ಉನ್ನತೀಕರಿಸುವುದು ಮಾತ್ರವಲ್ಲ ಬೋಧನಾ ಕೌಶಲ್ಯವನ್ನು ಸುಧಾರಿಸುವಲ್ಲಿ ಹೊಸ ಮಾರ್ಗಗಳನ್ನು ತೆರೆಯುತ್ತದೆ.

**ಓರ್ವ ಶಿಕ್ಷಕರ ಮಾತು**

ಅಂದು ಪ್ರಿಯಾಂಕಾ ಶಾಲೆಗೆ ಪ್ರವೇಶ ಪಡೆಯಲು ಬಂದ ದಿನದಂದು ಆಕೆ ನನ್ನ ಸೀರೆಯ ಸೆರಗಿನ ಹಿಂದೆ ಅಡಗಿ–ಕೊಂಡಳು. ಅವಳು ತನ್ನ ಅಜ್ಜಿಯ ಜೊತೆಗೆ ಬಂದಿದ್ದಳು. ನಾವು ಅವಳ ಜೊತೆ ಮಾತನಾಡುತ್ತಿದ್ದಂತೆ, ಅವಳ ಓದುವ ಸಾಮರ್ಥ್ಯ ತರಗತಿಯ ಮಕ್ಕಳ ಸರಾಸರಿಗಿಂತ ಕಡಿಮೆಯಾಗಿದೆ ಎನ್ನುವುದನ್ನು ಕಂಡುಕೊಂಡೆ: ತರಗತಿಯಲ್ಲಿ ಸ್ವಲ್ಪ ರೇಗಿದರೂ ಸುಮ್ಮನಾಗಿಬಿಡುತ್ತಿದ್ದಳು. ಶಾಲೆಯಲ್ಲಿ ಅವಳ ಹಾಜರಾತಿಯೂ ಕಡಿಮೆಯಾಗಿತ್ತು. ನಾನು ಇದರ ಬಗ್ಗೆ ಮಾತನಾಡಲು ಪ್ರಯತ್ನಪಟ್ಟೆ. ಆದರೆ ಅವಳು ಏನೂ ಹೇಳಲಿಲ್ಲ. ಆಗ ನಾನು ಅವಳ ಮನೆಗೆ ಹೋಗಿ ಬರಬೇಕೆಂದು ಯೋಚಿಸಿದೆ. ಪ್ರಾಯಶಃ ಅದರಿಂದ ನೆರವಾಗಬಹುದೆಂದು ಭಾವಿಸಿದೆ. ಅವಳ ಮನೆಗೆ ಹೋಗಿ ಅಜ್ಜಿಯೊಂದಿಗೆ ಮಾತನಾಡಿದೆ. ಅವರ ಜೊತೆ ಮಾತನಾಡುತ್ತಿದ್ದಂತೆ ನನಗೆ ನೆಲ ಕುಸಿದಂತಾಯಿತು. ಪ್ರಿಯಾಂಕಾಳ ಚಿಕ್ಕಮ್ಮ ತನ್ನ ಗಂಡನನ್ನು ಕಳೆದುಕೊಂಡಿದ್ದಳು. ಆಗ ಅವಳ ಒಂಟಿತನವನ್ನು ಹೋಗಲಾಡಿಸಲು ಅವಳ ಪೋಷಕರು ಚಿಕ್ಕಮ್ಮನಿಗೆ ಅವಳನ್ನು ಕೊಟ್ಟಿದ್ದರು. ಸ್ವಲ್ಪ ದಿನಗಳ ಬಳಿಕ ಚಿಕ್ಕಮ್ಮ ಚಂಡೀಗಢದಲ್ಲಿ ಕೆಲಸಕ್ಕೆ ಸೇರಿದಳು. ಅವಳು ಪ್ರಿಯಾಂಕಾಳನ್ನು ಅಜ್ಜಿಯ ಬಳಿ ಬಿಟ್ಟು ಹೋದಳು. ಇದನ್ನು ಕೇಳಿ ನನಗೆ ಬಹಳ ದುಃಖವಾಯಿತು. ಮರುದಿನ ಶಾಲೆಗೆ ಬಂದ ಮೇಲೆ ಏನೋ ಕಾರಣಕ್ಕೆ ನಾನು ಅವಳನ್ನು ಬೈಯ್ಯಲು ಹೋದೆ. ಆದರೆ ಅವಳ ಪರಿಸ್ಥಿತಿ ಬಗ್ಗೆ ನೆನಪಾಗಿ ನನಗೆ ಅಳು ತಡೆಯಲಾಗಲಿಲ್ಲ. ಶಿಕ್ಷಕರ ಕೊಠಡಿಗೆ ಹೋಗಿ ಸುಧಾರಿಸಿಕೊಂಡು ಬಂದೆ. ನಂತರ ಬಂದು ಅವಳನ್ನು ಬಿಗಿದಪ್ಪಿ ಮಾತನಾಡಿದೆ. ಅವಳು ಹೋಂ ವರ್ಕ್ ಮಾಡದಿದ್ದಾಗ ಕಾರಣವನ್ನು ಕೇಳುತ್ತಿದ್ದೆ. ಇದಾದ ನಂತರ ಅವಳು ಶಾಲೆಗೆ ಹೆಚ್ಚು ನಿಯಮಿತವಾಗಿ ಬರಲಾರಂಭಿಸಿದಳು. ಓದಿನಲ್ಲೂ ಸುಧಾರಣೆ ಕಂಡು ಬಂದಿತು. ಮುಂದೆ ಅವಳ ಅಜ್ಜಿ ನನ್ನ ಜೊತೆ ಎಲ್ಲ ವಿಷಯವನ್ನು ಮಾತನಾಡತೊಡಗಿದರು. ಈಗ ಅವರಿಗಾಗಿ ಮಾರುಕಟ್ಟೆಯಿಂದ ಸಾಮಾನು ತರಲು ಕೇಳುತ್ತಾರೆ. ಆಗಾಗ ನನಗೆ ತರಕಾರಿ ಹಾಗೂ ಧಾನ್ಯಗಳನ್ನು ಕಳುಹಿಸುತ್ತಾರೆ.

**ಇನ್ನೊಬ್ಬ ಶಿಕ್ಷಕರ ಅನುಭವ**

ರಾಧಿಕಾ ಯಾವಾಗಲೂ ಶಾಲೆಗೆ ತಡವಾಗಿ ಬರುತ್ತಿದ್ದಳು. ಅವಳ ಜೊತೆ ಈ ಸಮಸ್ಯೆ ಬಗ್ಗೆ ಮಾತನಾಡಿದರೂ ಅವಳ ಆಲಸ್ಯ ಮುಂದುವರೆದಿತ್ತು. ಬೆಳಗ್ಗೆ ಶಾಲೆಯ ಪ್ರಾರ್ಥನಾ ಸಭೆಯಲ್ಲಿ ಎಲ್ಲರೂ ಕೂಡ ಸಮಯಕ್ಕೆ ಸರಿಯಾಗಿ ಶಾಲೆಗೆ ಬರಬೇಕು ಎಂದು ಕೂಡ ನಾವು ಹೇಳಿದ್ದೆವು. ಬೇರೆ ಮಕ್ಕಳ ಜೊತೆಗೆ ಅವಳ ಬಗ್ಗೆ ಮಾತನಾಡಿದಾಗ ಅವಳ ತಂದೆ ದಿನಾಲೂ ತಡವಾಗಿ ಏಳುತ್ತಾರೆ ಎಂದು ಅವರು ಹೇಳಿದರು. ಅವಳ ಮನೆಗೆ ಹೋಗಿ ಮಾತನಾಡುವುದು ಲೇಸು ಎಂದು ಭಾವಿಸಿದೆ. ಅವಳ ಮನೆಗೆ ಹೋದಾಗ ಅವಳ ತಾಯಿ ಬೆಂಕಿಹಾಕಿಕೊಂಡು ಸಾವಿಗೀಡಾಗಿರುವ ವಿಚಾರ ತಿಳಿಯಿತು. ಅವಳ ತಂದೆ ಮದ್ಯವ್ಯಸನಿಯಾಗಿದ್ದು, ತಡರಾತ್ರಿಯವರೆಗೆ ಮದ್ಯಸೇವಿಸಿ ತಡವಾಗಿ ಏಳುತ್ತಾರೆಂದು ಗೊತ್ತಾಯಿತು. ಆದ್ದರಿಂದಲೇ ರಾಧಿಕಾ ಶಾಲೆಗೆ ತಡವಾಗಿ ಬರುವುದೆಂದು ತಿಳಿಯಿತು. ನಾನು ತಂದೆಯವರ ಜೊತೆಗೆ ಈ ಬಗ್ಗೆ ಮಾತನಾಡಿದೆ. ಅವರು ಅವಳನ್ನು ಅವಳ ಚಿಕ್ಕಮ್ಮನ ಮನೆಗೆ ಕಳುಹಿಸಿದರು. ನಾನು ರಾಧಿಕಾಳ ಬಗ್ಗೆ ಯೋಚಿಸಿದಾಗ ನನಗೆ ನೋವುಂಟಾಗುತ್ತಿತ್ತು. ಅಂದಿನಿಂದ ನಾನು ಅವಳ ಬಗ್ಗೆ ಹೆಚ್ಚು ಎಚ್ಚರಿಕೆ ವಹಿಸಿದೆ. ಅವಳಿಗೆ ಹೆಚ್ಚು ಪ್ರೀತಿ, ಕರುಣೆ ತೋರಿಸಿದೆ. ಆಗಾಗ್ಗೆ ಅವಳ ಮನೆಗೆ ಹೋಗುತ್ತಿದ್ದೆ. ಒಂದು ದಿನ ಅವಳ ಮನೆಗೆ ಹೋದಾಗ ಅಲ್ಲಿದ್ದ ಮಕ್ಕಳೆಲ್ಲಾ ಅವಸರದಿಂದ ತಾವು ಇಟ್ಟುಕೊಂಡಿದ್ದ ವಸ್ತುವನ್ನು ಅಡಗಿಸಿಟ್ಟುಕೊಂಡರು. ಎಲ್ಲೆಡೆ ಕಾಗದಗಳು ಮತ್ತು ಹಿಟ್ಟು ಹರಡಿತ್ತು. ಇದರ ಬಗ್ಗೆ ಬಹಳ ಕೆದಕುವುದು ಬೇಡ, ಬೇರೆ ಸಮಯದಲ್ಲಿ ಕೇಳೋಣ ಎಂದು ಭಾವಿಸಿ ಹೊರಬಂದೆ.

ಇನ್ನೊಮ್ಮೆ ಎಲ್ಲ ಶಿಕ್ಷಕರು ಒಟ್ಟಿಗೆ ಕುಳಿತು ಪರೀಕ್ಷೆಯ ನಂತರ ನೋಟ್‌ಬುಕ್ಕನ್ನು ಪರಿಶೀಲಿಸುತ್ತಿದ್ದರು. ಆಗ ನಾನು ತರಗತಿಗೆ ಹೋದಾಗ ರಾಧಿಕಾ ತನ್ನ ಚಿಕ್ಕಮ್ಮನ ಮಕ್ಕಳ ಜೊತೆಗೂಡಿ ಸದ್ದಿಲ್ಲದೆ ಪೇಪರ್ ಬ್ಯಾಗುಗಳನ್ನು ಮಾಡುತ್ತಿದ್ದಳು. ಅವರು ನನ್ನನ್ನು ನೋಡಿದ ತಕ್ಷಣ ಅವುಗಳನ್ನು ಬಚ್ಚಿಟ್ಟರು. ನಾನು ಶಾಂತವಾಗಿ ಅವರನ್ನು ವಿಚಾರಿಸಿದೆ. ಆಗ ಅವರು ಕಾಗದದ ಚೀಲಗಳನ್ನು ತಯಾರಿಸುವುದಾಗಿ ನಂತರ ಅವುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದಾಗಿ ನನಗೆ ಹೇಳಿದರು. ನಾನು ಮಕ್ಕಳಿಗಾಗಿ ಒಂದು ಕ್ರಾಫ್ಟ್ ತರಗತಿಯನ್ನು ಆರಂಭಿಸಿದೆ. ಅಲ್ಲಿ ಎಲ್ಲರಿಗೂ ಪೇಪರ್ ಬ್ಯಾಗ್ ತಯಾರಿಯ ಬಗ್ಗೆ ಕಲಿಸಿದೆ. ರಾಧಿಕಾ ಮತ್ತು ಅವಳ ಚಿಕ್ಕಮ್ಮನ ಮಕ್ಕಳು ಇದರಲ್ಲಿ ಬಹಳ ನುರಿತರಾಗಿದ್ದರು. ಅವರು ಇತರ ಬೇರೆ ಮಕ್ಕಳಿಗೆ ಇದನ್ನು ಕಲಿಸಲಾರಂಭಿಸಿದರು. ಮರುದಿನ ನಾನು ಮನೆಯಿಂದ ಹಳೆಯ ನ್ಯೂಸ್‌ಪೇಪರುಗಳನ್ನು ತಂದು ಅವರಿಗೆ ಕೊಟ್ಟೆ. ಮಕ್ಕಳು ತಾವು ತಯಾರಿಸಿದ ಎಲ್ಲ ಬ್ಯಾಗುಗಳನ್ನು ರಾಧಿಕಾಳಿಗೆ ನೀಡಿದರು. ಒಂದೊಮ್ಮೆ ತನ್ನ ಕಾರ್ಯದ ಬಗ್ಗೆ ಹೇಳಿಕೊಳ್ಳಲು ಹಿಂಜರಿಯುತ್ತಿದ್ದ ರಾಧಿಕಾ, ಈಗ ಅದನ್ನು ಇತರರಿಗೆ ಹೆಮ್ಮೆಯಿಂದ ಕಲಿಸುತ್ತಿದ್ದಳು. ಮುಂದೆ ಅವಳು ಓದಿನಲ್ಲೂ ಸುಧಾರಿಸಿದಳು. ಹಾಗೆಯೇ ಅವಳ ಶಾಲೆಯ ಹಾಜರಾತಿಯೂ ಸುಧಾರಿಸಿತು. ಒಂದು ದಿನ ಅವಳು ನಾನು ಅವಳ ತಾಯಿಯಾಗಬೇಕೆಂದು ಆಶಿಸುತ್ತಾಳೆಂದು ನನಗೆ ಕಾಗದ ಬರೆದಳು. ಅವಳು ನನ್ನಲ್ಲಿ ತನ್ನ ತಾಯಿಯನ್ನು ಕಾಣುತ್ತಾಳೆ.



**ಜಗಮೋಹನ್ ಸಿಂಗ್ ಕಟೈಥ್** ಅವರು ಕಳೆದ 28 ವರ್ಷಗಳಿಂದ ಸಾಮಾಜಿಕ ವಲಯದಲ್ಲಿ ಕೆಲಸ ಮಾಡುತ್ತಿದ್ದಾರೆ. ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಕಳೆದ 11 ವರ್ಷಗಳಿಂದ ಇದ್ದಾರೆ. ಘರ್‌ವಾಲ್ ಪ್ರದೇಶದ ಫೌಂಡೇಷನ್‌ನ ಕಾರ್ಯಚಟುವಟಿಕೆಯ ಮುಂದಾಳತ್ವವನ್ನು ವಹಿಸಿದ್ದಾರೆ. ಈಗ ಅವರು ಉತ್ತರಾಖಂಡದ ಶ್ರೀನಗರದಲ್ಲಿದ್ದಾರೆ. ಸೃಜನಶೀಲತೆ ಮತ್ತು ಪರ್ಯಾಯ ಮಾರ್ಗಗಳನ್ನು ಅನ್ವೇಷಿಸುತ್ತಾ ಹಲವಾರು ಶಿಕ್ಷಣ ಮತ್ತು ಗ್ರಾಮೀಣಾಭಿವೃದ್ಧಿಯ ವಿಷಯಗಳ ಕುರಿತು 18 ವರ್ಷಗಳಿಂದ ಅವರು ಸೊಸೈಟಿ ಫಾರ್ ಇಂಟಿಗ್ರೇಟೆಡ್ ಡೆವಲಪ್‌ಮೆಂಟ್ ಆಫ್ ಹಿಮಾಲಯಾಸ್ (ಎಸ್‌ಐಡಿಎಚ್) ಜೊತೆ ಕೆಲಸ ಮಾಡಿದ್ದಾರೆ. ಇವರನ್ನು jagmohan@azimpremjifoundaton.org ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎಸ್** । ಪರಿಶೀಲನೆ: **ಲತಾ ಕೆ.ಸಿ**

# ಸಂಪರ್ಕವು ಬೋಧನಾ ವಿಧಾನವಾಗುವ ವಿಚಾರ | ಒಂದು ತಂತ್ರ

ಜೊಯೀತಾ ಬ್ಯಾನರ್ಜಿ

**'ಸಂಪರ್ಕ'ವು ಒಂದು ತಂತ್ರವಾಗಿರುವುದರ ಧ್ಯೇಯ**

ಈ ಲೇಖನದ ಉದ್ದೇಶವು, ಸಂಪರ್ಕವನ್ನು ಏರ್ಪಡಿಸುವುದರ ಕುರಿತಾಗಿ ಮತ್ತು ಔಪಚಾರಿಕ ಕಲಿಕೆಯ ಪರಿಧಿಯಲ್ಲಿ ಸಂಪರ್ಕದ ಬೋಧನಾ ವಿಧಾನವನ್ನು ಬೆಳೆಸುವ ಒಂದು ಸಂವಾದವನ್ನು ಹುಟ್ಟುಹಾಕಲಿ ಎಂಬುದಾಗಿದೆ ಎಂದು ಆರಂಭದಲ್ಲೇ ತಿಳಿಸಬಯಸುತ್ತೇನೆ. ಇಡೀ ಜಗತ್ತು ಒಂದು ಪಿಡುಗಿನ, ಜನಾಂಗೀಯತೆಯ ಮತ್ತು ಹವಾಮಾನ ಬಿಕ್ಕಟ್ಟಿನಿಂದಾಗಿ ನಲುಗಿರುವ ಸಮಯದಲ್ಲಿ ಇದು ಅತಿಮುಖ್ಯವಾದ ಅಗತ್ಯವಾಗಿದೆ. ನಮ್ಮ ಕಲಿಕೆಯು ಕೇವಲ ಕಲಿಸುವ ಒಂದು ಯಂತ್ರವಾಗಿ ಕಾರ್ಯ ನಿರ್ವಹಿಸದೇ, ಮೇಲ್ವಿಚಾರಣೆಯನ್ನು ಮಾಡುವ, ಶ್ರೇಣೀಕರಿಸುವ, ಪ್ರತಿಫಲವನ್ನು ನೀಡುವ ಯಂತ್ರವಾಗಿಯೂ ಸಹ ಕೆಲಸಮಾಡುವ ಆವೃತ ಶೈಕ್ಷಣಿಕ ಪರಿಸರದಲ್ಲಿ [ಫುಕೋ (Foucault), 1991] ಶೋಚನಿಯವಾದ ವೈಫಲ್ಯವನ್ನು ಕಂಡಿದ್ದು, 'ಮಾನಸಿಕ ಆತಂಕವನ್ನು ಹಾಗೂ ಅಸ್ತಿತ್ವದ ಅನಿಶ್ಚಿತತೆಯನ್ನು ಹುಟ್ಟುಹಾಕಿದೆ' [ಪಾಠಕ್, 2020].

ಇದು ಏಕೆ? ಏಕೆಂದರೆ, ನಮ್ಮ ಸಂಪರ್ಕ ರಾಹಿತ್ಯವು ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ವಾಸ್ತವದಲ್ಲಿ ಬೇರೂರಿದ ಕಲಿಕಾರ್ಥಿಗೆ, ಅದರಲ್ಲಿಯೂ ವಿಶೇಷವಾಗಿ ಅವಕಾಶವಂಚಿತ ಕಲಿಕಾರ್ಥಿಯ ಕಲಿಯುವ ಅವಕಾಶಗಳನ್ನು ನಿರ್ಮಿಸುವುದಿಲ್ಲ. ವಿವಿಧ ಶೈಕ್ಷಣಿಕ ನೀತಿಗಳು ಮತ್ತು ಯೋಜನೆಗಳಿಂದಾಗಿ ಶಿಕ್ಷಣದ ಪ್ರೌಢಶಾಲಾ ಮಟ್ಟವು ಈಗ ಮೊದಲ ತಲೆಮಾರಿನ ಕಲಿಕಾರ್ಥಿಗಳಿಂದ ತುಂಬಿಹೋಗಿದೆ. ಗ್ರಾಮೀಣ ಪ್ರೌಢಶಾಲೆಗಳಲ್ಲಿರುವ ಮೊದಲ ತಲೆಮಾರಿನ ಕಲಿಕಾರ್ಥಿಗಳು 'ವಿವಿಧ ಸಾಮಾಜಿಕ ವರ್ಗಗಳಿಗೆ ಸೇರಿರುವವರು' (ಬ್ಯಾನರ್ಜಿ, 2017) 'ಆವರಣದೊಳಗಿನ ಔಪಚಾರಿಕ ಶಿಕ್ಷಣ ಪರಿಸರಗಳಲ್ಲಿ' ತಾವು ಪರಕೀಯರು ಎಂಬ ಭಾವನೆಯನ್ನು ಅನುಭವಿಸುತ್ತಾರೆ. ಏಕೆಂದರೆ, ಬೋಧನಾಕ್ರಮವು ಈ ವಿದ್ಯಾರ್ಥಿಗಳನ್ನು ಯಾವ ರೀತಿಯಲ್ಲಿ ಪ್ರೇರೇಪಿತರಾಗುತ್ತಾರೆ, ಯಶಸ್ವಿಯಾಗುತ್ತಾರೆ, ಹೇಗೆ ಭಾಷಾ ಕಲಿಕೆ ನಂಬಿಕೆಗಳನ್ನು ಕಟ್ಟಿಕೊಳ್ಳುತ್ತಾರೆ ಹಾಗೂ ಹೇಗೆ ಸಂಸ್ಕೃತಿಗ್ರಹಣಕ್ಕೊಳಗಾಗುತ್ತಾರೆ ಎಂಬುದನ್ನು ಕಡೆಗಣಿಸುತ್ತದೆ (ಜಮ್ಮಿದಿ, 2013). ಹಾಗಾಗಿ ಅವಕಾಶವಂಚಿತ ಕಲಿಕಾರ್ಥಿಗಳು ಎಷ್ಟನೇ ತಲೆಮಾರಿನವರು ಎಂಬುದನ್ನು ಪರಿಗಣಿಸದೆಯೇ 'ಸಮಾನ ಭಾಗವಹಿಸುವಿಕೆ'ಯನ್ನು ಖಾತ್ರಿಪಡಿಸುವ ಒಂದು ಕಲಿಕಾ ಅವಕಾಶಗಳನ್ನು ನಿರ್ಮಿಸುವುದು ಶಿಕ್ಷಣದ ಎಲ್ಲ ಭಾಗಿದಾರರ ಜವಾಬ್ದಾರಿಯಾಗಿದೆ.

ಮೊದಲ ತಲೆಮಾರಿನ ಕಲಿಕಾರ್ಥಿಗಳು ಶಾಲೆಯಲ್ಲಿ ಎದುರಿಸುವ ಸವಾಲುಗಳು ಮತ್ತು ಶಾಲೆಯ ಪ್ರಕ್ರಿಯೆಗಳು ಹೇಗೆ ಅವರನ್ನು ಪರಕೀಯ ಪ್ರಜ್ಞೆಗೆ ಕಾರಣವಾಗುತ್ತವೆ ಎಂಬುದನ್ನು ನಾನು ನನ್ನ ಬೇರೆ ಲೇಖನದಲ್ಲಿ ಚರ್ಚಿಸಿದ್ದೇನೆ (ಬ್ಯಾನರ್ಜಿ, 2018). ಔಪಚಾರಿಕ ಆವೃತ ಶೈಕ್ಷಣಿಕ ಪರಿಸರವು 'ಸಂಸ್ಕೃತಿಗಳ ಮುಖಾಮುಖಿ ಮಾಡುವ, ಸಂಘರ್ಷಗಳು ಮತ್ತು ಪರಸ್ಪರ ತಾಕಲಾಟಗಳ, ಅತಿಯಾದ ಅಧಿಕಾರದ ಅಸಮತೋಲಿತ ಸಂಬಂಧಗಳ ಸನ್ನಿವೇಶಗಳನ್ನೊಳ-ಗೊಂಡ ಸಾಮಾಜಿಕ ಕ್ಷೇತ್ರವಾಗಿದೆ (ಪ್ರ್ಯಾಟ್, ಪು.34).

'ಬ್ಯಾಂಕಿಂಗ್ ಮಾದರಿಯ ಆಧಾರದ' [ಫ್ರೈರೆ, 1970] ಮೇಲೆ ನೀಡುವ 'ಕಡೆಗಣಿತ ಬೋಧನಾ ಕ್ರಮ'ದಲ್ಲಿಯೂ ವಿಮರ್ಶಾತ್ಮಕ ಪರಿಶೀಲನೆಯನ್ನು ಬಯಸುವ ಒಬ್ಬ ಭಾಷಾಕಲಿಕೆಯ ಸುಗಮ-ಕಾರನಾಗಿ, ಸಂಶೋಧಕನಾಗಿಯೂ ನನ್ನ ಈ ಲೇಖನದ ಪರಿಕಲ್ಪನಾತ್ಮಕ ಚೌಕಟ್ಟು 'ವಿಮರ್ಶಾತ್ಮಕ ಪ್ರಜ್ಞೆಯ' ಆಧಾರದಲ್ಲಿದೆ. 'ನಾಲ್ಕನೆಯ ಗೋಡೆಯನ್ನು ಕೆಡವಿ' [ಬ್ರೆಕ್ಟ್‌ನ ರಂಗ ತಂತ್ರ] ನಿಯೋಜಿಸಬಹುದಾದ ಬೋಧನಾ ವಿಧಾನವನ್ನು ಅಭಿವೃದ್ಧಿ-ಪಡಿಸಲು ಮತ್ತು ಎಲ್ಲಾ ಕಲಿಯುವವರಲ್ಲಿ ಒಂದು 'ವಿಮರ್ಶಾತ್ಮಕ ಪ್ರಜ್ಞೆಯನ್ನು' ಸೃಷ್ಟಿಸಲು ಈ ಲೇಖನವು ಅಡಿ ಇಡುತ್ತದೆ.

**ಕಡೆಗಣಿಸುವುದನ್ನು ಗುರುತಿಸುವುದು**

ಭಾಷೆಯ, ಅದರಲ್ಲಿಯೂ ವಿಶೇಷವಾಗಿ ಎರಡನೆಯ ಭಾಷೆಯ ಸುಗಮಕಾರನಾಗಿ, ನನ್ನ ಮನಸ್ಸಿನಲ್ಲಿರುವುದೇನೆಂದರೆ, ಶಿಕ್ಷಣದ ನೀತಿ, ಯೋಜನೆಗಳು ಹಾಗೂ ಸವಲತ್ತುಗಳ ಬೇಡಿಕೆಗಳಿಂದ ನಿರ್ದೇಶಿತವಾಗುವ ಭಾಷಾ ಶಿಕ್ಷಣದ ಗುರಿಗಳು 'ತರಗತಿ ಮಟ್ಟದ ಸಾಮರ್ಥ್ಯಗಳನ್ನು' ಬೆಳೆಸುವುದು ಹಾಗೂ ವಿದ್ಯಾರ್ಥಿಗಳನ್ನು ಹೊಸ ಸಾಂಸ್ಕೃತಿಕ ನಿಯಮಗಳಿಗೆ ತೆರೆದುಕೊಳ್ಳುವಂತೆ ಮಾಡಬೇಕು ಎನ್ನುವುದಾಗಿದೆ. ಮೊದಲ ತಲೆಮಾರಿನ ಕಲಿಕಾರ್ಥಿಗಳಿಗೆ ಎರಡನೇ ಭಾಷೆಯನ್ನು ಕಲಿಯುವುದು ಎಂದರೆ ಅದೊಂದು ಅಗ್ನಿಪರೀಕ್ಷೆಯೇ ಆಗಿರುತ್ತದೆ. [ಬ್ರೌನ್, 1986] ಏಕೆಂದರೆ, 'ಔಪಚಾರಿಕ, ವಿಸ್ತಾರವಾದ, ಸಂದರ್ಭ ರಹಿತ ಶಾಲೆಯ ಭಾಷೆಯು, ಮನೆಯಲ್ಲಿನ ಸೀಮಿತ ವ್ಯಾಪ್ತಿಯ ಸಂಕೇತಗಳಿಗಿಂತ ವಿಭಿನ್ನವಾಗಿರುತ್ತದೆ' [ಬಾರ್ನ್ ಸ್ಟೀನ್, 1971]. ಅದಕ್ಕೂ ಹೆಚ್ಚಾಗಿ, ಬರೆಯಲು ಆರಂಭಿಸುವುದಕ್ಕಿಂತ ಮುಂಚೆಯೇ ವ್ಯಾಕರಣವನ್ನು ಕಲಿಯುವ ಹೊರೆಯಿಂದಾಗಿ ಅನ್ಯ ಭಾಷೆಯೊಡನೆ ಅರ್ಥಪೂರ್ಣವಾದ ಸಂಬಂಧವನ್ನು ಬೆಳೆಸುವ ಸಾಧ್ಯತೆಯನ್ನೇ ಹಾಳುಗೆಡವುತ್ತದೆ. ಹಾಗಾಗಿ ನಾನು ಭಾಷಾ ಬೋಧನಾ ವಿಧಾನದ ಒಳಗೆ ಅಡಗಿಕೊಂಡಿರುವ ಕಡೆಗಣನೆಗೆ ಒಳಗಾದ ಅಂಶಗಳನ್ನು ಗುರುತಿಸಿ ನೋಡುವುದೇ, ಸಂಪರ್ಕದ ಬೋಧನಾ ಕ್ರಮದ ಮೊದಲ ಹೆಜ್ಜೆ ಎಂದು ಸೂಚಿಸುತ್ತೇನೆ ಹಾಗು ಅದುವೇ ಇಡೀ ಭಾಷಾ ಕಲಿಕೆಯ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ಪುನರುಜ್ಜೀವನಗೊಳಿಸುವ ಹಾಗು ತಾರ್ಕಿಕ ಪ್ರಜ್ಞೆಯ ರೂಪುಗೊಳ್ಳುವಿಕೆಗೆ ಸಹಾಯಮಾಡುವ ತಂತ್ರಕ್ಕೆ ಅಡಿಪಾಯವೆಂದು ಕೂಡ ಭಾವಿಸುತ್ತೇನೆ.

ಸರ್ಕಾರಿ ಅನುದಾನಿತ ಗ್ರಾಮೀಣ ಪ್ರೌಢಶಾಲೆಯಲ್ಲಿ ಭಾಷಾ ಸುಗಮಕಾರನಾಗಿಯೂ ಮತ್ತು ಸ್ವತಂತ್ರ ಸಂಶೋಧಕನಾಗಿಯೂ ಇರುವ ನಾನು ನಮ್ಮ ಶಿಕ್ಷಣ ವ್ಯವಸ್ಥೆಯು ಅಭಿವೃದ್ಧಿ ಮತ್ತು ಅಸಮಾನತೆಯಲ್ಲಿ ಕೇಂದ್ರೀಕೃತವಾದ ಆರ್ಥಿಕ ಪ್ರಗತಿಯಲ್ಲಿ ಸಿಲುಕಿಕೊಂಡಿದೆ ಎಂದು ಗ್ರಹಿಸಿದ್ದೇನೆ. ಪರಕೀಯನನ್ನಾಗಿಸುವ

ಪ್ರಕ್ರಿಯೆ ಇಲ್ಲಿಂದಲೇ ಆರಂಭವಾಗುತ್ತದೆ. ಎಲ್ಲ ಕಲಿಯುವವರಲ್ಲಿ 'ಮೌನದ ಸಂಸ್ಕೃತಿ' ಬೀಡುಬಿಟ್ಟಿದ್ದು ಅದು ಮೊದಲ ತಲೆಮಾರಿನ ಕಲಿಯುವವರಲ್ಲಿ ಇನ್ನೂ ಹೆಚ್ಚಿದೆ.

ನಾನು ದ್ವಿತೀಯ ಭಾಷೆ ಶಿಕ್ಷಕನಾಗಿ, ನನ್ನ ಬೋಧನಾ ವಿಧಾನಗಳು ಹೇಗೆ ಕೇವಲ ಒಂದು 'ಭಾಷೆಯ ಪ್ರಾಬಲ್ಯವನ್ನು ಹೇರುವ ಸಾಧನವಾಗುತ್ತಿದೆ' (ಫಿಲಿಪ್ಸನ್, 1992) ಮತ್ತು ಏಕಭಾಷೆಯ ಜಗತ್ತಿನ ಪ್ರಬಲ ನಿರೂಪಣೆಯನ್ನು ಸ್ಥಾಪಿಸುತ್ತಿದೆ ಎಂಬುದನ್ನು ಗುರುತಿಸಬೇಕಾಗುತ್ತದೆ. ಇದು ಮೊದಲ ತಲೆಮಾರಿನ ಕಲಿಕಾರ್ಥಿಗಳಿಗೆ ಭಾಷಾ ಕಲಿಕೆಯ ಬಗೆಗೆ ಇರುವ ತಮ್ಮ ನಂಬಿಕೆಗಳನ್ನು ಪ್ರಶ್ನಿಸುವುದನ್ನು ಪ್ರಾರಂಭಿಸಲು ಸಹಾಯ ಮಾಡುತ್ತದೆ. ಮೊದಲ ತಲೆಮಾರಿನ ಕಲಿಕಾರ್ಥಿಗಳಿಗೆ ತಮ್ಮ ಭಾಷಾಕಲಿಕೆಯ ನಂಬಿಕೆಗಳನ್ನು ಮತ್ತು ಅವು ಹೇಗೆ ತಮ್ಮ ಮಾತೃಭಾಷೆಯ ಬಗೆಗೆ ಅವರ ಮನೋಧೋರಣೆಗಳ ಮೇಲೆ ಪರಿಣಾಮ ಬೀರುತ್ತದೆ ಎಂಬುದನ್ನು ವಿಮರ್ಶಾತ್ಮಕವಾಗಿ ನೋಡುವಂತೆ ಉತ್ತೇಜಿಸಬೇಕು. ಇದು ಸವಲತ್ತು ಪಡೆದ ವರ್ಗದ ಭಾಷೆಗಳಲ್ಲಿ ಹಾಗೂ ಶಾಲೆಗಳಲ್ಲಿ ಅನುಸರಿಸುತ್ತಿರುವ ಬೋಧನಾ ವಿಧಾನದ ತಂತ್ರಗಳಲ್ಲಿ ಕಡೆಗಣನೆಯು ಹೇಗೆ ಒಳಗೊಂಡಿದೆ ಎಂಬುದನ್ನು ಪ್ರಶ್ನಿಸಲು ಸಹಾಯ ಮಾಡುತ್ತದೆ. ಒಮ್ಮೆ ಈ ಕಡೆಗಣನೆಯನ್ನು ಗುರುತಿಸಿದರೆ, ಮುಂದಿನ ಹೆಜ್ಜೆಗಳು ಸರಿಯಾಗಿ ಕೂಡಿಕೊಳ್ಳುತ್ತವೆ.

**ತರಗತಿಯ ಆಯೋಜನೆ**

ಸಂಪರ್ಕ ಸಾಧಿಸಿದ ಕಲಿಕೆಯನ್ನು ಹುಟ್ಟುಹಾಕುವಲ್ಲಿ ತರಗತಿಯ ಆಯೋಜನೆಯು ಪ್ರಮುಖ ಪಾತ್ರವಹಿಸುತ್ತದೆ ಎಂದು ನಾನು ಗುರುತಿಸುತ್ತೇನೆ. ಒಬ್ಬ ಶಿಕ್ಷಕಿಯು ತನ್ನ ತರಗತಿಯನ್ನು ಹೇಗೆ ಆಯೋಜಿಸಿಕೊಳ್ಳುತ್ತಾರೆಂಬ ರಚನಾತ್ಮಕ ಆಯಾಮವನ್ನು ಇದು ಸೂಚಿಸುತ್ತದೆ [ಸ್ಟ್ರೇಂಜ್, ಮತ್ತು ಇತರರು]. ಇಂದಿನ ತರಗತಿಯ ಭೌತಿಕ ಆಯೋಜನೆಯ ವಿದ್ಯಾರ್ಥಿಗಳು ಸಾಲುಗಳಲ್ಲಿ ಕುಳಿತಿದ್ದು ಶಿಕ್ಷಕರು ಅವರ ಎದುರಿಗೆ ಅವರ ವಿರುದ್ಧ ನಿಂತಂತೆ ಇರುತ್ತದೆ. ಈ ಆಯೋಜನೆಯು ಬಹಳ 'ಸೂಕ್ಷ್ಮವಾಗಿ' 'ವರ್ಗೀಕರಿಸಿ' ನೋಡುವ ಯಜಮಾನ ದೃಷ್ಟಿಯ ಅಡಿಯಲ್ಲಿ ಈ ವ್ಯವಸ್ಥೀಕರಿಸಿದ ವಿವಿಧ ನಮೂದುಗಳ ಒಂದು ದೊಡ್ಡ ಪಟ್ಟಿಯನ್ನು ತಯಾರಿಸುತ್ತದೆ [ಫುಕೋ 1991]. ಈ ಬಗೆಯ ವ್ಯವಸ್ಥೆಯನ್ನು ಮೊದಲ ಬಾರಿಗೆ ನೋಡುವ ಮೊದಲ ತಲೆಮಾರಿನ ಕಲಿಕಾರ್ಥಿ ಹೊರಗಿನವರಂತೆ ಭಾವನೆಯನ್ನು ಅನುಭವಿಸುತ್ತಾರೆ ಮತ್ತು ತರಗತಿಯ ಪ್ರಕ್ರಿಯೆಯೊಡನೆ ಅರ್ಥಪೂರ್ಣ ಸಂಪರ್ಕ ಸಾಧಿಸುವಲ್ಲಿ ತಡೆಗಳನ್ನೆದುರಿಸುತ್ತಾರೆ. ಹಾಗಾಗಿ ಅವರು ತರಗತಿಗನುಗುಣವಾದ ಸಾಮರ್ಥ್ಯಗಳನ್ನು ಪಡೆಯುವಲ್ಲಿ ಹಿಂದುಳಿಯುತ್ತಾರೆ. ಶಿಕ್ಷಕರು ಮತ್ತು ಈಗಾಗಲೇ ತರಗತಿಯಲ್ಲಿನ ಔಪಚಾರಿಕ ಶಿಕ್ಷಣದ ಪರಿಚಯವಿರುವ ಇತರರ ಹತ್ತಿರವಿರದಂತೆ ತಪ್ಪಿಸಿಕೊಳ್ಳುತ್ತಾರೆ [ಬ್ಯಾನರ್ಜಿ, 2013]. ಹಾಗಾಗಿಯೇ ಆಯೋಜನೆಯನ್ನು ಗುಂಡಗಿರುವಂತೆಯೋ ಇಲ್ಲ ಅರೆಸುತ್ತಿನಾಕಾರದಲ್ಲಿಯೋ ಇರುವಂತೆ ಮಾರ್ಪಡಿಸಿ ತಾನೂ ಆ ಸುತ್ತಿನೊಳಗೆಯೇ ಕುಳ್ಳಿರುವಂತೆ ಮಾಡಿಕೊಳ್ಳಬೇಕು. ದೊಡ್ಡ ತರಗತಿಗಳಲ್ಲಿ ಇದು ಒಂದು ಸವಾಲಾಗುತ್ತದೆ. ಅಂತಹ ತರಗತಿಗಳಲ್ಲಿ ಪ್ರತಿದಿನವೂ ಮಕ್ಕಳು, ಶಿಕ್ಷಕರು ಕುಳಿತುಕೊಳ್ಳುವ ಸ್ಥಳಗಳು ಬದಲಾಗುತ್ತಿರಬೇಕು.

**ಕಲಿಕಾರ್ಥಿಗಳನ್ನು ತೊಡಗಿಸಿಕೊಳ್ಳುವುದು**

ನಾನು ಭಾಷೆಯನ್ನು ಕಲಿಸುವ ತರಗತಿಗಳು ನಿರ್ಬಂಧಿತ ಶಿಕ್ಷಣ ಸ್ಥಳಗಳು, ಅವು ಆರೋಗ್ಯ, ಅರ್ಹತೆ, ರಾಜಕೀಯ ಮತ್ತು ನೈತಿಕತೆ [ಫುಕೋ, 1991] ಗಳನ್ನು ಹೇರುವ ಹಾಗೂ ನಿಜ ಜೀವನದ ಲವಲವಿಕೆಯನ್ನೇ ಕಡೆಗಣಿಸುವ ಬೋಧನಾ ವಿಧಾನದ ಯಂತ್ರಗಳಾಗಿದೆ. ನಾನು ನೀಡುತ್ತಿರುವ ಶಿಕ್ಷಣವು ಆಧುನಿಕತೆಯ ಸ್ವ-ಗ್ರಹಿಕೆಯಲ್ಲಿಯೇ ಮುಳಗಿ ಹೋಗಿದೆ. ಈ ಆಧುನಿಕತೆಯು, ಪ್ರಕೃತಿಯ ಮೇಲಿನ ಮನುಷ್ಯನ ವಿಜಯ ಕಲ್ಪನೆ, ವಿಜ್ಞಾನ ತಂತ್ರಜ್ಞಾನದ ಮೂಲಕ ಸಾಧಿಸುವ ಅನಿಯಮಿತ 'ಪ್ರಗತಿ' ಯಲ್ಲಿ ನಂಬಿಕೆ ಇಟ್ಟುಕೊಂಡು ಮತ್ತು ಸಂಭವನೀಯತೆಯನ್ನು ಊಹಿಸುವ ನಿಯಂತ್ರಿಸುವ, ಮತ್ತು ವ್ಯವಸ್ಥಿತಗೊಳಿಸುವ ಅಧಿಕಾರದಲ್ಲಿ ನಂಬಿಕೆಯನ್ನು [ಪಾಠಕ್, 2020] ಇಟ್ಟುಕೊಂಡಿರುತ್ತದೆ.

ಮೊದಲ ತಲೆಮಾರಿನ ಕಲಿಕಾರ್ಥಿಗಳು, ಪ್ರೌಢ ಶಿಕ್ಷಣದಲ್ಲಿ ಈಗ ಹೆಜ್ಜೆ ಇಡುತ್ತಿರುವ ಸಾಮಾಜಿಕ ಶ್ರೇಣೀಕರಣದ ಒಂದು ಔಪಚಾರಿಕ ವಿಸ್ತರಿಕೆಗಾಗಿ 'ಆಧುನಿಕ ಕಲಿಕೆ' ಎಂದು ಕರೆಯಲ್ಪಡುವ ಕಲಿಕಾ ನಿಬಂಧನೆಗಳಲ್ಲಿ ಮುಳುಗಿ ಹೋಗಲು ಯತ್ನಿಸುತ್ತಿದ್ದಾರೆ. ಕಲಿಕಾರ್ಥಿಗಳು, ಸ್ವತಃ ಈಗಾಗಲೇ ಅವರ ಅನುಭವಾತ್ಮಕ ಬದುಕಿನಿಂದ ದಕ್ಕಿಸಿಕೊಡುವಂತಹ ವಿಶಾಲ ವ್ಯಾಪ್ತಿಯ, ವ್ಯವಸ್ಥಿತ ರೂಪದಲ್ಲಿ ಜೋಡಿಸಿಟ್ಟ ಜ್ಞಾನದಿಂದ ಶ್ರೀಮಂತರಾಗಿದ್ದಾರೆ ಎಂಬುದನ್ನು ಅವರಿಗೆ ಒತ್ತಿ ಹೇಳಬೇಕಾಗಿದೆ. ಇಂದು ಶಿಕ್ಷಕರ ಮತ್ತು ಅಧ್ಯಾಪಕರು 'ಸೂಕ್ಷ್ಮ ಒಳಭೇದಗಳನ್ನೊಳಗೊಂಡ ಬದುಕುವ ಕಲಿಕೆಯೊಂದಿಗೆ' [ಪಾಠಕ್, 2020] ಒಂದು ಅರ್ಥವತ್ತಾದ ಸಂಬಂಧ ಇಟ್ಟುಕೊಳ್ಳುವುದರ ಬಗೆಗೆ ತಿಳಿಸಲು ಸೋತಿದ್ದು, ಇಂತಹ ಇವತ್ತಿನ ಜಗತ್ತಿನಲ್ಲಿ ಕಲಿತ 'ಆಧುನಿಕತೆಯನ್ನು ಮರೆಯುವುದಕ್ಕೆ' ಸುಗಮಕಾರರು ಮತ್ತು ಇತರರಿಗೆ ಸಹಾಯಮಾಡುವಂತೆ ಕಲಿಕಾರ್ಥಿಗಳನ್ನು ಉತ್ತೇಜಿಸಬೇಕಿದೆ.

ಭಾಷೆಯ ತರಗತಿಗಳಲ್ಲಿ ಕಡಿಮೆ ನಿಬಂಧನೆಗಳಿಗೆ ಒಳಪಟ್ಟ ತೊಡಗಿಸಿಕೊಳ್ಳುವಿಕೆಯು ಸ್ಥಳೀಯ ಸಾಹಿತ್ಯ ಮತ್ತು ಹಾಡುಗಳ ಮೂಲಕ ಅವರ ಘನತೆಯನ್ನು ಎತ್ತಿ ಹಿಡಿಯಬಲ್ಲ ಚಿಮ್ಮುಹಲಗೆಯ ರೀತಿಯಲ್ಲಿ ಕೆಲಸಮಾಡಬೇಕು. ಕಲಿಕಾರ್ಥಿಯು ಯಾವ ತಲೆಮಾರಿನವರು ಎಂಬುದನ್ನು ಬದಿಗಿಟ್ಟು, ನಿಸರ್ಗವನ್ನು ಶೋಷಿಸುವುದರ ಪರಿಣಾಮಗಳನ್ನು ಅರಿಯಬಲ್ಲರು ಮತ್ತು ಮಾನವ ನಿರ್ಮಿತ ಹವಾಮಾನ ಬಿಕ್ಕಟ್ಟಿನಲ್ಲಿ ತಮ್ಮ ಪಾತ್ರಗಳನ್ನೂ ವಿಮರ್ಶಾತ್ಮಕವಾಗಿ ಪ್ರಶ್ನಿಸಿಕೊಳ್ಳಬಲ್ಲರು. ತಗತಿಯಲ್ಲಿ ಒಂದು ಸಂವಾದಾತ್ಮಕ ಸಂಬಂಧಗಳನ್ನು ಉತ್ತೇಜಿಸಲು ಮತ್ತು ಸಂವಾದದಲ್ಲಿ ಶಿಕ್ಷಕರೊಂದಿಗೆ ವಿಮರ್ಶಾತ್ಮಕ ಸಹ ಪರಿಶೀಲಕರಾಗುವ ಹೊಸ ತಾಲೀಮಿಗೆ ಕಲಿಕಾರ್ಥಿಯನ್ನು ಪರಿಚಯಿಸಲು, ವಿದ್ಯಾರ್ಥಿಗಳಿಗೆ ಅವರದೇ ಆಯ್ಕೆಯ ವಿಷಯಗಳ ಬಗ್ಗೆ ಪ್ರತಿವಾರವೂ ಅವರ ನೇತೃತ್ವದಲ್ಲಿ ಗೋಷ್ಠಿಗಳನ್ನು ತರಗತಿಯೊಳಗೇ ಆಯೋಜಿಸಬೇಕು.

**ಮೌಲ್ಯಮಾಪನ: ಚಕ್ರದ ಕೊನೆಯ ಹುಲ್ಲು**

ಬಹು ಆಯ್ಕೆಯ ಪ್ರಶ್ನೆಗಳ ಮೂಲಕ ವಸ್ತುನಿಷ್ಠವಾಗಿ ಮೌಲ್ಯಮಾಪನ ಮಾಡುವ ಪ್ರಕ್ರಿಯೆಯು ವಿದ್ಯಾರ್ಥಿಗಳಲ್ಲಿ ಮೂಲಭೂತವಾದವನ್ನು ಹುಟ್ಟುಹಾಕಬಲ್ಲದು. ಒಂದೇ ಸರಿಯುತ್ತರದ ಪರಿಕಲ್ಪನೆಗೆ ಅವರು ಪಕ್ಕಾಗುತ್ತಿದ್ದಾರೆ. ಅದೂ ಅಲ್ಲದೇ ಈ ಎಳೆಯ ಮನಸ್ಸುಗಳು ಈಗಾಗಲೇ ಪದವಿ – ನೌಕರಿಯ ಸಂಬಂಧವನ್ನು ಗಾಢವಾಗಿ ನಂಬಿಬಿಟ್ಟಿವೆ. ಉನ್ನತ ಪದವಿ ಪಡೆದರೆ ಉನ್ನತ ನೌಕರಿ ಎಂಬ ನಂಬಿಕೆಯು ಮಾಪನ ಪ್ರಕ್ರಿಯೆಗೆ ಪುನರುಜ್ಜೀವನ ನೀಡುವುದಕ್ಕೆ ದೊಡ್ಡ ಸವಾಲಾಗಿ ಪರಿಣಮಿಸಿದೆ. ಆದ್ದರಿಂದ ವಿದ್ಯಾರ್ಥಿಗಳನ್ನು ಅದರಲ್ಲೂ ಮೊದಲ ತಲೆಮಾರಿನ ಕಲಿಕಾರ್ಥಿಗಳನ್ನು ತಾರ್ಕಿಕ ಚಿಂತನೆಗೆ ಒಡ್ಡಲು ಯೋಜನೆಗಳು

ಅವರ ನೇರ ಅನುಭವ ಮತ್ತು ಭಾಷೆಯ ಆಧಾರದ ಮೇಲಿರಬೇಕು. ಈ ತಂತ್ರವನ್ನು ಬಳಸಲು ಮೊದಲಿಗೆ ತೊಂದರೆಯಾದರೂ ಬಳಕೆಯ ಅಭ್ಯಾಸವಾದಂತೆಯೇ ವಿಮರ್ಶಾತ್ಮಕ ಪ್ರಜ್ಞೆಯನ್ನು ಬೆಳೆಸುವಂತಹ ನಿರೀಕ್ಷಿತ ಫಲಿತಗಳನ್ನು ನೀಡುತ್ತದೆ.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


Banerjee, J. (2018). The Excluded Variable in Quality Learning: Generational Status, A Case Study of First-Generation Learners Enrolled in Rural Schools, Bankura

Barnstein, B. (1971). Class, codes and Control, Volume III, Towards A Theory of Educational Transmission

Brown, H.D. (1986). Culture Bound: Bridging the Culture Gap in Language Teaching, Cambridge Language Teaching Library

Foucault, M. (1991). Discipline and Punish, Penguin books

Garavan, M. (2010). Opening up Paulo Freire's Pedagogy of the Oppressed, ResearchGate, Doi10.2307/30023905

Jamshidi , K.(2013). Generational Status: An Ignored Variable In Language Learning, The Journal of ASIA TEFL, Vol: 10, No.2, pp-35-62, Summer 2013

Pathak, A. (2020). Mainstream, VOL. LVIII No.23

Pratt, M. L. (1991). Arts of the contact zone. Profession, 1991, 33–40. (Originally a keynote address at the Responsibilities for Literacy Conference, Pittsburgh, PA, September,1990.)





**ಜ್ಯೋಯೀತಾ ಬ್ಯಾನರ್ಜಿ** ಅವರು ಕಳೆದ 18 ವರ್ಷಗಳಿಂದ ಪಶ್ಚಿಮ ಬಂಗಾಳದ, ಬಂಕುರಾದ ನಿಕುಂಜಾಪುರ ಪ್ರೌಢಶಾಲೆಯಲ್ಲಿ ಇ.ಎಸ್.ಎಲ್ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದಕ್ಕೂ ಮೊದಲು ಅವರು ಅರಾಲ್ಡಿಹಿ ಪೌಢಶಾಲೆಯಲ್ಲಿ ಸಹಾಯಕ ಶಿಕ್ಷಕರಾಗಿ ಮತ್ತು ಬಂಕುರ ಸಮ್ಮಿಲಾನಿ ಕಾಲೇಜಿನಲ್ಲಿ ಅತಿಥಿ ಉಪನ್ಯಾಸಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಇವರು ಸ್ವತಂತ್ರ ಸಂಶೋಧಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ ಮತ್ತು ವಿವಿಧ ವಿಷಯಗಳ ಕುರಿತು ಹಲವಾರು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಜ್ಯೋಯೀತಾರವರು ರಾಷ್ಟ್ರೀಯ ಮಕ್ಕಳ ಹಕ್ಕುಗಳ ಸಂಶೋಧನಾ ಫೆಲೋಶಿಪ್ (2012)ನ್ನು ಸಿಆರ್‌ವೈನಿಂದ ಪಡೆದಿದ್ದಾರೆ. ಇವರನ್ನು joyeeta007@gmail.com ನಲ್ಲಿ ಸಂಪರ್ಕಿಸಬಹುದಾಗಿದೆ.

ಅನುವಾದ: **ಜನಾರ್ದನ** । ಪರಿಶೀಲನೆ: **ಲತಾ ಕೆ. ಸಿ.**


ಬೀಜ ಮೊಳಕೆಯೊಡೆಯುವುದನ್ನು ಗಮನಿಸಿದರೆ, ತಮ್ಮ ಸುತ್ತಮುತ್ತಲ ಮರಗಳ ಬಗ್ಗೆ ತಿಳಿದುಕೊಳ್ಳಲು ನೆರವಾಗುತ್ತದೆ.... ಈ ವಾಸ್ತವಿಕ ಕಲಿಕೆಯು ನಮ್ಮ ಶಾಲೆಗಳ ಉದ್ದೇಶವಾಗಬೇಕು. ಅಲ್ಲದೆ ಈ ಉದ್ದೇಶವನ್ನು ಮಗುವಿಗೆ ಖಚಿತಪಡಿಸುವುದ–ರೊಂದಿಗೆ, ಔಪಚಾರಿಕ ಕಲಿಕಾ ತಾಣವು ತನಗಾಗಿ ಇರುವುದು ಹೌದೋ ಅಲ್ಲವೋ ಎಂಬುದನ್ನು ಮಗು ತಾನೇ ಪತ್ತೆ ಮಾಡುತ್ತದೆ.

**–ಶಿವಾನಿ ತನೇಜಾ, ಕಟ್ಟಕಡೆಯ ಮಗುವನ್ನೂ ಶಾಲೆಗೆ ಕರೆತರುವುದು, ಪುಟ 95**

# ಭಾಷೆ ಮತ್ತು ಕಲೆಯ ಮಧ್ಯಪ್ರವೇಶಗಳು | ನಿಜಾಮುದ್ದೀನ್ ಮಾದರಿ

ಜ್ಯೋತ್ಸ್ನಾ ಲಾಲ್ ಮತ್ತು ಹೈದರ್ ಮೆಹ್ದಿ ರಿಜ್ವಿ

ಹಜರತ್ ನಿಜಾಮುದ್ದೀನ್ ಬಸ್ತಿಯು ಭಾರತದ ಬಹುತ್ವ ಸಂಪ್ರದಾಯಗಳ ನೆಲೆ. ಇಲ್ಲಿರುವ 13ನೇ ಶತಮಾನದ ಹೆಸರಾಂತ ಸೂಫಿ ಸಂತ, ಹಜರತ್ ನಿಜಾಮುದ್ದೀನ್ ಔಲಿಯಾ ಅವರ ಸಮಾಧಿಗೆ ಎಲ್ಲಾ ಮತ ಶ್ರದ್ಧೆಯ ಭಕ್ತರು ಭೇಟಿ ಕೊಡುತ್ತಾರೆ. 700 ವರ್ಷಗಳಷ್ಟು ಹಳೆಯದಾದ ಈ ಪ್ರದೇಶದಲ್ಲಿ 10 ಸಾವಿರಕ್ಕೂ ಹೆಚ್ಚು ಜನರು ನೆಲೆಸಿದ್ದು, ಶೇಕಡಾ 70ರಷ್ಟು ಮಂದಿ ಅಸಂಘಟಿತ ವಲಯಗಳಲ್ಲಿ ದುಡಿಯುತ್ತಾರೆ. ಅಗಾ ಖಾನ್ ಸಾಂಸ್ಕೃತಿಕ ಟ್ರಸ್ಟ್ ಮತ್ತು ಅಗಾ ಖಾನ್ ಪ್ರತಿಷ್ಠಾನದ ನಿಜಾಮುದ್ದೀನ್ ನಗರ ನವೀಕರಣ ಉಪಕ್ರಮವು ಸಾರ್ವಜನಿಕ-ಖಾಸಗಿ ಸಹಭಾಗಿತ್ವದ ಯೋಜನೆಯಾಗಿ, 2007ರಿಂದಲೂ ಅದು ನಿಜಾಮುದ್ದೀನ್ ಬಸ್ತಿ ಪ್ರದೇಶದ ಜನರ ಜೀವನದ ಗುಣಮಟ್ಟವನ್ನು ಪಾರಂಪರಿಕ ಸಂರಕ್ಷಣಾ ವಿಧಾನದ ಮೂಲಕ ಮೇಲೆತ್ತುವ ಗುರಿಯನ್ನು ಹೊಂದಿದೆ.

ಮಕ್ಕಳಿಗೆ ಸಿಗುತ್ತಿರುವ ಶಿಕ್ಷಣವು ಕಳಪೆ ಗುಣಮಟ್ಟದ್ದಾಗಿರುವುದು ಪ್ರಮುಖ ಸಮಸ್ಯೆಯಾಗಿ ಉಲ್ಬಣವಾಗುತ್ತಿರುವ ಹಿನ್ನೆಲೆಯಲ್ಲಿ, ಜೀವನ ಮಟ್ಟ ಸಮೀಕ್ಷಾ ವರದಿಯ ಆಧಾರದ ಮೇಲೆ, ಈ ಕಾರ್ಯಕ್ರಮವನ್ನು ವಿನ್ಯಾಸಗೊಳಿಸಲಾಗಿದೆ. ನಿಜಾಮುದ್ದೀನ್ ಬಸ್ತಿಯಲ್ಲಿ ಶೇಕಡಾ 98ರಷ್ಟು ಮುಸ್ಲಿಂ ಸಮುದಾಯವಿರುವ ಕಾರಣ ಇದೇನೂ ಅಚ್ಚರಿಯ ಸಂಗತಿಯಾಗಿಲ್ಲ ಹಾಗೂ 2006ರ ನವೆಂಬರ್ ತಿಂಗಳಲ್ಲಿ ಸಾಚಾರ್ ಸಮಿತಿ ನೀಡಿದ ವರದಿಯು, ವಿಶೇಷವಾಗಿ ಮಹಿಳೆಯರು ಮತ್ತು ಹೆಣ್ಣುಮಕ್ಕಳಲ್ಲಿ ಶಿಕ್ಷಣವು ಪ್ರಮುಖ ಸಮಸ್ಯೆಯಾಗಿದೆ ಎಂದು ಗುರುತಿಸಿದೆ. ನಿಜಾಮುದ್ದೀನ್ ಬಸ್ತಿಯಲ್ಲಿ ಈ ಸಮಸ್ಯೆಯ ಜೊತೆಗೆ ಸರ್ಕಾರಿ ಶಾಲೆಗೆ ಬರುವ ಬಹುತೇಕ ಮಕ್ಕಳು ಮೊದಲ ತಲೆಮಾರಿನವರಾಗಿರುವ ಸಮಸ್ಯೆ ಸೇರಿಕೊಂಡಿದೆ.

ನಿಜಾಮುದ್ದೀನ್ ನಗರ ನವೀಕರಣದ ಉಪಕ್ರಮವು ಮುನ್ಸಿಪಲ್ ಶಾಲೆಯನ್ನು ಭೌತಿಕ ಮೂಲಸೌಕರ್ಯ, ಶಾಲೆಯ ನಿರ್ವಹಣೆ, ತರಗತಿ ಪ್ರಕ್ರಿಯೆನ್ನು ಸುಧಾರಿಸುವುದು ಮತ್ತು ಸಮುದಾಯದೊಂದಿಗೆ ಒಳಗೊಳ್ಳುವಿಕೆಯಂತಹ ಕೆಲಸಗಳಲ್ಲಿ ತೊಡಗಿಸಿಕೊಂಡಿತು.

**ಹಿನ್ನೆಲೆ**

ಎಸ್.ಡಿ.ಎಂ.ಸಿ ಶಾಲೆಗೆ ದಾಖಲಾದ ಮಕ್ಕಳ ಪೋಷಕರನ್ನು ಅಕ್ಷರಸ್ಥರು ಎಂದು ವರ್ಗೀಕರಿಸಬಹುದಾದರೂ ಇನ್ನೂ ವಿಶಾಲವಾದ ವ್ಯಾಪ್ತಿಯಲ್ಲಿ ಅವರ ವೃತ್ತಿ ಮತ್ತು ಮನೆಯ ವಾತಾವರಣವು ಕಲಿಕೆಗೆ ಪೂರಕವಾಗಿರುವುದು ವಿರಳವಾಗಿರುವುದನ್ನು ಇದು ಹೊಂದಿದೆ. ಪೋಷಕರ ಸೀಮಿತ ಸಾಕ್ಷರತಾ ಮಟ್ಟ, ಅವರ ದೀರ್ಘಾವಧಿಯ ದುಡಿಮೆ, ಮನೆಯಲ್ಲಿ ಮುದ್ರಿತ ಸಾಮಗ್ರಿಗಳ ಕೊರತೆ, ಒಡಹುಟ್ಟಿದ ಕಿರಿಯರನ್ನು ನೋಡಿಕೊಳ್ಳಬೇಕಾದ ಅನಿವಾರ್ಯತೆ, ಸಣ್ಣ ವಯಸ್ಸಿನಲ್ಲೇ ಕೌಟುಂಬಿಕ ದೌರ್ಜನ್ಯ ಮತ್ತು ಅಸಭ್ಯ ಭಾಷಾ ಅನುಭವಕ್ಕೆ ಈಡಾಗಿರುವುದು ಶಾಲೆಯಲ್ಲಿರುವ ಈ ಮಕ್ಕಳ ಬದುಕನ್ನು ಲಕ್ಷಣೀಕರಿಸುತ್ತವೆ.

ನಿಜಾಮುದ್ದೀನ್ ಬಸ್ತಿಯಲ್ಲಿ ಬಿಹಾರ, ಬಂಗಾಲ ಮತ್ತು ಉತ್ತರಪ್ರದೇಶದ ಜನರೇ ಹೆಚ್ಚಿದ್ದರೂ, ದೇಶದ ಎಲ್ಲಾ ಭಾಗಗಳ ಜನರನ್ನು ಅದು ತನ್ನತ್ತ ಆಕರ್ಷಿಸುತ್ತದೆ. ಆದರೆ ಎಸ್.ಡಿ.ಎಂ.ಸಿ. ಶಾಲಾ ಮಾಧ್ಯಮವಾಗಿರುವ ಹಿಂದಿ ಭಾಷೆಯನ್ನು ಇಲ್ಲಿ ದಾಖಲಾದ ಬಹುತೇಕ ಮಕ್ಕಳು ಮನೆಯಲ್ಲಿ  ಮಾತನಾಡುವುದಿಲ್ಲ. ಇಂಗ್ಲಿಷ್ ಮಾತನಾಡುವ ಅಭ್ಯಾಸವು ಅಷ್ಟಕ್ಕಷ್ಟೇ.

ಆದ್ದರಿಂದ, ನಿಜಾಮುದ್ದೀನ್‌ನ ಎಸ್.ಡಿ.ಎಂ.ಸಿ. ಪ್ರಾಥಮಿಕ ಶಾಲೆಗೆ ದಾಖಲಾದ ಮಕ್ಕಳಲ್ಲಿ ಕಂಡುಬರುವ ಸಾಮಾನ್ಯ ಅಂಶಗಳನ್ನು ಗುರುತಿಸುವುದಾದರೆ, ಅವರದು ಸಂಪನ್ಮೂಲ ಕೊರತೆ ಇರುವ ಕುಟುಂಬ, ಬಹುತೇಕರು ಮುಸಲ್ಮಾನರು, ಮನೆಯಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಶೈಕ್ಷಣಿಕವಾಗಿ ಬೆಂಬಲ (ಬಸ್ತಿಯಲ್ಲಿ ಕೆಲವೇ ಕೆಲವರು ಮತ್ತೊಬ್ಬ ಯುವಕನನ್ನು ಬೋಧಕನಾಗಿ ಗೊತ್ತುಮಾಡಿ-ಕೊಳ್ಳುತ್ತಾರೆ) ಮತ್ತು ಖಚಿತವಾಗಿಯೂ ಶಾಲೆಯ ಬೋಧನಾ ಭಾಷೆಯು ಮಾತೃಭಾಷೆಗಿಂತ ಬೇರೆಯಾಗಿರುತ್ತದೆ.

**2007ರಲ್ಲಿ ಶಾಲೆಯ ಸ್ಥಿತಿಗತಿ**

2007ರಲ್ಲಿ ಪ್ರಾಥಮಿಕ ಶಾಲಾ ಯೋಜನೆ ಶುರುವಾದಾಗ, 100ಕ್ಕಿಂತಲೂ ಹೆಚ್ಚು ಮಕ್ಕಳು ಶಾಲೆಗೆ ದಾಖಲಾಗಿದ್ದರೂ ಸಹಾ ಕೇವಲ 50-60 ಮಕ್ಕಳು ಹಾಜರಾಗುವ ಮೂಲಕ ಶಾಲೆ ನಿರ್ಜನವಾಗಿತ್ತು. ನಿಗದಿಯಂತೆ ಇಂತಿಷ್ಟು ಗಂಟೆ ಶಾಲೆ ನಡೆಯಬೇಕು ಎನ್ನುವುದು ನಡೆಯುತ್ತಿರುವುದಲ್ಲ ಮತ್ತು ನಿಗದಿತ ಪಠ್ಯಕ್ರಮದ ಬೋಧಿಸಲೇಬೇಕು ಎಂಬ ಆದ್ಯತೆ ಶಿಕ್ಷಕರಿಗೆ ಇರಲಿಲ್ಲ.

ಶಾಲಾ ಕಟ್ಟಡ ಮತ್ತು ಅದರ ನಿರ್ವಹಣೆಯು ಕಲಿಕೆಯ ವಾತಾವರಣವನ್ನು ನಿರ್ಮಿಸುವ ನಿಟ್ಟಿನಲ್ಲಿ ನೆರವಾಗುವಂತಿರಲಿಲ್ಲ. ಅಲ್ಲದೆ ಎಸ್.ಡಿ.ಎಂ.ಸಿಯ ಸುರಕ್ಷತಾ ಕ್ರಮಗಳನ್ನೂ ಅಲ್ಲಿ ಪಾಲಿಸಿರಲಿಲ್ಲ. ತರಗತಿ ಕೊಠಡಿಗಳಿಗೆ ಸಾಕಷ್ಟು ಗಾಳಿ ಬೆಳಕಾಗಲಿ, ಆರಾಮದಾಯಕವಾದ ಪೀಠೋಪಕರಣಗಳಾಗಲೀ, ಬೋಧನಾ ಸಲಕರಣೆಗಳಾಗಲೀ ಇರಲಿಲ್ಲ. ಬೋಧನೆ-ಕಲಿಕೆ ಪ್ರಕ್ರಿಯೆಯು ಕಲಿಕೆಗಿಂತ ದೈಹಿಕ ಶಿಕ್ಷೆಯ ಸ್ವರೂಪದಿಂದ ಕೂಡಿತ್ತು. ಶಿಕ್ಷಕ-ಮಗುವಿನ ನಡುವಿನ ಸಂಬಂಧವು ಭಯದಿಂದ ಇಲ್ಲವೇ ಆತಂಕದಿಂದ ಕೂಡಿದ್ದು ತರಗತಿಯ ವಾತಾವರಣವು ಪ್ರೇರಣಾದಾಯಕವಾಗಿರಲಿಲ್ಲ. ಮಕ್ಕಳು ಮತ್ತು ಶಿಕ್ಷಕರ ಹಾಜರಾತಿಯೂ ನಿಯಮಿತವಾಗಿರಲಿಲ್ಲ. ಮಕ್ಕಳ ಶೈಕ್ಷಣಿಕ ಮಟ್ಟವು ವಯಸ್ಸು ಮತ್ತು ತರಗತಿಯ ದೃಷ್ಟಿಯಿಂದ ಸಮರ್ಪಕವಾಗಿರಲಿಲ್ಲ. ಮಕ್ಕಳು ಕಲಿಯಬೇಕು ಎಂಬ ಧೋರಣೆ ಶಿಕ್ಷಕರಿಗೆ ಇರದುದು ಮತ್ತು ತಮ್ಮ ಮಕ್ಕಳು ಕಲಿಯಬಲ್ಲರು ಎಂಬ ನಂಬಿಕೆ ಪೋಷಕರಿಗೆ ಇರದುದು ಅದಕ್ಕಿಂತಲೂ ದೊಡ್ಡ ವಿಪರ್ಯಾಸವಾಗಿತ್ತು.

### ಶಾಲೆಯ ಪರಿವರ್ತನೆಯ ಪ್ರಕ್ರಿಯೆ

ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೊರೇಷನ್ (ಎಸ್.ಡಿ.ಎಂ.ಸಿ.) ಶಾಲೆಯು ಪರಿವರ್ತನೆಗೊಂಡಿರುವುದನ್ನು ನಿಜಾಮುದ್ದೀನ್ ಬಸ್ತಿಯ ನಿವಾಸಿಗಳು ಮತ್ತು ಸಂದರ್ಶಕರು ವ್ಯಾಪಕವಾಗಿ ಒಪ್ಪಿಕೊಂಡಿದ್ದಾರೆ. ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೊರೇಷನ್ ಪ್ರತಿಭಾ ವಿದ್ಯಾಲಯದ ಮಾರ್ಪಾಡು ಪ್ರಕ್ರಿಯೆಯು ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೊರೇಷನ್, ಭಾರತೀಯ ಪುರಾತತ್ವ ಸರ್ವೆ (ಎಎಸ್ಐ), ಕೇಂದ್ರ ಲೋಕೋಪಯೋಗಿ ಇಲಾಖೆ (ಸಿಪಿಡಬ್ಲ್ಯೂಡಿ) ಜತೆಗಿನ ಸಾರ್ವಜನಿಕ-ಖಾಸಗಿ ಸಹಭಾಗಿತ್ವದೊಂದಿಗೆ ನಡೆದಿತ್ತು. ಅಗಾಖಾನ್ ಪ್ರತಿಷ್ಠಾನ ಮತ್ತು ಅಗಾ ಖಾನ್ ಸಾಂಸ್ಕೃತಿಕ ಟ್ರಸ್ಟ್ (ಒಟ್ಟಾಗಿ ಅಗಾ ಖಾನ್ ಡೆವಲಪ್‌ಮೆಂಟ್ ನೆಟ್‌ವರ್ಕ್ – ಎಕೆಡಿಎಸ್)ನ ಖಾಸಗಿ ಪಾಲುದಾರಿಕೆಯಿತ್ತು. ಸರಿಯಾದ ಅವಕಾಶ ಮತ್ತು ವಾತಾವರಣ ಒದಗಿಸಿದರೆ ಮಕ್ಕಳು ಕಲಿಯಬಲ್ಲರು ಎಂಬ ಬಲವಾದ ನಂಬಿಕೆಯೇ ಈ ಬದಲಾವಣೆಗಳನ್ನು ತರಲು ಪ್ರಮುಖ ಕಾರಣಗಳಲ್ಲೊಂದು.

ಎಲ್ಲಾ ಭಾಗೀದಾರರ ಜತೆ ಚರ್ಚಿಸಿದ ಬಳಿಕವಷ್ಟೇ ಶಾಲೆಯಲ್ಲಿ ಈ ಕಾರ್ಯಗಳನ್ನು ಕೈಗೆತ್ತಿಕೊಳ್ಳಲಾಗಿತ್ತು, ಮೊದಲನೆಯದಾಗಿ, ಉದ್ದೇಶಿತ ಬದಲಾವಣೆಗಳ ಬಗ್ಗೆ ಅಭಿಪ್ರಾಯವನ್ನು ತಿಳಿದುಕೊಳ್ಳುವ ಸಲುವಾಗಿ ಹಲವು ಕ್ಲಸ್ಟರ್ ಮಟ್ಟದ ಸಭೆಗಳ ಮೂಲಕ ಸಮುದಾಯದೊಂದಿಗೆ ಮಾತುಕತೆ ನಡೆಸಲಾಗಿತ್ತು. ಮಾದರಿ ಶಾಲೆ ರೂಪುಗೊಳ್ಳಲು ಏನೇನು ಮಾಡಬೇಕು ಎಂಬುದರ ಕುರಿತಾಗಿ ಪೋಷಕರು ಮತ್ತು ಮಕ್ಕಳಿಗೂ ತಿಳಿಸಿ ಹೇಳಲಾಗಿತ್ತು. ಆಗ ಪೋಷಕರು ಮತ್ತು ಮಕ್ಕಳು ತಮ್ಮ ಶಾಲೆ ಹೇಗಿರಬೇಕು ಎಂಬ ಅಭಿಪ್ರಾಯವನ್ನು ಹಂಚಿಕೊಂಡರು.

ಎರಡನೆಯದಾಗಿ, ಶಾಲೆಯ ಮೂಲಸೌಕರ್ಯ ಮತ್ತು ಪ್ರಕ್ರಿಯೆಗಳಲ್ಲಿ ಬದಲಾವಣೆ ಕಂಡುಬಂದರೆ, ಹೆಚ್ಚಿನ ಮಕ್ಕಳನ್ನು ಶಾಲೆಯತ್ತ ಸೆಳೆಯಲು ಸಹಕಾರಿ ಎಂಬ ಅಂಶವನ್ನೇ ಗುರಿಯಾಗಿಟ್ಟುಕೊಂಡು ಶಾಲೆಯ ಭೌತಿಕ ಸ್ಥಿತಿಗತಿಯ ಬಗ್ಗೆ ಆಂತರಿಕ ಮೌಲ್ಯಮಾಪನ ಮಾಡಲಾಯಿತು. ಇದನ್ನು ಸ್ಥಿತಿಗತಿಯ ಮೌಲ್ಯಮಾಪನ ಮತ್ತು ಎಸ್‌ಡಿಎಂಸಿ ನಿಯಮಗಳನ್ನು ಗಮನದಲ್ಲಿಟ್ಟುಕೊಂಡೇ ಮಾಡಲಾಯಿತು. ಜೊತೆಗೆ, ಕಲಿಕೆಗೆ ಪೂರಕವಾಗುವಂತೆ ಶಾಲೆಯ ಕಟ್ಟಡವನ್ನು ವಿನ್ಯಾಸಗೊಳಿಸಲು ನೆರವಾಗುವುದಕ್ಕಾಗಿ ಒಬ್ಬ ತಜ್ಞ ವಾಸ್ತುಶಿಲ್ಪಿಯನ್ನೂ ಗೊತ್ತುಮಾಡಲಾಯಿತು. ಇದನ್ನು 'ಕಲಿಕೆಯ ಒಂದು ಸಾಧನವಾಗಿ ಕಟ್ಟಡ' (Building as a Learning Aid– ಬಾಲಾ) ಮಾದರಿ ಎಂದು ಕರೆಯಲಾಗುತ್ತದೆ.

ಮೂರನೆಯದಾಗಿ, ಮಕ್ಕಳ ಶೈಕ್ಷಣಿಕ ಮಟ್ಟವನ್ನು ಹಿಂದಿ-ಗಣಿತದ ಮೂಲಕ ಮೌಲ್ಯಮಾಪನ ಮಾಡಲಾಗುತ್ತಿತ್ತು. ಅಂದರೆ, ದೆಹಲಿ ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗದ ಸಹಕಾರದೊಂದಿಗೆ ಸಾಕ್ಷರತೆ ಮತ್ತು ಅಂಕೆ ಸಂಖ್ಯೆಗಳ ಆಧಾರದಲ್ಲಿ ವಿನ್ಯಾಸ ಮಧ್ಯಸ್ಥಿಕೆಗಳನ್ನು ರೂಪಿಸಲು ಸಹಾಯವನ್ನು ಮಾಡಲಾಗುತ್ತಿತ್ತು.

ಮೂಲ ಮೌಲ್ಯಮಾಪನಗಳು ಮತ್ತು ಪರಿಸ್ಥಿತಿಯ ವಿಶ್ಲೇಷಣೆಯ ಆಧಾರದಲ್ಲಿ ನಿಜಾಮುದ್ದೀನ್ ನವೀಕರಣ ಉಪಕ್ರಮದ ಮಧ್ಯಸ್ಥಿಕೆಗಾಗಿ ಈ ಕೆಳಗಿನ ಅಂಶಗಳನ್ನು ಸೇರಿಸಲಾಯಿತು. ಅವುಗಳೆಂದರೆ:

- ಶಾಲೆಯ ಕಟ್ಟಡಗಳ ಭೌತಿಕ ಅಭಿವೃದ್ಧಿ ಮತ್ತು ಮೂಲ-ಸೌಕರ್ಯಗಳ ಸುಧಾರಣೆ
- ಶಾಲೆಯ ನಿರ್ವಹಣೆ
- ಪಠ್ಯದಲ್ಲಿ ಮೌಲ್ಯವರ್ಧನೆ ಮತ್ತು ಇತರ ಮಾರ್ಗೋಪಾಯಗಳನ್ನು ಒಳಗೊಂಡಿರುವ ತರಗತಿ ಪ್ರಕ್ರಿಯೆಗಳು
- ಸಮುದಾಯದೊಂದಿಗೆ ತೊಡಗಿಕೊಳ್ಳುವುದು
- ಮಕ್ಕಳು ವಿದ್ಯಾಭ್ಯಾಸ ಮುಂದುವರಿಸಲು ಅನುಕೂಲ-ವಾಗುವಂತೆ ಶಾಲೆ ಬಿಟ್ಟ ನಂತರದ ಕಾರ್ಯಕ್ರಮ.

### ನಿಜಾಮುದ್ದೀನ್ ಮಾದರಿ

ನಿಜಾಮುದ್ದೀನ್ ಮಾದರಿಯು ಶಿಕ್ಷಣದ ಗುಣಮಟ್ಟವನ್ನು ಹಾಗೂ ನೈಜವಾಗಿ ಜೀವನದ ಗುಣಮಟ್ಟವನ್ನು ಹೆಚ್ಚಿಸಲು ಅವಶ್ಯವಾದ ಕೆಲವು ನಿರ್ಣಾಯಕ ಅಂಶಗಳ ಬಗ್ಗೆ ಬಹುತೇಕ ಗಮನ ಕೇಂದ್ರೀಕರಿಸಿತ್ತು. ಇದೇ ಕಾರಣಕ್ಕೆ ಈ ಯೋಜನೆಯು ಆರಂಭಿಕ ಬಾಲ್ಯಾವಸ್ಥೆ ಆರೈಕೆ ಮತ್ತು ಶಿಕ್ಷಣ (ಇಸಿಸಿಇ). ಪ್ರಾಥಮಿಕ ಶಿಕ್ಷಣ, ಆರೋಗ್ಯ, ಜನಜೀವನ, ನೈರ್ಮಲ್ಯ, ಘನ ತ್ಯಾಜ್ಯ ನಿರ್ವಹಣೆ ಮತ್ತು ಸಂಸ್ಕೃತಿಯಂತಹ ವಿಭಾಗಗಳಲ್ಲಿ ಕಾರ್ಯನಿರ್ವಹಿಸಿತ್ತು. ತರಗತಿಯ ಪ್ರಕ್ರಿಯೆ ಮತ್ತು ಮಕ್ಕಳ ಕಲಿಕೆಗೆ ನೆರವಾಗುವಂತೆ ಭಾಷಾ ಬೋಧನೆ ಮತ್ತು ಕಲೆಯ ಮಧ್ಯಪ್ರವೇಶದ ಮೂಲಕ ಪಠ್ಯಕ್ರಮದ ಸಮೃದ್ಧಗೊಳಿಸುವಿಕೆ ಎಂಬ ಎರಡು ಸಂಗತಿಗಳ ಮೇಲೆ ಈ ಲೇಖನವು ಕೇಂದ್ರೀಕರಿಸುತ್ತದೆ

### ಭಾಷಾ ಬೋಧನೆ

ಪ್ರಾಥಮಿಕ ಹಂತದಲ್ಲಿ ಹಿಂದಿ ಕಲಿಸಲು ಅನುಸರಿಸುವ ಅತ್ಯಂತ ಸಾಮಾನ್ಯ ತಂತ್ರವೆಂದರೆ, ವರ್ಣಮಾಲೆಯನ್ನು ಕಲಿಸುವುದು, ತದನಂತರ ಕಾಗುಣಿತಗಳ ಬಾಯಿಪಾಠ ಮಾಡುವುದು- ಇದನ್ನು ಮತ್ತೆ ಸ್ವರಾಕ್ಷರ ಮತ್ತು ವ್ಯಂಜನ ಎಂದು ವರ್ಗೀಕರಿಸುವುದು. ಆಮೇಲೆ ಮಕ್ಕಳಿಗೆ ಮಾತ್ರೆ (ಸ್ವರ ಧ್ವನಿಗಳು) ಇಲ್ಲದ ಸಣ್ಣ, ಎರಡು-ಮೂರು ಅಕ್ಷರಗಳ ಪದಗಳನ್ನು, ನಂತರ ಅದೇ ಪದಗಳನ್ನು ಬಳಸಿ ಸಣ್ಣ ವಾಕ್ಯ ರಚಿಸುವುದನ್ನು ಹೇಳಿಕೊಡಲಾಗುತ್ತದೆ. ಮುಂದುವರಿದು, ಮಕ್ಕಳು ತಮ್ಮ ಪಠ್ಯಪುಸ್ತಕದಲ್ಲಿ ಪಾಠಗಳನ್ನು ಓದಿ ಬರವಣಿಗೆಯಲ್ಲಿ ತೊಡಗಬೇಕು, ಮುಖ್ಯವಾಗಿ ಪ್ರಶ್ನೆಗಳಿಗೆ ಉತ್ತರ ಬರೆಯಬೇಕಾಗುತ್ತದೆ.

ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೊರೇಷನ್ ಶಾಲೆಯು ಎನ್.ಸಿ.ಇ.ಆರ್.ಟಿ ಪಠ್ಯಪುಸ್ತಕಗಳನ್ನು ಬಳಸುತ್ತದೆ. ಅದು 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಅನುಸರಿಸುವ ಎನ್.ಸಿ.ಇ.ಆರ್.ಟಿ ಪಠ್ಯವು ಭಾಷಾ ಬೋಧನಾ ವಿಧಾನದಲ್ಲಿ ಸಮಗ್ರ ಬದಲಾವಣೆಯನ್ನು ಮಾಡಿಕೊಂಡಿದ್ದು, ಸಂಪೂರ್ಣವಾಗಿ ಭಾಷಾ ಬೋಧನೆಯ ವಿಧಾನವನ್ನು (Whole language teaching) ಅಳವಡಿಸಿಕೊಂಡಿದೆ. ಶಿಕ್ಷಕರು, ಸೇವೆಯಲ್ಲಿದ್ದುಕೊಂಡು ದುರದೃಷ್ಟವಶಾತ್, ಯಾವುದೇ ತರಬೇತಿ ಪಡೆಯದೇ ಇರುವ ಕಾರಣ ಅವರಿಗೆ ಹೊಸ ಪಠ್ಯಪುಸ್ತಕ ಬಳಕೆ ಆರಾಮದಾಯಕ-ವೆನಿಸುವುದಿಲ್ಲ.

ಅಗಾ ಖಾನ್ ಫೌಂಡೇಷನ್ ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೊರೇಷನ್ ಶಿಕ್ಷಕರಿಗೆ ಮತ್ತು ನೇಮಕಗೊಂಡ ಸಮುದಾಯ ಶಿಕ್ಷಕರಿಗಾಗಿ ಆಯೋಜಿಸಿದ್ದ ತರಬೇತಿ ಕಾರ್ಯಕ್ರಮಗಳಲ್ಲಿ ಈ ಅಂಶಗಳ ಬಗ್ಗೆ ಗಮನವಹಿಸಿತು. ತರಬೇತಿಯಲ್ಲಿ ಶಿಕ್ಷಕರು ಹೊಸ ವಿಧಾನಗಳನ್ನು ಅನುಸರಿಸಿ ಪಾಠಗಳನ್ನು ಯೋಜಿಸುವುದನ್ನು ಕಲಿತರು ಮತ್ತು ಕತೆಗಳ ನಕ್ಷೆಗಳು, ಪಾತ್ರಗಳ ಪಿರಮಿಡ್, ಪಾತ್ರಗಳ ವಿಶ್ಲೇಷಣೆ, ಏನು, ಯಾವಾಗ, ಎಲ್ಲಿ, ಯಾರು, ಯಾಕೆ ಮತ್ತು







ಯಾರಿಗೆ (6 Ws framework - what, when, where, who, why and whom) – ಎಂಬ ಆರು ಡಬ್ಲ್ಯೂಗಳ ಚೌಕಟ್ಟಿನ ಬಗ್ಗೆ ಕಲಿತರು. ಅಲ್ಲದೆ ಕತೆಯಲ್ಲಿನ ಕೇಂದ್ರ ಯೋಜನೆ ಹಾಗೂ ಇತರ ಯೋಜನೆಗಳ ನಡುವಿನ ಕೊಂಡಿಯನ್ನು ಅರ್ಥೈಸಿಕೊಳ್ಳುವುದನ್ನೂ ತರಬೇತಿಯಲ್ಲಿ ಕಲಿತರು. ಅಲ್ಲದೆ ಈ ರೀತಿಯ ಹೊಸ ಅಭ್ಯಾಸಗಳನ್ನು 'ಮಾಡುವ' ಕಲೆಯನ್ನೂ ಇವರು ಕಲಿತುಕೊಂಡರು. ಇಡೀ ಪಠ್ಯಪುಸ್ತಕಕ್ಕೆ ಬೇಕಾದ ಪಾಠ ಯೋಜನೆಯನ್ನು ಸಿದ್ಧಪಡಿಸಲಾಯಿತು ಮತ್ತು ಈ ಹೊಸ ಪಠ್ಯಕ್ರಮವನ್ನು ಬಳಸುವ ನಿಟ್ಟಿನಲ್ಲಿ ಇದು ಶಿಕ್ಷಕರಿಗೆ ನೆರವಾಯಿತು. ಭಾಷಾ ನಿಯಮದಲ್ಲಿನ ಬದಲಾವಣೆಯ ವಿಧಾನದ ಹಿಂದಿನ ಸಿದ್ಧಾಂತವನ್ನು ಅರ್ಥಮಾಡಿಕೊಳ್ಳಲು ಕೂಡ ಶಿಕ್ಷಕರಿಗೆ ಸಹಾಯ ಮಾಡಲಾಯಿತು.

ತರಬೇತಿ ಅವಧಿಯಲ್ಲಿ ಶಿಕ್ಷಕರು ಬೋಧನಾ– ಕಲಿಕಾ ಸಾಮಗ್ರಿಗಳನ್ನು ಸಿದ್ಧಪಡಿಸಿದ ಕಾರಣ ಮಕ್ಕಳು ಹೊಸ ವಿಧಾನದ ಚೌಕಟ್ಟಿನಲ್ಲೇ ಅಂದರೆ, ಅನೇಕ ಆಟಗಳನ್ನು ಒಳಗೊಂಡ, ಭಾರೀ ಬದಲಾವಣೆಯುಳ್ಳ ಹೊಸ ವಿಧಾನದಲ್ಲಿ – ಕಲಿಯಲು ಸಾಧ್ಯವಾಯಿತು. ಭಾಷಾ ಕಲಿಕೆಗೆ ಸಹಾಯವಾಗುವಂತೆ ಒಂದು ಗ್ರಂಥಾಲಯವನ್ನೂ ತೆರೆಯಲಾಯಿತು.

ಕೈಗೊಳ್ಳುವ ಚಟುವಟಿಕೆಯ ಆಧಾರದ ಮೇಲೆ ಪ್ರಸ್ತುತ ಶಾಲೆಯಲ್ಲಿದ್ದ ತರಗತಿಯ ಭೌತಿಕ ಸ್ಥಿತಿಯನ್ನು ಮರುವಿನ್ಯಾಸ ಮಾಡುವ ನಿಟ್ಟಿನಲ್ಲಿಯೂ ತರಬೇತಿಯ ಕಾರ್ಯಕ್ರಮಗಳಲ್ಲಿ ಗಮನ ಕೊಡಲಾಗಿತ್ತು. ಶಾಲೆಯ ರೂಪಾಂತರ ಪ್ರಕ್ರಿಯೆಯಲ್ಲಿ, ಕಡಿಮೆ ಭಾರದ ಪೀಠೋಪಕರಣಗಳ ಅಳವಡಿಕೆಯೂ ಒಳಗೊಂಡಿತ್ತು. ಮಕ್ಕಳು ಸಾಲಾಗಿ ಕುಳಿತುಕೊಳ್ಳಲು ಯಾವಾಗಲೂ ನಿರಾಕರಿಸುತ್ತಿದ್ದ ಕಾರಣ ಈ ಪೀಠೋಪಕರಣಗಳನ್ನು ತಾವೇ ಬೇಕಾದಲ್ಲಿಗೆ ಸುಲಭವಾಗಿ ಒಯ್ದು ಬದಲಾವಣೆ ಮಾಡಿಕೊಳ್ಳಬಹುದಾಗಿತ್ತು. ಮಕ್ಕಳಿಗೆ ಸಣ್ಣ ಸಣ್ಣ ಗುಂಪುಗಳಲ್ಲಿ ಕಲಿಯುವುದು ಗೊತ್ತಿರಲಿಲ್ಲ ಆದರೆ ಕ್ರಮೇಣ, ಆ ರೀತಿ ಕೆಲಸ ಮಾಡುವಾಗ ಪ್ರತಿ ಮಗುವೂ ತನ್ನ ಪಾಲು ಇರುವಂತೆ ನೋಡಿಕೊಳ್ಳಬೇಕು ಎಂಬ ಅಂಶವನ್ನು ಮಕ್ಕಳು ಅರಿತರು. ಕತೆ ಹೇಳುವ ಅವಧಿಯಲ್ಲಿ ಶಿಕ್ಷಕಿ ಮಕ್ಕಳನ್ನು ತನ್ನ ಹತ್ತಿರ ಕರೆದುಕೊಳ್ಳುತ್ತಿದ್ದರು. ಇದರಿಂದ ತರಗತಿಯಲ್ಲಿ ಹೊಸ ಚೈತನ್ಯ ತುಂಬುತ್ತಿತ್ತು. ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೊರೇಷನ್ ವರ್ಷದ ಕೊನೆಯ ಪರೀಕ್ಷೆಯ ಸಂದರ್ಭದಲ್ಲಿದ್ದಾಗ ಅಗಾ ಖಾನ್ ಪ್ರತಿಷ್ಠಾನವು ಮಕ್ಕಳಿಗೆ ಓದಲು, ಬರೆಯಲು, ಗ್ರಹಿಸಲು ಮತ್ತು ಮಾತನಾಡಲು ಕಲಿಸುವ ಮೂಲಕ ಮೌಲ್ಯಮಾಪನ ಮಾಡುವತ್ತ ಗಮನ ಕೇಂದ್ರೀಕರಿಸಿತು. ಪಠ್ಯೇತರ ಅಂಶಗಳುಳ್ಳ ಪ್ರಶ್ನೆಗಳನ್ನು ಕೇಳುವ ಮೂಲಕ ಮಕ್ಕಳ ಕಲ್ಪನಾ ಸಾಮರ್ಥ್ಯವನ್ನೂ ಮೌಲ್ಯಮಾಪನ ಮಾಡಲಾಯಿತು.

ಈ ಎಲ್ಲಾ ಬಹುತಂತ್ರಗಳು ಮಕ್ಕಳು ತಮ್ಮ ಭಾಷಾ ಕೌಶಲ ಮತ್ತು ಭಾಷಾ ಸಾಮರ್ಥ್ಯ ಬೆಳೆಸುವಲ್ಲಿ ಶೇಕಡಾ ೨೦ರಿಂದ ಶೇಕಡಾ ೬೦ರಷ್ಟು ಹೆಚ್ಚಳ ಕಂಡುಕೊಳ್ಳಲು ನೆರವಾಯಿತು.

**ಕಲೆಯ ಮಧ್ಯಪ್ರವೇಶ**

ಅಗಾ ಖಾನ್ ಸಾಂಸ್ಕೃತಿಕ ಟ್ರಸ್ಟ್ ನೇತೃತ್ವದಲ್ಲಿ ನಡೆದ ಈ ಯೋಜನೆಯಲ್ಲಿ ಕಲೆಯ ಮಧ್ಯಪ್ರವೇಶವು ತಾರ್ಕಿಕ ವಿಧಾನವಾಗಿ ಮುಂದೆ ತೆರೆದುಕೊಂಡಿತು. ಇದು ನಾಟಕ ಮತ್ತು ಛಾಯಾಗ್ರಹಣ ಕಾರ್ಯಾಗಾರದೊಂದಿಗೆ ಶುರುವಾಯಿತು. ಈ ಕಾರ್ಯಾಗಾರಕ್ಕೆ ಮಕ್ಕಳು ತಮ್ಮ ಪೋಷಕರನ್ನು ತಾವೇ ತಯಾರಿಸಿದ ಆಮಂತ್ರಣ ಪತ್ರಗಳನ್ನು ಕೊಟ್ಟು ಆಹ್ವಾನಿಸಿದರು. ಶಾಲೆಯಲ್ಲಿ ನಡೆಯುವ ನಾಟಕ ಪ್ರದರ್ಶನಕ್ಕೆ ಊರವರನ್ನು ಇದೇ ಮೊದಲ ಬಾರಿಗೆ ಆಹ್ವಾನಿಸಲಾಗಿತ್ತು. ಇಂತಹ ಮಧ್ಯಪ್ರವೇಶದ ಅವಕಾಶಗಳನ್ನು ಸೃಷ್ಟಿಸಲೇಬೇಕಾಗಿತ್ತು. ಶಾಲೆಯ ವೇಳಾಪಟ್ಟಿಗೆ, ಸಂಪನ್ಮೂಲ ಶಿಕ್ಷಕರನ್ನು ಗುರುತಿಸಲು ಮತ್ತು ಮಕ್ಕಳಿಗೆ ಅವಕಾಶ ಸೃಷ್ಟಿಸಲು ಸಮಯಾವಕಾಶ ಹೊಂದಿಸಬೇಕಾಯಿತು.

ಇಬ್ಬರು ಕಲಾ ಶಿಕ್ಷಕರನ್ನು ನೇಮಕ ಮಾಡಲಾಯಿತು ಮತ್ತು ವೇಳಾಪಟ್ಟಿ ಬದಲಾಯಿಸುವ ಮೂಲಕ ಪ್ರತಿ ಮಗುವೂ ದಿನಾಲೂ ಕನಿಷ್ಠ ಒಂದು ಗಂಟೆ ಕಲಾ ತರಗತಿಯಲ್ಲಿ ಪಾಲ್ಗೊಳ್ಳುವಂತೆ ಮಾಡಲಾಯಿತು. ಭಾಷಾ ಬೋಧನೆಯಲ್ಲಿ ನಾಟಕದ ಪಾತ್ರಗಳನ್ನು ಮಾಡುವುದು, ತಿಂಗಳಿಗೊಮ್ಮೆ ಬಾಲ ಸಭಾಗಳು ಮತ್ತು ವಾರಕ್ಕೊಮ್ಮೆ ಬೆಳಗಿನ ವಿಶೇಷ ಕಲಾಪಗಳ ಮೂಲಕ ವಿಶೇಷ ಸಂಭ್ರಮಾಚರಣೆ ದಿನಗಳನ್ನು ಏರ್ಪಡಿಸುವ ಮೂಲಕ ಮಕ್ಕಳಿಗೆ ಅಭಿವ್ಯಕ್ತಿಗೆ ಒಂದು ಔಪಚಾರಿಕ ವೇದಿಕೆಯನ್ನು ನಿರ್ಮಿಸಿ-ಕೊಡಲಾಯಿತು. ಮಕ್ಕಳ ಬರವಣಿಗೆ ಮತ್ತು ಚಿತ್ರಕಲೆಯ ಪ್ರದರ್ಶನಕ್ಕಾಗಿ ರಂಗ್ ತರಂಗ್ ಎಂಬ ನಿಯತಕಾಲಿಕವನ್ನು ಆರಂಭಿಸಲಾಯಿತು. ಪಾರಂಪರಿಕ ಪಠ್ಯದ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳನ್ನೂ ಸೇರಿಸಲಾಯಿತು. ಇಕೊ ಕ್ಲಬ್ ಮೂಲಕ ಪರಿಸರದ ಪ್ರಜ್ಞೆ ಮೂಡಿಸುವ ಪ್ರಯತ್ನವನ್ನೂ ಮಾಡಲಾಯಿತು. 'ಚೀಲ ರಹಿತ ದಿನ' ಎಂಬುದಾಗಿ ಕರೆದು ಅಂದು ವಿಶೇಷ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಯಿತು.

ಈ ಎಲ್ಲಾ ಚಟುವಟಿಕೆಗಳಿಂದಾಗಿ ಮಕ್ಕಳ ಲೋಕಜ್ಞಾನ, ಅಭಿವ್ಯಕ್ತಿಗೆ ಅವಕಾಶ, ಆತ್ಮವಿಶ್ವಾಸ ಗಳಿಕೆ ಮತ್ತು ಹಾಜರಾತಿಯಲ್ಲಿ ಗಮನಾರ್ಹ ಹೆಚ್ಚಳವಾಗಿ ಶಾಲೆಗೆ ಪ್ರತಿನಿತ್ಯ ತಪ್ಪದೇ ಹಾಜರಾಗಲು ತೊಡಗಿದರು. ನಿಜಾಮುದ್ದೀನ್ ಬಸ್ತಿಯಲ್ಲಿ ಪೋಷಕರ ಶಿಕ್ಷಣ ಮಟ್ಟ ಅತ್ಯಂತ ಕೆಳಮಟ್ಟದಲ್ಲಿದ್ದರೂ ತಮ್ಮ ಮಕ್ಕಳನ್ನು ಓದಿಸುವ ಹಂಬಲ ಅವರಿಗಿತ್ತು. ಹಾಗಾಗಿ ಅಂತಹ ಸಮುದಾಯವನ್ನು ಒಳಗೊಳ್ಳಿಸಿ-ಕೊಳ್ಳುವುದು ಬಹಳ ಅವಶ್ಯ. ಕೆಲವೊಮ್ಮೆ, ಪೋಷಕರು ಶಿಕ್ಷಕರೊಂದಿಗೆ ಬೆರೆಯಲು ಹಿಂದೇಟು ಹಾಕುತ್ತಿದ್ದರು.

**ಆಲೋಚಿಸಬೇಕಾದ ಅಂಶಗಳು**

ಶಾಲೆಯೇನೋ ರೂಪಾಂತರಗೊಂಡಿತು. ಆದರೆ ಅದನ್ನು ಅಗಾಖಾನ್ ಅಭಿವೃದ್ಧಿ ಜಾಲದ ಘಟಕಗಳಿಂದ ಯಾವುದೇ ಸಂಪನ್ಮೂಲಗಳ ಕ್ರೋಡೀಕರಣ / ನೆರವು ಇಲ್ಲದೆ ಮುಂದುವರಿಸುವುದು ಹೇಗೆ ಎಂಬುದೇ ದೊಡ್ಡ ಪ್ರಶ್ನೆಯಾಗಿತ್ತು. ಸರ್ಕಾರದಿಂದ ಈಗ ಕೊಟ್ಟಿರುವ ಖರ್ಚುವೆಚ್ಚಗಳ ಹೊರತಾಗಿ ಹೆಚ್ಚುವರಿ ಸಂಪನ್ಮೂಲ ದೊರಕುವುದು ಅಸಾಧ್ಯ ಎಂದು ತೋರಿತು. ಎನ್.ಸಿ.ಟಿ. ದೆಹಲಿ ಸರ್ಕಾರವು ಶಿಕ್ಷಣಕ್ಕಾಗಿ ಅತ್ಯಧಿಕ ಪ್ರಮಾಣದಲ್ಲಿ ಅಂದರೆ ಶೇಕಡಾ 26ರಷ್ಟು ಅನುದಾನ ಮಂಜೂರು ಮಾಡಿತ್ತು. ಆದರೆ, ಪ್ರಾಥಮಿಕ ಶಿಕ್ಷಣದ ಹೊಣೆ ಸ್ಥಳೀಯ ಆಡಳಿತದ್ದಾಗಿದ್ದು, (ಇಲ್ಲಿ ನಗರಸಭೆ) ಹಾಗಾಗಿ ಈ ಅನುದಾನ ಮಂಜೂರಾತಿಯಿಂದ ಶಾಲೆಗೆ ಪ್ರಯೋಜನವಾಗುವುದಿಲ್ಲ.

ಮುಂದುವರಿಯುತ್ತಾ ಹೋದಂತೆ ಎದುರಾದ ಕೆಲವು ಸಮಸ್ಯೆಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ:

*ಕಲಿಕೆಗೆ ಸೌಕರ್ಯ ಒದಗಿಸಬೇಕು ಎಂಬ ಅಂಶ ಈಗ ಎಲ್ಲರಿಗೂ ತಿಳಿದಿದ್ದರೂ, ಸರ್ಕಾರಿ ಶಾಲೆಗಳಲ್ಲಿ ಸಿಬ್ಬಂದಿ ಕೊರತೆ, ಅನೈರ್ಮಲ್ಯ, ಮಕ್ಕಳನ್ನು ಕಲಿಕೆಯತ್ತ ಆಕರ್ಷಿಸುವಂತಹ ವ್ಯವಸ್ಥೆಯ ಕೊರತೆ ಇನ್ನೂ ಮುಂದುವರಿದಿದೆ. ಗರಿಷ್ಠ ಕಲಿಕಾ ಅವಧಿಯ ಬಗ್ಗೆ ಸಾಕಷ್ಟು ಸಂಶೋಧನಾ ಅಧ್ಯಯನಗಳು ನಡೆದಿವೆ. ಮಧ್ಯಾಹ್ನದ ಊಟದ ಯೋಜನೆಯಿಂದ ಮಕ್ಕಳನ್ನು ಶಾಲೆಯತ್ತ ಸೆಳೆಯಬಹುದೇ, ಶೌಚಾಲಯಗಳಿದ್ದರೆ ಹೆಣ್ಣು ಮಕ್ಕಳ ಹಾಜರಾತಿ ಹೆಚ್ಚಿಸಬಹುದೇ ಮುಂತಾದ ಅಂಶಗಳ ಮಹತ್ವದ ಅರಿವು ನಮಗೂ ಇದೆ. ಆದರೆ, ಮಕ್ಕಳನ್ನು ಕಲಿಕೆಯಲ್ಲಿ ತೊಡಗಿಸಿಕೊಳ್ಳಬಲ್ಲ ಶಾಲೆಗಳನ್ನು ನಿರ್ಮಿಸುವ ಇಚ್ಛೆಯ ಕೊರತೆ ಇದೆ ಎಂದು ನಾವು ಗಮನಿಸಿದ್ದೇವೆ. ಶಾಲೆಗಳಲ್ಲಿ ನಮಗೆ ತಿಳಿದಿರುವಂತಹ ಮೂಲಸೌಕರ್ಯಗಳ ಚರ್ಚೆಗಿಂತ ಪಠ್ಯಕ್ರಮದಲ್ಲಿ ಮಾರ್ಪಾಡು, ಭಾಷಾ ಬೋಧನಾ ಕ್ರಮದಲ್ಲಿ ಬದಲಾವಣೆ ಮಾಡುವಂತಹ ಸಂಗತಿಗಳ ಬಗ್ಗೆ ಚರ್ಚೆ ನಡೆಯಬೇಕಾಗಿದೆ.

*ತಮ್ಮ ಮಕ್ಕಳ ಅವಶ್ಯಕತೆಯನ್ನು ಅರಿತು ಅವರಿಗೆ ಏನು ಬೇಕು ಮತ್ತು ಹೇಗೆ ಪ್ರೋತ್ಸಾಹಿಸಬೇಕೆನ್ನುವುದು ಶಿಕ್ಷಕರಿಗೆ ತಿಳಿದಿದೆ ಎಂದು ಭಾವಿಸಿ ಶಿಕ್ಷಕರನ್ನು ಸ್ವಾಯತ್ತ ವ್ಯಕ್ತಿಗಳಾಗಿ ಪರಿಗಣಿಸಲು ಶೈಕ್ಷಣಿಕ ಆಡಳಿತ ಮಂಡಳಿಗಳಿಗೆ ಯಾವುದರ ಅಗತ್ಯವಿದೆ?

*ದೆಹಲಿಯ ಮಕ್ಕಳು ನವೆಂಬರ್‌ನಿಂದೀಚೆಗೆ ಚಳಿಗಾಲದ ಮಂಜು, ತೀವ್ರವಾದ ಚಳಿ, ಪ್ರತಿಭಟನೆಗಳು, ದೊಂಬಿ ಮತ್ತು ಈಗ ಕೋವಿಡ್-19 ನಂತಹ ಒಂದಿಲ್ಲೊಂದು ಕಾರಣಗಳಿಂದಾಗಿ ಶಾಲೆಗೆ ನಿಯಮಿತವಾಗಿ ಹೋಗಿಯೇ ಇಲ್ಲ. ಶ್ರೀಮಂತರ ಮನೆಯ ಮಕ್ಕಳಿಗೆ ಡಿಜಿಟಲ್ ತರಗತಿ ಲಭ್ಯವಿದ್ದರೆ, ಸಂಪನ್ಮೂಲದ ಕೊರತೆಯಿರುವ ಕುಟುಂಬದ ಮಕ್ಕಳಿಗೆ ಆ ಅವಕಾಶವಿಲ್ಲ. ಅಂತಹ ಕುಟುಂಬದ ಮಕ್ಕಳಿಗೆ ಹೆಚ್ಚು ಎಂದರೆ 25-30 ನಿಮಿಷ ಮಾತ್ರ ಫೋನ್ ಲಭ್ಯವಾಗಬಹುದು ಮತ್ತು ಅವರಿಗೆ ಮನೆಯಲ್ಲಿ ಕಂಪ್ಯೂಟರ್ ಲಭ್ಯವಿರುವುದಿಲ್ಲ. ಸೌತ್ ಡೆಲ್ಲಿ ಮುನಿಸಿಪಲ್ ಕಾರ್ಪೋರೇಷನ್ ಒಂದು ರೂಪದಲ್ಲಿ ಡಿಜಿಟಲ್ ತರಗತಿ ನಡೆಸಲು ಆರಂಭಿಸಿದ್ದರೂ ಪರಿಣಾಮ ಏನಾಗುತ್ತದೆ ಎಂದು ಕಾದುನೋಡಬೇಕಿದೆ. ಯಾವ ಮಕ್ಕಳು ಇ.ಡಬ್ಲ್ಯೂ.ಎಸ್. ಕೋಟಾದಡಿ 'ಸರ್ಕಾರಿ ಶಾಲೆ'ಗಳಿಗೆ ದಾಖಲಾಗಿದ್ದಾರೋ ಅವರು, ಡಿಜಿಟಲ್ ತರಗತಿಗೆ ಹಾಜರಾಗಿರುವ, ಉಳ್ಳವರ ಮಕ್ಕಳಿಗಿಂತ ಕಲಿಕೆಯಲ್ಲಿ ತಮ್ಮ ಸಹಪಾಠಿಗಳಿಗಿಂತ ಸಾಕಷ್ಟು ಹಿಂದೆ ಇದ್ದಾರೆ.

ಇದೆಲ್ಲದರ ಪರಿಣಾಮ, ಮಕ್ಕಳು ಶಾಲೆಗೆ ಹೋಗುತ್ತಾರೋ ಇಲ್ಲವೋ ಎಂಬುದರ ಮೇಲೆ ನಿಂತಿಲ್ಲ, ಬದಲಾಗಿ ಅವರ ಕಲಿಕೆಗೆ ಸಂಬಂಧಿಸಿದ ಈ ಎಲ್ಲಾ ಅಂಶಗಳನ್ನು ಅವಲಂಬಿಸಿದೆ ಎಂಬುದನ್ನು ನೋಡಬೇಕಾಗಿದೆ.



**ಜ್ಯೋತ್ಸ್ನಾ ಲಾಲ್,** ನಿಜಾಮುದ್ದೀನ್ ನಗರ ನವೀಕರಣ ಉಪಕ್ರಮದ ಅಗಾ ಖಾನ್ ಸಾಂಸ್ಕೃತಿಕ ಟ್ರಸ್ಟ್‌ನಲ್ಲಿ ಯೋಜನಾ ನಿರ್ದೇಶಕಿ. ಅವರು ನಿಜಾಮುದ್ದೀನ್ ಬಸ್ತಿಯಲ್ಲಿ ಸಾಮಾಜಿಕ ಅಭಿವೃದ್ಧಿ ಉಪಕ್ರಮಗಳ ನೇತೃತ್ವ ವಹಿಸುತ್ತಾರೆ. ಇವರನ್ನು jyotsna.lall@akdn.org ನಲ್ಲಿ ಸಂಪರ್ಕಿಸಬಹುದು.



**ಹೈದರ್ ಮೆಹ್ದಿ ರಿಜ್ವಿ** ಅವರು ಅಗಾ ಖಾನ್ ಅಭಿವೃದ್ಧಿ ಜಾಲದ ನಿಜಾಮುದ್ದೀನ್ ನಗರ ನವೀಕರಣ ಉಪಕ್ರಮದಲ್ಲಿ ಯೋಜನಾಧಿಕಾರಿ (ಶಿಕ್ಷಣ). ಇವರನ್ನು: hydermehdi.rizvi@akdn.org ನಲ್ಲಿ ಸಂಪರ್ಕಿಸಬಹುದು.

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಲತಾ ಕೆ. ಸಿ**

# ವ್ಯಸನದ ಸುತ್ತ ಒಂದು ಚರ್ಚೆ | ಶಾಲೆಯಿಂದ ಮಾರುಕಟ್ಟೆವರೆಗೆ

ಕಿಲೇಂದ್ರ ಕುಮಾರ್

ಅವು ಅಜೀಂ ಪ್ರೇಮ್‌ಜಿ ಶಾಲೆಯಲ್ಲಿನ ಆರಂಭಿಕ ದಿನಗಳು. ಒಂದು ದಿನ, ಸಂಗೀತ ತರಗತಿಯ ಸಮಯದಲ್ಲಿ ನನ್ನನ್ನು ಗಾಢವಾಗಿ ತಟ್ಟಿದ ಒಂದು ಘಟನೆ ನಡೆಯಿತು. ಇದು ನಡೆದದ್ದು ಒಂದನೇ ತರಗತಿಯಲ್ಲಿ. ತಮ್ಮ ಪರಿಸರದಲ್ಲಿ ನಡೆಯುವ ಘಟನೆಗಳ ಕುರಿತು ಮಕ್ಕಳು ಎಷ್ಟು ಚೆನ್ನಾಗಿ ತಿಳಿದಿರುತ್ತಾರೆ ಮತ್ತು ತಮ್ಮ ಸುತ್ತಮುತ್ತಲಿನ ಜೊತೆಗೆ ಅವರು ಹೇಗೆ ತೊಡಗಿಕೊಂಡಿರುತ್ತಾರೆ ಎಂಬುದನ್ನೂ ಒಳಗೊಂಡಂತೆ ನಾನು ಈ ತರಗತಿಯಲ್ಲಿ ಬಹಳಷ್ಟನ್ನು ಕಲಿತೆ. ಅವರು ತಮ್ಮ ಸುತ್ತಮುತ್ತಲಿನ ಆಗು ಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾರೆ, ತಮ್ಮ ಸುತ್ತ ಏನು ಸಂಭವಿಸುತ್ತದೆ ಎಂಬುದನ್ನು ಕಣ್ಣುಬಿಟ್ಟು ನೋಡುತ್ತಾರೆ ಮತ್ತು ಕಿವಿಗೊಟ್ಟು ಕೇಳಿಸಿಕೊಳ್ಳುತ್ತಾರೆ; ಅವುಗಳ ಜೊತೆ ತರ್ಕಿಸುತ್ತಾರೆ ಮತ್ತು ತಮ್ಮ ಅರ್ಥವನ್ನು ಕಟ್ಟಿಕೊಳ್ಳುತ್ತಾರೆ. ಅಂತಹ, ಒಂದು ಕಥಾನಕವನ್ನು ಹಂಚಿಕೊಳ್ಳಲು ಯೋಗ್ಯವೆಂದು ಭಾವಿಸಿ ನಾನು ಇಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ. ಮಕ್ಕಳ ಜೊತೆಗಿನ ಚರ್ಚೆಯು ಅವರ ಸ್ಥಳೀಯ ಭಾಷೆಯಲ್ಲಿ ನಡೆಯಿತು. ಆದರೆ, ನಾನು ಅದನ್ನು ಇಲ್ಲಿ ಸರಳತೆಯ ಸಲುವಾಗಿ ಮತ್ತು ಹೆಚ್ಚು ಜನರನ್ನು ತಲುಪುವ ಸಲುವಾಗಿ ಹಿಂದಿಯಲ್ಲಿ ಬರೆಯುತ್ತಿದ್ದೇನೆ. (ಲೇಖನವು ಹಿಂದಿಯಿಂದ ಇಂಗ್ಲೀಷ್‌ಗೆ ನಂತರ ಕನ್ನಡಕ್ಕೆ ಅನುವಾದಗೊಂಡಿದೆ.)

ಎರಡನೇ ಅವಧಿಯಲ್ಲಿ, ನಾನು ನನ್ನ ಸಂಗೀತ ತರಗತಿಗೆ ಹೋದಾಗ, 'ಬಡೆ ಸವೇರೆ ಉಟ್ ಮುರ್ಗೆ ನೆ' ಎಂಬ ಹಾಡಿನೊಂದಿಗೆ ತರಗತಿಯನ್ನು ಆರಂಭಿಸಿದೆ. ಹಾಡನ್ನು ಎಲ್ಲ ಮಕ್ಕಳು ಏಕಕಾಲಕ್ಕೆ ಹಾಡುತ್ತಿದ್ದರು. ಹಾಡುವಿಕೆ ಸರಾಗವಾಗಿ ಮುಂದುವರೆಯುತ್ತಿದ್ದಾಗ ಒಂದು ಮಗು ಹುಂಜದ ಕೂಗನ್ನು ಅನುಕರಣೆ ಮಾಡಿತು. ಪ್ರತಿಯೊಬ್ಬರು ಅನುಕರಣೆಯನ್ನು ಕೇಳಿ ನಗುವುದಕ್ಕೆ ಪ್ರಾರಂಭಿಸಿದರು.

ಆಗ ಒಂದು ಮಗುವು ಇದ್ದಕ್ಕಿದ್ದಂತೆಯೇ ಗಟ್ಟಿಯಾಗಿ ಹೇಳಿತು,
'ಟೀಚರ್, ನೋಡಿ, ಅವನಿಗೆ ಒಂದು ಹಲ್ಲು ಇಲ್ಲ!'
ಎರಡನೇ ಮಗು ಹೇಳಿತು, 'ಅವನು ತನ್ನ ಹಲ್ಲನ್ನು ಉಜ್ಜುವುದಿಲ್ಲ.'
ಮೂರನೆಯ ಮಗು ಹೇಳಿತು, 'ಅವನ ಹಲ್ಲುಗಳೆಲ್ಲಾ ಹುಳುಕಾಗಿವೆ.'
ಮತ್ತೊಂದು ಮಗು, 'ಅವನು ಪೌಚ್‌ಅನ್ನು ತಿನ್ನುತ್ತಾನೆ.'
'ಪೌಚ್' ಎಂಬ ಶಬ್ದವನ್ನು ಕೇಳಿದ ತಕ್ಷಣ, ಆ ಮಗುವಿಗೆ ತುಂಬಾ ಕೋಪ ಬಂದಿತು. ಮತ್ತು ಅದು ಹೇಳಿತು, 'ಟೀಚರ್, ಅವರು ಸುಖಾಸುಮ್ಮನೆ ನನ್ನ ಮೇಲೆ ಆಪಾದನೆ ಮಾಡುತ್ತಾರೆ. ಅಂತಹ ವಸ್ತುಗಳನ್ನೆಲ್ಲ ನಾನು ತಿನ್ನುವುದಿಲ್ಲ!'
ನಾನು ಅವರನ್ನು ಕೇಳಿದೆ, 'ಈ 'ಪೌಚ್' ಅಂದರೆ ಏನು?'
ಮಕ್ಕಳು ಪ್ರತಿಕ್ರಿಯಿಸಿದರು, 'ಓಹೋ! ಪೌಚ್ ಅಂದರೆ ಏನು ಅಂತಲೂ ಗೊತ್ತಿಲ್ಲವೇ ನಿಮಗೆ?'
'ಇಲ್ಲ' ಅಂದೆ ನಾನು.
ಮಕ್ಕಳು ವಿವರಿಸಿದರು, 'ಅದೊಂದು ತಿನ್ನುವ ವಸ್ತು'
'ಅದು ತಿನ್ನುವ ಪದಾರ್ಥವಾದರೆ, ಅವನು ಅದನ್ನು ತಿಂದರೆ ಏನು ಸಮಸ್ಯೆ?'
ಮಕ್ಕಳು ಉತ್ತರಿಸಿದರು, 'ಟೀಚರ್, ನಿಮಗೆ ಗೊತ್ತಿಲ್ಲ. ಅವನು ಅದಕ್ಕೆ ಅಂಟಿಕೊಂಡಿದ್ದಾನೆ.'
'ಅವನು ಅದಕ್ಕೆ ಅಂಟಿಕೊಂಡರೆ ಏನಂತೆ?'
ಈ ಹೇಳಿಕೆಗೆ ಮಕ್ಕಳು ಅಮಲೇರಿದಾಗ ಜನರು ಏನೇನು ಮಾಡುತ್ತಾರೆ ಎಂಬ ಹಲವು ಉದಾಹರಣೆಗಳನ್ನು ಕೊಟ್ಟರು.
'ಅವರು ಅತ್ತಿಂದತ್ತ ತೂರಾಡುತ್ತಾರೆ', 'ಅವರು ವಿದ್ಯುತ್ ಕಂಬಗಳಿಗೆ ಢಿಕ್ಕಿ ಹೊಡೆಯುತ್ತಾರೆ', 'ಅವರು ಮನೆಯಲ್ಲಿ ಜಗಳ ಶುರುಮಾಡುತ್ತಾರೆ', 'ಅವರು ರಸ್ತೆಗಳ ಮೇಲೆ ಬೀಳುತ್ತಾರೆ', ಮತ್ತು 'ಅವರು ಕೆಟ್ಟ ಪದಗಳನ್ನು ಆಡುತ್ತಾರೆ'.
ನಾನವರನ್ನು ಕೇಳಿದೆ, 'ಓಹ್! ಹಾಗಾದರೆ, ಅದು ಒಳ್ಳೆಯ ಸಂಗತಿಯೇ?'
ಮಕ್ಕಳು ಒಮ್ಮತದಿಂದ ಹೇಳಿದರು, 'ಅಲ್ಲ.'
ನಾನು ಸಮ್ಮತಿಸುತ್ತಾ ಹೇಳಿದೆ 'ಹೌದು. ನನಗೂ ಇದು ಒಳ್ಳೆಯ ಸಂಗತಿ ಅಂತ ಅನ್ನಿಸುವುದಿಲ್ಲ. ಈ 'ಪೌಚ್' ಎಲ್ಲಿ ಸಿಕ್ಕಿತು?'
'ಅಂಗಡಿಯಲ್ಲಿ', ಎಂದು ಅವರು ಉತ್ತರಿಸಿದರು.
'ಇದು ಒಂದು ಕೆಟ್ಟ ವಸ್ತು ಆಗಿದ್ದರೆ, ಅವರು ಯಾಕೆ ಅದನ್ನು ಮಾರುತ್ತಾರೆ?'
ಮಕ್ಕಳು ಹೇಳಿದರು, 'ಟೀಚರ್, ದುಡ್ಡು ಸಂಪಾದಿಸುವುದಕ್ಕೆ, ಮತ್ತೇನಕ್ಕೆ?'
'ಹಾಗಾದರೆ, ದುಡ್ಡು ಸಂಪಾದಿಸುವುದಕ್ಕೆ 'ಪೌಚ್'ನ್ನು ಮಾರುವ ಮಾರ್ಗ ಒಂದೇ ಇರುವುದೇ?'
ಮತ್ತೆ ಅವರು ಒಕ್ಕೊರಳಿನಿಂದ ಹೇಳಿದರು, 'ಅಲ್ಲ.'
'ಹಾಗಾದರೆ?'

ಮಕ್ಕಳು ಉತ್ತರಿಸಿದರು, 'ಆಲೂಗಡ್ಡೆ ಮಾರುವುದರಿಂದ, ಈರುಳ್ಳಿ ಮಾರುವುದರಿಂದ, ಚಾಕೋಲೇಟ್ ಮಾರುವುದರಿಂದ, ಬಿಸ್ಕತ್ತು ಮಾರುವುದರಿಂದ, ನಾವು ಬೆಳೆದ ಫಸಲುಗಳನ್ನು ಮಾರುವುದರಿಂದ, ಕಾಮಿಕ್ಸ್ ಪುಸ್ತಕಗಳನ್ನು ಮಾರುವುದರಿಂದ, ಚಿಪ್ಸ್ ಮಾರುವುದ-ರಿಂದಲೂ ಹಣ ಸಂಪಾದಿಸಬಹುದು.'

'ಹಾಗಾದರೆ, ಈ 'ಪೌಚ್' ಮಾರಾಟ ನಿಲ್ಲಬೇಕು'
'ಹೌದು, ಅದು ನಿಜ', ಎಂದರು ಮಕ್ಕಳು.
ನಾನು ಅವರನ್ನು ಕೇಳಿದೆ, 'ಹಾಗಾದರೆ, ಅದು ಹೇಗೆ ಸಾಧ್ಯ?'
ಅವರು ಉತ್ತರಿಸಿದರು, 'ನಾವು ನಾಳೆ ಅಂಗಡಿಗೆ ಹೋಗುವ. ಅವರಿಗೆ ಪೌಚ್ ಮಾರಬಾರದೆಂದು ಹೇಳೋಣ.'
ಚರ್ಚೆ ಮುಂದುವರೆಯುತ್ತಿತ್ತು, ಆದರೆ ಮುಂದಿನ ತರಗತಿಗೆ ಸಮಯವಾಗಿದ್ದರಿಂದ ನಾನು ಹೊರಟೆ.

ಚರ್ಚೆಯ ಆರಂಭದಲ್ಲಿ, ಗುಟ್ಕಾದ ಬಗ್ಗೆ ನನಗೇನೂ ಗೊತ್ತಿಲ್ಲವೆಂಬಂತೆ ನಾನು ನಡೆದುಕೊಂಡೆ. ತರಗತಿ ಚರ್ಚೆಯ ಮುಂದುವರಿದ ಭಾಗವಾಗಿ, ಸ್ವಲ್ಪ ಸಮಯದ ನಂತರ, ಮಕ್ಕಳು ತಾವು ಬೋರ್ಡ್ ಮೇಲೆ ಬಿಡಿಸಿದ ಚಿತ್ರವನ್ನು – ತೋರಿಸಲು– ನನ್ನನ್ನು ಬರಹೇಳಿದರು. 'ಟೀಚರ್, ನೋಡಿ. ಹೀಗೆ ಅವರು ಯಾವಾಗಲು 'ಪೌಚ್'ಗಳನ್ನು ತಮ್ಮ ಅಂಗಡಿಗಳಲ್ಲಿ ತೂಗುಹಾಕುತ್ತಾರೆ' ಎಂದರು.

ಮುಂದಿನ ಸಲ ನಾನು ಅವರ ತರಗತಿಗೆ ಹೋದಾಗ, ಅವರು ತಮ್ಮ ಅನುಭವಗಳನ್ನು ನನ್ನೊಂದಿಗೆ ಹಂಚಿಕೊಂಡರು. ಅವರ ಅನುಭವಗಳು ಬಗೆ ಬಗೆಯಾಗಿದ್ದವು. 'ನಮ್ಮ ಕಾಲನಿ/ಬೀದಿಯ ಅಂಗಡಿಗಳಿಗೆ ನಾವು ಹೋದೆವು. ಅಂಗಡಿಯ ಮಾಲೀಕ ಮತ್ತು ಅಲ್ಲಿ ಕುಳಿತಿದ್ದ ಜನರು ನಮ್ಮನ್ನು ದೂರ ಓಡಿಸಿದರು. ಜೊತೆಗೆ ಅವರು ನಮ್ಮನ್ನು ಗೇಲಿ ಮಾಡಿ ನಕ್ಕರು' ಎಂದು ತಮ್ಮ ಅನುಭವವನ್ನು ಮಕ್ಕಳು ಹಂಚಿಕೊಂಡರು. ಮತ್ತೊಂದಷ್ಟು ಮಕ್ಕಳು, 'ತಾನು ಮಾರುವುದನ್ನು ನಿಲ್ಲಿಸುವುದಿಲ್ಲವೆಂದು ಗಾಡಿಯಲ್ಲಿ ಮಾರುವಾತ ನಮಗೆ ಹೇಳಿದ' ಎಂದರು. ಹುಡುಗಿಯೊಬ್ಬಳು ಹೇಳಿದಳು, 'ನನ್ನ ಅಪ್ಪ ಮಾರುವುದನ್ನು ನಿಲ್ಲಿಸುತ್ತೇನೆ ಅಂದರು. ಆದರೆ ಇನ್ನೂ ಅದನ್ನು ಮಾರುತ್ತಲೇ ಇದ್ದಾರೆ.'

ಈ ಹಿಂದೆ ನಾನು ಹಲವಾರು ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿದ್ದೇನೆ. ಆದಾಗ್ಯೂ, ಇಂತಹ ಕುತೂಹಲಕರ ಅನುಭವ ನನಗೆ ಆದದ್ದು ಇದೇ ಮೊದಲು. ಮತ್ತು ಎಳೆಯ ಮಕ್ಕಳಿಗೆ ಅಷ್ಟರ ಮಟ್ಟಿನ ಅರಿವು ಇರುತ್ತದೆ ಎಂಬ ವಿಚಾರವು ನನಗೆ ಹೊಸತೇ ಆಗಿತ್ತು. ಸಾಮಾನ್ಯವಾಗಿ ಶಾಲೆಗಳಲ್ಲಿ, ಬೇರೆ ಬೇರೆ ಶಿಕ್ಷಕರಿಗೆ ನಿರ್ದಿಷ್ಟ ಅವಧಿಗಳು ನಿಗದಿಯಾಗಿರುತ್ತವೆ. ಆ ಅವಧಿಯಲ್ಲಿ ಅವರು ಒಂದು ನಿರ್ದಿಷ್ಟ ವಿಷಯವನ್ನು ಬೋಧಿಸಬೇಕಾಗಿರುತ್ತದೆ ಮತ್ತು ಅವರ ತರಗತಿಯು ಆ ವಿಷಯದ ಸುತ್ತವೇ ನಡೆಯುತ್ತದೆ. ಆದಾಗ್ಯೂ, ಮಕ್ಕಳನ್ನು ಮತ್ತು ಅವರ ಸುತ್ತ ಸಂಭವಿಸುವ ಘಟನೆಗಳನ್ನು ಅರ್ಥಮಾಡಿಕೊಳ್ಳಲು ಒಂದು ಸಂವಾದವು ಬಹಳ ಉಪಯುಕ್ತವಾದ ವಿಧಾನ ಎಂದು ನಾನು ಯೋಚಿಸಿದೆ. ಮತ್ತು ಇದನ್ನು ಸಾಧ್ಯಗೊಳಿಸುವುದಕ್ಕೆ ಒಂದು ಅವಕಾಶದ ಅಗತ್ಯವಿದೆ. ಈ ಕಾರಣಕ್ಕಾಗಿ, ಮಕ್ಕಳೊಂದಿಗಿನ ಈ ಚರ್ಚೆಯನ್ನು ಮುಂದುವರಿಸುವ ಇರಾದೆಯಿಂದ ಸಂಗೀತ ತರಗತಿಗೆ ನಾನು ಯೋಜಿಸಿದ್ದ ಚಟುವಟಿಕೆಯನ್ನು ಬದಿಗಿರಿಸಿದೆ.

ತಮ್ಮ ಸುತ್ತಲಿನ ಪರಿಸರದಲ್ಲಿ ಮತ್ತು ಅದರ ಹೊರಗಿನ ವಿಶಾಲ ಸಮಾಜದಲ್ಲಿಯೂ ಕೂಡ ಮಕ್ಕಳ ಅಭಿವ್ಯಕ್ತಿಗಳನ್ನು ವಯಸ್ಕರು ಮತ್ತು ದೊಡ್ಡವರು ಹೇಗೆ ಹತ್ತಿಕ್ಕುತ್ತಾರೆ ಅಥವಾ ಉಪೇಕ್ಷಿಸುತ್ತಾರೆ ಎಂಬುದನ್ನು ಈ ಸಂವಾದದ ಮೂಲಕ ನಾನು ಅರಿತುಕೊಂಡೆ. ಅವರ ಆಲೋಚನೆಗಳಿಗೆ ಸಿಗಬೇಕಾದ ಗಮನ ಸಿಗುವುದಿಲ್ಲ ಅಥವಾ ಚಿಕ್ಕವರೆಂದು ತಿರಸ್ಕರಿಸಲ್ಪಡುತ್ತವೆ. ಈ ಮಕ್ಕಳಿಗೆ ಹಿರಿಯರಿಗೆ ಮನವರಿಕೆ ಮಾಡುವ ಅಥವಾ ಅವರೊಂದಿಗೆ ಸಂವಾದಿಸುವ ದೈಹಿಕ ಅಥವಾ ಮಾನಸಿಕ ಸಾಮರ್ಥ್ಯ ಇರುವುದಿಲ್ಲ ಎಂಬುದು ವಾಸ್ತವ ಸಂಗತಿಯಾದರೂ, ಸರಿ ಮತ್ತು ತಪ್ಪುಗಳ ನಡುವೆ ಇರುವ ವ್ಯತ್ಯಾಸವನ್ನು ತೋರಿಸುವ ಅವರ ಸಾಮರ್ಥ್ಯ ಮತ್ತು ಅವರ ವಿರೋಧವನ್ನು ದೊಡ್ಡವರ ಮುಂದೆ ವ್ಯಕ್ತಪಡಿಸಬಲ್ಲರು ಎಂಬುದು ಸ್ಮರಣೀಯ ಸಾಧನೆಯೇ ಸರಿ. ಒಂದುವೇಳೆ ಅವರ ದೃಢ ನಿರ್ಧಾರ ನಿರಂತರ ಮುಂದುವರೆದದ್ದೇ ಆದರೆ, ಖಂಡಿತವಾಗಿಯೂ ಅವರು ಒಂದು ಉತ್ತಮ ಸಮಾಜವನ್ನು ನಿರ್ಮಿಸುವಲ್ಲಿ ಬಹಳ ಅಮೂಲ್ಯವಾದ ಪಾತ್ರವನ್ನು ನಿರ್ವಹಿಸುತ್ತಾರೆ.


ಅಂಗಡಿಗಳಲ್ಲಿ ಮಾರುವ ಪೌಚ್‌ಗಳ ಬಗ್ಗೆ ಮಕ್ಕಳು ಬಿಡಿಸಿದ ಚಿತ್ರ



**ಕಿಲೇಂದ್ರ ಕುಮಾರ್ ಸಾಹು** ಅವರು ಶಾಸ್ತ್ರೀಯ ಸಂಗೀತದಲ್ಲಿ ಎಂಎ ಮತ್ತು ವಿಶಾರದ ಪದವಿಯನ್ನು ಪಡೆದಿದ್ದಾರೆ. ಕಳೆದ ಏಳು ವರ್ಷಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ಸಂಗೀತದ ಜೊತೆಗೆ ಅವರು ಸಂಬಂಧ ಇಟ್ಟುಕೊಂಡೇ ಇದ್ದಾರೆ. ಆಕಾಶವಾಣಿ ಮತ್ತು ದೂರದರ್ಶನದಂತಹ ರಾಷ್ಟ್ರೀಯ ವಾಹಿನಿಗಳ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸ್ಥಳೀಯ ಜನಪದ ಗೀತೆಗಳನ್ನು ಪ್ರಸ್ತುತಿಪಡಿಸುತ್ತಿರುವುದು ಇವರ ವಿಶೇಷ ಸಾಧನೆ. ಅವರು ಎಳೆಯ ಮಕ್ಕಳಿಗೆ ಸಂಗೀತದ ಮೂಲಕ ಭಾಷಿಕ ಕೌಶಲಗಳನ್ನು ಕಲಿಸುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಹಾಡುಗಳನ್ನು ಹಾಡುವ, ಸಂಗೀತೋಪಕರಣಗಳನ್ನು ನುಡಿಸುವ ಮತ್ತು ಪರಸ್ಪರ ಸಂವಾದಿಸುವ ದಾರಿಗಳನ್ನು ಬಳಸಿಕೊಳ್ಳುತ್ತಾರೆ. 2017ರಿಂದ ಧಮ್‌ತರಿಯ ಶಂಕರದಹ್‌ನಲ್ಲಿರುವ (ಛತ್ತೀಸ್‌ಗಢ) ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಸಂಗೀತ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಇವರನ್ನು khilendra.sahu@azimpremjifoundation.org ನಲ್ಲಿ ಸಂಪರ್ಕಿಸಬಹುದು.

ಅನುವಾದ: **ದೇವಿಕ ಧರ್ಮಿಷ್ಟೆ** । ಪರಿಶೀಲನೆ: **ಲತಾ ಕೆ.ಸಿ**

# ಭಾರತೀಯ ಶಿಕ್ಷಣ ವ್ಯವಸ್ಥೆಯಲ್ಲಿ ಸಂತೋಷದ ಕಿರಣ?

**ಕೃತಿ ಗುಪ್ತ**

ಆರಂಭ ಕಾಲದಿಂದಲೂ ಶಿಕ್ಷಣದ ಅರ್ಥವು ಕಾಲಕಾಲಕ್ಕೆ ಬದಲಾಗುತ್ತ ಬಂದಿದೆ. ಪ್ರಾಚೀನ ಕಾಲದಲ್ಲಿ ಶಿಕ್ಷಣವನ್ನು ವ್ಯಕ್ತಿಯ 'ಧರ್ಮ' ಎಂದು ವ್ಯಾಖ್ಯಾನಿಸಲಾಗುತ್ತಿದ್ದುದು ಇಂದು ಅದನ್ನು 'ವೈಜ್ಞಾನಿಕ ಆಲೋಚನೆ' ಎಂದು ಅರ್ಥೈಸಲಾಗುತ್ತಿದೆ. ಭಾರತೀಯ ಸಂವಿಧಾನದ ಪೀಠಿಕೆಯಲ್ಲಿ ಬಿಂಬಿಸಿರುವಂತೆ ಓರ್ವ ಸುಶಿಕ್ಷಿತ ಭಾರತೀಯನ ಕುರಿತ ವ್ಯಾಖ್ಯಾನ ಹೀಗಿದೆ: ವೈಜ್ಞಾನಿಕ ಮನೋಧರ್ಮ ಮತ್ತು ಉದಾರ ದೃಷ್ಟಿಕೋನ ಹೊಂದಿರುವ ವ್ಯಕ್ತಿ, ವೈಯಕ್ತಿಕ ಆಲೋಚನಾ ಸಾಮರ್ಥ್ಯ ಹೊಂದಿರುವವನು. ಶಾಂತವಾಗಿ ಮತ್ತು ಸಂತೋಷವಾಗಿ ಇರುತ್ತಾ ತನ್ನ ಅವಲೋಕನಗಳ, ಪ್ರಯೋಗಗಳ ಮತ್ತು ಚಿಂತನೆಗಳ ಅಡಿಪಾಯದ ಮೇಲೆ ಹೊಸ ಜ್ಞಾನದ ಯುಗವನ್ನು ಪ್ರಾರಂಭಿಸುವವನು. (ಆಯವ್ ಒರಗದ್, 2010, ಹೈನೋಟ್ಸ್, 2016). 1947ರಲ್ಲಿ ದೇಶ ಕಂಡ ಈ ಕನಸು, ಸ್ವಾತಂತ್ರ್ಯ ಪಡೆದ 73 ವರ್ಷಗಳ ನಂತರವಾದರೂ ನೆರವೇರಿದೆಯೇ?

**ಶಿಕ್ಷಣದ ಗುರಿಗಳು:**

ಶಿಕ್ಷಣದ ಮೇಲೆ ಸರಕಾರ ಹೂಡಿದ ಯಾವುದೇ ಹೂಡಿಕೆಯು ಭವಿಷ್ಯದ ಲಾಭದ ದೃಷ್ಟಿಯಿಂದ ಕೂಡಿರುತ್ತದೆ. ವಿಜ್ಞಾನ, ಗಣಿತ ಮತ್ತು ಕಲೆಯ ಕ್ಷೇತ್ರಗಳಲ್ಲಿ ಹೊಸ ಜ್ಞಾನ ಮತ್ತು ಸಂಶೋಧನೆಗಳ ಹೆಬ್ಬಾಗಿಲುಗಳನ್ನು ತೆರೆಯಲು ನಮಗೆ ಸಾಧ್ಯವಾಗಿದೆ. ಆದರೆ ಪ್ರತಿ ವರ್ಷ ಬಹು ಸಂಖ್ಯೆಯ ಯುವಜನರನ್ನು ಶಿಕ್ಷಿತರನ್ನಾಗಿ ಮಾಡಿದ ಮೇಲೂ, ಹಿಂಸೆ, ನೋವು, ದುರಾಸೆ, ದ್ವೇಷ ಇಲ್ಲದ ಬದುಕಿನ ಭರವಸೆಯನ್ನು ಅವರಿಗೆ ಕೊಡಲಾಗುತ್ತಿಲ್ಲ ಎಂಬ ವಾಸ್ತವಕ್ಕೆ ನಾವು ನಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳಲು ಸಾಧ್ಯವಿಲ್ಲ. ಸಾಮಾಜಿಕ ಪಿಡುಗುಗಳಿಂದಾಗಿ ಅತಿವೇಗವಾಗಿ ಕೆಡುಕಿನ ಸನ್ನಿವೇಶಗಳು ಏರುತ್ತಿರುವುದು ಜಾಗತಿಕವಾಗಿ ಇಂದು ಮಾನವ ಕುಲವು ಎದುರಿಸುತ್ತಿರುವ ಬಹುದೊಡ್ಡ ಬೆದರಿಕೆಯಾಗಿದೆ. (ಶಿಕ್ಷಣ ನಿರ್ದೇಶನಾಲಯ, ರಾಷ್ಟ್ರ ರಾಜಧಾನಿ ಪ್ರದೇಶದ ಸರಕಾರ, ದೆಹಲಿ).

2018ರ ವಿಶ್ವ ಸಂತೋಷ ವರದಿಯಲ್ಲಿ ಭಾರತವು ಮತ್ತೆ 133ನೇ ಸ್ಥಾನದಲ್ಲಿದ್ದು, ಪ್ರಪಂಚದಲ್ಲಿ ಅತಿಹೆಚ್ಚು ಆತ್ಮಹತ್ಯೆ ಮಾಡಿ-ಕೊಳ್ಳುತ್ತಿರುವ ವಿದ್ಯಾರ್ಥಿಗಳ ಪ್ರಮಾಣದಲ್ಲೂ ಮುಂಚೂಣಿಯಲ್ಲಿದೆ. (ಇಟಿ ಕಾಂಟ್ರಿಬ್ಯೂಟರ್ಸ್, 2018). ಈ ಅಂಕಿ-ಅಂಶಗಳು ಭಾರತೀಯ ಶಾಲೆಗಳಲ್ಲಿ ವಿದ್ಯಾರ್ಥಿಗಳ ಯೋಗಕ್ಷೇಮದ ವಿಷಯದಲ್ಲಿ ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಪ್ರಶ್ನಿಸುವಂತೆ ಇವೆ.

ಇದನ್ನು ಒಂದು ಬಿಕ್ಕಟ್ಟು ಎಂದು ಪರಿಗಣಿಸಿ, ದೆಹಲಿ ಸರಕಾರವು ಪಠ್ಯಕ್ರಮವೊಂದನ್ನು ಯೋಚಿಸಿತು. ಈ ಪಠ್ಯಕ್ರಮವು ಬೌದ್ಧಿಕ ಬೆಳವಣಿಗೆ, ಭಾಷೆ, ಸಾಕ್ಷರತೆ ಮುಂತಾದವುಗಳನ್ನು ಪ್ರೋತ್ಸಾಹಿಸುವುದರ ಜೊತೆಗೆ ವಿದ್ಯಾರ್ಥಿಗಳ ಯೋಗಕ್ಷೇಮ ಮತ್ತು ಅವರ ಸಂತೋಷವನ್ನೂ ಪರಿಗಣಿಸಿತು (ಎಸ್‌ಸಿಇಆರ್‌ಟಿ, ಡೆಲ್ಲಿ, 2019). ಈ ಕನಸನ್ನು ಸಾಕಾರಗೊಳಿಸಲು, ಜುಲೈ 2018ರಲ್ಲಿ ದೆಹಲಿ ಸರಕಾರದ ನೇತೃತ್ವ ವಹಿಸಿದ ಆಮ್ ಆದ್ಮಿ ಪಕ್ಷವು ಸಂತೋಷದ ಪಠ್ಯಕ್ರಮವನ್ನು ನರ್ಸರಿಯಿಂದ 8ನೇ ತರಗತಿವರೆಗೆ ರಾಷ್ಟ್ರೀಯ ಎನ್‌ಸಿಟಿ (ರಾಷ್ಟ್ರ ರಾಜಧಾನಿ ಗಡಿಪ್ರದೇಶ)ಯ ಒಳಗಿನ ಎಲ್ಲಾ ಸರಕಾರಿ ಶಾಲೆಗಳಲ್ಲಿ ಜಾರಿಗೆ ತಂದಿತು.



ನನ್ನ ಚಳಿಗಾಲದ ಕ್ಷೇತ್ರ ಯೋಜನೆಯಾಗಿ ಸಂತೋಷ ಪಠ್ಯಕ್ರಮದ ಮೇಲೆ ನಾನೊಂದು ಸ್ವತಂತ್ರ ಅಧ್ಯಯನ ನಡೆಸಿದೆ. ಏಳು ವಾರಗಳಿಗಿಂತಲೂ ಹೆಚ್ಚಿನ ಸಮಯವನ್ನು ಕ್ಷೇತ್ರಕಾರ್ಯದಲ್ಲಿ ತೊಡಗಿಸಿಕೊಂಡೆ. ದೆಹಲಿಯ ಎಂಟು ಸರಕಾರಿ ಶಾಲೆಗಳಲ್ಲಿ, ಸಂದರ್ಶನ ಮಾಡಲು ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಜೊತೆ ನಂಟು ಬೆಳೆಸಿಕೊಳ್ಳುವುದರಿಂದ ಆರಂಭಗೊಂಡು, ತರಗತಿಗಳನ್ನು ಗಮನಿಸುವುದು, ಶಿಕ್ಷಕರು ಮತ್ತು ಇತರೆ ಶೈಕ್ಷಣಿಕ ಅಧಿಕಾರಿಗಳ ಜೊತೆ ವಿಷಯ ನಿರ್ದಿಷ್ಟ ಗುಂಪು ಚರ್ಚೆಗಳನ್ನು ನಡೆಸಿದೆ. ಪಠ್ಯಕ್ರಮದ ಶೈಕ್ಷಣಿಕ ಪ್ರಕ್ರಿಯೆಗಳನ್ನು ಮತ್ತು ಅವುಗಳ ತರಗತಿ ಅನ್ವಯಿಕತೆಗಳನ್ನು ಹೆಚ್ಚು ಸಮಗ್ರವಾಗಿ ಅರ್ಥಮಾಡಿಕೊಳ್ಳಲು ಇದು ನನಗೆ ನೆರವಾಯಿತು.

**ಸಂತೋಷದ ಪಠ್ಯಕ್ರಮ ಎಂದರೆ ಏನು?**




**ಆನಂದದ ತ್ರಿವಳಿಗಳು**

ಸಂತೋಷ ತ್ರಿವಳಿ (The Triad of Happiness) ಎಂದು ಕರೆಯಲಾಗುವ ಸಂತೋಷದ ಪಠ್ಯಕ್ರಮವು (Happiness Curriculum) ವೈಜ್ಞಾನಿಕವಾಗಿ ವಿನ್ಯಾಸಗೊಂಡ ಅಭ್ಯಾಸ–ಕ್ರಮವಾಗಿದೆ. ಪ್ರಬಲವಾದ ಮಾನವೀಯ ಮತ್ತು ಸಾಮಾಜಿಕ ಮಾದರಿಗಳನ್ನು ಆಧರಿಸಿದ ಈ ಪಠ್ಯಕ್ರಮವನ್ನು ತತ್ವಜ್ಞಾನಿ ಅಗ್ರಹಾರ ನಾಗರಾಜ್ (1999) ಅವರು ರೂಪಿಸಿದ್ದಾರೆ. (SCERT, Delhi, 2019). ಇದರ ಪ್ರಕಾರ, ಮನುಷ್ಯರು ಇಂದ್ರಿಯಗಳು, ಸಂಬಂಧಗಳು ಮತ್ತು ಕಲಿಕೆಯ ಮೂಲಕ ಸಂತೋಷವನ್ನು ಪಡೆದುಕೊಳ್ಳುತ್ತಾರೆ. ಇವುಗಳಲ್ಲಿ ಪ್ರತಿಯೊಂದೂ, ಭೌತಿಕ, ವರ್ತನಾತ್ಮಕ, ಬೌದ್ಧಿಕ, ಮತ್ತು ಅನುಭವಾತ್ಮಕ ಎಂಬ ಮನುಷ್ಯನ ಬದುಕಿನ ನಾಲ್ಕು ಆಯಾಮಗಳನ್ನು ಸಂಬೋಧಿಸುತ್ತವೆ:. ಎ. ನಾಗರಾಜ್ ಅವರ ಪ್ರಕಾರ, ಮನುಷ್ಯ ಜೀವಿಗಳು ಬದುಕಿನ ಈ ಎಲ್ಲಾ ಅಂಶಗಳಿಂದ ಅಗತ್ಯತೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ. ಅದರ ಫಲಿತಾಂಶವೇ ಶಾಂತಿ, ತೃಪ್ತಿ ಮತ್ತು ಸಂತೋಷಗಳ ಗಳಿಕೆ ಆಗಿರುತ್ತದೆ. ಇವೆಲ್ಲವೂ ಒಟ್ಟಿಗೆ ಮಾನವ ಆನಂದವನ್ನು ರೂಪಿಸುತ್ತವೆ.

ಈ ಮಾದರಿಯ ಆಧಾರದ ಮೇಲೆ ಅದರ ಎಲ್ಲಾ ಘಟಕಗಳು ಮತ್ತು ವಿನ್ಯಾಸಗಳು ಮಕ್ಕಳಿಗೆ ಕಲಿಕೆಯ ಸಂದರ್ಭದಲ್ಲಿ ಈ ಮೂರು ಬಗೆಯ ಆನಂದವನ್ನು ಪಡೆದುಕೊಳ್ಳುವುದಕ್ಕೆ ಸಾಧ್ಯವಾಗುವಂತೆ ದೆಹಲಿಯ ಶಿಕ್ಷಣ ಇಲಾಖೆಯು ತನ್ನ ಪಠ್ಯಕ್ರಮವನ್ನು ರೂಪಿಸಿಕೊಂಡಿದೆ. ಪಠ್ಯದ ಮುಂದಿನ ವಿಷಯ ಹಿಂದಿನದ್ದಕ್ಕೆ ತಳುಕು ಹಾಕಿಕೊಂಡಿದ್ದು, ಮಗು ಒಂದು ತರಗತಿಯಿಂದ ನಂತರದ ತರಗತಿಗೆ ಬೆಳವಣಿಗೆ ಹೊಂದುತ್ತಿದ್ದಂತೆ ಜ್ಞಾನವು ಗಾಢವಾಗುವುದು ಎಂಬರ್ಥದಲ್ಲಿ ಕಲಿಕಾ ಮಾದರಿಗಳನ್ನು ಸುರುಳಿ ಆಕೃತಿಯಲ್ಲಿ ರಚಿಸಲಾಗಿದೆ. ಶಿಕ್ಷಕರ ಮಾರ್ಗದರ್ಶನಕ್ಕಾಗಿ 'ಸಂತೋಷದ ತರಗತಿಗೆ ಶಿಕ್ಷಕರ ಕೈಪಿಡಿ'ಯನ್ನು (Teacher's Handbook for Happiness Class) ಒದಗಿಸಲಾಗಿದೆ.

ಪಠ್ಯಕ್ರಮದ ರಚನೆಕಾರರ ಪ್ರಕಾರ, ಶಿಕ್ಷಕರು, ತತ್ವಜ್ಞಾನಿಗಳು ಮತ್ತು ಇತರರ ಮಾರ್ಗದರ್ಶನದ ಜೊತೆಗೆ ರಚಿತವಾದ ಅದರ ವಸ್ತು ವಿಷಯಗಳು ಸಾರ್ವತ್ರಿಕವಾದುದು ಮತ್ತು ವಯೋಮಾನಕ್ಕೆ ತಕ್ಕುದಾಗಿ ವಿನ್ಯಾಸಗೊಂಡಿದೆ. ವಿದ್ಯಾರ್ಥಿಗಳ ಅರಿವಿನ ಪರಿಧಿ ಮತ್ತು ಸಾವಧಾನತೆಯನ್ನು ಹೆಚ್ಚಿಸುವುದು, ಕಲಿಕೆಯನ್ನು ಗಾಢವಾಗಿಸುವುದು, ಆ ಮೂಲಕ ಭವಿಷ್ಯದಲ್ಲಿ ತಾವೇನಾಗು–ತ್ತೇವೆಯೋ ಎಂಬುದರ ಆಚೆಗೂ ಹೆಚ್ಚು ಸಂತೋಷದ ಮತ್ತು ಅರ್ಥಪೂರ್ಣವಾದ ಬದುಕನ್ನು ನಡೆಸಲು ಸಾಧ್ಯವಾಗಿಸುವುದು ಈ ಪಠ್ಯಕ್ರಮದ ಉದ್ದೇಶಿತ ಫಲಿತವಾಗಿದೆ. ಈ ಪಠ್ಯಕ್ರಮದಿಂದ ಪ್ರತಿ ಮಗುವೂ ಜನಾಂಗೀಯತೆ, ಪ್ರಾದೇಶಿಕತೆ, ಧರ್ಮ, ಮತ್ತು ಜಾತಿಯ ಹೊರತಾಗಿಯೂ ಹೇಗೆ ಆನಂದವಾಗಿರುವುದು ಎಂಬುದನ್ನು ಕಲಿಯಬಹುದು ಎಂದು ಪಠ್ಯ ರಚನೆಕಾರರು ಭಾವಿಸುತ್ತಾರೆ, ಯಾಕೆಂದರೆ ಸಂತೋಷವಾಗಿರುವುದು ಒಂದು ಕೌಶಲವಾಗಿದ್ದು, ಅದನ್ನು ಸರಿಯಾದ ಮಾರ್ಗದರ್ಶನದಿಂದ ಅಭ್ಯಾಸ ಮಾಡ–ಬಹುದು ಮತ್ತು ಕಲಿಯಬಹುದು.

**ಪ್ರಮುಖ ಗುಣಲಕ್ಷಣಗಳು:**

- ಪ್ರತೀ ಸಂತೋಷದ ತರಗತಿಯು ಮೂರು ಘಟಕಗಳನ್ನು ಒಳಗೊಂಡಿದೆ– ಸಾವಧಾನತೆ (10 ನಿಮಿಷ), ಒಂದು ಚಟುವಟಿಕೆ ಅಥವಾ ಕತೆ (25 ನಿಮಿಷ) ಇದನ್ನನುಸರಿಸಿ ಚಟುವಟಿಕೆ ಆಧಾರಿತ ಚರ್ಚೆಗಳು. ಪ್ರತಿ ದಿನ ನಿರ್ದಿಷ್ಟ ವಿಷಯದ ಮೇಲೆ ಗಮನಕೊಡಲಾಗುತ್ತದೆ, ಉದಾಹರಣೆಗೆ, ಸೋಮವಾರ ಸಾವಧಾನವಾಗಿ ಕೇಳಿಸಿಕೊಳ್ಳುವುದಕ್ಕೆ ವಿಶೇಷ ಗಮನ ಹರಿಸಲಾಗುತ್ತದೆ; ಶನಿವಾರ ಅಭಿವ್ಯಕ್ತಿಗೆ ಗಮನ ವಹಿಸುವುದು ಇತ್ಯಾದಿ.

- ಪಠ್ಯಕ್ರಮ ಕಠಿಣವಾದ ಕಾಲ–ಮಿತಿಯನ್ನು ಅನುಸರಿಸುವುದಿಲ್ಲ. ಪಾಠದ ಸಾರ ಮಕ್ಕಳಿಗೆ ತಲುಪಲಿಲ್ಲ ಎನಿಸಿದರೆ ಶಿಕ್ಷಕರು ಒಂದೇ ಘಟಕವನ್ನು ವರ್ಷಪೂರ್ತಿ ಬೋಧಿಸಬಹುದು.

- ಮಕ್ಕಳೇ ತರಗತಿಗಳನ್ನು ಮುನ್ನಡೆಸುವ ಮತ್ತು ಶಿಕ್ಷಕರು ಚರ್ಚೆಗೆ ಅನುವು ಮಾಡಿಕೊಡುವಂಥ ಪಠ್ಯಕ್ರಮವು ಮಗು ಕೇಂದ್ರಿತ ಶೈಕ್ಷಣಿಕ ಪ್ರಕ್ರಿಯೆಗಳನ್ನು ಅನುಸರಿಸಲಾಗುತ್ತದೆ.

- ಅಲ್ಲಿ ಯಾವುದೇ ಲಿಖಿತ ಪರೀಕ್ಷೆಗಳು ಅಥವಾ ಅಂಕ ನೀಡುವ ವ್ಯವಸ್ಥೆ ಇರುವುದಿಲ್ಲ. ಪ್ರತಿ ಮಗುವಿನ ಬದುಕಿನ ಸಂತೋಷದ ಸ್ಥಿತಿಯನ್ನು ನೇರ ಪರಿವೀಕ್ಷಣೆ ಮತ್ತು ಅವಲೋಕನ ಮಾಡುವುದರ ಮೂಲಕ ಮೌಲ್ಯಮಾಪನ ನಡೆಯುತ್ತದೆ.

- ಈ ಪಠ್ಯಕ್ರಮದ ಉದ್ದೇಶವು ಸಂಪೂರ್ಣವಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ನ್ಯಾಷನಲ್ ಕರಿಕ್ಯುಲಮ್ ಫ್ರೇಮ್‌ವರ್ಕ್) 2005ರ ಜೊತೆಗೆ ಮೇಳೈಸಿದೆ.

**ಆನಂದ ಪಠ್ಯಕ್ರಮ ಮತ್ತು ನೈತಿಕ ವಿಜ್ಞಾನ:**

ಈಗಾಗಲೇ ಹಲವು ದಶಕಗಳಿಂದ ನಮ್ಮ ಶಿಕ್ಷಣ ವ್ಯವಸ್ಥೆಯ ಒಂದು ಭಾಗವಾಗಿರುವ ನೈತಿಕ ವಿಜ್ಞಾನ ಕಾರ್ಯಕ್ರಮಗಳ (Moral Science -MS) ಜೊತೆ ಸಂತೋಷ ಪಠ್ಯಕ್ರಮವೂ ಸಾದೃಶ್ಯ ಹೊಂದಿರುವುದು ಆ ಪಠ್ಯಕ್ರಮದ ಬಿಡುಗಡೆಯ ಬಳಿಕ ಎದುರಿಸಿದ ಪ್ರಮುಖ ಟೀಕೆಯಾಗಿದೆ.

ಎರಡೂ ಕಾರ್ಯಕ್ರಮಗಳಲ್ಲಿ ಸಮಾನ ವಿಷಯಗಳಿದ್ದರೂ ಕೂಡ ಅವು ಒಂದೇ ಅಲ್ಲ ಎಂಬುದನ್ನು ನನ್ನ ಅಧ್ಯಯನದ ಮೂಲಕ ನಾನು ಕಂಡುಕೊಂಡೆ. ಎರಡರ ಮೂಲ ಮೌಲ್ಯಗಳು ಒಂದೇ ತೆರನಾಗಿದ್ದರೂ, ಅವುಗಳ ಗುಣಲಕ್ಷಣಗಳಲ್ಲಿ ಭಿನ್ನತೆಗಳಿವೆ. ನೈತಿಕ ವಿಜ್ಞಾನ ಕಾರ್ಯಕ್ರಮವು ಪೂರ್ವ ನಿರ್ಧರಿತ ಮೌಲ್ಯಗಳನ್ನು ವಿದ್ಯಾರ್ಥಿಗಳಿಗೆ ಕೊಡುವ ಗುರಿಯನ್ನು ಹೊಂದಿದೆ. ಇಲ್ಲಿ ಬಳಸುವ ಕತೆಗಳು ಮತ್ತು ಶೈಕ್ಷಣಿಕ ವಿಧಾನಗಳು ಬಹುತೇಕ ಶಿಕ್ಷಕ ಕೇಂದ್ರಿತವಾದದ್ದು ಮತ್ತು 'ಈ ಕತೆಯಿಂದ ನೀವು ಕಲಿತ ನೀತಿ ಏನು?' ಎಂಬ ಸಾಮಾನ್ಯ ಪ್ರಶ್ನೆಯನ್ನು ಚರ್ಚೆಯ ಸಂದರ್ಭ ಕೇಳಲಾಗುತ್ತದೆ.

ಆದರೆ ಸಂತೋಷದ ತರಗತಿಯಲ್ಲಿ ಕೇಳಲಾಗುವ ಪ್ರಶ್ನೆಗಳು ಹೆಚ್ಚು ಮಗು ಕೇಂದ್ರಿತವಾದದ್ದು ಎಂಬುದನ್ನು ಆ ತರಗತಿಗಳ ಅವಲೋಕನದಿಂದ ನಾನು ತಿಳಿದುಕೊಂಡಿದ್ದೇನೆ. ನೀವೇನು ಕಲಿತಿರಿ ಎಂಬ ಪ್ರಶ್ನೆಯ ಬದಲಿಗೆ, ಒಂದು ನಿರ್ದಿಷ್ಟ ಪಾತ್ರವು ಹಾಗೆ ಯಾಕೆ ಮಾಡಿತು ಎಂದು ನಿಮಗನ್ನಿಸುತ್ತದೆ ಅಥವಾ ಅವನ/ಅವಳ ಸ್ಥಾನದಲ್ಲಿ ನಾವಿದ್ದಿದ್ದರೆ ನಾವೇನು ಮಾಡುತ್ತಿದ್ದೆವು? ಎಂಬಂತಹ ಪ್ರಶ್ನೆಗಳು ಇರುತ್ತವೆ. ಆಲೋಚಿಸಲು ಮತ್ತು ಚಿಂತಿಸಿ ಉತ್ತರ ನೀಡುವುದನ್ನು ವಿದ್ಯಾರ್ಥಿಗಳಿಗೆ ಬಿಡಲಾಗುತ್ತದೆ.

ನೈತಿಕ ತರಗತಿಗಳಲ್ಲಿ, 45 ಮಕ್ಕಳು ಕತೆಯಿಂದ ಒಂದು ನೀತಿಯನ್ನು ತೆಗೆದುಕೊಂಡರೆ ಸಂತೋಷ ತರಗತಿಗಳಲ್ಲಿ ಅದೇ ಕತೆಗೆ 45 ವಿಭಿನ್ನ ದೃಷ್ಟಿಕೋನಗಳು ಸಿಗಬಹುದು ಎಂಬುದನ್ನು ಇದು ಸರಳವಾಗಿ ಸೂಚಿಸುತ್ತದೆ.

**ಸಂತೋಷದ ಪಠ್ಯಕ್ರಮದ ಬಗೆಗಿನ ಗ್ರಹಿಕೆಗಳು:**

ದೇಶದಲ್ಲಿರುವ ಒಟ್ಟು ಶಾಲೆಗಳಿಗೆ ಹೋಲಿಸಿದರೆ ಪ್ರಸ್ತುತ ಸಂತೋಷದ ಪಠ್ಯಕ್ರಮವು ಅತೀ ಕಡಿಮೆ ಸಂಖ್ಯೆಯ ಶಾಲೆಗಳಲ್ಲಿ ಮಾತ್ರ ಅಳವಡಿಕೆಯಾಗಿ ಜಾರಿಯಲ್ಲಿದೆ ಎಂಬುದನ್ನು ನಾನು ಕಂಡುಕೊಂಡೆ. ಹಾಗಿದ್ದೂ ಸಂತೋಷ ಪಠ್ಯಕ್ರಮದ ಚಿಂತನೆಯು ಎಲ್ಲಾ ಭಾಗೀದಾರರಿಗೆ ಬೇರೆಬೇರೆ ರೀತಿಯಾಗಿರುವುದನ್ನು ಕಂಡುಕೊಂಡಿದ್ದೇನೆ.

- ಪ್ರಾಂಶುಪಾಲರಿಗೆ, ಸಂತೋಷ ಸಂಯೋಜಕರಿಗೆ ಮತ್ತು ಜಿಲ್ಲಾ ಸಂಯೋಜಕರಿಗೆ ಇದು ಸ್ವ–ನಂಬಿಕೆಯನ್ನು, ಆರೋಗ್ಯಕರ ಸಂಬಂಧಗಳನ್ನು, ಒಂದು ಒಳ್ಳೆಯ ಮತ್ತು ಸುರಕ್ಷಿತ ಸಮಾಜವನ್ನು ನಿರ್ಮಿಸುವುದು ಹಾಗೂ ಮಕ್ಕಳಲ್ಲಿ ಪಾರಿಸಾರಿಕ ಸುಸ್ಥಿರತೆಯ ಸಂವೇದನೆಯನ್ನು ಪ್ರೋತ್ಸಾಹಿಸುವುದು ಆಗಿದೆ.

- ಶಿಕ್ಷಕರ ಅಭಿವೃದ್ಧಿ ಸಂಯೋಜಕರಿಗೆ ಮತ್ತು ಶಾಲೆಯ ಮಾರ್ಗದರ್ಶಕರಿಗೆ, ಇದೆಲ್ಲವೂ ಮುಖ್ಯವಾಗಿ ಮಕ್ಕಳಲ್ಲಿ ಏಕಾಗ್ರತೆಯ ಶಕ್ತಿಯನ್ನು ಹೆಚ್ಚಿಸಿ ಆ ಮೂಲಕ ಅವರು ಸಾವಧಾನದಿಂದ ವಿಷಯಗಳಿಗೆ ಗಮನಕೊಡುವಂತೆ ಮಾಡುವುದಾಗಿದೆ.

- ಶಿಕ್ಷಕರಿಗೆ, ಅದು ಮಕ್ಕಳ ಒತ್ತಡದ ಮಟ್ಟವನ್ನು ನಿರ್ವಹಿಸುವುದಕ್ಕೆ ನೆರವಾಗುವ, ಆ ಮೂಲಕ ಅವರು ತಮ್ಮ ಅಧ್ಯಯನಗಳ ಕಡೆಗೆ ಮತ್ತೂ ಉತ್ತಮವಾದ ಗಮನವಹಿಸಲು ಒಳ್ಳೆಯ ಮತ್ತು ಕೆಟ್ಟ ಅಭ್ಯಾಸಗಳ ಹಾಗೂ ನೈತಿಕ ಮೌಲ್ಯಗಳ ಕುರಿತಂತೆ ಇದೆ.

- ವಿದ್ಯಾರ್ಥಿಗಳಿಗೆ, ಇದು ಕತೆಗಳನ್ನು ಕೇಳುವ, ಚಟುವಟಿಕೆಗಳನ್ನು ಮಾಡುತ್ತಲೇ ಒಳ್ಳೆಯ ವಿಷಯಗಳನ್ನು ಕಲಿಯುವ ಒಂದು ಮೋಜಿನ ಅವಧಿಯಾಗಿದೆ.

- ಎಎಪಿ ಪದಾಧಿಕಾರಿಗಳ ಪ್ರಕಾರ, ಇದು ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಶಕ್ತ ಮತ್ತು ಕ್ರಿಯಾಶೀಲಗೊಳಿಸುತ್ತದೆ. ಮನುಕುಲದ ಸಮಗ್ರ ಬೆಳವಣಿಗೆಯತ್ತ ವಿದ್ಯಾರ್ಥಿಗಳನ್ನು ಪ್ರಾಮಾಣಿಕ ಮತ್ತು ಜವಾಬ್ದಾರಿಯುತ ಮನುಷ್ಯರನ್ನಾಗಿ ಬೆಳೆಸುತ್ತದೆ. (ಎಸ್‌ಸಿಇಆರ್‌ಟಿ, ಡೆಲ್ಲಿ, 2019)

ಸಂತೋಷ ಪಠ್ಯಕ್ರಮವನ್ನು ಪ್ರತೀ ಭಾಗೀದಾರರೂ ವಿಭಿನ್ನ ದೃಷ್ಟಿಕೋನಗಳಿಂದ ನೋಡುತ್ತಾರೆ. ಕಳೆದ ಎರಡು ವರ್ಷಗಳಲ್ಲಿ ಸಂತೋಷ ಶಿಕ್ಷಕರು ಪಡೆದ ಅಸಮರ್ಪಕ ತರಬೇತಿಯೇ ಈ ದೃಷ್ಟಿಕೋನದ ವ್ಯತ್ಯಾಸಕ್ಕೆ ಕಾರಣವಾಗಿದೆ. 2018ರ ಆರಂಭದಲ್ಲಿ ಕಾರ್ಯಕ್ರಮವನ್ನು ಬಿಡುಗಡೆ ಮಾಡಿದ ಸಮಯದಲ್ಲಿ ಮಾತ್ರ ಒಂದೇ ಒಂದು ಕಾರ್ಯಾಗಾರವನ್ನು ಶಿಕ್ಷಕರಿಗೆ ಆಯೋಜಿಸಲಾಗಿತ್ತು. ಹೊಸ ಶಿಕ್ಷಕರಿಗೆ ಸಹಾಯ ಮಾಡಲು, ಸಂತೋಷ ಸಂಯೋಜಕರು, ಶಾಲಾ ಮಾರ್ಗದರ್ಶಕರು, ಮತ್ತು ಶಿಕ್ಷಕರ ಅಭಿವೃದ್ಧಿ ಸಂಯೋಜಕರು ಇದ್ದರೂ ಕೂಡ ಮತ್ತವರು ಸ್ವತಃ ಶಿಕ್ಷಕರಿಗಿಂತಲೂ ಹೆಚ್ಚು ಆಗಾಗ್ಗೆ ತರಬೇತಿ ಪಡೆದಿದ್ದು ಮಾರ್ಗದರ್ಶನ ಮಾಡುತ್ತಿದ್ದರೂ ಕೂಡ ಎಲ್ಲಾ ಹೊಸ ಶಿಕ್ಷಕರು ಮತ್ತು ಈ ಪಠ್ಯಕ್ರಮವನ್ನು ಹೊಸ ಅವಧಿಗೆ ಆಯ್ಕೆಮಾಡಿಕೊಂಡ ಶಿಕ್ಷಕರಿಗೆ ನೇರವಾದ ತರಬೇತಿ ಪಡೆದಿರಲಿಲ್ಲ ಎಂಬುದು ಇದರ ಅರ್ಥ. ಆದರೆ ಸಂಗ್ರಹಿಸಿದ ಮಾಹಿತಿಗಳು ತೋರಿಸುವ ಪ್ರಕಾರ, ಶೈಕ್ಷಣಿಕ ಒತ್ತಡದ ಕಾರಣದಿಂದ ಆನಂದ ಪಠ್ಯಕ್ರಮಕ್ಕೆ ಸಂಬಂಧಿಸಿದ ನಿಯಮಿತ ಸಭೆಗಳು ಶಾಲೆಗಳಲ್ಲಿ ನಡೆದದ್ದು ತುಂಬಾ ಕಡಿಮೆ. ಇದರ ಪರಿಣಾಮವಾಗಿ ಶಿಕ್ಷಕರು ಮತ್ತು ಸರಕಾರದ ನಡುವೆ ಅಂತರವು ಸೃಷ್ಟಿಯಾಯಿತು.

ಶಿಕ್ಷಕ ತರಬೇತಿ ಕಾರ್ಯಕ್ರಮಗಳು ಭವಿಷ್ಯದ ಶಿಕ್ಷಕರನ್ನು ಈ ಪಠ್ಯಕ್ರಮಕ್ಕೆ ತರಬೇತುಗೊಳಿಸದಿರುವುದು ಮತ್ತು ಹೊಸ ಶಿಕ್ಷಕರಿಗೆ ಶಾಲೆಗೆ ಸೇರಿದ ಮೇಲಷ್ಟೇ ಈ ಪಠ್ಯಕ್ರಮದ ಬಗ್ಗೆ ತಿಳಿದುಕೊಳ್ಳಬೇಕಾಗಿದ್ದುದು ಯುವ ಶಿಕ್ಷಕರಿಗೆ ಪೂರ್ವಸಿದ್ಧತೆ ಇಲ್ಲದೆ ಇರುವುದಕ್ಕೆ ಮತ್ತೊಂದು ಕಾರಣವಾಗಿದೆ. ಇದರ ಪರಿಣಾಮವಾಗಿ, ಶಿಕ್ಷಕರ ಕೈಪಿಡಿಯೊಂದೇ ಶಿಕ್ಷಕರಿಗಿರುವ ಅತ್ಯಂತ ವಿಶ್ವಾಸಾರ್ಹ ಮಾರ್ಗದರ್ಶಿಯಾಗಿದೆ. ಅದು ಈಗ ಸಂತೋಷ ಪಠ್ಯಕ್ರಮದ ಎಲ್ಲಾ ಯುವ ಮತ್ತು ಹೊಸ ಶಿಕ್ಷಕರಿಗಿರುವ ಏಕೈಕ ಪರಾಮರ್ಶೆಯ ಪುಸ್ತಕವಾಗಿದೆ.

**ವಿದ್ಯಾರ್ಥಿಗಳ ಮೇಲಿನ ಪರಿಣಾಮಗಳು:**

ಮಕ್ಕಳ ಮೇಲೆ ಎದ್ದು ಕಾಣುವಂತಹ ಸಕಾರಾತ್ಮಕ ಪರಿಣಾಮಗಳು ಉಂಟಾಗಿರುವುದು ಕಂಡುಬಂದಿದೆ. ಶಿಕ್ಷಕರ ಪ್ರಕಾರ, ಶಿಕ್ಷಕ–ವಿದ್ಯಾರ್ಥಿ ಅಂತರವನ್ನು ಸರಿದೂಗಿಸಲು ತಮಗೆ ಮತ್ತು ಮಕ್ಕಳಿಗೆ ಇಬ್ಬರಿಗೂ ಈ ಪಠ್ಯಕ್ರಮವು ಸಹಾಯ ಮಾಡಿದೆ. ಹಿಂಸೆ, ವಿಶೇಷವಾಗಿ ಹುಡುಗರ ಶಾಲೆಗಳಲ್ಲಿ ಕಡಿಮೆಯಾಗಿದೆ. ಮಕ್ಕಳು ತಮ್ಮ ಖಾಸಗಿ ಕತೆ ಮತ್ತು ಅನುಭವಗಳನ್ನು ಹಂಚಿಕೊಳ್ಳಲು ಆರಂಭಿಸಿದ್ದಾರೆ ಇದರ ಕಾರಣವಾಗಿ ಶಾಲೆಗಳಲ್ಲಿ ಒಂದು ಸುರಕ್ಷಿತ ಮತ್ತು ತೀರ್ಮಾನ ಕೊಡದಿರುವ ವಾತಾವರಣವು ಸೃಷ್ಟಿಯಾಗಿದೆ.
ಪೋಷಕರು ಕೂಡ ತಮ್ಮ ಮಕ್ಕಳಲ್ಲಿ ಗುರುತಿಸುವಂತಹ ಬದಲಾವಣೆಗಳನ್ನು ಕಾಣುತ್ತಿದ್ದಾರೆ. ತಮ್ಮ ಮಕ್ಕಳು ಈಗ ಅವರ ಬದುಕಿಗೆ ಸಹಾಯ ಮಾಡುವಂತಹ ಬಹಳಷ್ಟು ವಿಚಾರಗಳನ್ನು ಕಲಿಯುತ್ತಿದ್ದಾರೆ ಎಂದು ಪೋಷಕರು ಹೇಳುತ್ತಾರೆ. ಉದಾಹರಣೆಗೆ, ಮೊದಲು ಅವರ ಮಗ ಮಾರುಕಟ್ಟೆಗೆ ಹೋದಾಗಲೆಲ್ಲ ತನಗೆ ಏನಾದರೂ ಬೇಕೆಂದು ಬೇಡಿಕೆ ಇಡುತ್ತಿದ್ದ. ಆದರೆ ಈಗ ಹಾಗೆ ಮಾಡುವುದನ್ನು ಅವನು ನಿಲ್ಲಿಸಿದ್ದಾನೆ ಎಂದು ಪೋಷಕರೊಬ್ಬರು ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ. 'ನನ್ನ ಗೆಳೆಯರಿಗೆ ತೋರಿಸುವ ಸಲುವಾಗಿ ನನಗೆ ಯಾವುದೇ ವಸ್ತು ಬೇಡ, ನನಗೆ ಅವಶ್ಯವಿರುವ ವಸ್ತುಗಳನ್ನು ಮಾತ್ರ ನಾನು ತೆಗೆದುಕೊಳ್ಳುತ್ತೇನೆ' ಎಂದು ಆತನು ತನ್ನ ತಂದೆಗೆ ಹೇಳುತ್ತಿದ್ದಾನೆ.

**ಮುಂದಿನ ದಾರಿ:**

ಈ ಅಧ್ಯಯನದಿಂದ ನಾನು ಕಂಡುಕೊಂಡ ಅಂಶಗಳು ಇವು: ಈ ಪಠ್ಯಕ್ರಮವು ವಿದ್ಯಾರ್ಥಿಗಳ ಬದುಕಿನ ಮೇಲೆ ಕೆಲವು ಮಟ್ಟಿನ ಸಕಾರಾತ್ಮಕ ಪರಿಣಾಮವನ್ನು ಉಂಟುಮಾಡಿದೆಯಾದರೂ, ಪಠ್ಯಕ್ರಮ ಮತ್ತು ನನ್ನ ಅಧ್ಯಯನ ಸೀಮಿತ ಅವಧಿಯದ್ದಾಗಿದ್ದುದರಿಂದ ಶಿಕ್ಷಣ ವ್ಯವಸ್ಥೆಯ ಮೇಲೆ ವ್ಯಾಪಕ ಪರಿಣಾಮ ಬೀರಿದೆ ಎಂದು ಈಗಲೇ ಹೇಳಲಾಗದು. ಆದರೆ ಶಿಕ್ಷಕರ ಶಿಕ್ಷಕರು, ಶಿಕ್ಷಕರು ಮತ್ತು ಪೋಷಕರು ಒಟ್ಟಾಗಿ ಕೆಲಸ ಮಾಡಿದರೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರತಿ ಮಗುವೂ ಖುಷಿಯಾಗಿರುವುದನ್ನು ಕಲಿಯಲು ಸಾಧ್ಯವೆಂಬ ಒಂದು ವಿಷಯವನ್ನು ನನ್ನ ಅಧ್ಯಯನವು ದೃಢಪಡಿಸಬಲ್ಲದು. ಈಗ ಇನ್ನೂ ಸಂತೋಷ ಪಠ್ಯಕ್ರಮವು ನಮ್ಮ ರಾಷ್ಟ್ರೀಯ ಪಠ್ಯಕ್ರಮದ ಭಾಗವಾಗಿಲ್ಲ, ಆದರೆ ಅದು ಒಳಗೊಂಡಿರುವ ಮೌಲ್ಯಗಳ ಮೂಲವನ್ನು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ಹೊರೆ ರಹಿತ ಕಲಿಕೆ (1993)ಯಲ್ಲಿ ಕಾಣಬಹುದು. ಇದರ ಅರ್ಥ, ದೆಹಲಿ ಮಾದರಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ರಾಷ್ಟ್ರೀಯ ಮಾರ್ಗದರ್ಶಕ ಸೂತ್ರವನ್ನು ಮತ್ತು ಸಲಹೆಗಳನ್ನು ನಾವು ಕಾರ್ಯಗತಗೊಳಿಸಬಹುದಾದರೆ, ಯಾವುದೇ ಶಾಲೆ, ಶಿಕ್ಷಕರು ಅಥವಾ ಪೋಷಕರು ಆನಂದವನ್ನು ಅಭ್ಯಾಸ ಮಾಡಿಕೊಳ್ಳಲು ಮಕ್ಕಳಿಗೂ ಮತ್ತು ತಮಗೆ ತಾವೂ ಸಹಾಯ ಮಾಡಿಕೊಳ್ಳಬಹುದು. ನಾವು ನಂಬಲೇ ಬೇಕಿರುವ ಒಂದು ಸಂಗತಿ ಎಂದರೆ: ಸಂತೋಷ ಎನ್ನುವುದು ಒಂದು ಭಾವನೆ ಎನ್ನುವುದಕ್ಕಿಂತಲೂ ಮಿಗಿಲಾದದ್ದು. ಸೂಕ್ತ ಮಾರ್ಗದರ್ಶನ ನೀಡಿದರೆ ಮತ್ತು ಅಭ್ಯಾಸ ಮಾಡಿದರೆ ಇದನ್ನು ಕಲಿಸಬಹುದು.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


Directorate of Education, Government of NCT of Delhi. (n.d.). 2015 and beyond Delhi Education Revolution. Delhi: Directorate of Education, Government of NCT of Delhi.

ET Contributors. (2018, March 22). A student commits suicide in India every hour; how can our educational system prevent this? Retrieved from Economic Times: *https://economictimes.indiatimes.com/magazines/panache/between-the-lines/a-student-commits-suicide-in-india-every-hour-how-can-our-educational-system-prevent-this/articleshow/63411123.cms*

Heignotes. (2016, December 17). THE PREAMBLE OF THE INDIAN CONSTITUTION AND ITS EDUCATIONAL IMPLICATIONS. Retrieved from Heignotes: https://heignotes.com/2016/12/17/the-preamble-of-the-indian-constitution-and-its-educational-implications/

Liav Orgad. (2010). The preamble in constitutional interpretation. International Journal of Constitutional Law, 714-738.

SCERT, Delhi. (2019). Happiness Curriculum. Delhi: SCERT, Delhi.





**ಕೃತಿ ಗುಪ್ತ,** ಶಿಕ್ಷಕರ ಕುಟುಂಬದಲ್ಲಿ ಹುಟ್ಟಿ ಬೆಳೆದ ಇವರು, ಸಣ್ಣ ವಯಸ್ಸಿನಲ್ಲಿಯೇ ಶಿಕ್ಷಣದ ಕಡೆಗೆ ಒಲವು ಬೆಳೆಸಿಕೊಂಡವರು. ತಮ್ಮ ಆಸಕ್ತಿಯನ್ನು ಮುಂದುವರಿಸಿ, ದೆಹಲಿ ವಿಶ್ವವಿದ್ಯಾಲಯದಿಂದ ಪ್ರಾಥಮಿಕ ಶಿಕ್ಷಣದಲ್ಲಿ ಪದವಿ ಪೂರೈಸಿದರು. ಜೊತೆಗೆ ಏಕಲವ್ಯ, ಸಮಾ (ಮಹಿಳೆ ಮತ್ತು ಆರೋಗ್ಯ ಸಂಪನ್ಮೂಲ ಗುಂಪು) ಮತ್ತು ಲೋಕಪಂಚಾಯತ್‌ಗಳಂತಹ ಹಲವು ಸಂಸ್ಥೆಗಳಲ್ಲಿ ಸ್ವಯಂಸೇವಕರಾಗಿ ಕಾರ್ಯನಿರ್ವಹಿಸಿದ್ದಾರೆ. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ, ಬೆಂಗಳೂರಿನಲ್ಲಿ ಈ ವರ್ಷ ಅವರು ಅಭಿವೃದ್ಧಿಯಲ್ಲಿ ತಮ್ಮ ಉನ್ನತ ಶಿಕ್ಷಣವನ್ನು ಮುಗಿಸಿದ್ದಾರೆ. ಶಿಕ್ಷಣ, ಮಾನಸಿಕ ಆರೋಗ್ಯ ಮತ್ತು ಆರೋಗ್ಯವಂತ ಬದುಕಿನ ಕ್ಷೇತ್ರಗಳ ಬಗ್ಗೆ ಅವರಿಗೆ ಆಸಕ್ತಿ ಇದೆ. ಇವರನ್ನು : kritiguptaa96@gmail.com ನಲ್ಲಿಸಂಪರ್ಕಿಸಬಹುದು


ಅನುವಾದ: **ದೇವಿಕ ಧರ್ಮಿಷ್ಟೆ** । ಪರಿಶೀಲನೆ: **ಲತಾ ಕೆ ಸಿ.**

# ಇಂಗ್ಲಿಷ್ ಕಲಿಕೆಯನ್ನು ಸುಲಭವಾಗಿಸುವುದು ಸಾಧ್ಯ

ಪೌಲಮಿ ಸಮಂತ

ಇತ್ತೀಚಿನ ದಿನಗಳಲ್ಲಿ ಇಂಗ್ಲಿಷ್ ಮಾತನಾಡಲು ಕಲಿಯುವಂತೆ ಎಲ್ಲರ ಮೇಲೂ ಒತ್ತಡ ಬರುತ್ತಿದೆ. ಒಬ್ಬ ವ್ಯಕ್ತಿ ಈ ಭಾಷೆಯನ್ನು ಕಲಿಯದಿದ್ದರೆ ಅವಳು 'ಯಶಸ್ಸು' ಕಾಣಲಾರ ಎಂಬ ಭಾವನೆ ಬೇರೂರುತ್ತಿದೆ. ಯಾವುದೇ ಭಾಷೆಯಂತೆಯೇ ಇಂಗ್ಲಿಷ್ ಕಲಿಕೆಯೂ ಅಭ್ಯಾಸಕ್ಕಾಗಿ ಅವಕಾಶಗಳನ್ನು ಬೇಡುತ್ತದೆ. ಮಕ್ಕಳು ಇಂಗ್ಲಿಷ್ ಕಲಿಯಲು ಕಷ್ಟಪಡುವುದಕ್ಕೆ ಅನೇಕ ಕಾರಣಗಳಿವೆ. ಅದರಲ್ಲೂ ವಿಶೇಷವಾಗಿ, ಅವರು ತಮ್ಮ ಮನೆಯ ಆಡುಭಾಷೆಯಲ್ಲಿಯೇ ವ್ಯವಹರಿಸುವುದನ್ನು ರೂಢಿಸಿಕೊಂಡಿದ್ದರೆ, ಕಷ್ಟ ಇನ್ನೂ ಹೆಚ್ಚುತ್ತದೆ. ಉಳಿದಂತೆ, ಕೆಲವು ಕಾರಣಗಳು ಇಂತಿವೆ:

- ಅವಿಶ್ವಾಸ
- ಸೂಕ್ತ ಕಲಿಕಾ ಚಟುವಟಿಕೆಗಳ ಅಭಾವ
- ಇಂಗ್ಲಿಷ್ ಸಂಭಾಷಣೆಗಾಗಿ ಸೂಕ್ತ ವಾತಾವರಣದ ಕೊರತೆ
- ಮಾತೃಭಾಷೆಯಲ್ಲೇ ಹೆಚ್ಚು ವ್ಯವಹಾರ
- ಪೋಷಕರ ಸಹಕಾರದ ಕೊರತೆ
- ಶಿಕ್ಷಕರು ಸರಿಯಾದ ಕಲಿಕಾ ವಾತಾವರಣವನ್ನು ಅಥವಾ ಕಲಿಕೆಗಾಗಿ ನಿರಾತಂಕ ಅವಕಾಶಗಳನ್ನು ನಿರ್ಮಿಸಿ-ಕೊಡಲಾಗದಿರುವುದು

**ಇಂಗ್ಲಿಷ್ ಕಲಿಕೆಯನ್ನು ವೃದ್ಧಿಸುವ ವಿಧಾನಗಳು**

**ನೇರ ವಿಧಾನ**

ಶಿಕ್ಷಕರು ವಿದ್ಯಾರ್ಥಿಗಳೊಂದಿಗೆ ಇಂಗ್ಲಿಷ್‌ನಲ್ಲೇ ಮಾತನಾಡುತ್ತಾ, ತರಗತಿಗೆ ಹೊಸ ವಾಕ್ಯಗಳನ್ನು ನೀಡಲು ಮುಂದಾಗುವುದು. ಬಳಿಕ, ಸಂಭಾಷಣೆ ಪ್ರಗತಿಯಲ್ಲಿರುವಾಗ, ಶಿಕ್ಷಕರು ಇಂಗ್ಲಿಷ್ ಮಾತನಾಡಲು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವುದು. ಇಲ್ಲಿ ವಾಕ್ಯವೊಂದನ್ನು ವಾಕ್-ದೃಶ್ಯ ಸಾಧನಗಳ ನೆರವು ಪಡೆದು ಪರಿಚಯಿಸುವ ತಂತ್ರವನ್ನು ಬಳಸಬೇಕಾಗುತ್ತದೆ. ನಾವು ಬಳಸುವ ಚಿತ್ರಗಳು, ಮಾದರಿಗಳು, ಮಿಂಚುಪಟ್ಟಿಗಳು, ನೈಜ ವಸ್ತುಗಳು ಹಾಗು ಅಭ್ಯಾಸ ಹಾಳೆಗಳು ಮುಂತಾದ ಭೌತಿಕ ಸಾಮಗ್ರಿಗಳು ಕಲಿಕಾರ್ಥಿಗೆ ಪ್ರಾಥಮಿಕ ಹಂತದಲ್ಲಿ ಆಸಕ್ತಿದಾಯಕವೂ, ಆಕರ್ಷಕವೂ ಆಗುವಂತೆ ನೋಡಿಕೊಂಡಾಗ ಅವು ಬಹಳ ಪರಿಣಾಮಕಾರಿಯಾಗಿ ಇರುತ್ತವೆ. ಇಂಗ್ಲಿಷ್ ಭಾಷೆಯ ನಿರಂತರ ಪ್ರಯೋಗವು ವಿದ್ಯಾರ್ಥಿಗಳು ಇಂಗ್ಲಿಷ್‌ನಲ್ಲಿ ಮಾತಾಡಲು ಮತ್ತು ಓದಲು ನೆರವಾಗುತ್ತದೆ.

**ವ್ಯಾಕರಣ ಮತ್ತು ಅನುವಾದದ ವಿಧಾನ**

ಶಿಕ್ಷಕರು ಪಾಠವನ್ನು ಶಬ್ದಸಂಪತ್ತಿನ ವಿಷಯದೊಂದಿಗೆ ಆರಂಭಿಸುತ್ತಾರೆ. ಪದಗಳ ಅರ್ಥವನ್ನು ಮಗುವಿನ ಮಾತೃಭಾಷೆ / ಸ್ಥಳೀಯ ಭಾಷೆಯಲ್ಲಿ ವಿವರಿಸುತ್ತಾರೆ. ಬಳಿಕ, ಶಿಕ್ಷಕರು ಉದ್ಧೃತ ಭಾಗವನ್ನು ಅನುವಾದಿಸಿ ವ್ಯಾಕರಣಾಂಶಗಳನ್ನು ಮಾತೃಭಾಷೆ / ಸ್ಥಳೀಯ ಭಾಷೆಯ ಸಹಾಯ ಪಡೆದು ವಿವರಿಸುತ್ತಾರೆ. ಬಳಿಕ, ಕಲಿಕಾರ್ಥಿಗಳು ವ್ಯಾಕರಣ ನಿಯಮಗಳನ್ನು ತಮ್ಮ ಮಾತೃಭಾಷೆ/ಸ್ಥಳೀಯ ಭಾಷೆಯಲ್ಲಿ ನಕಲು ಮಾಡುವಂತೆ ತಿಳಿಸಲಾಗುತ್ತದೆ. ಕೊನೆಗೆ, ಮಾಡದೇ ಉಳಿದ ಅಭ್ಯಾಸಗಳನ್ನು ಹಾಗು ನಿಯಮಗಳ ಕಲಿಕೆಯನ್ನು ಮನೆಯಲ್ಲಿ ಪೂರ್ತಿ-ಮಾಡುವಂತೆ ಹೇಳಲಾಗುತ್ತದೆ.

**ಪದಗಳ ಮಾರ್ಪಾಟುಗಳು ಹಾಗು ಅವುಗಳ ಬಳಕೆಯ ಕಲಿಕೆ**

ಮನೆಯಲ್ಲಾಗಲೀ ಅಥವಾ ಶಾಲೆಯಲ್ಲಾಗಲೀ ಒಂದು ಪದಕ್ಕೆ ಸಂಬಂಧಿಸಿದ ಇತರ ಪದಗಳನ್ನು ಕಲಿಯುವುದು ಹಾಗು ಅವುಗಳನ್ನು ಬಳಕೆಯಲ್ಲಿ ಗ್ರಹಿಸುವುದು. ಉದಾಹರಣೆಗೆ, tidy ಎಂಬ ಪದಕ್ಕೆ ಸಂಬಂಧಿಸಿದ untidy, tidying up ಇತ್ಯಾದಿ ಪದಗಳ ಅರ್ಥಗ್ರಹಣ.

**ಶಿಕ್ಷಕರೇನು ಮಾಡಬಹುದು?**

ಅನೇಕ ಬಾರಿ ಹೊಸ ಭಾಷೆಯೊಂದನ್ನು ಕಲಿಯಲು, ಅಭ್ಯಾಸ ಮಾಡಲು, ಮಗುವಿಗೆ ತರಗತಿಯಿಂದ ಹೊರಗಡೆ ಅವಕಾಶಗಳು ದೊರೆಯುವುದು ವಿರಳ. ವಿಶೇಷವಾಗಿ, ಇಂಗ್ಲಿಷ್ ವಿಚಾರದಲ್ಲಂತೂ ಇದು ಸತ್ಯ. ಆದ್ದರಿಂದ ಶಿಕ್ಷಕರು ಕಲಿಕೆಯಲ್ಲಿ ಮಕ್ಕಳಿಗೆ ನೆರವಾಗಬಹುದಾದ ರೀತಿಗಳನ್ನು ಗಮನಕ್ಕೆ ತಂದುಕೊಳ್ಳಲು ಜಾಗೃತರಾಗಿರಬೇಕಾಗುತ್ತದೆ. ತರಗತಿಗೆ ಓದಲು ಸಾಕಷ್ಟು ಸಾಮಗ್ರಿಗಳು ದೊರೆಯುವಂತೆ ನೋಡಿಕೊಳ್ಳುವುದು ಹಾಗು ಮಕ್ಕಳಿಗೆ ಮಾತನಾಡಲು ಅವಕಾಶಗಳನ್ನು ಕಲ್ಪಿಸಿಕೊಡುವುದು ಭಾಷಾಕಲಿಕೆಯಲ್ಲಿ ನೆರವಾಗಬಹುದಾದ ಒಂದು ವಿಧಾನ. ಕಥೆಗಳನ್ನು ಓದುವ ಮೂಲಕ ಅಥವಾ ಒಂದು ವಿಷಯದ ಬಗ್ಗೆ ತರಗತಿಯ ಒಳಗೆ ಮಾತನಾಡುವುದರ ಮೂಲಕ ಹೊಸ ಪದಗಳನ್ನು ಕಲಿಯುವುದು ಕೂಡ ತುಂಬಾ ಪರಿಣಾಮಕಾರಿ ತಂತ್ರವಾಗಿದೆ.

**ಶಬ್ದಸಂಪತ್ತಿನ ವೃದ್ಧಿ**

ಓರ್ವ ಒಳ್ಳೆಯ ಮಾತುಗಾರನ ಬತ್ತಳಿಕೆಯಲ್ಲಿ ಅನೇಕ ಹೊಸ ಪದಗಳಿದ್ದು, ಅವುಗಳನ್ನು ಅವನು ಸಂಭಾಷಣೆಯಲ್ಲಿ ಬಳಸುತ್ತಾನೆ. ಅಂತೆಯೇ ಶಿಕ್ಷಕನಾಗಿ, ಪ್ರತಿ ದಿನ ಕಡಿಮೆ ಎಂದರೆ ಹತ್ತು ಪದಗಳನ್ನು ಪರಿಚಯಿಸುವುದು ಮತ್ತು ಮರುದಿನ ತರಗತಿಯಲ್ಲಿ ಅವುಗಳನ್ನು ಬಳಸಲು ಅವಕಾಶಗಳನ್ನು ಕಂಡುಕೊಳ್ಳುವುದು ಹೊಸ ಪದಗಳ ಕಲಿಕೆಗೆ ಸಹಾಯವಾಗುತ್ತದೆ.

**ಹಿಂಜರಿಕೆಯನ್ನು ಹಿಮ್ಮೆಟ್ಟಿಸಲು ಮಕ್ಕಳಿಗೆ ನೆರವು**

ಮಾತನಾಡುವಾಗ ತಪ್ಪುಗಳಾದರೆ ಇತರರು ನಿಮ್ಮನ್ನು ಹೇಗೆ 'ನೋಡುತ್ತಾರೆ' ಎಂಬ ಯೋಚನೆ ಹಾಗು ಹಿಂಜರಿಕೆಯ ಭಯವು ಹೆಚ್ಚು-ಕಡಿಮೆ ಎಲ್ಲರನ್ನೂ ಕಾಡುವ ವಿಚಾರ. ಅದರಲ್ಲೂ

ವಿಶೇಷವಾಗಿ, ಇಂಗ್ಲಿಷನ್ನು ತಾಯ್ನುಡಿಯಾಗಿ ಬಳಸದವರನ್ನು ಕಾಡದೇ ಇರದು. ಎಲ್ಲಿಯವರೆಗೆ ಶಿಕ್ಷಕರು ಎಲ್ಲ ಮಕ್ಕಳಿಗೂ ಒಂದು ನಿರಾತಂಕ ವಾತಾವರಣವನ್ನು ನಿರ್ಮಿಸಿಕೊಟ್ಟು, ಅಲ್ಲಿ ಎಲ್ಲರಿಗೂ ತಮ್ಮ ಆಲೋಚನೆಗಳನ್ನು ಮತ್ತು ಅಭಿಪ್ರಾಯಗಳನ್ನು ತಿಳಿಸಲು ಸಮಾನ ಅವಕಾಶಗಳನ್ನು ಕಲ್ಪಿಸಿಕೊಡಲಾರರೋ, ಅಲ್ಲಿಯವರೆಗೂ ಈ ಭಯ ಇದ್ದದ್ದೆ.

**ಕಥೆ ಹೇಳುವುದು**

ಮಕ್ಕಳು ಸರಿಯಾಗಿ ಮಾತನಾಡುವುದಕ್ಕಿಂತಲೂ, ನಿರರ್ಗಳವಾಗಿ ಮಾತನಾಡುವ ಬಗ್ಗೆ ಅವರು ತಮ್ಮ ಗಮನ ಕೇಂದ್ರೀಕರಿಸಲು ಸಹಕರಿಸಿ. ಕಥೆಗಳನ್ನು ಹೇಳುವಂತೆ ಅವರನ್ನು ಹುರಿದುಂಬಿಸುವುದು ಇದಕ್ಕಾಗಿ ಇರುವ ಒಂದು ಉತ್ತಮ ವಿಧಾನವಾಗಿದೆ.

**ಇಂಗ್ಲಿಷ್ ಚಲನಚಿತ್ರಗಳ ವೀಕ್ಷಣೆ**

ಮಕ್ಕಳು ಸಾಧ್ಯವಾದಷ್ಟೂ ಇಂಗ್ಲಿಷ್ ಚಲನಚಿತ್ರಗಳನ್ನು, ಅಥವಾ ದೂರದರ್ಶನ ಕಾರ್ಯಕ್ರಮಗಳನ್ನು ನೋಡುವಂತೆ ಪ್ರೋತ್ಸಾಹಿಸಿ. ಇದು ಹೊಸ ಪದಗಳನ್ನು, ಪದಗುಚ್ಛಗಳನ್ನು ಕಲಿಯಲು ಇರುವ ಒಂದು ಉತ್ತಮ ವಿಧಾನ. ಶಾಲಾ ಸಮಯದಲ್ಲಿ ಇತರ ಮಕ್ಕಳೊಡಗೂಡಿ ಚಲನಚಿತ್ರವೊಂದನ್ನು ನೋಡಲು ಸಾಧ್ಯವಾದರೆ, ಕೊನೆಗೆ ಅದನ್ನು ಕುರಿತು ಒಂದು ಚರ್ಚೆಯನ್ನು ಇಟ್ಟುಕೊಳ್ಳಬಹುದು

**ನೋಟ್‌ಬುಕ್ ಬಳಿಯಲ್ಲಿರಿಸಿಕೊಳ್ಳುವುದು ಮತ್ತು ಶಬ್ದಕೋಶದ ಬಳಕೆ**

ಮಕ್ಕಳು ಒಂದು ನೋಟ್‌ಬುಕ್ ಇಟ್ಟುಕೊಂಡು, ಅದರಲ್ಲಿ ಹೊಸ ಪದಗಳನ್ನು ಗುರುತುಮಾಡಿಕೊಂಡು ಅವುಗಳ ಅರ್ಥವನ್ನು ಶಬ್ದಕೋಶದಲ್ಲಿ ನೋಡುವಂತೆ ಮಕ್ಕಳಿಗೆ ಸಹಾಯ ಮಾಡುವುದು. ತರಗತಿಯಲ್ಲಿ ಇದು ಒಂದು ಆಸಕ್ತಿದಾಯಕ ಚಟುವಟಿಕೆಯಾಗ-ಬಹುದು.

**ಸ್ಥಳೀಯ ಭಾಷೆ ಹಾಗು ಇಂಗ್ಲಿಷ್ ಎರಡನ್ನೂ ಬಳಸುವುದು**

ಶಿಕ್ಷಕರು ಸ್ಥಳೀಯ ಭಾಷೆ ಹಾಗು ಇಂಗ್ಲಿಷ್ ಎರಡನ್ನೂ ಬಳಸಿದರೆ ಇಂಗ್ಲಿಷ್ ಕಲಿಕೆ ಸುಲಭವೂ ಮತ್ತು ಹೆಚ್ಚು ಬುದ್ಧಿಗ್ರಾಹ್ಯವೂ ಆಗುತ್ತದೆ. ಉದಾಹರಣೆಗೆ ಮಕ್ಕಳು ಕಥೆಗಳನ್ನು ವಿವರಿಸಲು ಸ್ಥಳೀಯ ಭಾಷೆ ಬಳಸುವಂತೆ ಅವರನ್ನು ಉತ್ತೇಜಿಸುವುದು.

**ಚಿತ್ರಗಳನ್ನು ಪುಟ್ಟ–ಪುಟ್ಟ ವಾಕ್ಯಗಳಲ್ಲಿ ಬಣ್ಣಿಸುವುದು**

ವಿದ್ಯಾರ್ಥಿಗಳು ಚಿತ್ರಗಳನ್ನು ವರ್ಣಿಸುವ ಮೂಲಕ ತಮ್ಮ ಸಾಮರ್ಥ್ಯ ಹಾಗು ಗ್ರಹಣಶಕ್ತಿಗಳನ್ನು ಬೆಳೆಸಿಕೊಳ್ಳಲು ಸಾಧ್ಯ. ಅವರು ಚಿತ್ರವೊಂದನ್ನು ಗಮನವಿಟ್ಟು ನೋಡಿ, ಬಳಿಕ ಅದನ್ನು ಸರಳ ವಾಕ್ಯಗಳಲ್ಲಿ ನಿರೂಪಿಸಲು ಹೇಳಿ. ತರಗತಿಯಲ್ಲಿನ ವಿವಿಧ ಹಂತಗಳ ವಿದ್ಯಾರ್ಥಿಗಳು ಈ ಚಟುವಟಿಕೆಯಿಂದ ಲಾಭ ಪಡೆಯಬಹುದು.

**ಪದಗಳನ್ನು ಬಳಸಿ ವಾಕ್ಯರಚನೆ**

ಪ್ರತಿ ಮಗುವಿಗೂ, ಸ್ವಲ್ಪ ಸಹಾಯ ಹಾಗು ಪ್ರೋತ್ಸಾಹ ದೊರೆತರೆ ಇಂಗ್ಲಿಷ್ ಹಾಗು ಸ್ಥಳೀಯ ಭಾಷೆಯಲ್ಲಿ ವಾಕ್ಯಗಳನ್ನು ರಚಿಸುವುದು ಹೇಗೆ ಎಂದು ಕಲಿಯಬಹುದು.

**ಚಿತ್ರಕಥೆಗಳ ರಚನೆ**

ಒಂದು ಕಥೆ ಹೇಳಲು ವಿದ್ಯಾರ್ಥಿಗಳು ಮೊದಲಿಗೆ ಚಿತ್ರಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಇಟ್ಟುಕೊಳ್ಳುವಂತೆ ಮಾಡಿ. ಸ್ಥಳೀಯ ಭಾಷೆ ಮತ್ತು ಇಂಗ್ಲಿಷ್ ಎರಡರಲ್ಲೂ ಮಕ್ಕಳು ಕಥೆಯನ್ನು ಹೇಳಲು, ಜೊತೆಗೆ ಚಿತ್ರಗಳನ್ನು ವರ್ಣಿಸಲು ಅವರಿಗೆ ಪ್ರೋತ್ಸಾಹ ನೀಡಿ. ಈ ಚಟುವಟಿಕೆಯು ಇಂಗ್ಲಿಷ್‌ನೊಂದಿಗೆ ವಿದ್ಯಾರ್ಥಿಗಳ ಯೋಚನಾಶಕ್ತಿ ಹಾಗು ಕಲ್ಪನಾಶಕ್ತಿಗಳನ್ನೂ ಬೆಳೆಸುತ್ತದೆ.

**ವೃತ್ತಪತ್ರಿಕೆಯನ್ನು ಓದುವುದು**

ಇದು ದೊಡ್ಡ ಮಕ್ಕಳಿಗೆ ಸಹಾಯಕಾರಿ. ಓದುವ ಅಭ್ಯಾಸಕ್ಕಾಗಿ ಶಿಕ್ಷಕರು ವೃತ್ತಪತ್ರಿಕೆಯನ್ನು ಬಳಸಬಹುದು ಮತ್ತು ಮಕ್ಕಳು ಕ್ಲಿಷ್ಟ ಪದಗಳ ಅರ್ಥಕ್ಕಾಗಿ ಶಬ್ದಕೋಶವನ್ನು ನೋಡಲು ಉತ್ತೇಜನ ನೀಡಬಹುದು. ಯಾವುದೇ ಸುದ್ದಿಯನ್ನು ಕುರಿತು ಮಕ್ಕಳನ್ನು ಒಂದು ಚರ್ಚೆಯಲ್ಲಿ ತೊಡಗಿಸುವುದು ಅವರು ಮಾತನಾಡು-ವುದನ್ನು ಅಭ್ಯಾಸ ಮಾಡಲು ಇರುವ ಉತ್ತಮ ವಿಧಾನ.



**ಕಥೆಯ ವಿಸ್ತರಣೆ**

ಕಥೆ ಮುಗಿದ ಮೇಲೆಯೂ ಅದನ್ನೊಂದು ಹೊಸ ಕಥೆಯಾಗಿ ರೂಪಿಸಿ ಹೇಳಲು ತನ್ನ ಕಲ್ಪನಾಶಕ್ತಿಯನ್ನು ಪ್ರಯೋಗಿಸುವ ಮೂಲಕ ತರಗತಿಯ ಪ್ರತಿ ಮಗುವೂ ಈ ಚಟುವಟಿಕೆಯಲ್ಲಿ ಪಾಲ್ಗೊಳ್ಳಬಹುದು.

**ಗ್ರಂಥಾಲಯದ ಸಕ್ರಿಯ ಬಳಕೆ**

ಶಾಲೆಯ ಗ್ರಂಥಾಲಯವಾಗಲೀ, ಅಥವಾ ತರಗತಿಯ ಗ್ರಂಥಸಂಗ್ರಹವೇ ಆಗಲಿ, ಸರಿಯಾಗಿ ಬಳಕೆಯಾದಲ್ಲಿ ಒಂದು ಮಹಾನ್ ಸಂಪನ್ಮೂಲವಾಗಬಹುದು. ಓದುವುದರಿಂದ ಶಬ್ದಸಂಪತ್ತು ಸದಾ ವೃದ್ಧಿಸುವುದಲ್ಲದೆ, ಬರವಣಿಗೆಯ ಕೌಶಲಗಳ ಬೆಳವಣಿಗೆಯಲ್ಲಿ ನೆರವಾಗುತ್ತದೆ.

**ಮುಕ್ತಾಯ**

ಎಲ್ಲಾ ಮಕ್ಕಳಿಗೂ ಹೊಂದುವಂತಹ ಯಾವುದೇ ಏಕೈಕ ವಿಧಾನವಿಲ್ಲ. ಆದ್ದರಿಂದ, ಇಂಗ್ಲಿಷ್ ಬೋಧಿಸಲು ತರಗತಿಯ ಅಗತ್ಯಗಳಿಗೆ ಹೊಂದಿಕೊಳ್ಳುವ ಅತ್ಯುತ್ತಮ ವಿಧಾನವನ್ನು ಆಯ್ಕೆಮಾಡಿಕೊಳ್ಳುವ ಜವಾಬ್ದಾರಿ ಶಿಕ್ಷಕರದ್ದೇ ಆಗಿದೆ. ತಂತ್ರಜ್ಞಾನ ಲಭ್ಯವಿರುವ ನಗರ ವಾತಾವರಣದಲ್ಲಿ ಯಶಸ್ಸು ಕಾಣುವ ಬೋಧನ ವಿಧಾನವು ಗ್ರಾಮೀಣ ಭಾಗದಲ್ಲಿ ಕೆಲಸ ಮಾಡದೇ ಹೋಗಬಹುದು. ನಾನು ವಿವರಿಸಿರುವ ಚಟುವಟಿಕೆಗಳು ಹಾಗು ಪ್ರಕ್ರಿಯೆಗಳು ಗ್ರಾಮೀಣ ಭಾಗದ ವಿದ್ಯಾರ್ಥಿಗಳು ಇಂಗ್ಲಿಷ್ ಕಲಿಯಲು ಸಹಕಾರಿಯಾಗಿವೆ.

---



**ಪೌಲಮಿ ಸಮಂತ** ಅವರು ರಾಯ್ಪುರದ ಪಂಡಿತ್ ರವಿಶಂಕರ್ ಶುಕ್ಲಾ ವಿಶ್ವವಿದ್ಯಾಲಯದಿಂದ ಬಿ.ಎಡ್. ಪದವಿಯ ಜೊತೆಗೆ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಇವರು ಸದ್ಯ ಛತ್ತಿಸ್‌ಗಡ ರಾಜ್ಯದ ಧಮ್‌ತರಿ ಜಿಲ್ಲೆಯ ಶಂಕರದಾಹ್ ಎಂಬಲ್ಲಿನ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾರೆ. ಪ್ರತಿ ಮಗುವಿಗೂ ವಿಭಿನ್ನ ಅರ್ಹತೆ ಮತ್ತು ಕಲಿಯುವ ಸಾಮರ್ಥ್ಯ ಇರುತ್ತದೆ ಹಾಗು ಶಿಕ್ಷಕರ ಸೂಕ್ತ ಮಾರ್ಗದರ್ಶನದಲ್ಲಿ ಅವರ ಕಲಿಕೆ ಇನ್ನೂ ಉತ್ತಮವಾಗಬಹುದು ಎಂದು ಪೌಲಮಿ ನಂಬುತ್ತಾರೆ. ಇವರಿಗೆ ಸಂತಸ ನೀಡುವ ಚಟುವಟಿಕೆಗಳೆಂದರೆ ಅಡುಗೆ, ಹಾಡು, ಪ್ರಯಾಣ ಹಾಗು ಸಣ್ಣಕಥೆಗಳನ್ನು ಬರೆಯುವುದು. ಇವರನ್ನು poulami.samanta@azimpremjifoundation.org ನಲ್ಲಿ ಸಂಪರ್ಕಿಸಬಹುದಾದ:

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ಲತಾ ಕೆ. ಸಿ**

# ಸೊನ್ನೆ ಅಂಕದ ಗುಂಪುಗಳ ಬಗ್ಗೆಯೇ ಗಮನ ನೀಡುವುದು

ರಶ್ಮಿ ಪಲಿವಾಲ್

**ಹಿನ್ನೆಲೆ**

ಏಕಲವ್ಯ, ಇದು ಮಧ್ಯಪ್ರದೇಶದಲ್ಲಿ 1982ರಿಂದ ಶಾಲಾ ಶಿಕ್ಷಣದಲ್ಲಿ ಹೊಸದನ್ನು ಹುಡುಕಲು ತೊಡಗಿಸಿಕೊಂಡಿರುವ ಒಂದು ಸರ್ಕಾರೇತರ ಸಂಸ್ಥೆ. ಮಧ್ಯಪ್ರದೇಶದ ಆದಿವಾಸಿ ಭಾಗದ 34 ಹಳ್ಳಿಗಳಲ್ಲಿ 2015 – 19ರ ನಡುವೆ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೆ ಏಕಲವ್ಯ ನಡೆಸಿದ ಮಧ್ಯಪ್ರವೇಶದ ಬಗ್ಗೆ ಈ ಲೇಖನವು ವಿವರಿಸುತ್ತದೆ. ನಾಲ್ಕು ವರ್ಷಗಳ ನಮ್ಮ ಕೆಲಸದಿಂದ ಭಾಷೆ ಮತ್ತು ಗಣಿತೀಯ ಸಾಮರ್ಥ್ಯದ ಅಂಕಗಳು ಹೆಚ್ಚುತ್ತವೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದು ನಮಗಿದ್ದ ಗುರಿಯಾಗಿತ್ತು. ಶಾಲೆಗೆ ಹಾಗೂ ಏಕಲವ್ಯ ಸಂಪನ್ಮೂಲ ಕೇಂದ್ರಕ್ಕೆ ಬಂದ ಕೆಲವು ಮಕ್ಕಳಲ್ಲಿ ಒಂದು ವರ್ಷವಾದರೂ ಗಳಿಸಿದ ಅಂಕಗಳು ಸೊನ್ನೆಯಲ್ಲಿಯೇ ಉಳಿದವು ಎಂದು ಕಂಡುಬಂದಿತಾದರೂ ತಕ್ಕಮಟ್ಟಿಗೆ ಉದ್ದೇಶಿತ ಗುರಿಯನ್ನು ಮುಟ್ಟಲಾಯಿತು. ಏಕಲವ್ಯ ಈ ವಿಷಯವನ್ನು ಹೇಗೆ ಪರಿಶೀಲಿಸಿತು ಮತ್ತು ಎಲ್ಲಾ ಮಕ್ಕಳು ಕಲಿಯಲು ಸಹಾಯ ಮಾಡಲು ಸಂಭಾವ್ಯ ಹೆಜ್ಜೆಗಳನ್ನು ಹೇಗೆ ಪರಿಭಾವಿಸಲಾಯಿತು ಎಂಬುದನ್ನು ಇಲ್ಲಿ ಚರ್ಚಿಸಲಾಗುತ್ತದೆ. ಏಕಲವ್ಯ ಸೇರಿದಂತೆ ಹಲವಾರು ಸಂಸ್ಥೆಗಳು ಮಕ್ಕಳನ್ನು ಕಲಿಯುವಲ್ಲಿ ಸಮರ್ಥರನ್ನಾಗಿಸುವೆಡೆ ಹೆಚ್ಚು ಆಶಾಭಾವನೆ ಮತ್ತು ಪ್ರಾಮಾಣಿಕತೆಯಿಂದ ಕೆಲಸ ಮಾಡುತ್ತವೆ. ನಾವು ಹೊಸದಾದ ಸಾಮಗ್ರಿಗಳು, ಚಟುವಟಿಕೆಗಳು ಮತ್ತು ಪದ್ಧತಿಗಳನ್ನು ಅಭಿವೃದ್ಧಿಪಡಿಸಲು; ಶಿಕ್ಷಕರು ಮತ್ತು ಶಿಕ್ಷಣತಜ್ಞರೊಂದಿಗೆ ತರಬೇತಿಗಳು, ಕಾರ್ಯಾಗಾರಗಳು ಮತ್ತು ಪುನರ್‌ಮನನ ಸಭೆಗಳನ್ನು ನಡೆಸಲು; ಮಕ್ಕಳಲ್ಲಿನ ಕಲಿಕೆಯ ಪರ್ಯಾಯ ಮತ್ತು ಸರ್ವಾಂಗೀಣ ಮಾಪನದ ರೀತಿಗಳನ್ನು ಹುಡುಕಲು ಹೆಚ್ಚು ಗಮನಹರಿಸುತ್ತೇವೆ. ಜೊತೆಗೆ ಅಂಕಿ ಸಂಖ್ಯೆಗಳನ್ನು ಸರಿಯಾಗಿ ಸಂಗ್ರಹಿಸುವುದು, ನಿರ್ವಹಿಸುವುದು ಮತ್ತು ಅಧ್ಯಯನ ಮಾಡುವುದರಿಂದ ಹೆಚ್ಚಿನ ಪರಿಣಾಮಕ್ಕೆ ನಮ್ಮ ಪರಿಶ್ರಮಗಳನ್ನು ಹೊಂದಿಕೊಳ್ಳುವಲ್ಲಿ ಆಗುವ ಅನುಕೂಲತೆಗಳನ್ನು ಹಿಂದಿನ ಐದು ವರ್ಷಗಳಲ್ಲಿ ನಾನು ಅರಿತುಕೊಂಡಿದ್ದೇನೆ.

**ವಿಧಾನ**

ನಾನು ಜೆಮ್‌ಶೆಡ್‌ಜೀ ಟಾಟಾ ಟ್ರಸ್ಟ್‌ನ ಅಡಿಯಲ್ಲಿ ಚಿಂಡ್ವಾರಾ ಜಿಲ್ಲೆಯ ತಾಮಿಯಾ ಪ್ರದೇಶದಲ್ಲಿ ಅಕ್ಟೋಬರ್ 2015ರಿಂದ ಮಾರ್ಚ್ 2019ರವರೆಗೆ ಏಕಲವ್ಯ ಅವರ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ಯೋಜನೆಯಲ್ಲಿ ಭಾಗವಹಿಸಿದ್ದೆ. 34 ಹಳ್ಳಿಗಳಲ್ಲಿ, 37 ಪ್ರಾಥಮಿಕ ಶಾಲೆಗಳ ಸುಮಾರು ಮೂರು ಸಾವಿರದ ಐದು ನೂರು (3500) ಮಕ್ಕಳನ್ನು ಹಾಗೂ 15 ಮಾಧ್ಯಮಿಕ ಶಾಲೆಗಳ ಸುಮಾರು 1800 ಮಕ್ಕಳನ್ನು ತಲುಪುವಂತೆ ಇದನ್ನು ನಡೆಸಲಾಯಿತು. ಏಕಲವ್ಯದ 6 ಜನರ ಪ್ರಮುಖ ತಂಡವು 62 ಜನರ ಕ್ಷೇತ್ರ ತಂಡದೊಡನೆ 49 ಸ್ಥಳಗಳಲ್ಲಿ ಪ್ರಾಥಮಿಕ ಹಂತದಲ್ಲಿ ಶಾಲೆಯಿಂದ ಹೊರತಾದ ಬೆಂಬಲ ಕೇಂದ್ರಗಳನ್ನು 2 ಗಂಟೆಗಳ ಕಾಲ ನಡೆಸಲು ಹಾಗೂ ಚಾಲ್ತಿಯಲ್ಲಿರುವ ಗ್ರಂಥಾಲಯಗಳು, ಚಟುವಟಿಕೆ ಕೇಂದ್ರಗಳು, ಬೋಧನಾ ಕಲಿಕಾ ಸಾಮಗ್ರಿಗಳ ಉಪಯೋಗಗಳು ಹಾಗೂ ಶಿಕ್ಷಕರ ಅಭಿವೃದ್ಧಿ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ ಪ್ರತಿವಾರವೂ ಶಾಲೆಗೆ ಬೆಂಬಲ ನೀಡುವುದಕ್ಕೆ ಕೆಲಸ ಮಾಡುತ್ತಿತ್ತು.

ಶಿಕ್ಷಾ ಪ್ರೋತ್ಸಾಹನ್ ಕೇಂದ್ರ (Shiksha Protsahan Kendra -SPKs) ಎಂದು ಕರೆಯಲ್ಪಡುವ ಏಕಲವ್ಯದ ಶಾಲೆಯಾಚೆಯ ಕೇಂದ್ರಗಳು ಮತ್ತು ಶಾಲೆಗಳು ಎರಡೂ ಕಡೆಯೂ ಪ್ರತೀ ತಿಂಗಳ ಮಟ್ಟದಲ್ಲಿ ಮಗುವಿನ ಹಾಜರಾತಿಯನ್ನು ಕಲೆಹಾಕಿ ಪರಿಶೀಲಿಸುವುದರ ಮೂಲಕ ಈ ಕೆಲಸದ ಪರಿಣಾಮವನ್ನು ಗಮನಿಸುತ್ತಿದ್ದೆವು. ಕಲಿಕಾ ಮಟ್ಟದ ಮೇಲಿನ ಪರಿಣಾಮಗಳನ್ನು 34ರಲ್ಲಿ 17 ಹಳ್ಳಿಗಳಲ್ಲಿ ನಡೆಸಿದ ಮಾದರಿ ಅಧ್ಯಯನದ ಮೂಲಕ ಅಭ್ಯಸಿಸಲಾಯಿತು. ಮೂರು ಮತ್ತು ಐದನೇ ತರಗತಿಯ ಮಕ್ಕಳ ಕಲಿಕಾ ಮಾಪನ ಮಾಡಲಾಯಿತು.

ಮಕ್ಕಳು ಗಳಿಸಿದ ಅಂಕಗಳಲ್ಲಿ ವರ್ಷ ಕಳೆದಂತೆ ಅಭಿವೃದ್ಧಿ ಇದೆಯೇ ಎಂಬುದನ್ನು ಗಮನಿಸುವುದು ಮೊದಲಿನ ಮೂಲ ಯೋಜನೆಯಾಗಿತ್ತು. ಏಕಲವ್ಯದ ನಿರಂತರ ಬೆಂಬಲವು ಮಕ್ಕಳಿಗೆ, ಶಿಕ್ಷಕರಿಗೆ ಹಾಗೂ ಪೋಷಕರಿಗೆ ದೊರಕಿದಾಗ ಪ್ರತಿ ತಂಡದ ವಿದ್ಯಾರ್ಥಿಗಳ ಕಲಿಕಾಮಟ್ಟದಲ್ಲಿ ಹೆಚ್ಚಳ ಆಗಿರಬೇಕೆಂಬುದು ಊಹೆಯಾಗಿತ್ತು. ಅಂದರೆ ಫೆಬ್ರವರಿ 2016ರಲ್ಲಿ ಮೂರನೇ ತರಗತಿಯಲ್ಲಿದ್ದ ಮಗುವಿಗೆ ಕೇವಲ ಕೆಲವೇ ತಿಂಗಳ ಬೆಂಬಲ ದೊರೆತಿತ್ತು, 2017ರಲ್ಲಿ ಮೂರನೇ ತರಗತಿಯಲ್ಲಿದ್ದ ಮಗುವಿಗೆ ಒಂದು ವರ್ಷದಷ್ಟು ಹಾಗೂ 2018ರಲ್ಲಿ ಮೂರನೇ ತರಗತಿಯಲ್ಲಿದ್ದ ಮಗುವಿಗೆ ಎರಡು ವರ್ಷಗಳಷ್ಟು ಹಾಗೂ 2019ರಲ್ಲಿ ಮೂರನೇ ತರಗತಿಯಲ್ಲಿದ್ದ ಮಗುವಿಗೆ ಮೂರು ವರ್ಷಗಳಷ್ಟು ಬೆಂಬಲ ದೊರೆತಿರುತ್ತದೆ. ಮೂರನೇ ತರಗತಿಯ ಎಲ್ಲ ಮಕ್ಕಳು ಆ ತರಗತಿ ಮುಗಿಸುವ ಹೊತ್ತಿಗಾದರೂ ಹಿಂದಿ ಮತ್ತು ಗಣಿತದಲ್ಲಿ ಒಂದನೇ ತರಗತಿಯಷ್ಟು ಸಾಮರ್ಥ್ಯಗಳನ್ನು ಗಳಿಸಿರಬೇಕು ಮತ್ತು 5ನೇ ತರಗತಿಯ ಮಕ್ಕಳು ಮೂರನೇ ತರಗತಿಯ ಮಟ್ಟದಷ್ಟಾದರೂ ಮೂಲ ಹಿಂದಿ ಮತ್ತು ಗಣಿತದ ಸಾಮರ್ಥ್ಯ ಸಾಧಿಸಬೇಕು ಎಂಬುದು ನಮ್ಮ ಧ್ಯೇಯವಾಗಿದ್ದಿತು. ಪ್ರತಿವರ್ಷದ ಫೆಬ್ರವರಿ – ಮಾರ್ಚ್‌ನಲ್ಲಿ ಮೌಖಿಕ ಮತ್ತು ಬರವಣಿಗೆ ರೂಪದ ಅಭ್ಯಾಸಗಳನ್ನು ಕೊಡುವ ಮೂಲಕ ಕಲಿಕೆಯ ಮಟ್ಟವನ್ನು 'ಏಕಲವ್ಯ'ದ ಕೇಂದ್ರ ತಂಡ ಹಾಗೂ ಕೆಲವು ಕ್ಷೇತ್ರ ತಂಡದ ಸದಸ್ಯರು ಕೂಡಿ ಮಾಪನ ಮಾಡುತ್ತಿದ್ದರು. ಪ್ರತಿ ವರ್ಷವೂ ಮೂರನೇ ತರಗತಿಯ ಸುಮಾರು 150 ಮಕ್ಕಳು ಹಾಗೂ 5ನೇ ತರಗತಿಯ ಸುಮಾರು 150 ಮಕ್ಕಳನ್ನು ಪರೀಕ್ಷೆ ಮಾಡಲಾಯಿತು. ಎಲ್ಲ ವರ್ಷಗಳಲ್ಲಿ ಪರೀಕ್ಷೆಗೆ ವಿವಿಧ ತಂಡಗಳಿಗೆ ಉಪಯೋಗಿಸಿದ ಪರೀಕ್ಷಾ ಪತ್ರಿಕೆಯು ಒಂದೇ ಆಗಿದೆ.

**ಎಲ್ಲ ಮಕ್ಕಳು ಕಲಿತಿದ್ದಾರಾ?**

ನಮ್ಮ ಫಲಿತಗಳು
ಸರಾಸರಿ ಅಂಕಗಳು

ಕೆಳಗೆ ತೋರಿಸಿರುವ ಸರಾಸರಿ ಅಂಕಗಳು ಆಧಾರರೇಖೆ (2016), ಮಧ್ಯರೇಖೆ (2017), ಕೊನೆಯ ರೇಖೆ – 1 (2018) ಮತ್ತು ಕೊನೆಯ ರೇಖೆ – 2 (2019) ಅಧ್ಯಯನಗಳ ನಾಲ್ಕು ಅನುಕ್ರಮವಾದ ಗುಂಪುಗಳ 3 ಮತ್ತು 5ನೇ ತರಗತಿಯ ಮಕ್ಕಳ ಫಲಿತಾಂಶವನ್ನು ತೋರಿಸುತ್ತದೆ. ಸರಾಸರಿ ಅಂಕಗಳಲ್ಲಿ ಹೆಚ್ಚಳವಾಗಿರುವುದು ನಾಲ್ಕು ವರ್ಷದಲ್ಲಿ ಸಾಧನೆಯು ಉತ್ತಮಗೊಂಡಿದೆ ಎಂಬುದನ್ನು ನಮಗೆ ತೋರಿಸುತ್ತದೆ.

| ಗಣಿತ ತರಗತಿ | ಶೇಕಡಾವಾರು ಸರಾಸರಿ ಅಂಕ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| **ಕೊನೆಯ ರೇಖೆ 2018-19** | 68% | 158 |
| **ಕೊನೆಯ ರೇಖೆ 2017-18** | 53% | 141 |
| **ಮಧ್ಯರೇಖೆ 2016-17** | 42% | 161 |
| **ಆಧಾರರೇಖೆ 2015-16** | 33% | 161 |

| ಗಣಿತ ತರಗತಿ | ಶೇಕಡಾವಾರು ಸರಾಸರಿ ಅಂಕ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| **ಕೊನೆಯ ರೇಖೆ 2018-19** | 45% | 188 |
| **ಕೊನೆಯ ರೇಖೆ 2017-18** | 34% | 165 |
| **ಮಧ್ಯರೇಖೆ 2016-17** | 31% | 165 |
| **ಆಧಾರರೇಖೆ 2015-16** | 28% | 152 |

| ಭಾಷಾ ತರಗತಿ | ಶೇಕಡಾವಾರು ಸರಾಸರಿ ಅಂಕ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| **ಕೊನೆಯ ರೇಖೆ 2018-19** | 38% | 154 |
| **ಕೊನೆಯ ರೇಖೆ 2017-18** | 34% | 136 |
| **ಮಧ್ಯರೇಖೆ 2016-17** | 30% | 161 |
| **ಆಧಾರರೇಖೆ 2015-16** | 18% | 151 |

| ಭಾಷಾ ತರಗತಿ | ಶೇಕಡಾವಾರು ಸರಾಸರಿ ಅಂಕ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| **ಕೊನೆಯ ರೇಖೆ 2018-19** | 59% | 191 |
| **ಕೊನೆಯ ರೇಖೆ 2017-18** | 49.4% | 162 |
| **ಮಧ್ಯರೇಖೆ 2016-17** | 49.2% | 164 |
| **ಆಧಾರರೇಖೆ 2015-16** | 41.6% | 141 |

**ಸೊನ್ನೆ ಅಂಕೆಯ ಮಕ್ಕಳು**

ಪ್ರತಿ ಪರೀಕ್ಷೆಯ ಪತ್ರಿಕೆಗಳಲ್ಲೂ ಬೇರೆಬೇರೆ ಅಂಕಗಳನ್ನು– 0, 1, 2, 3, 4 – ಪಡೆದ ಮಕ್ಕಳ ಶೇಕಡಾವಾರು ಪ್ರಗತಿಯನ್ನು ಗಮನಿಸಿದೆವು. ನಾಲ್ಕು ವರ್ಷಗಳಲ್ಲಿ 5ನೇ ತರಗತಿಯ ಗಣಿತ ಹಾಗೂ ಸ್ವಲ್ಪಮಟ್ಟಿಗೆ 5ನೇ ತರಗತಿಯ ಭಾಷೆಯನ್ನು ಹೊರತುಪಡಿಸಿ ಸೊನ್ನೆ ಅಂಕ ಗಳಿಸುವ ಮಕ್ಕಳ ಶೇಕಡಾವಾರು ಸಂಖ್ಯೆ ಸುಮಾರಾಗಿ ಕಡಿಮೆಗೊಂಡಿತ್ತು. ಉದಾಹರಣೆಗೆ 3ನೇ ತರಗತಿಯ ಹಿಂದಿಯಲ್ಲಿ 65 % ಮಕ್ಕಳು 2016ರಲ್ಲಿ ಸೊನ್ನೆ ಗಳಿಸಿದ್ದರೆ 2017ರಲ್ಲಿ 50 % ಮತ್ತು 2018ರಲ್ಲಿ 45 % ಮತ್ತು 2019ರಲ್ಲಿ 39 % ಇದ್ದರು. ಈ ನಾಲ್ಕು ವರ್ಷಗಳಲ್ಲಿ ಮೂರನೇ ತರಗತಿಯ ತಂಡಗಳಲ್ಲಿ ಗಣಿತದಲ್ಲಿ ಸೊನ್ನೆ ಅಂಕ ಪಡೆದ ಮಕ್ಕಳ ಶೇಕಡಾವಾರು 30, 27, 18 ಮತ್ತು 9 ಆಗಿದ್ದಿತು. ಒಟ್ಟಾರೆ ಗಮನಿಸಿದ ದತ್ತಾಂಶಗಳು ತೋರಿಸಿದಂತೆ ಈ ಯೋಜನೆಯು ಮುಂದುವರಿದ ಹಾಗೆಯೇ ಪ್ರತಿವರ್ಷವೂ ಮಕ್ಕಳ ಕಲಿಕೆಯಲ್ಲಿ ಏರಿಕೆಯಾಗುತ್ತಿದ್ದು, ಹೆಚ್ಚು ಹೆಚ್ಚು ಮಕ್ಕಳು ಕಲಿಯುತ್ತಿದ್ದರು.

#### ಕಲಿಯದೇ ಇರುವ ಮಕ್ಕಳ ಬಗ್ಗೆ ಕಲಿಯುವುದು

ಮಧ್ಯರೇಖೆಯ ಅಧ್ಯಯನದ ಫಲಿತಾಂಶಗಳು ದೊರೆತ ನಂತರ ಪರಿಶೀಲಿಸಿ ಸಾಕಷ್ಟು ಮಕ್ಕಳು ೦ ಪಡೆದದ್ದನ್ನು ಗಮನಿಸಿದೆವು ಹಾಗೂ ಅವರ ಬಗ್ಗೆ ನಾವು ಹೆಚ್ಚು ತಿಳಿಯಲು ನಿರ್ಧರಿಸಿದೆವು. ೨೦16ರ ಆಧಾರ ರೇಖೆಯ ಅಧ್ಯಯನದಲ್ಲಿ ೦ ಅಂಕ ಪಡೆದ ಮಕ್ಕಳಿಗೆ ಈ ಪರೀಕ್ಷೆಗಳನ್ನು ಪುನರಾವರ್ತಿಸಲು ನಿರ್ಧರಿಸಿದೆವು. ಈ ಮಕ್ಕಳು 5 ಮತ್ತು 7ನೇ ತರಗತಿಯನ್ನು ಮುಟ್ಟಿದರು. ಉದಾಹರಣೆಗೆ ಮಾರ್ಚ್ ೨೦16ರಲ್ಲಿ ನಡೆದ ಆಧಾರ ರೇಖೆಯ ಅಧ್ಯಯನದಲ್ಲಿ 3ನೇ ತರಗತಿಯ ೯8 ಮಕ್ಕಳು ಸೊನ್ನೆ ಪಡೆದಿದ್ದರು, 2017 ನವೆಂಬರ್ ಹೊತ್ತಿಗೆ ಈ ಮಕ್ಕಳಲ್ಲಿ ೮8 ಮಕ್ಕಳು ಅದೇ ಪ್ರಶ್ನೆಪತ್ರಿಕೆಯಲ್ಲಿ ಪರೀಕ್ಷೆ ತೆಗೆದುಕೊಂಡರು (ಆ ಸಮಯದಲ್ಲಿ ಅವರು 5ನೇ ತರಗತಿಯಲ್ಲಿದ್ದರು). ಐವತ್ತೆಂಟು ಮಕ್ಕಳು ತಮ್ಮ ಕಲಿಕೆಯ ಮಟ್ಟದಲ್ಲಿ ಸುಧಾರಿಸಿದ್ದರು ಹಾಗೂ ಹೆಚ್ಚು ಅಂಕ ಪಡೆದರು. ಆದರೆ ಅವರಲ್ಲಿನ ಮೂವತ್ತು ಮಕ್ಕಳು ಮತ್ತೆ ೦ ಅಂಕ ಪಡೆದರು.

ಈ ಅಂಶಗಳನ್ನು ಪರಿಗಣಿಸಿ ಶಾಲೆ ಮತ್ತು ಎಸ್‌ಪಿಕೆಗೆ ಒಂದು ವರ್ಷದ ಕಾಲ ಬಂದರೂ ಕೂಡ ಯಾವುದೇ ಸಾಮರ್ಥ್ಯಗಳನ್ನು ಬೆಳೆಸಿಕೊಳ್ಳಲಾಗದ ಮಕ್ಕಳ ಪಟ್ಟಿಯನ್ನು ಮಾಡಿದೆವು. ನಾವು ಅವರ ಹಾಜರಾತಿಯನ್ನು ಗಮನಿಸಿದೆವು. ಪರಾಮರ್ಶೆಯ ಕೆಲವು ಉದಾಹರಣೆಗಳು ಇಲ್ಲಿವೆ:

**ಅಂಕದಲ್ಲಿ ಮುಂದುವರೆಯದವರ ಪಟ್ಟಿ (೦ ಇಂದ ೦ ಅಂಕೆಗೆ 2016 ರಿಂದ 2017)**

| 2016ರಲ್ಲಿ ೦ ಅಂಕ ಗಳಿಸಿದ್ದ ವಿದ್ಯಾರ್ಥಿ | 2015-16ರ ಶಾಲೆ ಹಾಜರಾತಿ | 2015-16ರ ಎಸ್‌ಪಿಕೆ ಹಾಜರಾತಿ | 2016-17ರ ಶಾಲೆ ಹಾಜರಾತಿ | 2016-17ರ ಎಸ್‌ಪಿಕೆ ಹಾಜರಾತಿ | ಮರು ಪರೀಕ್ಷೆಯಲ್ಲಿ ೦ (ಅಕ್ಟೋ 2017) |
|---|---|---|---|---|---|
| ಅಮಿತಾ | 80% | 75% | 79% | 82% | ಗಣಿತ |
| ಸೋನಂ | 68% | 61% | 59% | 66% | ಗಣಿತ |
| ಅಮೃತ | 70% | 63% | 67% | 64% | ಗಣಿತ |
| ರಾಣಿ | 62% | 55% | 66% | 74% | ಗಣಿತ |
| ಮನಿಷ್ | 73% | 68% | 56% | 64% | ಗಣಿತ |
| ಜಯಕಿಶನ್ | 73% | 67% | NA | NA | ಎರಡರಲ್ಲೂ |

#### ವಿಷಯ ಅಧ್ಯಯನಗಳು (Case studies)

ನಾವು ಕಂಡುಕೊಂಡ ಫಲಿತಗಳ ಆಧಾರದ ಮೇಲೆ ಮಕ್ಕಳನ್ನು, ಅವರ ಪಾಲಕರು ಹಾಗೂ ಶಿಕ್ಷಕರನ್ನು ಅವರ ಹಳ್ಳಿಗಳಲ್ಲಿಯೇ ಭೇಟಿ ಮಾಡಿದೆವು. ಹೀಗೆ ಮೂವತ್ತು ಮಕ್ಕಳ ಬಗ್ಗೆ ಚರ್ಚಿಸಿ ಮನೆಯಲ್ಲಿ, ಶಾಲೆಯಲ್ಲಿ ಮತ್ತು ಎಸ್‌ಪಿಕೆಯಲ್ಲಿ ಅವರ ಪಾಲ್ಗೊಳ್ಳುವಿಕೆಯನ್ನು ದಾಖಲಿಸಲಾಯಿತು. ಟಾಟಾ ಇನ್ಸ್‌ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್‌(TISS)ನ ನಾಲ್ಕು ವಿದ್ಯಾರ್ಥಿಗಳು ಅವರ ಗ್ರಾಮೀಣ ಪ್ರಾಯೋಗಿಕ ಭಾಗವಾಗಿ ನಮ್ಮ ತಂಡವನ್ನು ಮಾರ್ಚ್ ೨೦18ರ ಕೊನೆಯ ವಾರದಲ್ಲಿ ಸೇರಿಕೊಂಡು ಅಧ್ಯಯನಗಳಲ್ಲಿ ಸಹಾಯ ಮಾಡಿದರು. ಕೆಲವು ಉದಾಹರಣೆಗಳನ್ನು ಕೆಳಗೆ ನೀಡಿದೆ.

#### ವಿಷಯ ಅಧ್ಯಯನ 1

ಲಕ್ಷ್ಮಿಯ ಶಿಕ್ಷಕರ ಪ್ರಕಾರ ಅವಳು ತನ್ನ ಬಗ್ಗೆ ಕೇವಲ ಕೆಲವು ವಿಷಯಗಳನ್ನಷ್ಟೇ ಬರೆಯಬಲ್ಲಳು. ತನ್ನ ಹೆಸರು, ತನ್ನ ಪಾಲಕರ ಹೆಸರು, ಹಳ್ಳಿಯ ಹೆಸರು ಹೀಗೆ. ಅವಳು ಚಿತ್ರಗಳನ್ನು ಸರಿಯಾಗಿ ಗುರುತಿಸಬಲ್ಲಳು. ಗುಣಿತಾಕ್ಷರಗಳನ್ನೊಳಗೊಂಡ ಅಕ್ಷರಗಳನ್ನು ಬರೆಯಲು ಕಷ್ಟಪಡುತ್ತಾಳೆ. ಗಣಿತದಲ್ಲಿ ಅವಳು ನೂರರವರೆಗೆ ಎಣಿಸಬಲ್ಲಳು ಮತ್ತು ಸಾಮಾನ್ಯ ಕೂಡುವುದು ಮತ್ತು ಕಳೆಯುವುದನ್ನು ಮಾಡಬಲ್ಲಳು. ಅವಳ ಎಸ್‌ಪಿಕೆ ಶಿಕ್ಷಕಿಯು ನಮಗೆ ಹೇಳಿದ್ದೆಂದರೆ ಅವಳು ನಿಯಮಿತವಾಗಿ ತರಗತಿಗೆ ಬರುತ್ತಿದ್ದಾಳೆ ಹಾಗೂ ೮2 % ಹಾಜರಾತಿ ಇದೆ. ಮಕ್ಕಳನ್ನು ಅವರ ತಾಯಿ ಒಬ್ಬರೇ ಬೆಳೆಸುತ್ತಿದ್ದಾರೆ ಹಾಗೂ ಅವರೊಬ್ಬರೇ ಮನೆಯಲ್ಲಿ ಸಂಪಾದಿಸುವ ವ್ಯಕ್ತಿ. ಲಕ್ಷ್ಮಿಗೆ ಕೇವಲ ಒಂಬತ್ತು ತಿಂಗಳಾಗಿದ್ದಾಗ ಅವಳ ತಂದೆ ತೀರಿಕೊಂಡರು. ಅವಳ ತಾಯಿ ಸೋನಂ ಆಗಾಗ ಹತ್ತಿರದ ನಗರಗಳಿಗೆ ಉದಾಹರಣೆಗೆ, ಪಿಪಾರಿಯಾಗೆ ಕೂಲಿ ಕೆಲಸಕ್ಕಾಗಿಯೂ ಹೋಗುತ್ತಾರೆ. ಹೆಚ್ಚಿನ ದುಡಿಮೆಗಾಗಿ ಒಣಗಿಸಿದ ಕಾಡು ಇಪ್ಪೆ (ಮಾಹುವ) ಮಾರುತ್ತಾರೆ. ಆಕೆಯು ಮಕ್ಕಳನ್ನು ಕಾಡಿಗೆ ಇಪ್ಪೆಯನ್ನು ಸಂಗ್ರಹಿಸಲು ಕರೆದೊಯ್ಯದಂತೆ ಬಹಳಷ್ಟು ಗಮನ ನೀಡುತ್ತಾರೆ. ಆಕೆಯು ಕೆಲಸಕ್ಕೆ ಹೋಗಿದ್ದಾಗ ಲಕ್ಷ್ಮಿ ಮತ್ತು ಒಂಬತ್ತನೆ ತರಗತಿಯಲ್ಲಿ ಓದುತ್ತಿರುವ ಅವಳ ಅಣ್ಣ ಇಬ್ಬರೇ ಮನೆಯಲ್ಲಿ ಇರುತ್ತಾರೆ, ತಾವೇ ಅಡುಗೆ ಮಾಡಿಕೊಳ್ಳುತ್ತಾರೆ. ಅವಳ ತಾಯಿ ಹೇಳುವಂತೆ ಲಕ್ಷ್ಮಿಯು ಬೆಳಗಿನ ಐದು ಗಂಟೆಗೇ ಎದ್ದು ಎರಡು ಗಂಟೆಗಳ ಕಾಲ ಓದುತ್ತಾಳೆ. ನಂತರ ಎಸ್‌ಪಿಕೆ ತರಗತಿಗೆ ಮತ್ತು ಶಾಲೆಗೆ ಹೋಗುತ್ತಾಳೆ.

ಲಕ್ಷ್ಮಿಯ ತಾಯಿಯು ನಮಗೆ ಮತ್ತೊಂದು ವಿಷಯವನ್ನು ತಿಳಿಸಿದರು. ಅವರ ಮಗನು ೯ನೇ ತರಗತಿಯಲ್ಲಿ ಓದುತ್ತಿದ್ದರೂ ಆತನು ಕಲಿಕೆಯಲ್ಲಿ ಹಿಂದಿದ್ದಾನೆ ಮತ್ತು ಸರಿಯಾಗಿ ಓದಲಾಗಲೀ ಅಥವಾ ಬರೆಯುವುದಕ್ಕಾಗಲೀ ಬರುವುದಿಲ್ಲ. ಪ್ರಾಥಮಿಕ ಶಾಲೆಯ ಶಿಕ್ಷಕರು ಆಲಸಿಯಾಗಿದ್ದು ಕೆಲವೊಮ್ಮೆ ಮದ್ಯ ಸೇವಿಸಿ ಶಾಲೆಗೆ ಬರುತ್ತಾರೆ ಎಂದೂ ಆಕೆ ತಿಳಿಸಿದರು. ಈಗ ಇಷ್ಟಾದರೂ ಕಲಿತಿರುವುದು ಎಸ್‌ಪಿಕೆ ತರಗತಿಗಳಿಂದ ಮಾತ್ರ, ಇದರಿಂದಾಗಿ ಅವಳ ಶೈಕ್ಷಣಿಕ ಸಾಧನೆ ಉತ್ತಮಗೊಂಡಿದೆ ಎಂದು ತಿಳಿಸಿದರು.

#### ವಿಷಯ ಅಧ್ಯಯನ 2

ಸುನಿಲ್‌ನು ಶಾಲೆಗೆ ಸರಿಯಾಗಿ ಬರುವುದಿಲ್ಲ. ಅವನು 4ನೇ ತರಗತಿಗೆ ಕೆಲ ಬಾರಿಯಷ್ಟೇ ಬಂದಿದ್ದನು, 5ನೇ ತರಗತಿಯಲ್ಲಿ ಮತ್ತೂ ಕಡಿಮೆ. ಐದನೇ ತರಗತಿಯಲ್ಲಿ ಸುನಿಲ್ ಈಗ ಇದ್ದರೂ

ಕೂಡ ಅವನಿಗೆ ಅಕ್ಷರಗಳನ್ನು ಗುರುತಿಸುವುದಾಗಲೀ ಸಂಖ್ಯೆಗಳನ್ನು ಗುರುತಿಸುವುದಾಗಲೀ ಸಾಧ್ಯವಾಗುತ್ತಿಲ್ಲ. ಅವನ ಪರೀಕ್ಷೆಯ ಪತ್ರಿಕೆಗಳಲ್ಲಿ ತನ್ನ ಪೋಷಕರ ಹೆಸರುಗಳು ಮತ್ತು ದಿನಾಂಕವನ್ನು ಸರಿಯಾಗಿ ಬರೆಯಲು ಸಹ ಅವನಿಗೆ ಸಾಧ್ಯವಾಗುತ್ತಿಲ್ಲ. ಅವನ ಶಿಕ್ಷಕರು ಹೇಳುವಂತೆ ಅವನ ಕಲಿಕೆಯ ಮಟ್ಟ ಒಂದನೇ ತರಗತಿಯ ವಿದ್ಯಾರ್ಥಿಯ ಮಟ್ಟದಲ್ಲಿದೆ. ಆದರೆ ಅವನು ಚಿತ್ರಗಳನ್ನು ಸೃಜನಶೀಲವಾಗಿಯೂ ಹಾಗೂ ಉತ್ತಮವಾಗಿಯೂ ಚಿತ್ರಿಸುತ್ತಾನೆ. ಸುನಿಲನ ಪೋಷಕರು ಹೇಳುವಂತೆ ಅವರು ಅವನನ್ನು ಶಾಲೆಗೆ ಕರೆದುಕೊಂಡು ಹೋಗುತ್ತಾರೆ. ಆದರೆ ಅವನು ಮಧ್ಯದಲ್ಲಿಯೇ ಓಡಿಹೋಗಿ ತನ್ನ ಸ್ನೇಹಿತರೊಂದಿಗೆ ಆಟವಾಡಲು ಸೇರುತ್ತಾನೆ ಹಾಗೂ ಬಲವಂತ ಮಾಡಿದರೆ ಬಹಳ ಆಕ್ರಮಣಶೀಲನಾಗಿ ವರ್ತಿಸುತ್ತಾನೆ.

ಸುನಿಲ್‌ನು ಇತರೆ ಹಿಂದುಳಿದ ಜಾತಿಯ ಯಾದವ ಕುಟುಂಬದವನು. ಹಳ್ಳಿಯ ಇತರೆ ಪರಿಶಿಷ್ಟ ಪಂಗಡದ ಜನರಿಗಿಂತ ಆರ್ಥಿಕವಾಗಿ ಉತ್ತಮವಾಗಿರುವ ಕುಲದವರು ಅವರು. ಸುನಿಲನು ಒಂದು ಉತ್ತಮ ಮನೆಯಲ್ಲಿ ವಾಸಮಾಡುತ್ತಾನೆ ಹಾಗೂ ಕುಟುಂಬವು ಜಾನುವಾರುಗಳನ್ನು ಹೊಂದಿದೆ. ಅವರ ಆದಾಯ ಮೂಲವು ಹಾಲು ಮಾರುವುದರಿಂದ ಬರುತ್ತದೆ. ಅವರ ಮನೆಯಲ್ಲಿ ಕೆಲಸಗಳನ್ನು ಹಂಚಿಕೊಳ್ಳುತ್ತಾರೆ – ಅವರ ತಾಯಿಯು ಎಮ್ಮೆಯ ಹಾಲು ಕರೆಯುವ ಜವಾಬ್ದಾರಿ ಹೊಂದಿದ್ದಾರೆ, ಸುನಿಲ ಮತ್ತು ಅವನ ಅಣ್ಣ ಆಕಳುಗಳಿಗೆ ಆಹಾರ ನೀಡುವ ಜವಾಬ್ದಾರಿ, ಅವರ ತಂದೆ ಪಿಪಾರಿಯಾಗೆ ಹೋಗಿ ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಮಾರುವ ಕೆಲಸ ಮಾಡುತ್ತಾರೆ. ಈ ಕುಟುಂಬವು ತಿಂಗಳಿಗೆ ಸುಮಾರು ಹತ್ತು ಸಾವಿರದಷ್ಟು ಆದಾಯ ಹೊಂದಿದ್ದು, ಸುತ್ತಮುತ್ತಲಿನ ಇತರ ಕುಟುಂಬಗಳು ಕೃಷಿಯಿಂದ ಗಳಿಸುವ ಆದಾಯಕ್ಕಿಂತಲೂ ಎರಡರಷ್ಟಿದೆ. ಅವನು ಹಾಗೂ ಅವನ ಅಣ್ಣ ಜಯರಾಮ್ ಕಾಡಿಗೆ ಇಪ್ಪೆ/ಮಾಹುವಾ, ತೆಂಡು(ಅಬನಾಸಿ) ಮತ್ತು ಹುಣಸೆಹಣ್ಣು ಸಂಗ್ರಹಿಸಲು ಹೋಗುತ್ತಾರೆ. ಇವನ್ನು ಅವರು ಮಾರುಕಟ್ಟೆಯಲ್ಲಿ ಕೆಜಿಗೆ ಮೂವತ್ತು– ನಲವತ್ತು ರೂಪಾಯಿಗೆ ಮಾರುತ್ತಾರೆ. ಈ ಕುಟುಂಬವು ಭೂಮಿಯನ್ನು ಸಹ ಹೊಂದಿದ್ದು, ನಿಯಮಿತವಾದ ಆದಾಯ ಬರುತ್ತದೆ.

ಸುನಿಲನ ಸ್ನೇಹಿತರು ಹೇಳುವಂತೆ ಅವರಿಗೆ ಶಿಕ್ಷಣವು ಮುಖ್ಯವಾಗಿದೆ. ಶಿಕ್ಷಕರು ಚೆನ್ನಾಗಿ ಪಾಠ ಮಾಡುತ್ತಾರೆ ಮತ್ತು ಅವರನ್ನು ಹೊಡೆಯುವುದಿಲ್ಲ. ಅವರಿಗೆ ಓದಿನಲ್ಲಿ ಆಸಕ್ತಿ ಇಲ್ಲದ್ದರಿಂದ ಅವರು ಶಾಲೆಗೆ ಬರುವುದಿಲ್ಲ ಎಂದು ಹೇಳಿದರು. ಸುನಿಲ್‌ನ ಅಣ್ಣ 7 ಕಿಲೋಮೀಟರ್ ದೂರದಲ್ಲಿರುವ ಶಾಲೆಗೆ ಹೋಗುತ್ತಾನೆ. ಅವನು 2016ರಲ್ಲಿ 5ನೇ ತರಗತಿಯಲ್ಲಿದ್ದಾಗ ಅವನಿಗೂ ಸೊನ್ನೆ ಅಂಕ ಬಂದಿತ್ತು, 2017ರಲ್ಲಿ ಮತ್ತೊಮ್ಮೆ ಬರೆದ ಪರೀಕ್ಷೆಗಳಲ್ಲಿ ಅವನು ಏಳನೇ ತರಗತಿಯಲ್ಲಿದ್ದಾಗ ಮತ್ತೆ ಸೊನ್ನೆ ಅಂಕವನ್ನೇ ಪಡೆದ.

**ಫಲಿತಗಳ ಬಗೆಗೆ ನಮ್ಮ ಪರ್ಯಾಲೋಚನೆಗಳು**

ತಾಮಿಯಾ ಕಾಡಿನ ಒಂದು ಗುಡ್ಡಗಾಡು ಪ್ರದೇಶವಾಗಿದೆ. ಇಲ್ಲಿ ಹೆಚ್ಚಾಗಿ ಗೋಂಡ್ ಮತ್ತು ಭಾರಿಯಾ ಪಂಗಡಗಳ ಸಮುದಾಯದವರು ವಾಸಿಸುತ್ತಾರೆ. ಮೇಲಿನ ಉದಾಹರಣೆಯಲ್ಲಿ ನೋಡಿದ ಲಕ್ಷ್ಮಿಯಂತಹ ದೊಡ್ಡ ಸಂಖ್ಯೆಯ ಕುಟುಂಬಗಳು ಬಡ ಅಂಚಿನ ಕೃಷಿಕರದು. ಅವರ ಬದುಕು ಕೂಲಿ ಕೆಲಸಕ್ಕಾಗಿ ಕಾಲಕ್ಕೆ ತಕ್ಕಂತೆ ವಲಸೆ ಹೋಗುವುದರ ಮೇಲೆಯೇ ನಿಂತಿದೆ. ನಾವು ಈ ಹಿನ್ನೆಲೆಯ ಮಕ್ಕಳ ಸಾಧನೆಯನ್ನು ಗಮನಿಸುತ್ತಿದ್ದೇವೆ ಮತ್ತು , ಇದೇ ಸಾಮಾಜಿಕ – ಆರ್ಥಿಕ ಹಿನ್ನೆಲೆಯಲ್ಲಿನ ಕೆಲವು ಮಕ್ಕಳು ಉತ್ತಮ ಸಾಧನೆ ತೋರಿದ್ದರೂ, ಯಾರು ಕಲಿಕೆಯಲ್ಲಿ ಹೆಚ್ಚಿನ ಬದಲಾವಣೆ ತೋರಿಸುತ್ತಿಲ್ಲವೋ ಆ ಮಕ್ಕಳ ಮೇಲೆ ಗಮನ ನೀಡಿ ಪರಿಶೀಲಿಸುತ್ತಿದ್ದೇವೆ.

ಮತ್ತೊಂದೆಡೆ, ಇವರಿಗಿಂತಲೂ ಸ್ಥಿತಿವಂತರಾಗಿರುವ ಮತ್ತು ಸಾಮಾಜಿಕವಾಗಿ ಮೇಲಿರುವ ಕುಟುಂಬದ ಸುನಿಲ್‌ನಂತಹ ಇತರ ಮಕ್ಕಳು ಕೆಳಗಿನ ತರಗತಿಯ ಮಟ್ಟದ ಕಲಿಕೆಗಳೂ ಆಗಿರದ ಸುನೀಲ್‌ನಂತವರೂ ನಮಗೆ ಕಾಣ ಸಿಕ್ಕರು. ಕೆಲವು ಪ್ರಸಂಗಗಳಲ್ಲಿ ಅವರ ಒಡಹುಟ್ಟಿದವರೂ ಕೂಡ ಕಲಿಕೆಯಲ್ಲಿ ಕಷ್ಟಪಟ್ಟಿದ್ದರು. ಕೆಲವರು ಅವರು 7ನೇ ತರಗತಿಗೆ ಬರುವ ವೇಳೆಗೆ ಕಲಿಕೆಯಲ್ಲಿ ಪ್ರಗತಿ ಸಾಧಿಸಿದ್ದರಾದರೂ ಉಳಿದವರು ಹೆಚ್ಚೇನೂ ಪ್ರಗತಿ ಸಾಧಿಸಲಿಲ್ಲ. ಕೆಲವು ಪೋಷಕರು ತಮ್ಮ ಮಕ್ಕಳ ಕಲಿಕೆಯನ್ನು ಗಂಭೀರವಾಗಿ ಪರಿಗಣಿಸುತ್ತಿದ್ದರು ಮತ್ತು ಹತಾಶರಾದರು. ಆದರೆ ಎಲ್ಲದಕ್ಕೂ ಅವರು ಶಿಕ್ಷಕರನ್ನೇನೂ ದೂರುತ್ತಿರಲಿಲ್ಲ, ಕೆಲವು ಶಿಕ್ಷಕರನ್ನು ಅವರ ಪರಿಶ್ರಮಕ್ಕೆ ಗೌರವಿಸುತ್ತಿದ್ದರು ಕೂಡ. ಕೆಲವೆಡೆ ಕೆಲವು ಮನೆಗಳಲ್ಲಿ ಪೋಷಕರಿಬ್ಬರೂ ಪ್ರಾಥಮಿಕ ಹಂತದ ಶಿಕ್ಷಣ ಪಡೆದು, ಸರ್ಕಾರಿ ನೌಕರಿಯಲ್ಲೋ ಅಥವಾ ವ್ಯಾಪಾರದಲ್ಲೋ ತೊಡಗಿಕೊಂಡಿದ್ದರು, ಆದರೆ ಅವರಲ್ಲೂ ಕೆಲವು ಮಕ್ಕಳು ಸೊನ್ನೆ ಅಂಕ ಪಡೆದಿರುವುದನ್ನು ನಮ್ಮ ಎರಡು ವರ್ಷದ ಅಧ್ಯಯನದಲ್ಲಿ ಗಮನಿಸಿದೆವು.

ದತ್ತಾಂಶಗಳು ಮತ್ತು ವಿಷಯ ಅಧ್ಯಯನಗಳನ್ನು ಗಮನಿಸಿದಾಗ ನಾವು ಕಂಡುಕೊಂಡದ್ದೆಂದರೆ ಯಾವುದೇ ಗುಂಪಿನ ಮಕ್ಕಳ ಕಲಿಕೆಯಲ್ಲಿನ ಕಡಿಮೆ ಸಾಧನೆಗೆ ಯಾವುದೇ ರೀತಿಯ ಕಾರ್ಯಕಾರಿ ಸಂಬಂಧಗಳ ಮಾದರಿಯೇನೂ ಕಂಡು–ಬರುತ್ತಿರಲಿಲ್ಲ. ಯಾವುದೋ ಒಂದು ನಿರ್ದಿಷ್ಟ ಕಲಿಕಾ ನ್ಯೂನತೆಗಳು ಈ ಗುಂಪಿನಲ್ಲಿರುವ ಒಂದು ಸಾಧ್ಯತೆ ಇರಬಹುದೇನೋ ಎಂಬುದನ್ನು ನಾವು ಪರಿಗಣಿಸಿದೆವು. ನಾವು ಅಧ್ಯಯನ ಮಾಡಿದ ಕೆಲವು ಸಂಶೋಧನಾ ಲೇಖನಗಳೂ ನಮ್ಮ ಚಿಂತನೆಗೆ ಪುಷ್ಟಿ ನೀಡಿದವು. ಉದಾ: ನಿರ್ದಿಷ್ಟ ಕಲಿಕಾ ಕ್ಲಿಷ್ಟತೆಯ (ಎಸ್‌ಎಲ್‌ಡಿ) ಇರುವಿಕೆಯಲ್ಲಿ ಸಾಮಾಜಿಕ – ಆರ್ಥಿಕ ಹಿನ್ನೆಲೆಯು ಯಾವುದೇ ರೀತಿಯ ಪಾತ್ರವನ್ನೂ ವಹಿಸುವುದಿಲ್ಲ. ನಾವು ಗಮನಿಸಿದ ಇತರ ವಿಚಾರಗಳೆಂದರೆ:

- ನಿರ್ದಿಷ್ಟ ಕಲಿಕಾ ನ್ಯೂನತೆಗಳಿಗೆ ಕಾರಣವಾಗುವ ನರಸಂಬಂಧೀ ಸ್ಥಿತಿಯು ಸ್ವಲ್ಪಮಟ್ಟಿಗೆ ಕುಟುಂಬದಲ್ಲಿ ಹರಿಯಬಹುದು.
- ನಿರ್ದಿಷ್ಟ ಕಲಿಕಾ ಕ್ಲಿಷ್ಟತೆಗಳು ಇತರ ವಿಶೇಷ ಅಗತ್ಯಗಳೊಡನೆ ಸೇರಿಕೊಂಡಿರಬಹುದು ಉದಾ: ಅತಿ ಚಟುವಟಿಕೆ ಮತ್ತು ಗಮನದ ಕೊರತೆ
- ನಿರ್ದಿಷ್ಟ ಕಲಿಕಾ ಕ್ಲಿಷ್ಟತೆಗಳು ಮತ್ತು ಬುದ್ಧಿಮತ್ತೆ ಮಟ್ಟಕ್ಕೆ ಯಾವುದೇ ಸಂಬಂಧವಿರುವುದಿಲ್ಲ.
- ನಿರ್ದಿಷ್ಟ ಕಲಿಕಾ ಕ್ಲಿಷ್ಟತೆಗಳು ಕೆಲವು ಮಕ್ಕಳಲ್ಲಿ ಓದಲು–ಬರೆಯಲು ಕಷ್ಟಪಡುವುದರಲ್ಲಿ ಸವಾಲುಗಳಾಗಿ ತೋರಿಸಿ–ಕೊಳ್ಳಬಹುದು. ಆದರೆ, ಅಂಕಿಗಳ ಚಟುವಟಿಕೆ ಕಷ್ಟವಾಗದಿರ–ಬಹುದು, ಕೆಲವು ಮಕ್ಕಳಲ್ಲಿ ಇದರ ವಿರುದ್ಧವೂ ಆಗಬಹುದು ಮತ್ತೂ ಕೆಲವರಲ್ಲಿ ಒಟ್ಟಿಗೆ ಎರಡರಲ್ಲೂ ಕಷ್ಟವಿರಬಹುದು.

ಕಡಿಮೆ ಕಲಿಕಾ ಪ್ರಗತಿಯಿರುವ ವಿವಿಧ ಮಕ್ಕಳ ಕಲಿಕಾ ಕೇಂದ್ರಗಳಲ್ಲಿನ ಹಾಜರಾತಿಯು ಹೆಚ್ಚೂ ಇರಬಹುದು, ಕಡಿಮೆಯೂ ಇರಬಹುದು ಎಂಬುದನ್ನೂ ನಾವು ಮನಗಂಡೆವು.

ನಾವು ಎದುರಿಸುತ್ತಿರುವ ಸನ್ನಿವೇಶ ಮತ್ತು ಕಡಿಮೆ ತಿಳಿವಳಿಕೆ ಇರುವಂತಹ ಪರಿಸ್ಥಿತಿಯಲ್ಲಿ ನಾವು ಯಾವ ಪಾತ್ರ ವಹಿಸಬಹುದೆಂಬುದು ನಮಗೆ ಸವಾಲಿನ ಪ್ರಶ್ನೆಯಾಗಿತ್ತು. 'ಏಕಲವ್ಯ'ದ ಕ್ಷೇತ್ರ ಮಟ್ಟದ ಕಾರ್ಯಕರ್ತರ ಪರಿಶ್ರಮವನ್ನು ಪೋಷಕರು ಗಮನಿಸುತ್ತಿದ್ದರು. ಮೆಚ್ಚುತ್ತಿದ್ದರಾದರೂ ಈ ಒಂದು ನಿರ್ದಿಷ್ಟ ವಿಷಯದಲ್ಲಿ ಸವಾಲನ್ನೆದುರಿಸುತ್ತಿರುವ ಮಕ್ಕಳ ಅಗತ್ಯಗಳಿಗೆ ಈ ಪರಿಶ್ರಮವನ್ನು ನಿರ್ದಿಷ್ಟವಾದ ರೀತಿಯಲ್ಲಿ ಸರಿ ಹೊಂದಿಸಬಹುದೇ? ನಿರ್ದಿಷ್ಟ ಕಲಿಕಾ ಕ್ಲಿಷ್ಟತೆಗಳ ಬಗೆಗೆ ನಾವು ಓದುತ್ತಿದ್ದಂತೆ, ಈ ನ್ಯೂನತೆಗಳನ್ನು ಖಚಿತವಾಗಿ ಪತ್ತೆ ಹಚ್ಚಲು ಸಾಧ್ಯವಾಗುವುದು ಮೆದುಳು ಪ್ರೌಢವಾಗುವ ಸುಮಾರು ಎಂಟು ವರ್ಷ ವಯಸ್ಸಿನ ನಂತರವೆ ಎಂದು ಅರಿತೆವು. ಮಧ್ಯಪ್ರವೇಶವು ಹೆಚ್ಚು ಫಲಪ್ರದವಾಗುವುದು ಈ ಮಾಗುವಿಕೆಗಿಂತ ಮುನ್ನವೇ ಬೋಧನಾ ವಿಧಾನದ ಮಧ್ಯಪ್ರವೇಶವು ನರಮಂಡಲದ ಸರಿಯಾದ ಒಗ್ಗುವಿಕೆಗಳನ್ನು ಬಲಪಡಿಸಿದರೆ ಮಾತ್ರ. ಮಾಗುವಿಕೆಯು ಪೂರ್ಣಗೊಂಡ ನಂತರದಲ್ಲಿ ಪ್ರಗತಿಯು ಅಸಾಧ್ಯವಲ್ಲವಾದರೂ ಕಠಿಣವೂ ಮತ್ತು ನಿಧಾನವೂ ಆಗುತ್ತದೆ.

ಈ ಪರ್ಯಾಲೋಚನೆಗಳಿಂದ ನಮ್ಮ ಸಾಮರ್ಥ್ಯಗಳನ್ನು ಮತ್ತು ಗಮನವನ್ನು ಮೊದಲ ವರ್ಷಗಳಿಗೇ ಅಂದರೆ ತರಗತಿ 1, 2 ಮತ್ತು 3 ಇವುಗಳಿಗೇ ನಾವು ಹೆಚ್ಚು ಒತ್ತು ನೀಡಬೇಕೆಂದು ಅರಿವಾಯಿತು. ನಾವು ನಡೆಸಿದ ಅಧ್ಯಯನದ ದತ್ತಾಂಶಗಳಿಂದ ಕೂಡ ಪ್ರಾರಂಭಿಕ ಹಂತದಲ್ಲಿಯೇ ನಡೆಸುವ ಮಧ್ಯಪ್ರವೇಶವು ಎಷ್ಟು ಮುಖ್ಯ ಎಂಬುದನ್ನು ಒಪ್ಪಿಕೊಳ್ಳಲು ಸಾಧ್ಯವಾಯಿತು. ಏಕಲವ್ಯದಿಂದ ತಮ್ಮ ಮೊದಲ ವರ್ಷದಲ್ಲಿಯೇ ಬೆಂಬಲವನ್ನು ಪಡೆದ ಮಕ್ಕಳು ಎಂಟು ವರ್ಷಕ್ಕಿಂತ ದೊಡ್ಡವರಾಗಿದ್ದು, ನಂತರದಲ್ಲಿ ಅಂದರೆ ತರಗತಿ 3, 4 ಮತ್ತು 5ರಲ್ಲಿ ಇದ್ದಾಗ ಬೆಂಬಲ ಪಡೆದವರಿಗಿಂತಲೂ ಉತ್ತಮ ಸಾಧನೆ ಮಾಡುವ ಸಾಧ್ಯತೆಗಳಿವೆ ಎಂದೂ ಇವು ತೋರಿದವು. ರಾಜಸ್ಥಾನದಲ್ಲಿನ ಆರ್ಗನೈಸೇಷನ್ ಆಫ್‌ಅರ್ಲಿ ಲಿಟರಸಿ ಪ್ರಮೋಷನ್ ಸಂಸ್ಥೆ ಮತ್ತಿತರ ಸಂಸ್ಥೆಗಳು ನಡೆಸಿದಂತಹ ಫಲಪ್ರದ ಯೋಜನೆಗಳನ್ನು ಗಮನಿಸಿದಾಗ ಪ್ರಾರಂಭಿಕ ಹಂತದಲ್ಲಿಯೇ ನಡೆಯುವ ಮಧ್ಯಪ್ರವೇಶವು ಅಕ್ಷರಜ್ಞಾನದ ಪಡೆಯುವಿಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ ಎಂದೂ ಕಂಡುಕೊಳ್ಳಲಾಯಿತು.

**ನಮ್ಮ ಮಧ್ಯಪ್ರವೇಶಗಳನ್ನು ಮಾರ್ಪಡಿಸಿಕೊಳ್ಳುವುದು**

ನಮ್ಮ ಕಲಿಕೆಗಳನ್ನು ಪರೀಕ್ಷಿಸಿಕೊಳ್ಳಲು ನಾವು ತಾಮಿಯಾ ಜಿಲ್ಲೆಯ 10 ಪ್ರಾಥಮಿಕ ಶಾಲೆಗಳಲ್ಲಿ ಪ್ರಯೋಗಾತ್ಮಕ ಯೋಜನೆಗಳನ್ನು ಹಮ್ಮಿಕೊಂಡೆವು. ಅದರಲ್ಲಿ:

- ಹತ್ತು ಕ್ಷೇತ್ರ ಕಾರ್ಯಕರ್ತರು ಕೇವಲ ಒಂದು ಮತ್ತು ಎರಡನೇ ತರಗತಿಯ ಮಕ್ಕಳೊಡನೆ ಮಾತ್ರ ಕೆಲಸ ಮಾಡುತ್ತಿದ್ದರು.

- ಒಂದು ಪದಗಳ ಗುಂಪಿನಿಂದ ಮತ್ತೊಂದು ಪದಗಳ ಗುಂಪಿಗೆ ವ್ಯವಸ್ಥಿತವಾಗಿ ಕರೆದುಕೊಂಡೊಯ್ಯುವಂತಹ ಯೋಜನಾ–ಬದ್ಧವಾದ ಅಕ್ಷರಜ್ಞಾನದ ರೀತಿಯನ್ನು ಬಳಸುತ್ತಾ; ಪದ್ಯಗಳು, ಕಥೆಗಳು, ಚಿತ್ರಪುಸ್ತಕಗಳು, ಚಿತ್ರಪಟಗಳು, ಫಲಕಗಳು, ಮೌಖಿಕ ಸಂವಾದಗಳು, ಚಿತ್ರ ಬರೆಯುವುದು ಮುಂತಾದ ಚಟುವಟಿಕೆಗಳೊಂದಿಗೆ ಈ ಕೆಲಸವನ್ನು ಶ್ರೀಮಂತ–ಗೊಳಿಸಲಾಯಿತು.

- ಕ್ಷೇತ್ರ ಕಾರ್ಯಕರ್ತರು ಧ್ವನಿವಿಜ್ಞಾನದ ಕಡೆಗೆ ಹೆಚ್ಚು ಗಮನ ನೀಡಿದರು. ಇದು ಧ್ವನಿಗಳನ್ನು ಬರಹದ ಚಿಹ್ನೆಗಳಿಗೆ ಹೊಂದಿಸುವುದಕ್ಕಿಂತ ಮುನ್ನ, ಮಾತು ಮತ್ತು ಕೇಳುವ ಮಟ್ಟದಲ್ಲಿ ಧ್ವನಿಗಳನ್ನು ಪ್ರಕ್ರಿಯೆಗೊಳಿಸುವಂತಹ ಚಟುವಟಿಕೆಗಳಾಗಿವೆ. ಮೊದಲು, ಕೊಟ್ಟ ಒಂದು ನಿರ್ದಿಷ್ಟ ಪದಕ್ಕೆ ಮಕ್ಕಳು ಪ್ರಾಸಬದ್ಧವಾದ ಹೆಚ್ಚಿನ ಪದಗಳನ್ನು ಹೇಳುವುದು (ಆಟ, ಊಟ, ಪಟ, ಲೋಟ), ಒಂದು ಪದವನ್ನು ಓದುವಾಗ ಒಂದೊಂದು ಅಕ್ಷರಕ್ಕೂ ಚಪ್ಪಾಳೆ ಹೊಡೆಯುವುದು ಮುಂತಾದ ಚಟುವಟಿಕೆಗಳನ್ನು ನಡೆಸಿದೆವು.

- ಕಾರ್ಯ ಹಾಳೆಗಳನ್ನು ವಿನ್ಯಾಸಗೊಳಿಸಲಾಯಿತು ಹಾಗೂ ತರಗತಿಗಳಲ್ಲಿ ಬಳಸಲಾಯಿತು. ಮಕ್ಕಳ ಮಾಪನವನ್ನು ಇವುಗಳ ಮೂಲಕ ಮಾಡಲಾಯಿತು.

ಆರು ತಿಂಗಳ ಕಾಲ ಕೆಲಸಗಳನ್ನು ಮುಂದುವರೆಸಿದಾಗ ನಾವು ಉತ್ತಮ ಫಲಿತಗಳನ್ನು ಕಂಡೆವು, ಮುಖ್ಯವಾಗಿ ಕ್ಷೇತ್ರ ಕಾರ್ಯಕರ್ತರು, ಕ್ಷೇತ್ರ ಶಿಕ್ಷಕರು ಈ ತಂತ್ರಗಳನ್ನು ಅರಿತುಕೊಂಡು ನಿರಂತರತೆಯನ್ನು ಎಲ್ಲಿ ಕಾಪಾಡಿಕೊಂಡರೋ ಅಲ್ಲಿ ಉತ್ತಮ ಫಲಿತಗಳನ್ನು ಗಮನಿಸಿದೆವು. ಈಗ ಒಂದು ಮತ್ತು ಎರಡನೇ ತರಗತಿಯಲ್ಲಿರುವ ಮಕ್ಕಳ ಮೌಲ್ಯಾಂಕನವನ್ನು ಮುಂದೆ ಅವರ ಮೂರನೇ ತರಗತಿಯ ಕೊನೆಯಲ್ಲಿ ಮಾಡಿದರೆ, ಅಂಕಗಳು ಖಂಡಿತವಾಗಿಯೂ 2019ರ ಕೊನೆಯ ರೇಖೆಯ ಅಂಕಗಳಿಗಿಂತ ಮೂರನೇ ತರಗತಿಯ ಅಂಕಗಳು ಉತ್ತಮವಾಗಿರುತ್ತವೆ ಎಂದು ಗೋಚರವಾಯಿತು. ಆದರೆ 2019ರ ಮಾರ್ಚ್‌ನಲ್ಲೇ ಯೋಜನೆಯು ಕೊನೆಗೊಂಡಿದ್ದರಿಂದ ಮುಂಬರಿಕೆಯು ಸಾಧ್ಯವಾಗಲಿಲ್ಲ.

ಕಡಿಮೆ ಸಮಯದಲ್ಲಿನ ಈ ಪುಟ್ಟ ಪ್ರಯೋಗದಿಂದ ನಮ್ಮ ತಂಡದ ಸದಸ್ಯರು ಧ್ವನಿ ವಿಜ್ಞಾನದ ಅರಿವಿನ ಚಟುವಟಿಕೆಗಳಲ್ಲಿ ಭಾಗವಹಿಸಲು ಕಷ್ಟಪಡುತ್ತಿದ್ದಾರೆ ಎಂದು ತಿಳಿದುಬಂದಿತು. ಇಲ್ಲಿ ಸಾಕಷ್ಟು ಬಹಳ ಮುಜುಗರ ಮತ್ತು ಹಿಂಜರಿಕೆ ಇದ್ದಿತು. ಇದು ನಮಗೆ ಮಕ್ಕಳು ಓದುವುದನ್ನು ಕಲಿಯಲು ಅಗತ್ಯವಾದ ಅಡಿಪಾಯ ಧ್ವನಿ ವಿಜ್ಞಾನ ಪ್ರಜ್ಞೆಯಾಗಿದೆ, ಇದು ಮಕ್ಕಳಿಗೆ ಓದಲು ಕಲಿಯುವಲ್ಲಿ ಅಡಿಪಾಯವನ್ನು ಹಾಕುತ್ತದೆ ಎನ್ನುವುದನ್ನು ತಿಳಿಸಿಕೊಟ್ಟಿತ್ತು. ಆದರೆ ಇದನ್ನು ನಾವು ಲಘುವಾಗಿ ಪರಿಗಣಿಸಿದ್ದೆವು, ಆದರೆ, ಇದನ್ನು ಪ್ರಕಟವಾಗಿ ಮುನ್ನೆಲೆಗೆ ತರಬೇಕಾಗಿತ್ತು ಎನ್ನುವುದನ್ನು. ಅರಿವಿಗೆ ಬರುವಂತೆ ಮಾಡಿತು.

ಇದರ ಜೊತೆಗೆ ನಿರ್ದಿಷ್ಟ ಕಲಿಕಾ ಅಗತ್ಯವಿರುವ ಮಕ್ಕಳಿಗೂ ಇದು ಬಹಳ ಸಹಾಯ ಮಾಡುವಲ್ಲಿ ಮಹತ್ವಪಡೆದಿದೆ. ಇದು ನಮ್ಮ ತರಬೇತಿ ಕಾರ್ಯಕ್ರಮಗಳು ಮತ್ತು ಸಾಮಗ್ರಿಗಳ ಅಭಿವೃದ್ಧಿ ಕಾರ್ಯಾಗಾರಗಳಲ್ಲಿ ಕಲಿಯಬೇಕಾದ ಮತು ಹಂಚಿಕೊಳ್ಳಬೇಕಾದ ಒಂದು ಪ್ರಮುಖ ವಿಷಯವಾಗಿದೆ.

ಮಧ್ಯಪ್ರದೇಶದ ಇತರ ಭಾಗಗಳಲ್ಲಿನ ಎಲ್ಲ ಮಕ್ಕಳಿಗೂ ಕಲಿಯಲು ಸಹಾಯ ಮಾಡುವ ನಮ್ಮ ಮುಂದಿನ ಕೆಲಸಗಳಲ್ಲಿ ತಾಮಿಯಾದಲ್ಲಿನ ಈ ಅನುಭವದ ಆಧಾರದಲ್ಲಿ ಕಲಿತದ್ದನ್ನು ಉಪಯೋಗಿಸುತ್ತಿದ್ದೇವೆ. ಈ ರೀತಿಯ ನಿರ್ದಿಷ್ಟ ಕಲಿಕಾ ಅಗತ್ಯಗಳ ಅಂಶಗಳೆಡೆಗೆ ನಮ್ಮ ತಂಡದ ಸದಸ್ಯರ ಯೋಚನಾ ಧಾಟಿಯನ್ನು ಬದಲು ಮಾಡುತ್ತಿದ್ದೇವೆ. ಅವರು ಕಲಿಕೆಯಲ್ಲಿ ಹಿಂದಿರುವ ಮಕ್ಕಳಲ್ಲಿ ತಾವು ಕಂಡದ್ದನ್ನು ಚರ್ಚಿಸಲು ಆರಂಭಿಸಿದ್ದಾರೆ. ಈಗ ಅವರು

ಕಲಿಕೆಯಲ್ಲಿ ಮಕ್ಕಳು ಕಷ್ಟಪಡುವುದಕ್ಕೆ ಮಕ್ಕಳ ಹಾಜರಾತಿ ಮತ್ತು ಕುಟುಂಬದ ಹಿನ್ನೆಲೆಯ ಆಧಾರದಲ್ಲಿಯೇ ನೋಡುವ ಹಳೆಯ ಚೌಕಟ್ಟನ್ನು ದಾಟಿ, ಪ್ರತಿ ಮಗುವಿನ ಕ್ಲಿಷ್ಟತೆಯನ್ನೂ ಪರಿಗಣಿಸುವ ಚೌಕಟ್ಟಿಗೆ ಮುಂದುವರೆದಿದ್ದೇವೆ. ಅವರು ವಿಷಯ ಅಧ್ಯಯನಗಳನ್ನು ಮಾಡಲು ಮತ್ತು ನಿರ್ದಿಷ್ಟ ಮಕ್ಕಳೊಡನೆ ಹೆಜ್ಜೆ ಹಾಕಲು ದಾರಿಗಳನ್ನು ಹುಡುಕುವಷ್ಟು ಅರಳಿದ್ದಾರೆ. ಉದಾಹರಣೆಗೆ ಒಬ್ಬ ಸದಸ್ಯರು ಮಕ್ಕಳ ಸ್ನೇಹಿತರ ಗುಂಪನ್ನು ಅಂದರೆ ಮಗುವಿನ ಓರಗೆಯವರನ್ನು ಒಳಗೊಂಡು ಪಾಠ ಮಾಡುವಿಕೆ ಪ್ರಕ್ರಿಯೆಯನ್ನು ಬಳಸಿ ಅದು ಫಲಿತಗಳನ್ನು ಕೊಟ್ಟಿರುವುದನ್ನು ಹಂಚಿಕೊಂಡರು. ಸರ್ಕಾರಿ ಶಾಲಾ ಶಿಕ್ಷಕರು ಮತ್ತು ಕ್ಷೇತ್ರ ಕಾರ್ಯಕರ್ತರ ತಂಡಗಳೊಡನೆ ನಾವು ಕೆಲಸ ಮಾಡುವಾಗ ಧ್ವನಿ ಜ್ಞಾನದ ಬಗ್ಗೆ ತರಬೇತಿ ಮತ್ತು ವ್ಯವಸ್ಥಿತ ಅಕ್ಷರಜ್ಞಾನದ ಬಗೆಗಿನ ತರಬೇತಿಗಳು ಬಹಳ ಮುಖ್ಯವಾಗಿವೆ. ಈ ಕಾರ್ಯವು ಪ್ರತಿ ಮಗುವಿನ ಕಲಿಕೆಗೆ ಸಹಾಯವಾಗುವಂತೆ ಸಫಲತೆಯನ್ನು ನೀಡುತ್ತದೆ ಎಂದು ಆಶಿಸುತ್ತೇವೆ.

* ಮಕ್ಕಳ ಗುರುತುಗಳನ್ನು ಗೌಪ್ಯವಾಗಿಡಲು ಹೆಸರುಗಳನ್ನು ಬದಲಾಯಿಸಲಾಗಿದೆ.

---



**ರಶ್ಮಿ ಪಲಿವಾಲ್** 1983ರಿಂದ 2019ರವರೆಗೆ ಹೋಶಂಗಾಬಾದ್‌ನಲ್ಲಿ 'ಏಕಲವ್ಯ'ದೊಡನೆ ಕೆಲಸ ಮಾಡಿದ್ದಾರೆ. ಅಲ್ಲಿ ಅವರು ಶಾಲೆಯ ಸಮಾಜ ವಿಜ್ಞಾನ ಮತ್ತು ಶಿಕ್ಷಕ ಶಿಕ್ಷಣದ ಪಠ್ಯಕ್ರಮಗಳ ರಚನೆಗೆ ಕೊಡುಗೆ ನೀಡಿದ್ದಾರೆ. 'ಏಕಲವ್ಯ'ದ ಪ್ರಕಟಣೆಯ ಕೆಲಸಗಳು ಹಾಗೂ ಗ್ರಾಮೀಣ ಮತ್ತು ಬುಡಕಟ್ಟು ಪ್ರದೇಶಗಳಲ್ಲಿನ ಪ್ರಾಥಮಿಕ ಶಿಕ್ಷಣವನ್ನು ಗಟ್ಟಿಗೊಳಿಸುವ ಯೋಜನೆಗಳಲ್ಲಿ ಕೆಲಸ ಮಾಡಿದ್ದಾರೆ. ಅವರನ್ನು paliwal_rashmi@yahoo.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಜನಾರ್ದನ** । ಪರಿಶೀಲನೆ: **ಲತಾ ಕೆ.ಸಿ**

# ಪೂರ್ವ ಪ್ರಾಥಮಿಕ ತರಗತಿಯಲ್ಲಿ ಭಾಷಾ ಬೋಧನೆ



ರೋಷನಿ ದೇವಾಂಗನ್

ನಮ್ಮ ಯೋಚನೆಗಳನ್ನು ಹಾಗೂ ಭಾವನೆಗಳನ್ನು ಹಂಚಿಕೊಳ್ಳಲು, ಸಾಮಾಜಿಕ ಸಂಪರ್ಕಗಳನ್ನು ಹಾಗು ಸಂಬಂಧಗಳನ್ನು ಬೆಳೆಸಲು ಮತ್ತು ನಿರ್ವಹಿಸಲು ಹಾಗೂ ನಮ್ಮ ಸಮಾಜ ಮತ್ತು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಭಾಷೆಯು ನಮಗೆ ನೆರವಾಗುತ್ತದೆ. ಆರಂಭದಲ್ಲಿ ಭಾಷೆಯನ್ನು ಬಳಸಿ ಈ ಎಲ್ಲವುಗಳನ್ನು ಮಾಡಲು ಮಕ್ಕಳಿಗೆ ಸಾಧ್ಯವಾಗುವುದಿಲ್ಲ. ಆದರೆ ಅವರು ಬೆಳೆದಂತೆ ಅವರ ಭಾಷಾ ಕೌಶಲ್ಯ ಬೆಳೆಯುತ್ತದೆ ಹಾಗೂ ಮೇಲೆ ಹೇಳಿದ ಎಲ್ಲಾ ಉದ್ದೇಶಗಳಿಗೆ ಭಾಷೆಯನ್ನು ಬಳಸಲು ಅವರು ಆರಂಭಿಸುತ್ತಾರೆ.

ಶಾಲಾಪೂರ್ವ ಅವಧಿಯ ಬಹುತೇಕ ಎಲ್ಲಾ ಚಟುವಟಿಕೆಗಳಲ್ಲಿ ಸಂವಹನ ಒಂದು ಭಾಗವಾಗಿರುತ್ತದೆ. ಆಟ ಆಡುವಾಗಲೂ ಮಕ್ಕಳು ಮಾತುಗಳ ಮೂಲಕ ತಮ್ಮ ಕ್ರಿಯೆಗಳನ್ನು ವಿಮರ್ಶಿಸುತ್ತಿರುತ್ತಾರೆ. ತಮ್ಮ ದೈನಂದಿನ ಚಟುವಟಿಕೆಗಳು, ತಮ್ಮ ಕುಟುಂಬ ಮತ್ತು ಆಟಿಕೆಗಳ ಬಗ್ಗೆ ವಿವರಿಸುತ್ತಲೂ ಇರುತ್ತಾರೆ. ಈ ಮಾತುಗಳ ಮೂಲಕವೇ ಅವರು ಹೊಸ ಜನರ ಸಂಪರ್ಕಕ್ಕೆ ಬರುವುದು ಹಾಗು ಇದರಿಂದಾಗಿಯೇ ಅವರ ಪರಿಚಯಗಳು ಹೆಚ್ಚುತ್ತವೆ. ಮಾತನಾಡುವಿಕೆ ಹಾಗೂ ಆಲಿಸುವಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದಾಗ ಮಾತ್ರ ಮಕ್ಕಳು ಭಾಷೆಯನ್ನು ಬಳಸಲು ಕಲಿಯುತ್ತಾರೆ. ಮಾತನಾಡಲು ಹಾಗೂ ಆಲಿಸಲು ಪ್ರೋತ್ಸಾಹಿಸಿದಾಗಲಷ್ಟೇ ಅಂತಹ ಮಕ್ಕಳು ಉತ್ತಮ ಭಾಷಾ ಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಾರೆ. ಮಕ್ಕಳ ಭಾಷಾ ಬೆಳವಣಿಗೆಯನ್ನು ಪ್ರೋತ್ಸಾಹಿಸುವುದಕ್ಕೆ ನಮ್ಮ ಸಂಭಾಷಣೆಗಳು ಅವರಿಗೆ ಅನುಗುಣವಾಗಿ ಇರಬೇಕಾಗಿರುವುದು ಅವಶ್ಯಕ. ನಮ್ಮೊಡನೆ ಮಾತನಾಡುವುದನ್ನು ಅವರು ಖುಷಿಪಟ್ಟರೆ ಅವರು ಭಾಷೆಯ ಕಲಿಕೆಯಲ್ಲಿ ಉತ್ಸಾಹ ತೋರಿಸುತ್ತಾರೆ ಹಾಗೂ ಅವರ ಪದಸಂಪತ್ತೂ ಬೆಳೆಯುತ್ತದೆ.

ಇಂತಹ ಕೆಲವು ತತ್ವಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಶಾಲಾಪೂರ್ವ ಹಂತದ ಮಕ್ಕಳ ಓದುವಿಕೆ ಹಾಗೂ ಬರವಣಿಗೆಯ ಕೌಶಲ್ಯಗಳ ಬೆಳವಣಿಗೆಯತ್ತ ನಾವು ಗಮನಹರಿಸಿದೆವು. ತರಗತಿಯಲ್ಲಿ ಭಾಷಾಕಲಿಕೆಯ ಹಲವಾರು ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು. ಇದರಿಂದ ಮಕ್ಕಳಲ್ಲಿ ಆಸಕ್ತಿ ಹಾಗೂ ಉತ್ಸಾಹವೂ ಮೂಡಿತು ಹಾಗೂ ನಿಘಂಟಿನ ಬಳಕೆಯು ಹೆಚ್ಚಾಯಿತು. ಈ ಹಂತದ ಮಕ್ಕಳಲ್ಲಿ ಓದುವಿಕೆ ಹಾಗೂ ಬರವಣಿಗೆಯ ಕೌಶಲ್ಯಗಳು ಅದ್ಭುತವಾಗಿ ಬೆಳೆದಿದ್ದನ್ನು ನಾವು ಕಂಡೆವು. ಭಾಷೆಯನ್ನು ಕಲಿಸುವಾಗ ತರಗತಿಯಲ್ಲಿ ಹಲವಾರು ಚಟುವಟಿಕೆಗಳನ್ನು ಕೈಗೊಂಡ ಬಗೆಯನ್ನು ತಿಳಿಯುವುದಕ್ಕೆ ಪ್ರಯತ್ನಿಸೋಣ.

**ಭಾಷೆಯ ಬೋಧನೆ**

ಮಕ್ಕಳು ಶಾಲೆಗೆ ಬರುವ ಮುಂಚೆಯೇ ತಮ್ಮದೇ ಆದ ಭಾಷಾ ಸಂಪತ್ತನ್ನು ಹೊಂದಿರುತ್ತಾರೆ. ಈ ವಯಸ್ಸಿನ ಮಕ್ಕಳು ತಮ್ಮ ಭಾಷೆಯಲ್ಲಿಯೇ ಉತ್ತಮವಾಗಿ ಅಭಿವ್ಯಕ್ತಪಡಿಸುತ್ತಾರೆ. ಮಕ್ಕಳು ತಮ್ಮ ಮಾತೃಭಾಷೆಯನ್ನು ಚೆನ್ನಾಗಿ ಅರಿತಿರುತ್ತಾರೆಯಾದ್ದರಿಂದ ಅದರಲ್ಲಿಯೇ ವ್ಯಕ್ತಪಡಿಸುವುದು ಸಾಧ್ಯವಾಗುತ್ತದೆ. ಮನೆಯ ಭಾಷೆಯ ಮೇಲೆ ಅವರು ಉತ್ತಮ ಹಿಡಿತವನ್ನು ಹೊಂದಿರುತ್ತಾರೆ ಎಂದು ಹೇಳಬಹುದು. ಈಗ ಅವನ/ ಅವಳ ಮನೆಯ ಭಾಷೆಗೆ ಪ್ರಾಮುಖ್ಯತೆಯನ್ನು ಕೊಡುತ್ತಲೇ ಶಾಲೆಯ ಭಾಷೆಯನ್ನೂ ಕಲಿಯುವುದಕ್ಕೆ ಮಗುವನ್ನು ಪ್ರೋತ್ಸಾಹಿಸುವುದು ಶಿಕ್ಷಕರ ಜವಾಬ್ದಾರಿ.

ತರಗತಿಯಲ್ಲಿ ಮಕ್ಕಳು ತಮ್ಮ ಭಾಷೆಯಲ್ಲಿ ತಮ್ಮನ್ನು ತಾವು ವ್ಯಕ್ತಪಡಿಸುತ್ತಾರೆ ಎನ್ನುವ ವಾಸ್ತವಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗುತ್ತದೆ. ಅವರ ಭಾಷೆ, ಅವರ ಯೋಚನೆಗಳನ್ನು ಬಹಳ ಗಮನವಿಟ್ಟು ಗೌರವದಿಂದ ಹಾಗೂ ತಾಳ್ಮೆಯಿಂದ ಕೇಳಿಸಿ-ಕೊಳ್ಳಲಾಗುತ್ತದೆ. ಇದರ ಜೊತೆಯಲ್ಲೇ ನಾವು (ಶಿಕ್ಷಕರು) ಕ್ರಮೇಣ ಅವರ ಭಾಷೆ ಹಾಗೂ ಕಲ್ಪನೆಗಳನ್ನು ಶಾಲೆಯ ಔಪಚಾರಿಕ ಭಾಷೆಗೆ ಬದಲಾಯಿಸಲು ಪ್ರಯತ್ನಿಸಿದಾಗ ಮಕ್ಕಳು ತರಗತಿಗೆ ಹಾಗೂ ಶಾಲೆಯೊಂದಿಗೆ ನಿಧಾನವಾಗಿ ಸಂಬಂಧವನ್ನು ಬೆಳೆಸಿಕೊಳ್ಳುತ್ತಾರೆ. ವಿವಿಧ ಪದ್ಯಗಳನ್ನು ಮತ್ತು ಕಥೆಗಳನ್ನು ಕೇಳಿಸಿಕೊಳ್ಳುವಾಗ ಹಾಗೂ ಚಟುವಟಿಕೆಗಳನ್ನು ಮಾಡುವ ಸಮಯದಲ್ಲಿಯೇ ಮಕ್ಕಳಿಗೆ ಮಾತನಾಡಲು ಮತ್ತು ಕೇಳಿಸಿಕೊಳ್ಳಲು ಅವಕಾಶ ಕೊಡಲಾಗುತ್ತದೆ.

**ಓದಲು ಕಲಿಯುವುದು**

ಈ ರೀತಿಯಾಗಿ ಆರಂಭದ ಮೂರು ತಿಂಗಳ ಅವಧಿಯಲ್ಲಿ ಮೌಖಿಕ ಸಂಭಾಷಣೆ, ಪದ್ಯಗಳು ಹಾಗೂ ಕಥೆಗಳ ಮೂಲಕ ಬಹಳಷ್ಟು ಅಭ್ಯಾಸವನ್ನು ಮಾಡಿಸಲಾಯಿತು. ಆನಂತರ ಗಮನವನ್ನು ಓದುವಿಕೆ ಹಾಗೂ ಬರವಣಿಗೆಯ ಕೌಶಲ್ಯಗಳ ಬೆಳವಣಿಗೆಯ ಮೇಲೆ ಕೇಂದ್ರೀಕರಿಸಲಾಯಿತು. ಈ ಪ್ರಕ್ರಿಯೆಯು ಮೊದಲು ಒಂದು ಪದ್ಯದೊಂದಿಗೆ ಆರಂಭವಾಯಿತು. ಮಕ್ಕಳಿಗೆ ಮೊದಲೇ ಇದರ ಪರಿಚಯವಿತ್ತು.

ಮಛಲಿ ಜಲ್ ಕಿ ರಾಣಿ ಹೇ,
ಜೀವನ್ ಉಸ್ಕಾ ಪಾನಿ ಹೇ।
ಹಾಥ್ ಲಗಾವೋ ಡರ್ ಜಾತಿ ಹೇ,
ಬಾಹರ್ ನಿಕಾಲೊ ಮರ್ ಜಾತಿ ಹೇ।

ಈ ಪದ್ಯವನ್ನು ಮಕ್ಕಳು ಶಾಲೆಗೆ ಬರುವ ಮುನ್ನವೇ ತಮ್ಮ ಅಮ್ಮ, ಅಪ್ಪ ಅಥವಾ ನೆರೆಹೊರೆಯ ಗೆಳೆಯರಿಂದ ಕೇಳಿ ಚೆನ್ನಾಗಿ ತಿಳಿದುಕೊಂಡಿದ್ದರು.

ಈ ಪದ್ಯವನ್ನು ಮಕ್ಕಳ ಮುಂದೆ ಆಂಗಿಕ, ಲಯ ಹಾಗೂ ಅಭಿನಯದ ಮೂಲಕ ಓದಲಾಯಿತು. ಮಕ್ಕಳು ಜೊತೆಜೊತೆಯಲ್ಲೇ ಉತ್ಸಾಹದಿಂದ ಪುನರಾವರ್ತಿಸುತ್ತಿದ್ದರು. ಇದರಿಂದ ಮಕ್ಕಳು ಈ ಪದ್ಯವನ್ನು ನೆನಪಿನಲ್ಲಿಟ್ಟುಕೊಳ್ಳುವುದಕ್ಕೆ ಹಾಗೂ

ಅಭಿನಯಿಸುವುದಕ್ಕೆ ಸಹಾಯವಾಯಿತು. ಈಗ ಮಕ್ಕಳು ಪದ್ಯವನ್ನು ತಾವಾಗಿಯೇ ಹಾಡಿಕೊಳ್ಳುತ್ತ ಅಭಿನಯಿಸುತ್ತಿದ್ದರು. ಎರಡು ಅಥವಾ ಮೂರು ದಿನಗಳ ನಂತರ ಪದ್ಯವನ್ನು ಒಂದು ದೊಡ್ಡ ಹಾಳೆಯ ಮೇಲೆ ಬರೆದು ಮಕ್ಕಳು ಪ್ರತಿದಿನವೂ ಈ ಪದ್ಯವನ್ನು ನೋಡುವಂತೆ ತರಗತಿಯಲ್ಲಿ ಪ್ರದರ್ಶಿಸಲಾಯಿತು. ಬಹಳ ದಿನಗಳವರೆಗೆ ಶಿಕ್ಷಕಿಯು ಪದ್ಯದಲ್ಲಿರುವ ಪ್ರತಿಯೊಂದು ಪದದ ಮೇಲೆ ಬೆರಳನ್ನಿಟ್ಟು ಸೂಚಿಸುತ್ತ ಈ ಪದ್ಯವನ್ನು ಕಲಿಸಿದರು. ಶಿಕ್ಷಕರು ಪದಗಳ ಮೇಲೆ ತಮ್ಮ ಬೆರಳನ್ನು ಇಟ್ಟು ಮತ್ತೆ ಮತ್ತೆ ಅವುಗಳ ಬಗ್ಗೆ ಮಕ್ಕಳನ್ನು ಪ್ರಶ್ನಿಸುತ್ತಿದ್ದರು. ಮುದ್ರಿತವಾದ ಪದಗಳನ್ನು ಗುರುತಿಸಿ ಓದುವುದಕ್ಕೆ ಸಹಾಯವಾಗುವಂತೆ ಪದಗಳನ್ನು ಓದಲು ಅವರನ್ನು ಪ್ರೋತ್ಸಾಹಿಸಲಾಯಿತು. ಮಛಲಿ, ರಾಣಿ, ಪಾನಿ, ಹಾಥ್ ಮುಂತಾದ ಚಿತ್ರಿಸಬಹುದಾದ ಪದಗಳನ್ನು ಮೊದಲು ಗುರುತಿಸಲಾಯಿತು. ಆನಂತರ ಅವರು ಜಾತಿ ಹೇ, ಉಸ್ಕಾ, ಬಾಹರ್ ಮೊದಲಾದ ಚಿತ್ರಿಸಲಾಗದ ಪದಗಳನ್ನೂ ಗುರುತಿಸತೊಡಗಿದರು. ಇದಾದನಂತರ ಮತ್ತೊಂದು ಪದ್ಯವನ್ನು ತೆಗೆದುಕೊಳ್ಳಲಾಯಿತು. ಈ ಪದ್ಯಕ್ಕೂ ಅದೇ ವಿಧಾನವನ್ನು ಅಳವಡಿಸಿಕೊಳ್ಳಲಾಯಿತು. ಇದನ್ನೂ ದೊಡ್ಡ ಹಾಳೆಯ ಮೇಲೆ ಬರೆದು ಮಕ್ಕಳು ಅದನ್ನು ಓದಿ ಆನಂತರ ಮುದ್ರಿತಗೊಂಡ ಪದಗಳನ್ನು ಗುರುತಿಸುವುದಕ್ಕೆ ಅನುಕೂಲವಾಗುವಂತೆ ತರಗತಿಯಲ್ಲಿ ಪ್ರದರ್ಶಿಸಲಾಯಿತು. ಕ್ರಮೇಣವಾಗಿ ಮಕ್ಕಳು ಕೆಲವು ಪದಗಳನ್ನು ಗುರುತಿಸತೊಡಗಿದರು. ಆನಂತರ ಎರಡು ಪದ್ಯಗಳಿಂದ ಕೆಲವು ಪದಗಳನ್ನು ಆರಿಸಿ ದೊಡ್ಡ ಹಾಳೆಯ ಮೇಲೆ ಬರೆದು ಪ್ರದರ್ಶಿಸಲಾಯಿತು. ಮಕ್ಕಳು ಮತ್ತೆ ಮತ್ತೆ ಅವುಗಳನ್ನು ಓದುತ್ತಿದ್ದಂತೆ ಪದಗಳನ್ನು ಗುರುತಿಸಲು ಸಾಧ್ಯವಾಯಿತು.

ಆಲೂ ಕಚಾಲೂ ಬೇಟಾ ಕಹಾಂ ಗಯೇ ಥೇ,
ಸಬ್ಜಿ ಕಿ ಟೋಕರಿ ಮೇ ಸೋ ರಹೇ ಥೇ।
ಬೈಂಗನ್ ನೇ ಲಾತ್ ಮಾರಿ ರೋ ರಹೇ ಥೇ,
ಮಮ್ಮಿ ನೇ ಪ್ಯಾರ್ ಕಿಯಾ ಹಸ್ ರಹೇ ಥೇ।

ಈಗ ಈ ಪದಗಳಲ್ಲಿ ಚಿತ್ರಿಸಬಹುದಾದಂತಹ ಪದಗಳನ್ನು ಆರಿಸಿಕೊಂಡು ಅವುಗಳ ಫಲಕಗಳನ್ನು ಮಾಡಿದೆವು. ಪ್ರತಿದಿನವೂ ಒಂದು ಬಾರಿ ಫಲಕಗಳನ್ನು ಓದಲಾಗುತ್ತಿತ್ತು. ಶಿಕ್ಷಕರು ಎಲ್ಲ ಫಲಕಗಳನ್ನು ಹಿಡಿದು ಓದುವ ಆಟವನ್ನು ವಿನ್ಯಾಸ-ಗೊಳಿಸಲಾಯಿತು. ಶಿಕ್ಷಕಿಯು ವಸ್ತುವಿನ ಹೆಸರಿರುವ ಫಲಕವನ್ನು ಮಕ್ಕಳ ಎದುರು ಹಿಡಿಯುತ್ತಿದ್ದರು. ಅದನ್ನು ನೋಡಿ ಪಟ್ಟಿಯ ಮೇಲೆ ಏನು ಬರೆದಿದೆ ಎಂದು ಹೇಳುವಂತೆ ಮಕ್ಕಳನ್ನು ಕೇಳಲಾಗುತ್ತಿತ್ತು. ಉತ್ತರ ಹೇಳಿದ ಮೊದಲ ಮಗುವಿಗೆ ಒಂದು ಪಟ್ಟಿಯನ್ನು ಕೆಲಕಾಲದವರೆಗೆ ಇಟ್ಟುಕೊಳ್ಳಲು ಅವಳಿಗೆ/ಅವನಿಗೆ ಕೊಡಲಾಗುತ್ತಿತ್ತು. ಈ ಹಂತದಲ್ಲಿ ಕೆಲವು ಮಕ್ಕಳ ಕಲಿಕಾ ಮಟ್ಟ ಕಡಿಮೆ ಇದ್ದರೂ ಅಂತಹ ಮಕ್ಕಳಿಗೆ ಸುಲಭವಾಗಿ ಗುರುತಿಸ-ಬಹುದಾದ ಪಟ್ಟಿಗಳನ್ನು ತೋರಿಸಬೇಕೆಂಬುದನ್ನು ಗಮನದಲ್ಲಿ ಇಟ್ಟುಕೊಳ್ಳಲಾಗುತ್ತಿತ್ತು. ಅಂತಹ ಮಕ್ಕಳಷ್ಟೇ ಉತ್ತರ ಹೇಳಿ ಪಟ್ಟಿಯನ್ನು ಹೊಂದುವ ಅವಕಾಶ ದೊರೆಯುವಂತೆ ತರಗತಿಯ ಉಳಿದ ಮಕ್ಕಳಿಗೆ ಸುಮ್ಮನಿರಲು ತಿಳಿಹೇಳಲಾಗುತ್ತಿತ್ತು.

ಫಲಕವನ್ನು ಓದುವ ಪ್ರಕ್ರಿಯೆಯು ನಿರಂತರವಾಗಿ ಮುಂದುವರಿದಂತೆ ಮಕ್ಕಳು ಎಲ್ಲ ಫಲಕಗಳನ್ನು ಓದುವುದಕ್ಕೆ ಕಲಿತರು. ಒಂದು ಫಲಕವನ್ನು ಓದಿದ ನಂತರ ಮಕ್ಕಳು ಹಲಗೆಯ ಮೇಲೆ ಪದಗಳನ್ನು ಬರೆದಾಗ ಅವರ ಬರವಣಿಗೆಯ ಕಲಿಕೆಯು ಆರಂಭವಾಯಿತು. ಇದೇ ಸರಣಿಯನ್ನು ಮುಂದುವರಿಸುತ್ತಾ ಪದಗಳ ಗುರುತಿಸುವಿಕೆಯ ಪ್ರಕ್ರಿಯೆಯನ್ನು ಮುಂದುವರೆಸಿ ಸಣ್ಣ ಪದ್ಯಗಳಿಂದ ಹಾಗೂ ಕಥೆಗಳಿಂದ ಕೆಲವು ನಿರ್ದಿಷ್ಟ ಪದಗಳನ್ನು ಆರಿಸಿದೆವು. ಈಗ ನಮ್ಮ ಬಳಿ ಮಕ್ಕಳು ಗುರುತಿಸಿದ ಹಲವಾರು ಪದಗಳಿದ್ದವು.

**ಗುಣಿತಾಕ್ಷರಗಳ ಪರಿಚಯಿಸುವಿಕೆ**

ಈ ಹಂತದಲ್ಲಿ ನಾವೊಂದು ಹೊಸ ಸವಾಲನ್ನು ಎದುರಿಸಿದೆವು. ಮಕ್ಕಳು ತಮಗೆ ಮೊದಲೇ ತಿಳಿದ ಪದಗಳನ್ನಷ್ಟೇ ಓದಬಲ್ಲವರಾಗಿದ್ದರು ಹಾಗೂ ತಿಳಿದಿರದ ಹೊಸ ಪದಗಳನ್ನು ಅವರಿಂದ ಓದಲಾಗಲಿಲ್ಲ. ಈ ಸವಾಲನ್ನು ನಿವಾರಿಸಲು ಅಕ್ಷರಗಳನ್ನು ಗುರುತಿಸುವ ಕೆಲಸದ ಜೊತೆಗೆ 'ಸಂಪೂರ್ಣ ಭಾಷಾ ಬೋಧನಾ ವಿಧಾನ'ವನ್ನು ಅಳವಡಿಸಿಕೊಂಡೆವು. ಮಕ್ಕಳು ಕಲಿತ ಪದಗಳಲ್ಲಿನ ಅಕ್ಷರಗಳನ್ನು ಬೇರ್ಪಡಿಸಿದೆವು. ಉದಾಹರಣೆಗೆ ಮಛಲಿ ಎನ್ನುವುದನ್ನು ಮ ಛ ಲಿ ಎಂದೂ ಗಮಲಾ ಅನ್ನು ಗ ಮ ಲಾ ಎಂದೂ ಅನಾರ ಅನ್ನು ಅ ನಾ ರ ಎಂದೂ ಹಾಗೂ ಘರ್ ಅನ್ನು ಘ ರ್ ಎಂದು ಬೇರ್ಪಡಿಸಿದಾಗ ಅಕ್ಷರಗಳನ್ನು ಗುರುತಿಸಲು ಆರಂಭಿಸಿದರು. ಹೀಗೆ ಅಕ್ಷರಗಳ ಗುರುತಿಸುವಿಕೆಯ ಪ್ರಕ್ರಿಯೆಯು ಪದಗಳಿಂದಲೇ ಆರಂಭವಾಯಿತು. ಮಕ್ಕಳು ಅಕ್ಷರ ಗುರುತಿಸುವಿಕೆಯ ಪ್ರಕ್ರಿಯೆಯಲ್ಲಿ ಉತ್ಸಾಹದಿಂದ ಪಾಲ್ಗೊಂಡ ನಂತರ ತಾವಾಗಿಯೇ ಅಕ್ಷರಗಳನ್ನು ಗುರುತಿಸಲು ಆರಂಭಿಸಿದರು. ಕೆಲವು ದಿನಗಳಲ್ಲಿಯೇ ಮಕ್ಕಳು ೩೦ರಿಂದ ೩೫ ಅಕ್ಷರಗಳನ್ನು ಗುರುತಿಸಲು ಆರಂಭಿಸಿದರು ಹಾಗೂ ಅಕ್ಷರಗಳನ್ನು ವಿಭಾಗಿಸಿ ಊಹಿಸುವುದರ ಮೂಲಕ ಹೊಸಪದಗಳನ್ನು ಓದಲು ಪ್ರಯತ್ನಿಸಿದರು. ಈ ಪ್ರಕ್ರಿಯೆಯನ್ನು ಮುಂದುವರೆಸಿದಾಗ ನಮಗೆ ಹೊಸದೊಂದು ಸವಾಲು ಎದುರಾಯಿತು. ಮಕ್ಕಳಿಗೆ ಪದಗಳನ್ನು ಗುರುತಿಸಿ ಓದಲು ಸಾಧ್ಯವಾದರೂ ಗುಣಿತಾಕ್ಷರಗಳು ಇರುವ ಪದಗಳನ್ನು ಓದುವುದಕ್ಕೆ ಕಷ್ಟಪಡುತ್ತಿದ್ದರು. ಕೆಲವರಿಗೆ ಪದಗಳನ್ನು ಊಹಿಸಿ ಓದುವುದಕ್ಕೆ ಸಾಧ್ಯವಾದರೂ ಇನ್ನು ಕೆಲವರಿಗೆ ಗುಣಿತಾಕ್ಷರವನ್ನು ಗುರುತಿಸದ ಕಾರಣಕ್ಕೆ ಪದಗಳನ್ನು ಓದಲಾಗಲಿಲ್ಲ.

ಗುಣಿತಾಕ್ಷರವನ್ನು ಗುರುತಿಸುವುದಕ್ಕೆ ಸಹಾಯವಾಗುವಂತಹ ಹಲವಾರು ಆಸಕ್ತಿಕರ ಹಾಗೂ ಮೋಜಿನ ಚಟುವಟಿಕೆಗಳನ್ನು ಮಾಡಿಸಲಾಯಿತು. ಉದಾಹರಣೆಗೆ, ಮೊದಲಿಗೆ ಆ ಮತ್ತು ಈ ಗುಣಿತಗಳನ್ನು ಗುರುತಿಸಲು ಮುಖದ ಅಭಿವ್ಯಕ್ತಿಗಳು ಪರಿಣಾಮಕಾರಿ ಸಾಧನವೆಂದು ಸಾಬೀತಾಯಿತು. ಹಲಗೆಯ ಮೇಲೆ ಮನ್, ಮಾನಾ, ಮನಾ ಇಂತಹ ಕೆಲವು ಪದಗಳನ್ನು ಬರೆದು ಗಟ್ಟಿಯಾಗಿ ಓದಿದಾಗ ಮಕ್ಕಳು ಗುಣಿತಾಕ್ಷರಗಳನ್ನು ಬಳಸುವಾಗ ನಮ್ಮ ಮುಖದ ಅಭಿವ್ಯಕ್ತಿಗಳನ್ನು ಹಾಗೂ ತುಟಿಯ ಚಲನೆಗಳನ್ನು ಬಹಳ ಜಾಗರೂಕತೆಯಿಂದ ಗಮನಿಸಿದರು. ಆನಂತರ ನಮ್ಮನ್ನು ಅನುಕರಿಸುತ್ತಾ ಅಭ್ಯಾಸ ಮಾಡತೊಡಗಿದರು. ಇಷ್ಟರಲ್ಲಾಗಲೇ ನಾವು ಹೇಳಿದ್ದನ್ನು ಬಹಳ ಜಾಗರೂಕತೆಯಿಂದ ಗಮನಿಸುತ್ತ ಮತ್ತು ಕೇಳಿಸಿಕೊಳ್ಳುತ್ತ ಆ ಮತ್ತು ಈ ಗುಣಿತಾಕ್ಷರಗಳನ್ನು ಬಳಸುವಾಗ ಒಬ್ಬರ ಮುಖದ ಅಭಿವ್ಯಕ್ತಿಗಳು ಹಾಗೂ ತುಟಿಗಳ ಚಲನೆಗಳ ಬಗ್ಗೆ ತಿಳಿದಿದ್ದರು. ಮಕ್ಕಳು ತಮಗೆ ಗೊತ್ತಿದ್ದ ಕೆಲವು ಚಿಕ್ಕ ಪದಗಳನ್ನು ಗ್ರಹಿಸಿದರು ಉದಾಹರಣೆಗೆ ಗಮಲಾ. ಗಮಲ ಹಾಗೂ ಗಮಲಾ ಹೇಳುತ್ತಾ ಗುಣಿತಾಕ್ಷರ ಆ ಇರುವ ಅಥವಾ ಇರದಿರುವ ಪದಗಳನ್ನು ಅರ್ಥಮಾಡಿಕೊಳ್ಳ-ತೊಡಗಿದರು. ಈ ರೀತಿಯಲ್ಲಿ ಗುಣಿತಾಕ್ಷರ ಇರುವ ಪದಗಳನ್ನು ಓದಲು ಮಕ್ಕಳು ಕಲಿತುಕೊಂಡರು. ಇದಲ್ಲದೆ ಇ, ಈ, ಉ, ಊ, ಎ ಹಾಗೂ ಓ ಗುಣಿತಾಕ್ಷರಗಳನ್ನು ಪರಿಚಯಿಸುವುದಕ್ಕಾಗಿ ಮಕ್ಕಳ ಹೆಸರುಗಳು, ಅವರ ಹೆತ್ತವರ ಹಾಗೂ ಶಿಕ್ಷಕರ ಹೆಸರುಗಳನ್ನು

ಬಳಸಿದೆವು. ಉದಾಹರಣೆಗೆ ಖಿಲೇಶ್ವರಿ, ಕವಿತಾ, ಪರಿಧಿ, ಚಿತ್ರಾಂಶಿ, ಅನಿಲ್, ವಿವೇಕ್, ಹೇತಲ್, ಕೇಮನ್, ಸೊಹೇಲ್, ರೋಶ್ನಿ ಇವೇ ಮುಂತಾದವು. ಈ ಹೆಸರುಗಳಲ್ಲಿಯೇ ನಮಗೆ ಬಹುತೇಕ ಎಲ್ಲಾ ಅಕ್ಷರಗಳು ಹಾಗೂ ಗುಣಿತಾಕ್ಷರಗಳು ದೊರಕಿದವು.

ಹೆಸರುಗಳನ್ನು ಬಳಸಿದಾಗ ಮಕ್ಕಳಿಗೆ ಬಲುಬೇಗ ಉಚ್ಚಾರಣೆಯೊಂದಿಗೆ ಸಂಬಂಧ ಕಲ್ಪಿಸಿಕೊಳ್ಳಲು ಸಾಧ್ಯವಾಯಿತು ಹಾಗೂ ಇದೇ ರೀತಿಯ ಉಚ್ಚಾರಣೆ ಇರುವ ಇತರ ಪದಗಳನ್ನು ಯೋಚಿಸಿ ಹೇಳುವುದಕ್ಕೆ ಸಾಧ್ಯವಾಯಿತು. ದಾದಾ ಬರೆದ ನಂತರ ದಾದಿ ಅಥವಾ ಚಾಚಾ ಬರೆದ ನಂತರ ಚಾಚಿ ಈ ರೀತಿಯ ಕೆಲವು ಪದಗಳನ್ನು ಬರೆಯುವಾಗ ಮಕ್ಕಳು ಅಂತಹ ಪದಗಳ ರಚನೆಯ ಆಧಾರದ ಮೇಲೆ ಅವುಗಳ ಉಚ್ಚಾರಣೆಯನ್ನು ಊಹಿಸಿ ತಾವಾಗಿಯೇ ಓದುವುದಕ್ಕೆ ಸಾಧ್ಯವಾಯಿತು. ಗುಣಿತಾಕ್ಷರಗಳ ಪುನರಾವರ್ತನೆಯಾದಾಗ ಅಂತಹ ಗುಣಿತಾಕ್ಷರಗಳ ಆವರ್ತನಗಳ ಆಧಾರದ ಮೇಲೆ ಕೆಲವು ಕಥಾ ಹಂದರಗಳನ್ನೂ ಹೆಣೆಯಲಾಯಿತು. ಉದಾಹರಣೆಗೆ,

ಮೋನಾ ಔರ್ ರೋಮಾ ದೋ ಬೆಹನೆ ಥೀ । ಏಕ್ ದಿನ್ ದೊನೋ ದೋಡಕಿ ಬಜಾರ್ ಗಯೀ । ಬಜಾರ ಮೇ ದೋನೋ ನೇ ಸಮೋಸೆ ಖರಿದೆ। ಸಮೋಸೆ ಕೋ ಜೋಲೇ ಮೇ ರಖಾ ।

ಹೀಗೆಯೇ ಗುಣಿತಾಕ್ಷರ 'ಊ' ಗಾಗಿ ಲಾಲೂ-ಪೀಲೂ ಕಥೆಯನ್ನು ಹೇಳಲಾಯಿತು. ಈ ಕಥೆಗಳನ್ನು ದೊಡ್ಡ ಹಾಳೆಯ ಮೇಲೆ ಬರೆದು ಮಕ್ಕಳು ಇಡೀ ದಿನ ಅದನ್ನು ನೋಡುತ್ತ ಓದುವುದಕ್ಕಾಗಿ ತರಗತಿಯಲ್ಲಿ ತೂಗು ಹಾಕಲಾಯಿತು.

ಹೀಗೆ ಪೂರ್ವ ಪ್ರಾಥಮಿಕ ತರಗತಿಗಳಲ್ಲಿ ನಲಿಯುತ್ತ ಕಲಿಯಲು ಆಟ-ಪಾಠ ಬೋಧನಾ ವಿಧಾನದ ಮೂಲಕ ಮಕ್ಕಳಲ್ಲಿ ಹಿಂದಿ ಭಾಷೆಯಲ್ಲಿ ಓದುವ ಹಾಗೂ ಬರೆಯುವ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸಿದೆವು. ಈ ಅವಧಿ ಮುಗಿಯುವುದರ ಒಳಗೆ 10 ಮಕ್ಕಳಲ್ಲಿ 9 ಮಕ್ಕಳಾದರೂ ಹಿಂದಿ ಭಾಷೆಯ ಪದಗಳನ್ನು/ವಾಕ್ಯಗಳನ್ನು ಓದುವುದಕ್ಕೆ ಹಾಗೂ ಬರೆಯುವುದಕ್ಕೆ ಕಲಿಯುತ್ತಾರೆಂಬುದು ನಮ್ಮ ಆಶಯ. ಈ ಪ್ರಕ್ರಿಯೆಯಲ್ಲಿ ನಾವು ಹಲವಾರು ಸವಾಲುಗಳನ್ನು ಎದುರಿಸಿದ್ದು ಇತರ ಶಿಕ್ಷಕರೊಂದಿಗೆ ಮಾತನಾಡುತ್ತ ಮತ್ತು ಮಕ್ಕಳಿಂದ ಹಿಮ್ಮಾಹಿತಿ ಪಡೆಯುತ್ತಾ ಇವನ್ನು ನಿವಾರಿಸಿಕೊಂಡೆವು. ಮಕ್ಕಳು ಕಲಿಯುವುದಕ್ಕೆ ತೋರಿಸಿದ ತೀವ್ರವಾದ ಉತ್ಸಾಹ ಹಾಗೂ ಆಸಕ್ತಿಯ ಎದುರು ನಾವು ಎದುರಿಸಿದ ಸವಾಲುಗಳು ಏನೂ ಅಲ್ಲ ಎಂದು ನಮಗೆ ಅನಿಸಿತು.

---



**ರೋಷನಿ ದೇವಾಂಗನ್** ಹಿಂದಿ ಸಾಹಿತ್ಯದಲ್ಲಿ ಎಂ.ಎ ಹಾಗೂ IGNOUನಿಂದ ಆರಂಭಿಕ ಬಾಲ್ಯಾವಸ್ಥೆ ಆರೈಕೆ ಮತ್ತು ಶಿಕ್ಷಣ (ECCE) ವಿಷಯದಲ್ಲಿ ಡಿಪ್ಲೋಮಾ ಪಡೆದಿದ್ದು, 2017ರಿಂದ ಛತ್ತೀಸ್‌ಗಢ್‌ದ ಧಮ್‌ತರಿಯಲ್ಲಿರುವ ಅಜೀಮ್ ಪ್ರೇಮ್‌ಜಿ ಶಾಲೆಯಲ್ಲಿ ಪೂರ್ವ ಪ್ರಾಥಮಿಕ ತರಗತಿಯ ಶಿಕ್ಷಕಿಯಾಗಿದ್ದಾರೆ. ಇವರಿಗೆ ಎಳೆಯ ಮಕ್ಕಳೊಂದಿಗೆ ಇರುವುದು, ಮಾತನಾಡುವುದು ಹಾಗೂ ಹಾಡುವುದೆಂದರೆ ಬಹಳ ಪ್ರೀತಿ. ಅವರು ತಮ್ಮ ಬಿಡುವಿನ ಸಮಯದಲ್ಲಿ ಕಥೆ ಪುಸ್ತಕಗಳನ್ನು ಹಾಗೂ ಬೋಧನೆಗೆ ಸಂಬಂಧಪಟ್ಟ ಪುಸ್ತಕಗಳನ್ನು ಓದುವುದಕ್ಕೆ ಹಾಗೂ ಸಂಗೀತ ಕೇಳುವುದಕ್ಕೆ ಇಷ್ಟಪಡುತ್ತಾರೆ. roshni.dewangan@azimpremjifoundation.org ಇವರನ್ನು ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ವಿನಯಾ ವಿಠ್ಠಲ** । ಪರಿಶೀಲನೆ: **ಲತಾ ಕೆ.ಸಿ.**

**ಮಕ್ಕಳು ಆಗಾಗ ಈ ರೀತಿಯ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದು ಹಿರಿಯರ ಕಣ್ಣಿಗೆ ಅರ್ಥವಿಲ್ಲದಂತೆ ಕಾಣುತ್ತಿರುತ್ತದೆ. 'ಓಹ್! ಅವನು ಹಗಲುಗನಸು ಕಾಣುತ್ತಿದ್ದಾನೆ', 'ಆತ ಆಟವಾಡುತ್ತಿದ್ದಾನೆ' ಅಥವಾ 'ಆತ ಸುಮ್ಮನೇ ಕಾಲಹರಣ ಮಾಡುತ್ತಿದ್ದಾನೆ' ಎಂಬುದಾಗಿ ಈ ಚಟುವಟಿಕೆಗಳನ್ನು ಸಾಮಾನ್ಯವಾಗಿ ವ್ಯಾಖ್ಯಾನಿಸಲಾಗುತ್ತದೆ. ಮೇಲೆ ಪ್ರಸ್ತಾಪ ಮಾಡಿದ ಪರಿಸ್ಥಿತಿಗಳಲ್ಲಿ ಮಗುವು ಏನನ್ನು ಕಲಿಯಲು ಸಾಧ್ಯ ಎಂದು ಯಾರಾದರೂ ಯೋಚಿಸಬಹುದು. ಕಲಿಕೆಯ ಬಗ್ಗೆ ಮಾತನಾಡುವ ಸಂದರ್ಭದಲ್ಲಿ, ನಾವು ಸ್ವಾಭಾವಿಕವಾಗಿ ಒಂದು ಮಗು ಪುಸ್ತಕಗಳಲ್ಲಿ ತಲ್ಲೀನವಾಗಿರುವ, ಹೋಮ್‌ವರ್ಕ್ ಮಾಡುತ್ತಿರುವ, ದೊಡ್ಡವರ ಮಾತನ್ನು ಕೇಳುತ್ತಿರುವ ಅಥವಾ ಬಾಯಿಪಾಠ ಮಾಡಿದ್ದನ್ನು ಹೇಳುವ ಚಿತ್ರವನ್ನೇ ಕಲ್ಪಿಸಿಕೊಳ್ಳುತ್ತೇವೆ. ಆದರೆ ಕೆಲವು ಸಂದರ್ಭಗಳಲ್ಲಿ ಕಲಿಕೆಯು ಕೇವಲ ಒಂದು ಫಲಿತಾಂಶವಲ್ಲ, ಅದು ನಿರಂತರ ಹಾಗು ಚಾಲ್ತಿಯಲ್ಲಿರುವ ಪ್ರಕ್ರಿಯೆ ಎಂಬುದನ್ನು ಕೂಡ ನಾವು ತಿಳಿದುಕೊಳ್ಳಬೇಕಾಗುತ್ತದೆ.**

**– ರಿತಿಕಾ ಗುಪ್ತಾ, ಮಕ್ಕಳು ಯಾವಾಗ ಮತ್ತು ಹೇಗೆ ಕಲಿಯುತ್ತಾರೆ ಎಂಬುದರ ಅರ್ಥೈಸುವಿಕೆ, ಪುಟ 22**

# ಆರಂಭಿಕ ಭಾಷೆ ಮತ್ತು ಸಾಕ್ಷರತೆಯ ಕಲಿಕೆ | ಪ್ರಸ್ತುತತೆಯ ಪ್ರಶ್ನೆ

ಶೈಲಾಜಾ ಮೆನನ್

ಭಾರತದ ಶಾಲೆಗಳಲ್ಲಿ ಕಗ್ಗಂಟಿನ ಸಮಸ್ಯೆಯೊಂದಿದೆ. ಅದೆಂದರೆ ನಮ್ಮ ತರಗತಿಗಳಿಗೆ ಕುತೂಹಲ ಹೊಂದಿರುವ, ಚುರುಕಿನ ಮತ್ತು ಸಾಮಾಜಿಕವಾಗಿ ಸಮರ್ಥವಾಗಿರುವ ಮಕ್ಕಳು ಪ್ರತಿವರ್ಷ ಬರುತ್ತಾರೆ. ಅವರಿಗೆ ಸದ್ಯ ಇರುವ ಕಲಿಕಾ ವಿಧಾನದಿಂದ ಬೋಧಿಸಲು ಪ್ರಯತ್ನಿಸುತ್ತೇವಾದರೂ, ಆ ಕ್ರಮದಿಂದಾಗಿಯೇ ದೊಡ್ಡ ಸಂಖ್ಯೆಯಲ್ಲಿ ಈ ಮಕ್ಕಳು ಶಾಲಾ ಶಿಕ್ಷಣದ ಮೊದಲ ಮೂರು ವರ್ಷಗಳೊಳಗೆ ಕಲಿಯುವ 'ಆಸಕ್ತಿಯನ್ನು ಕಳೆದುಕೊಳ್ಳುತ್ತಾರೆ. ಕಳೆದ ಹಲವು ವರ್ಷಗಳಲ್ಲಿ ನಮ್ಮ ದೇಶದಲ್ಲಿ ನಡೆಸಿದ ದೊಡ್ಡ ಪ್ರಮಾಣದ ಮೌಲ್ಯಮಾಪನವೊಂದು ಹಲವಾರು ಮಕ್ಕಳು ಮೇಲಿನ ತರಗತಿಗಳಿಗೆ ಹೋಗಿದ್ದರೂ ಪ್ರಾಥಮಿಕ ಮಟ್ಟದಲ್ಲಿ ಓದಲು ಅಥವಾ ಬರೆಯಲು ಅಸಮರ್ಥರು ಎಂಬುದನ್ನು ತೋರಿಸಿರುವುದು ಆಶ್ಚರ್ಯವೆನಿಸುವುದಿಲ್ಲವೇ? ಖ್ಯಾತ ಭಾಷಾ ಮನೋವಿಜ್ಞಾನಿ ಜಿಮ್ ಗೀಯವರು ಅಮೆರಿಕಾದ ಶಾಲೆಗಳಲ್ಲಿ ಈ ಅಸಂಬದ್ಧತೆಯು ನಿಯಮಿತವಾಗಿ ನಡೆಯುತ್ತದೆ ಎಂಬುದನ್ನು ಸೂಚಿಸಿದ್ದಾರೆ. ಉದಾಹರಣೆಗೆ, ಇಂಗ್ಲಿಷ್ ವರ್ಣಮಾಲೆಯ ಇಪ್ಪತ್ತಾರು ಅಕ್ಷರಗಳನ್ನು ಮತ್ತು ಅದನ್ನು ಓದುವಾಗ ಅನ್ವಯಿಸುವ ಅದರ ನಿಯಮಗಳನ್ನು ಚೆನ್ನಾಗಿ ಕಲಿಯಲು ವರ್ಷಗಳೇ ತೆಗೆದು-ಕೊಂಡರೂ, ಅವರಿಗೆ ಆಡಲು ವಿಡಿಯೋ ಗೇಮ್‌ಗಳನ್ನು ನೀಡಿದಲ್ಲಿ ಕೆಲವೇ ವಾರಗಳಲ್ಲಿ ನೂರಾರು ಅಮೂರ್ತ ಚಿಹ್ನೆಗಳು ಮತ್ತು ನಿಯಮಗಳನ್ನು ಕಲಿಯುತ್ತಾರೆ ಎಂಬುದಾಗಿ ತಿಳಿಸಿದ್ದಾರೆ.

ಇದು ನನಗೆ ಗೀತಾ[i] ಎಂಬ 9 ವರ್ಷದ ಹುಡುಗಿಯ ಬಗ್ಗೆ ಯೋಚಿಸುವಂತೆ ಮಾಡುತ್ತದೆ. ಭಾರತೀಯ ಭಾಷೆಗಳು (LiRIL)[ii] ಅಧ್ಯಯನದಲ್ಲಿ ಸಾಕ್ಷರತಾ ಸಂಶೋಧನೆಯನ್ನು ನಡೆಸುವಾಗ ನಾನು ಅವಳನ್ನು ಭೇಟಿಯಾದೆ. ಅವಳು ಮಹಾರಾಷ್ಟ್ರದ ವರ್ಲಿ ಬುಡಕಟ್ಟು ಜನಾಂಗಕ್ಕೆ ಸೇರಿದವಳು. ನಾನು ಅವಳನ್ನು ಭೇಟಿಯಾದಾಗ ಅವಳು ಹಳ್ಳಿಯ ಶಾಲೆಯಲ್ಲಿ ನಾಲ್ಕನೇ ತರಗತಿಯನ್ನು ಓದುತ್ತಿದ್ದಳು. ಅವಳಿಗೆ ಶಾಲೆಯಲ್ಲಿನ ಭಾಷೆಯಾದ ಮರಾಠಿಯಲ್ಲಿ ಮಾತನಾಡಲು ಮತ್ತು ಅರ್ಥಮಾಡಿಕೊಳ್ಳಲು ಬರುತ್ತಿತ್ತು. ಅವಳು ಬಹಳ ಚುರುಕಿನ, ಸಮರ್ಥ, ಜಾಗರೂಕ ಹುಡುಗಿ. ತನ್ನ ತಂದೆತಾಯಿ ಕೆಲಸಕ್ಕೆ ಹೋದಾಗ ಅವಳು ಒಡಹುಟ್ಟಿದ ತನ್ನ ಇಬ್ಬರು ಪುಟ್ಟ ಸಹೋದರರ ಆರೈಕೆ ಮಾಡುತ್ತಿದ್ದಳು. ಅವಳು ಸಂಶೋಧಕರಿಗೆ ಬಹಳ ಕುತೂಹಲದಿಂದ ಹಲವಾರು ಪ್ರಶ್ನೆಗಳನ್ನು ಕೇಳುತ್ತಿದ್ದಳು. ಎಷ್ಟೋ ವಿಷಯಗಳ ಬಗ್ಗೆ ವಿಚಾರಿಸುತ್ತಿದ್ದಳು. ಅಲ್ಲದೆ, ಸಂಶೋಧಕರು ಕೇಳುವ ಎಷ್ಟೋ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದಳು, ವಿವರ ನೀಡುತ್ತಿದ್ದಳು. ಯಾರು ಅಲ್ಲಿ ವಾಸವಾಗಿದ್ದಾರೆ, ಆ ಸ್ಥಳಕ್ಕೆ ಯಾವುದು ಹತ್ತಿರದ ದಾರಿ, ಏನೂ ಇಲ್ಲದಾಗ ತಿನ್ನಲು ಯಾವ ಹಣ್ಣುಗಳು ಮತ್ತು ಬೇರುಗಳು ಸುರಕ್ಷಿತ, ನೀರನ್ನು ಕುಡಿಯಲು ಯೋಗ್ಯವಾಗಿ ಮಾಡಲು ಹೇಗೆ ಶೋಧಿಸ-ಬೇಕು. ಹೀಗೆ ಹಲವಾರು ಪ್ರಶ್ನೆಗಳಿಗೆ ಉತ್ತರ ನೀಡುತ್ತಿದ್ದಳು! ಅವಳು ಪ್ರಶ್ನೆಗಳು ಮತ್ತು ಮಾಹಿತಿಯ ಭಂಡಾರವಾಗಿದ್ದಳು. ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸುತ್ತಿದ್ದಳು, ಒಳ್ಳೆಯ ಕೆಲಸಗಾರ್ತಿ, ಶ್ರಮಜೀವಿ, ಕಷ್ಟಪಟ್ಟು ದುಡಿಯುತ್ತಿದ್ದಳು. ಅಡುಗೆ ಮಾಡಲು, ಪಾತ್ರೆ ತೊಳೆಯಲು ಹೀಗೆ ಮನೆಯ ಹತ್ತು ಹಲವಾರು ಕೆಲಸಗಳಲ್ಲಿ ಅಮ್ಮನ ಜೊತೆ ಕೈಜೋಡಿಸುತ್ತಿದ್ದಳು. ಅವಳು ಸೋಮಾರಿಯಾಗಿರಲಿಲ್ಲ. ನಿರ್ಲಿಪ್ತಳೂ ಅಲ್ಲ, ಮಂಕಾಗಿರುವವಳೂ ಅಲ್ಲ. ಆದರೂ ಮೂರುವರೆ ವರ್ಷಗಳ ಕಾಲ ಔಪಚಾರಿಕ ಶಿಕ್ಷಣವನ್ನು ಮುಗಿಸಿಯೂ ಕೂಡ ಅವಳಿಗೆ ಚೆನ್ನಾಗಿ ಓದಲು, ಬರೆಯಲು ಬರುತ್ತಿರಲಿಲ್ಲ.

ದೇಶದ ಹಲವೆಡೆ ನಾನು ತರಗತಿ ಪ್ರಕ್ರಿಯೆಯಲ್ಲಿ ಭಾಗಿಯಾಗಿದ್ದಾಗ ಗೀತಾಳಂತಹ ಹಲವಾರು ಹುಡುಗ ಹುಡುಗಿಯರನ್ನು ನಾನು ಭೇಟಿ ಮಾಡಿದ್ದೇನೆ. ಯಾಕೆ ಹೀಗಾಗುತ್ತಿದೆ?

**ನಾವೆಲ್ಲಿ ಎಡವುತ್ತಿದ್ದೇವೆ?**

ಸಹಜವಾದ ಬುದ್ಧಿವಂತಿಕೆ, ಕುತೂಹಲ, ತಲ್ಲೀನತೆಗಳೊಂದಿಗೆ ತರಗತಿಗಳನ್ನು ಪ್ರವೇಶಿಸುವ ಮಕ್ಕಳ ನೈಜ ಸಂಪರ್ಕವನ್ನು ಶಿಕ್ಷಕರಾದ ನಾವು ಕಳೆದುಕೊಳ್ಳುತ್ತಿದ್ದೇವೆ ಮತ್ತು ಬಹಳ ಪ್ರಸ್ತುತವಲ್ಲದ ಕಲಿಕೆ ಅಥವಾ ಅವರಿಗೆ ಕೈಗೆಟುಕದ ಕಲಿಕೆಯನ್ನು ಒದಗಿಸುತ್ತಿದ್ದೇವೆ ಎನ್ನುವುದು ಸ್ಪಷ್ಟ. ಗೀತಾಳಂತಹ ಮಕ್ಕಳನ್ನು ಗಮನದಲ್ಲಿರಿಸಿ, ಈ ಲೇಖನದಲ್ಲಿ ನಾನು ಆರಂಭಿಕ ಭಾಷಾ ತರಗತಿಗಳಲ್ಲಿ ಭಿನ್ನವಾಗಿ ಮಾಡಬಹುದಾದ ಮೂರು ನಿರ್ದಿಷ್ಟ ವಿಷಯಗಳನ್ನು ಪ್ರಸ್ತಾಪಿಸುತ್ತಿದ್ದೇನೆ.

1. ಬಹುಭಾಷಾ ಪರಿಸರವನ್ನು ರೂಪಿಸುವುದು
2. ಭಾಷಾ ಕಲಿಕೆಯಲ್ಲಿ ಮಕ್ಕಳ ಪ್ರಾರಂಭಿಕ ಪ್ರಯತ್ನಗಳನ್ನು ಪ್ರೋತ್ಸಾಹಿಸುವುದು.
3. ಭಾಷಾ ತರಗತಿಯ ಪಾಠವು ಅರ್ಥಪೂರ್ಣವಾಗುವಂತೆ ಮಾಡುವುದು.

**ಬಹುಭಾಷಾ ಪರಿಸರವನ್ನು ನಿರ್ಮಿಸುವುದು**

ಭಾಷಾ ತರಗತಿಗೆ ಸಣ್ಣ ಮಕ್ಕಳು ತಾವು ಆಲೋಚಿಸುವ, ತರ್ಕಿಸುವ, ಪರಿಶೋಧಿಸುವ, ವಾದಿಸುವ, ವರ್ಣಿಸುವ ಮತ್ತು ಸಂಪರ್ಕ ಸಾಧಿಸುವ ತಮ್ಮ ಮನೆ ಭಾಷೆಗಳ ವಿಪುಲ ಅದ್ಭುತವಾದ ಸಂಪನ್ಮೂಲದೊಂದಿಗೆ ಭಾಷಾ ಕೌಶಲದೊಂದಿಗೆ ಶಾಲೆಗೆ ಬರುತ್ತಾರೆ. ಅದು ಅವರ ಸಂಬಂಧಗಳ ಭಾಷೆ, ಭಾವನೆಗಳ ಭಾಷೆಯಾಗಿರುತ್ತದೆ. ಅವರಿಗೆ ಆ ಭಾಷೆಯಲ್ಲಿ ಮೂಲ ವ್ಯಾಕರಣದ ಅರಿವಿರುತ್ತದೆ ಮತ್ತು ಸಾಕಷ್ಟು ಪ್ರಮಾಣದಲ್ಲಿ ಅದರ ಶಬ್ದಗಳು ತಿಳಿದಿರುತ್ತದೆ.

ಆದರೆ ಹಲವಾರು ಸಂದರ್ಭಗಳಲ್ಲಿ ತರಗತಿಯ ಒಳಗೆ ಬರುವಾಗ ಚಪ್ಪಲಿಗಳನ್ನು ಹೊರಗೆ ಬಿಟ್ಟು ಬರುವಂತೆ ತಮ್ಮ ಮನೆ ಭಾಷೆಯನ್ನು ತರಗತಿಯ ಹೊರಗೆ ಬಿಟ್ಟು ಬರಬೇಕು ಎನ್ನುವಂತೆ ಶಾಲೆಯ ವಾತಾವರಣ ಇರುತ್ತದೆ. ಆದರ್ಶಪ್ರಾಯವಾಗಿ ಮಗುವಿನ ಮಾತೃಭಾಷೆಯು ಬೋಧನೆಯ ಮಾಧ್ಯಮವಾಗಬೇಕು (ಕಮ್ಮಿನ್ಸ್ 2001). ಇದು ಮಗುವಿಗೆ ಏನು ಕಲಿಸಲಾಗುತ್ತಿದೆ ಎಂಬ

ವಿಷಯವನ್ನು ಅರಿಯಲು ಮಾತ್ರವಲ್ಲದೆ, ತನ್ನ ಭಾವನೆಗಳನ್ನು ಮತ್ತು ವಿಚಾರಗಳನ್ನು ವ್ಯಕ್ತಪಡಿಸಲು, ಹಾಗೆಯೇ ತನ್ನ ಸಾಂಸ್ಕೃತಿಕ ಗುರುತು ಹಾಗೂ ಪರಂಪರೆಯ ಬಗ್ಗೆ ಹೆಮ್ಮೆ ಅಥವಾ ಅಭಿಮಾನಪಡಲು ನೆರವಾಗುತ್ತದೆ. ಮಾತೃಭಾಷೆಯಲ್ಲಿ ಕಲಿಸುವುದೆಂದರೆ ತಮ್ಮ ಮಕ್ಕಳ ಮಾತೃಭಾಷೆಗೆ ಮಾತ್ರ ಸೀಮಿತವಾಗಬೇಕಿಲ್ಲ. ಮಗುವಿನ ಮನೆ ಭಾಷೆಯನ್ನು ಅಂಗೀಕರಿಸಿದ್ದರೂ ಕೂಡ ಶಾಲಾ ಭಾಷೆ, ಇಂಗ್ಲಿಷ್ ಮತ್ತು ಸುತ್ತಮುತ್ತಲಿನ ಇತರೆ ಭಾಷೆಗಳನ್ನೂ ಕೂಡ ಕಲಿಸಬಹುದು.

ಆದರೆ ಹಲವಾರು ಕಾರಣಗಳಿಂದಾಗಿ ಭಾರತದಾದ್ಯಂತದ ಅನೇಕ ಶಾಲೆಗಳಲ್ಲಿ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಕಲಿಸಲಾಗುತ್ತಿಲ್ಲ. ಭಾರತೀಯ ಶಾಲೆಗಳ ನಾಲ್ಕು ಮಕ್ಕಳಲ್ಲಿ ಒಬ್ಬರು ತಮ್ಮ ಮನೆ ಮತ್ತು ಶಾಲಾ ಭಾಷೆ ಒಂದೇ ಆಗಿರದ ಕಾರಣ ಸಾಧಾರಣದಿಂದ ತೀವ್ರ ಕಲಿಕಾ ಸಮಸ್ಯೆ ಎದುರಿಸುತ್ತಾರೆ. ಕಲಿಕಾ ಮಾಧ್ಯಮದ ಕುರಿತ ನಿರ್ಧಾರ ವೈಯಕ್ತಿಕ ಶಿಕ್ಷಕರ ಕೈಯಲ್ಲಿ ಇರುವುದಿಲ್ಲ. ಆದರೆ ಒಂದೇ ತರಗತಿಯಲ್ಲಿ ಹಲವಾರು ಮಾತೃಭಾಷೆಗಳನ್ನು ಬಳಸಬಹುದು. ಅಧಿಕೃತವಾದ ಕಲಿಕಾ ಮಾಧ್ಯಮಕ್ಕೆ ಭಿನ್ನವಾಗಿ ಹಲವು ಭಾಷೆಗಳನ್ನು ಮಾತನಾಡಬಲ್ಲ ವಿದ್ಯಾರ್ಥಿಗಳಿರುವ ಶಾಲೆಯಲ್ಲೂ ಕೂಡ ಮಕ್ಕಳಿಗೆ ಆರಾಮವೆನಿಸುವ ರೀತಿಯಲ್ಲಿ ಮಾಡಬಹುದಾದ ಹಲವಾರು ಸರಳ ಮಾರ್ಗಗಳಿವೆ. ಆ ಕೆಲವನ್ನು ಇಲ್ಲಿ ಪಟ್ಟಿಮಾಡಲಾಗಿದೆ.[iii]

**ತರಗತಿಯಲ್ಲಿ ಬಹುಭಾಷಾ ಚಿತ್ರಗಳನ್ನು ಬಳಸುವುದು**

ತರಗತಿಯಲ್ಲಿ ಹಲವು ಭಾಷೆಗಳ ಮುದ್ರಿತ ಸಾಮಗ್ರಿಗಳನ್ನು ಪ್ರದರ್ಶಿಸಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದು. ಇವು ತರಗತಿಯ ವಿವಿಧ ಭಾಗಗಳಲ್ಲಿ ಲೇಬಲ್ ಗಳನ್ನು ಒಳಗೊಂಡಂತೆ ಪುಸ್ತಕಗಳು, ಕತೆಗಳು, ಪದ್ಯಗಳು ಇತ್ಯಾದಿಗಳಿರ-ಬಹುದು. ಇದು ಮಕ್ಕಳು ಚೆನ್ನಾಗಿ ಅರಿಯಲು ಸಹಾಯ ಮಾಡುವುದಲ್ಲದೆ ತಮ್ಮ ಭಾಷೆಗೂ ಬೆಲೆಯಿದೆ, ಅದು ಅಂಗೀಕಾರವಾಗಿದೆ ಎಂಬ ಭಾವನೆ ಅವರಲ್ಲಿ ಬರಲು ನೆರವಾಗುತ್ತದೆ. ಒಂದು ವೇಳೆ ಸ್ಥಳೀಯ ಭಾಷೆಗೆ ಲಿಪಿಯಿಲ್ಲದಿದ್ದರೆ ಆ ಭಾಷೆಯ ಕತೆಗಳು, ಹಾಡುಗಳು ಮತ್ತು ಪದ್ಯಗಳನ್ನು ಪ್ರಾದೇಶಿಕ ಭಾಷೆಯ ಲಿಪಿಯಲ್ಲಿ (ಬೋಧನಾ ಮಾಧ್ಯಮ) ಬರೆದು ತರಗತಿಯಲ್ಲಿ ಪ್ರದರ್ಶಿಸಬಹುದು.

**ಮನೆಭಾಷೆಯಲ್ಲಿ ಮಾತನಾಡಲು ಮತ್ತು ಅಭಿವ್ಯಕ್ತಿಸಲು ಪ್ರೋತ್ಸಾಹಿಸುವುದು**

ಚಿಕ್ಕಮಕ್ಕಳಿಗೆ ತಮ್ಮ ಮನೆಭಾಷೆಯಲ್ಲಿ ಮಾತನಾಡಲು ಅನುವು ಮಾಡಿದರೆ ಅವರು ಸಕ್ರಿಯವಾಗಿ ಬೆರೆತು ಇನ್ನಷ್ಟು ಹೆಚ್ಚು ಮಾತನಾಡುತ್ತಾರೆ. ಶಿಕ್ಷಕರಿಗೆ ಮಗುವಿನ ಈ ಭಾಷೆ ಗೊತ್ತಿದ್ದರೆ ಅವರು ಮಗುವಿನ ಜೊತೆ ಆ ಭಾಷೆಯಲ್ಲಿಯೇ ಉತ್ತರಿಸಬಹುದು. ಇಲ್ಲದಿದ್ದಲ್ಲಿ ಒಬ್ಬ ಮಧ್ಯವರ್ತಿಯನ್ನು (ಹಿರಿಯ ಅಥವಾ ಹಳೆಯ ವಿದ್ಯಾರ್ಥಿ, ಸಮುದಾಯ ಸದಸ್ಯ, ಸಹಪಾಠಿ) ಗುರುತಿಸಿ ಆ ಮಗುವಿನ ಜೊತೆಗೆ ಮಾತನಾಡಲು ಶಿಕ್ಷಕರು ನೆರವು ಪಡೆಯಬಹುದು.

**ಮಾತನಾಡುವಾಗ ಮತ್ತು ಬರೆಯುವಾಗ ಮಕ್ಕಳು ತಮ್ಮ ಅನುಕೂಲದ ಭಾಷೆಯನ್ನು ಜೋಡಿಸಿ ಬಳಸಲು ಅನುಮತಿ ನೀಡುವುದು**

ಇದು ಮಕ್ಕಳಿಗೆ ತಮಗೆ ಅನುಕೂಲವೆನಿಸುವ ಭಾಷೆಯ ವ್ಯಾಕರಣ ಮತ್ತು ಶಬ್ದಗಳನ್ನು ಸಂಪೂರ್ಣವಾಗಿ ಬಳಸಿ ತಮ್ಮ ಭಾಷೆಯಲ್ಲಿ ಆಲೋಚನೆಗಳನ್ನು ವ್ಯಕ್ತಪಡಿಸಲು ಸಹಕರಿಸುತ್ತದೆ. ಹೊಸ ಭಾಷೆಯಲ್ಲಿ ಕೆಲವು ಪದಗಳನ್ನು ಅಥವಾ ವಾಕ್ಯಗಳನ್ನು ರಚಿಸುವ ಪ್ರಯೋಗದಲ್ಲಿ ಅವರು ತೊಡಗುವಾಗಲೂ ಇದು ನೆರವಾಗುತ್ತದೆ. ಬಹುಪಾಲು ದುಬಾಷಿ ಹಾಗೂ ಬಹುಭಾಷೀಯರು ಭಾಷೆಗಳನ್ನು ಸಲೀಸಾಗಿ ಬೆರೆಸಿ ಮಾತನಾಡುತ್ತಾರೆ. ಇದು ಸಣ್ಣ ಮಕ್ಕಳು ಒಂದು ಹೊಸ ಭಾಷೆಯನ್ನು ಕಲಿಯಲು ಬೆಂಬಲಿಸುವ ಒಂದು ಮಾರ್ಗವಾಗಿದೆ ಎಂದು ಗಾರ್ಸಿಯ ಮತ್ತು ವೀ (2014) ಹೇಳಿದ್ದಾರೆ. ಚಿತ್ರ 1ರಲ್ಲಿ ನಾಲ್ಕನೆಯ ತರಗತಿಯ ಮಗು ತನ್ನ ಮಾತೃಭಾಷೆಯಾದ ಮರಾಠಿಯನ್ನು ಹೊಸ ಶಾಲೆಯ ಭಾಷೆಯಾದ ಇಂಗ್ಲಿಷನ್ನು ಕಲಿಯಲು ಹೇಗೆ ಬಳಸಿತೆಂಬುದನ್ನು ತೋರಿಸುತ್ತದೆ.[iv]

**ಮಕ್ಕಳ ಓದುವ ಮತ್ತು ಬರೆಯುವ ಆರಂಭಿಕ ಪ್ರಯತ್ನಗಳನ್ನು ಪ್ರೋತ್ಸಾಹಿಸುವುದು**

ಗೀತಾಳಂತಹ ಚಿಕ್ಕ ಮಕ್ಕಳು ಶಾಲೆಗೆ ಬಂದಾಗ ತಮ್ಮ ಮನೆ ಭಾಷೆಯಿಂದ ಶಾಲಾ ಭಾಷೆಗೆ ಹೊಂದಿಕೊಳ್ಳಬೇಕಾಗುವುದು ಮಾತ್ರವಲ್ಲ, ಅವರು ಶಾಲಾ ಭಾಷೆಯಲ್ಲಿ ಓದಬೇಕು ಮತ್ತು ಬರೆಯಬೇಕೆಂಬ ನಿರೀಕ್ಷೆ ಕೂಡ ಇರುತ್ತದೆ. ಹಲವು ಶಾಲೆಗಳು ಚಿಕ್ಕಮಕ್ಕಳಿಗೆ ಮೊದಲು ಅಕ್ಷರಗಳನ್ನು (ವರ್ಣಮಾಲೆ) ಓದಲು ಮತ್ತು ಬರೆಯಲು ಕಲಿಸುತ್ತಾರೆ. ನಂತರ ಪದಗಳ ಕಲಿಕೆಯನ್ನು ಪ್ರಾರಂಭಿಸುತ್ತಾರೆ. ತದನಂತರ ವಾಕ್ಯಗಳು ಹಾಗೂ ಕೊನೆಯದಾಗಿ ಒಂದು ಪ್ಯಾರಾವನ್ನು ಓದಬೇಕೆಂದು ನಿರೀಕ್ಷಿಸುತ್ತಾರೆ. ಮೌಖಿಕ ಚಟುವಟಿಕೆಗಳು ಸಾಕಷ್ಟು ಕಡಿಮೆ. ಅವು ಕೇವಲ ಪ್ರಾಸ ಪದ್ಯಗಳನ್ನು ಹೇಳುವುದಕ್ಕೆ ಸೀಮಿತವಾಗಿರುತ್ತವೆ. ಶಾಲಾಮಕ್ಕಳು ಈಗಾಗಲೇ ತಾವು ಬಲ್ಲ ಮಾತನಾಡುವ, ಆಲಿಸುವ, ಆಲೋಚಿಸುವ ಹಾಗೂ ಅಭಿವ್ಯಕ್ತಿಸುವ ಸಾಮರ್ಥ್ಯವನ್ನು ಬಳಸುವುದಿಲ್ಲವಾದ್ದರಿಂದ ಶಾಲೆಗಳಲ್ಲಿ ಭಾಷೆಯನ್ನು ಹೇಳಿಕೊಡುವ ಈ ವಿಧಾನಗಳು ಉಪಯೋಗಕ್ಕೆ ಬರುವುದಿಲ್ಲ.

ಹಾಗಾದರೆ ಚಿಕ್ಕ ಮಕ್ಕಳಿಗೆ ನಾವು ಭಾಷಾ ಕಲಿಕೆ ಹೇಗೆ ಆರಂಭಿಸಬೇಕು?

**ಅಗತ್ಯವಾಗಿರುವ ವಿಷಯಗಳೊಂದಿಗೆ ಸಂಪರ್ಕಿಸುವುದೇ ಇದಕ್ಕೆ ಸೂಕ್ತ ಉತ್ತರ**

ಬಹಳ ದಶಕಗಳ ಅಧ್ಯಯನವು ಮಕ್ಕಳು ತಮಗೆ ಅರ್ಥ-ಪೂರ್ಣವಾಗಿರುವ, ಆಸಕ್ತಿದಾಯಕ ಎನಿಸುವ ಸಂದರ್ಭಗಳಲ್ಲಿ ಅವಲೋಕನ, ಪ್ರಯೋಗ, ಪರೀಕ್ಷೆ ಹಾಗೂ ಪ್ರಯತ್ನಗಳ ತಪ್ಪು ಸರಿಗಳ ಮೂಲಕ ಭಾಷೆಯನ್ನು ಕಲಿಯುತ್ತಾರೆಂದು ತೋರಿಸಿದೆ. ಹೀಗಾಗಿ ಅವರು ಕೆಲವೇ ವಾರಗಳಲ್ಲಿ ತಮಗೆ ಇಷ್ಟವಾದುದನ್ನು ಕರಗತ ಮಾಡಿಕೊಳ್ಳಲು ಸಾಧ್ಯವಾಗುತ್ತದೆ ಉದಾಹರಣೆಗೆ ಅವರು ಬೇಗನೆ ವೀಡಿಯೊ ಗೇಮ್‌ಗಳಲ್ಲಿ ಪರಿಣಿತಿ ಸಾಧಿಸುತ್ತಾರೆ. ಆದರೆ ಅಕ್ಷರಮಾಲೆಯನ್ನು ಕಲಿಯಲು ಅವರಿಗೆ ವರ್ಷಗಳ ಕಾಲ ಬೇಕಾಗುತ್ತದೆ!. ಭಾಷಾ ತರಗತಿಯಲ್ಲಿ ಮಕ್ಕಳಿಗೆ ಯಾವುದು ಮುಖ್ಯ ಅಗತ್ಯವೆನಿಸುತ್ತದೆಯೋ ಅವುಗಳ ಜೊತೆಗೆ ಸಂಪರ್ಕ ಕಲ್ಪಿಸಿ ಅವರಿಗೆ ನಾವು ಕಲಿಸಬಹುದು. ಇದನ್ನು ಶಿಕ್ಷಕರು ಹೇಗೆ ಮಾಡಬಲ್ಲರು?

**ಮೌಖಿಕ ಅಭಿವ್ಯಕ್ತಿಗೆ ಅವಕಾಶಗಳನ್ನು ಒದಗಿಸುವುದು**

ವಿಷಯ ಹಂಚಿಕೊಳ್ಳುವ ಸಮಯದಲ್ಲಿ ಮಕ್ಕಳಿಗೆ ತಮಗೆ ಬಹಳ ಇಷ್ಟವಾದುದನ್ನು ಹಂಚಿಕೊಳ್ಳಲು ಕೇಳಬಹುದು. ಅವರು ಕತೆ

ಹೇಳಬಹುದು ಅಥವಾ ಓದಬಹುದು. ತದನಂತರ ಅದರ ಬಗ್ಗೆ ಚರ್ಚೆ ನಡೆಸಬಹುದು. ಅವರನ್ನು ಒಂದು ಕ್ಷೇತ್ರ ಪ್ರವಾಸಕ್ಕೆ ಕರೆದೊಯ್ದು ನಂತರ ಚರ್ಚೆ ಮಾಡಬಹುದು ಅಥವಾ ಸಮುದಾಯದ ಒಬ್ಬ ಗಣ್ಯರನ್ನು ಮಕ್ಕಳ ಜೊತೆಗೆ ಮಾತನಾಡಲು ಕರೆಸಬಹುದು. ಮಕ್ಕಳು ಆಲೋಚಿಸಬೇಕು, ಸಂಪರ್ಕಿಸಬೇಕು ಹಾಗೂ ಪರಸ್ಪರ ಇತರ–ರೊಂದಿಗೆ ಮಾತನಾಡಿ ಅವರ ಮಾತುಗಳನ್ನು ಆಲಿಸಿ ಅಭಿಪ್ರಾಯ ಹಂಚಿಕೊಳ್ಳಬೇಕು ಹಾಗೂ ತಮ್ಮ ಭಾವನೆಗಳನ್ನು ಹೇಳಬೇಕು ಎನ್ನುವುದು ಈ ಎಲ್ಲ ಚಟುವಟಿಕೆಗಳ ಮುಖ್ಯ ಉದ್ದೇಶವಾಗಿದೆ. ಈ ಹಿಂದೆ ಹೇಳಿದಂತೆ, ಮಕ್ಕಳಿಗೆ ತಮ್ಮ ಮನೆ ಭಾಷೆಯಲ್ಲಿ ಮಾತನಾಡಲು ಅಥವಾ ಭಾಷೆಗಳನ್ನು ಬೆರೆಸಿ ಮಾತನಾಡಲು ಪ್ರೋತ್ಸಾಹ ನೀಡಬೇಕು. ಇದು ಅರಿವು ಮೂಡಲು, ಅವರ ಶಬ್ದಭಂಡಾರ ಹೆಚ್ಚಲು, ಹೊಸ ಭಾಷೆಯ ತಿಳುವಳಿಕೆ ಹೆಚ್ಚಾಗಲು ಹಾಗೂ ತಮ್ಮ ಸುತ್ತಮುತ್ತಲಿನ ಪ್ರಪಂಚದ ಬಗ್ಗೆ ಹೆಚ್ಚು ಜ್ಞಾನವನ್ನು ಪಡೆಯಲು ನೆರವಾಗುವುದು. ಮಕ್ಕಳಿಗೆ ಒಂದು ಪುಸ್ತಕ, ಒಂದು ಕಥೆ ಅಥವಾ ಒಂದು ಅನುಭವದ ಬಗ್ಗೆ ಏನನ್ನಿಸುತ್ತದೆ ಎಂದು ಕೇಳಿದಾಗ ಮಕ್ಕಳು ಸಂಪರ್ಕವಿಲ್ಲದ ಮಾತುಗಳನ್ನು ಆಡಿದಾಗ ಆ ಬಗ್ಗೆ ತಿಳಿಯಲು ಶಿಕ್ಷಕರಿಗೆ ಸಾಧ್ಯವಾಗುತ್ತದೆ ಹಾಗೂ ಮಕ್ಕಳಲ್ಲಿ ವಿಚಾರವಂತಿಕೆ ಬೆಳೆಯಲು ಹಾಗೂ ಭಾವನೆಗಳನ್ನು ಹೇಳಲು ಅವಕಾಶ ಒದಗಿದಂತಾಗುತ್ತದೆ.

**ಓದುವ ಹಾಗೂ ಬರೆಯುವ ಕೆಲಸದಲ್ಲಿ ಪ್ರಯೋಗ ಮಾಡಲು ಅವಕಾಶಗಳನ್ನು ಒದಗಿಸುವುದು**

ಮಕ್ಕಳಿಗೆ ಪ್ರತಿದಿನ ಚಿತ್ರಗಳಿರುವ ಪುಸ್ತಕಗಳನ್ನು ತಿರುವಿ ಹಾಕಲು ಅನುಮತಿ ನೀಡಿದರೆ ಅವರಿಗೆ ಎಲ್ಲ ಅಕ್ಷರಗಳು ಅಥವಾ ಪದಗಳನ್ನು ಓದದಿದ್ದರೂ ಪುಟಗಳನ್ನು ತಿರುವಿ ಹಾಕುತ್ತಾರೆ, ಚಿತ್ರಗಳನ್ನು ನೋಡುತ್ತಾರೆ, ಬೇರೆಯವರ ಜೊತೆಗೆ ಇದರ ಬಗ್ಗೆ ಮಾತನಾಡುತ್ತಾರೆ (ಚಟುವಟಿಕೆಯಲ್ಲಿ ಇಬ್ಬಿಬ್ಬರಂತೆ ಸೇರಿಸಿದರೆ) ಮತ್ತು ಅದರ ಅರ್ಥವನ್ನು ಹುಡುಕಲು ಪ್ರಯತ್ನ ಮಾಡುತ್ತಾರೆ. ಕೆಲವು ಮಕ್ಕಳು ಓದುತ್ತಿರುವಂತೆ ನಟಿಸಬಹುದು ಅಥವಾ ಪುಸ್ತಕದ ಕೆಲವು ಪದಗಳನ್ನು ಅವರು ಗುರುತಿಸಬಹುದು. ಕಾಲಾನಂತರ ಅವರು ನಿಧಾನವಾಗಿ ಓದುವುದರಲ್ಲಿ ಹೆಚ್ಚು ಹೆಚ್ಚು ನಿಖರತೆಯನ್ನು ಸಾಧಿಸುತ್ತಾರೆ.

ಹಾಗೆಯೇ, ತರಗತಿಯಲ್ಲಿ ಚರ್ಚೆ ಮಾಡಿರುವ ವಿಷಯದ ಬಗ್ಗೆ ಬರೆಯಲು ಅಥವಾ ಚಿತ್ರ ಬಿಡಿಸಲು ಮಕ್ಕಳಿಗೆ ಅವಕಾಶ ನೀಡಿದರೆ, ಅವರು ಬರೆಯುವ ಪ್ರಯೋಗದಲ್ಲಿ ತೊಡಗುತ್ತಾರೆ. ಅವರು ಒಂದು ಚಿತ್ರವನ್ನು ಬಿಡಿಸಬಹುದು ಅಥವಾ ತಮಗೆ ತಿಳಿದಿರುವ ಕೆಲವು ಅಕ್ಷರಗಳನ್ನು ಅಥವಾ ಪದಗಳನ್ನು ಬರೆಯಬಹುದು. ಏನು ಬರೆದಿದ್ದಾರೆಂದು ಕೇಳಿದಾಗ ಅವರು ಇನ್ನೂ ವಿವರವಾಗಿ ಸುಂದರವಾಗಿ ವಿವರಿಸಬಹುದು! ಈ ಸನ್ನಿವೇಶದಲ್ಲಿ ಅವರ ಕಾಗುಣಿತವನ್ನು ಸರಿಪಡಿಸುವ ಬದಲು, ಅವರು ಹೇಳಿರುವ ವಿಷಯವನ್ನು ಅವರ ಬರಹದ ಕೆಳಗೆ ಬರೆದು ಅವರಿಗೆ ಅದನ್ನು ಓದಲು ಹೇಳಬೇಕು. ಮಕ್ಕಳ ಈ ಬರಹವನ್ನು ತರಗತಿಯಲ್ಲಿ ಪ್ರದರ್ಶಿಸಬೇಕು, ಅದನ್ನು ಹಂಚಿಕೊಳ್ಳಲು ಕಾಲಾವಕಾಶ ನೀಡಬೇಕು. ಮತ್ತು ಪರಸ್ಪರ ಇತರರ ಕೆಲಸವನ್ನು ಮೆಚ್ಚುವಂತೆ ಪ್ರೇರೇಪಿಸಬೇಕು.

**ಮುದ್ರಿತ ಚಿತ್ರಗಳಿಂದ ತರಗತಿಯನ್ನು ಸೊಗಸಾಗಿಸುವುದು**

ಮಕ್ಕಳು ಬಿಡಿಸಿದ ಅಥವಾ ಮುದ್ರಿಸಿದ ಚಿತ್ರಗಳಿಂದ ತರಗತಿಯನ್ನು ತುಂಬಿಸಿ. ಈ ವರ್ಣರಂಜಿತ ತರಗತಿಯು ಮಕ್ಕಳಿಗಾಗಿ ಅಥವಾ ಮಕ್ಕಳಿಂದ ಮಾಡಿದ ಬರಹ ಮತ್ತು ಚಿತ್ರಕಲೆಯ ಪ್ರದರ್ಶನವಾಗಿರ–ಬೇಕು. ಮಕ್ಕಳ ಬರಹ ಅಥವಾ ಚಿತ್ರವಸ್ತುಗಳನ್ನು ತರಗತಿಯ ಬೇರೆ ಬೇರೆ ಕಡೆಗಳಲ್ಲಿ ಹಾಕಬಹುದು ಮತ್ತು ಹಲವು ಭಾಷೆಗಳಲ್ಲಿ ಬರೆದು ಹಾಕಬಹುದು. ಮಕ್ಕಳಿಗೆ ಆಸಕ್ತಿಯಿರುವ ಅಥವಾ ಕಲಿಕೆ ಅಗತ್ಯವಿರುವ ಮಾಹಿತಿಯ ಪದಗಳು, ಪದ್ಯಗಳು ಇತ್ಯಾದಿ ಸ್ವರೂಪಗಳಲ್ಲಿ ಪ್ರದರ್ಶನ ಮಾಡಬಹುದು ಮತ್ತು ಪಾಠ ಹೇಳಿಕೊಡುವಾಗ ಮತ್ತು ಚಟುವಟಿಕೆ ಸಮಯದಲ್ಲಿ ಇವುಗಳನ್ನು ಬಳಸಬಹುದು.

**ಭಾಷಾ ತರಗತಿಯ ಉದ್ದೇಶವೆಂದರೆ ಕಲಿಕೆಯನ್ನು ಅರ್ಥ ಪೂರ್ಣವಾಗಿಸುವುದು**

ಈ ಲೇಖನದಲ್ಲಿ ಒತ್ತು ನೀಡಿದಂತೆ, ಮಕ್ಕಳು ಸಹಜವಾಗಿಯೇ ಅರ್ಥ ತುಂಬುವವರು ಅಥವಾ ಉಂಟುಮಾಡುವವರು. ಅವರಿಗೆ ಅರ್ಥವಾಗುವ ರೀತಿಯಲ್ಲಿ ನಾವು ಕಲಿಸಿದಾಗ ಅವರು ಸಹಜವಾಗಿ, ಸಲೀಸಾಗಿ, ಸರಾಗವಾಗಿ ಕಲಿಯುತ್ತಾರೆ. ನಾವು ನೀರಸವಾಗಿ, ಒಂದಕ್ಕೊಂದು ಸಂಬಂಧವಿಲ್ಲದಂತೆ ವಿಷಯಗಳನ್ನು ಕಲಿಸಿದರೆ ಮಕ್ಕಳು ಆಸಕ್ತಿಯನ್ನು ಕಳೆದುಕೊಳ್ಳುತ್ತಾರೆ. ಇಲ್ಲವೇ ಬೇಗ ಮತ್ತು ಸಲೀಸಾಗಿ ಕಲಿಯುವುದನ್ನು ಬಹಳ ಪ್ರಯತ್ನಪಟ್ಟು ಹೆಣಗಾಡಿ ಕಲಿಯುತ್ತಾರೆ.

ಈ ಹಿಂದಿನ ವಿಭಾಗಗಳಲ್ಲಿ ಮಕ್ಕಳಿಗೆ ತಮ್ಮ ಮನೆ ಭಾಷೆಯಲ್ಲಿ ವ್ಯಕ್ತಪಡಿಸಲು, ವಿಷಯಗಳು ಮತ್ತು ವಿಚಾರಗಳನ್ನು ಚರ್ಚಿಸಲು ಹಂಚಿಕೊಳ್ಳಲು, ಕಲಿಯುತ್ತಿರುವ ಓದು ಮತ್ತು ಬರಹವನ್ನು ಸಲೀಸಾಗಿ ಪ್ರಯೋಗ ಮಾಡಲು ಅನುವು ಮಾಡುವುದರ ಪ್ರಾಮುಖ್ಯತೆಯನ್ನು ಚರ್ಚಿಸಿದ್ದೇನೆ. ಇವೆಲ್ಲವನ್ನು ಮಾಡಿದಾಗ ಭಾಷಾಕಲಿಕೆಯು ಅವರಿಗೆ ಅರ್ಥಪೂರ್ಣವಾಗಿ ಕಾಣುತ್ತದೆ. ಇದರೊಂದಿಗೆ, ಮಕ್ಕಳ ಜೊತೆಗೆ ನಮ್ಮ ವ್ಯವಹಾರದ ಮುಖ್ಯ ಕೆಲಸವು ಅರ್ಥಪೂರ್ಣವಾಗುವುದನ್ನು ಖಚಿತಪಡಿಸಲು ಮಾಡಬೇಕಾದ ಎಲ್ಲ ವಿಷಯಗಳನ್ನು ಇದು ಒಳಗೊಂಡಿದೆ.

**ಆಲೋಚನೆಯನ್ನು ಸಲೀಸಾಗಿ ವ್ಯಕ್ತಪಡಿಸುವುದು**

ಮಕ್ಕಳ ಭಾಷೆ(ಗಳು) ಕಲಿಯುವ ಸಮಯದಲ್ಲಿ ನಾವು ಅರ್ಥ ಕಂಡುಕೊಳ್ಳುವಲ್ಲಿ ಗಮನಹರಿಸಿ ಅವರಿಗೆ ನೆರವು ನೀಡಬೇಕು. ಮಕ್ಕಳು ಉತ್ತರ ನೀಡುವಾಗ ಪಠ್ಯಪುಸ್ತಕದಲ್ಲಿ ಇರುವಂತೆಯೇ ಹೇಳಿ ಎಂದು ಹೇಳಬೇಕಿಲ್ಲ. ಉದಾಹರಣೆಗೆ, ಲೇಖನದ ಆರಂಭದಲ್ಲಿ ಉಲ್ಲೇಖಿಸಿದ ಚಿಕ್ಕ ಹುಡುಗಿ ಗೀತಾ ಬಾಲಭಾರತಿ ಪಠ್ಯಪುಸ್ತಕದಿಂದ ಗಟ್ಟಿಯಾಗಿ ಓದುತ್ತಿದ್ದ ಮಳೆ ಕುರಿತ ಒಂದು ಪದ್ಯವನ್ನು ಕೇಳಿಸಿಕೊಳ್ಳುತ್ತಿದ್ದಳು. ಗಟ್ಟಿಯಾಗಿ ಪದ್ಯ ಓದಿದ ನಂತರ ಶಿಕ್ಷಕರು ಮಕ್ಕಳಿಗೆ ಅದರ ಬಗ್ಗೆ ಪ್ರಶ್ನೆಗಳನ್ನು ಕೇಳಿದರು. ಗೀತಾಗೆ ಸ್ವತಃ ಪಠ್ಯಪುಸ್ತಕವನ್ನು ಓದಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಅವಳು ಏನಾಗುತ್ತಿದೆ ಎಂಬುದರ ಬಗ್ಗೆ ಬಹಳ ಗಮನವಿಟ್ಟು ಕೇಳಿಸಿ–ಕೊಂಡಿದ್ದಳು. ಕೇಳುತ್ತಿದ್ದಂತೆ ಅದರ ಅರ್ಥವನ್ನು ತಿಳಿಯಲು ಪ್ರಯತ್ನಪಡುತ್ತಿದ್ದಳು. ಗೀತಾ ಹಲವಾರು ಬಾರಿ ಚರ್ಚೆಯಲ್ಲಿ ಭಾಗಿಯಾಗಲು ಪ್ರಯತ್ನ ಪಡುತ್ತಿರುವುದನ್ನು ನಾವು ನೋಡಿದ್ದೆವು. ಆದರೆ ಅವಳು ಪುಸ್ತಕದಲ್ಲಿ ಹೇಗೆ ಪದ ಬಳಕೆ ಆಗಿದೆಯೋ ಅದರಂತೆ ಹೇಳದ ಕಾರಣ ಶಿಕ್ಷಕರು ಅವಳ ಮಾತುಗಳನ್ನು ನಿರ್ಲಕ್ಷಿಸಿದರು. ಉದಾಹರಣೆಗೆ:

ಶಿಕ್ಷಕರು: ಮಳೆ ಬಂದಾಗ ಆಕಾಶದಲ್ಲಿ ಏನಾಗುತ್ತದೆ?

ಗೀತಾ: (ನಟನೆ ಮೂಲಕ ತಕ್ಷಣ ಉತ್ತರ): ಚಕನ್ ಚಮಕ್‌ತಾ (ಹೊಳೆಯುವ ಗೆರೆಗಳು)

ಇತರ ಮಕ್ಕಳು: ವೀಜ್ (ಮಿಂಚು = ಪುಸ್ತಕದ ನಿಖರ ಪದ)

ಶಿಕ್ಷಕ: ಸರಿ, ವೀಜ್!

ಗೀತಾ ತಾನೇ ಸ್ವತಃ ಸೃಜನಾತ್ಮಕವಾಗಿ ಮತ್ತು ಕಲಾತ್ಮಕವಾಗಿ ವ್ಯಕ್ತಪಡಿಸುತ್ತಿದ್ದಳು, ಅವಳು ಅಲ್ಲಿನ ಸ್ಥಳೀಯ ಭಾಷೆಯಲ್ಲಿ ಹೇಳುವ ಪದವನ್ನು ತಿಳಿದಿರಲಿಲ್ಲ. ಆದರೆ ಅಲ್ಲಿನ ವಿಷಯವನ್ನು ಅರ್ಥಮಾಡಿಕೊಂಡಿದ್ದಾಳೆ ಎಂದು ಇದು ತೋರಿಸುತ್ತದೆ. ಹೀಗೆ ಪದೆ ಪದೇ ಶಿಕ್ಷಕರಿಂದ (ಸಹಪಾಠಿಗಳಿಂದ) ನಿರ್ಲಕ್ಷಿತಗೊಂಡ ಗೀತಾರಂತಹ ಮಕ್ಕಳು ತಾವು ಅರ್ಥ ಮಾಡಿಕೊಂಡಿದ್ದು ಸರಿಯಲ್ಲ, ತಮ್ಮ ಆಲೋಚನೆ ಸರಿಯಲ್ಲ, ತಮಗೆ ಸರಿಯಾಗಿ ಗೊತ್ತಿಲ್ಲ ಎಂದು ಭಾವಿಸಿ ಶಾಲಾ ಕಲಿಕೆಯಿಂದ ದೂರ ಸರಿಯುತ್ತಾರೆ.

**ಮಕ್ಕಳಿಗೆ ಅರ್ಥಪೂರ್ಣವಾಗಿರುವ ಪದಗಳನ್ನು ಓದಲು ಮತ್ತು ಬರೆಯಲು ಅನುಮತಿ ನೀಡುವುದು**

ಒಂದು ನಿರ್ದಿಷ್ಟ ಕ್ರಮದಲ್ಲೇ ಚಿಕ್ಕ ಮಕ್ಕಳಿಗೆ ನಾವು ಓದಲು ಮತ್ತು ಬರೆಯಲು ಕಲಿಸಲು ಗಮನ ಹರಿಸುತ್ತೇವೆ. ಹೀಗಾಗಿ ಅವರನ್ನು ಅವರ ಶಬ್ದ ಭಂಡಾರದಿಂದ ದೂರ ಸರಿಸುತ್ತೇವೆ. ಏಕೆಂದರೆ ಇಂತಹ ಬಹುತೇಕ ಪದಗಳು ದ್ವಿತೀಯ ಸ್ವರ ಮಾತ್ರೆಗಳನ್ನು ಮತ್ತು ಸಂಯೋಗ ವ್ಯಂಜನಗಳು ಅಥವಾ ಸಂಯುಕ್ತಾಕ್ಷರಗಳನ್ನು ಹೊಂದಿರುತ್ತವೆ. ಉದಾಹರಣೆಗೆ, ಮಗುವಿಗೆ ಚಿನ್ನ ಎಂಬ ಪದ ತಿಳಿದಿರುತ್ತದೆ. ಆದರೆ ಪಠ್ಯಪುಸ್ತಕದಲ್ಲಿ ಕನಕ ಎಂಬ ಪದ ಬರುತ್ತದೆ, ಅಲ್ಲಿ ಸಂಯುಕ್ತ ಮಾತ್ರೆಗಳಿರುವುದಿಲ್ಲ. ಅರಿಲ್ ಅಧ್ಯಯನದಲ್ಲಿ, ನಾವು ಕರ್ನಾಟಕದ ಪಾಠವನ್ನು ಗಮನಿಸಿದೆವು. ಅಲ್ಲಿ ಮಕ್ಕಳು ತರಗತಿಯಲ್ಲಿ ಅರಸ, ಗರಗಸ, ಸರ, ಗರಗರ ಮತ್ತು ದಸರ ಪದಗಳನ್ನು ಕಲಿಯುತ್ತಿದ್ದರು. ಏಕೆಂದರೆ ಈ ಪದಗಳು ಒಂದೇ ತೆರನಾದ ಅಕ್ಷರಗಳನ್ನು ಹೊಂದಿತ್ತು. ಈ ಪದಗಳನ್ನು ಕೃತಕವಾಗಿ ಒಟ್ಟಿಗೆ ಸೇರಿಸಿ ಒಂದು ಪ್ಯಾರಾ ಆಗಿ ಹೇಳಿಕೊಡಲಾಗುತ್ತಿತ್ತು. ಹೀಗಾಗಿ ಹೆಚ್ಚಿನ ಮಕ್ಕಳಿಗೆ ಇದನ್ನು ಕಲಿಯಲು ಸ್ವಲ್ಪವೂ ಆಸಕ್ತಿ ಉಂಟಾಗಲಿಲ್ಲ. ಏಕೆಂದರೆ ಈ ಎಲ್ಲ ಪದಗಳ ನಡುವೆ ಅಥವಾ ಪದಗಳು ಮತ್ತು ಅವು ಮಕ್ಕಳ ಬದುಕು ಮತ್ತು ಆಸಕ್ತಿಗಳ ನಡುವೆ ಯಾವುದೇ ರೀತಿಯ ಸಂಬಂಧ ಹೊಂದಿರಲಿಲ್ಲ.

ಹೆಸರಾಂತ ಶಿಕ್ಷಣ ತಜ್ಞರಾದ ಸಿಲ್ವಿಯ ಆಶ್ಟನ್-ವಾರ್ನರ್ (1963) ನ್ಯೂಜಿಲ್ಯಾಂಡಿನ ಮೊಯಾರಿ ಮಕ್ಕಳೊಂದಿಗೆ ಕೆಲಸ ಮಾಡಿದ್ದರು. ಅವರು ಮಕ್ಕಳಿಗೆ ಕಲಿಯಲು ಆಸಕ್ತಿಯಿರುವ ಪದಗಳನ್ನು ಕೊಟ್ಟರೆ ಅವರು ಬೇಗ ಅವುಗಳನ್ನು ಓದಲು ಮತ್ತು ಬರೆಯುವುದನ್ನು ಕಲಿಯಲು ಇಷ್ಟಪಡುತ್ತಾರೆ ಎಂದು ವಾದಿಸುತ್ತಾರೆ. ಅವರು ಪ್ರತಿಯೊಂದು ಮಗುವಿಗೆ ತನ್ನದೇ ಸ್ವಂತ ಆಸಕ್ತಿಯಿಂದ ಆರಿಸಿರುವ ಒಂದು ಮುಖ್ಯವಾದ ಪದವನ್ನು ಬರೆಯುತ್ತಿದ್ದರು. ಆದರೆ ಆ ಪದಗಳನ್ನು ಹೇಳಿಕೊಡಲು ಒಂದು ನಿರ್ದಿಷ್ಟ ಕ್ರಮವನ್ನೇನೂ ಅನುಸರಿಸುತ್ತಿರಲಿಲ್ಲ. ಆಶ್ಟನ್ ವಾರ್ನರ್‌ರ ಈ ವಿಚಾರಗಳನ್ನು ಆಧರಿಸಿ ಪ್ರಮುಖ ಶಬ್ದ ಸಮೂಹವನ್ನು ಒಂದು ಪದಗಳ ಕಾರ್ಡಿನಲ್ಲಿ ಬರೆದು ಪ್ರತಿಯೊಂದು ಮಗುವಿಗೆ ನೀಡಬಹುದು ಅಥವಾ ತರಗತಿಯ ಎಲ್ಲ ಮಕ್ಕಳಿಗೆ ಆಸಕ್ತಿದಾಯಕವಾದ ಪದಗಳನ್ನು ತರಗತಿಯ ಚಾರ್ಟಿನಲ್ಲಿ ಬರೆಯಬಹುದು. ಕಲಿಯುವಾಗ ಮಕ್ಕಳ ಓದು ಮತ್ತು ಬರಹದಲ್ಲಿ ಈ ಪದಗಳನ್ನು ಬಳಸಲು ಪ್ರೋತ್ಸಾಹ ನೀಡಬಹುದು. ಈ ರೀತಿಯಾಗಿ ಓದುವುದು ಆಸಕ್ತಿಯುಂಟು ಮಾಡುವ ಅಭ್ಯಾಸವಾಗುತ್ತದೆ ಮತ್ತು ಬರೆಯುವುದೂ ಕೂಡ ಅರ್ಥಪೂರ್ಣ ಕೆಲಸವಾಗುತ್ತದೆ.

**ಪ್ರತಿದಿನ ಗಟ್ಟಿಯಾಗಿ ಓದುವುದು**

ಕೇವಲ ಪಠ್ಯಪುಸ್ತಕವನ್ನು ಮಾತ್ರ ಅವಲಂಬಿಸುವ ಬದಲು, ಆಸಕ್ತಿಯುಂಟುಮಾಡುವ, ಸಮೃದ್ಧವಾಗಿರುವ ಮಕ್ಕಳ ಸಾಹಿತ್ಯವನ್ನು ತರಗತಿಯೊಳಗೆ ತರಲೇಬೇಕು. ಅವುಗಳನ್ನು ಮಕ್ಕಳಿಗೆ ಗಟ್ಟಿಯಾಗಿ ಓದಬೇಕು. ಕಥೆ ಪುಸ್ತಕಗಳು ಅಥವಾ ಕವನಗಳನ್ನು ಓದಬಹುದು ಅಥವಾ ಮಕ್ಕಳ ಕುತೂಹಲ ಕೆರಳಿಸುವ ಇತರ ವಿಷಯಗಳ ನಾನ್-ಫಿಕ್ಷನ್ (ಕಾಲ್ಪನಿಕವಲ್ಲದ/ಅಕಲ್ಪಿತ) ಪುಸ್ತಕಗಳನ್ನು ತರಬಹುದು. ಈ ವಿಚಾರಗಳ ಬಗ್ಗೆ ಮಕ್ಕಳೊಂದಿಗೆ ಚರ್ಚಿಸಿ ಮತ್ತು ಅವರ ಪ್ರತಿಕ್ರಿಯೆಗಳನ್ನು ಸ್ವಾಗತಿಸಬೇಕು. ಅವರ ಆಲೋಚನೆ ಮತ್ತು ಆಸಕ್ತಿಗಳನ್ನು ಬೆಂಬಲಿಸಬೇಕು. ಈ ಪ್ರಕ್ರಿಯೆಯ ಮೂಲಕ ಮಕ್ಕಳು ತಮ್ಮದೇ ಆದ ಆಲೋಚನೆಗಳು ಮತ್ತು ಆಸಕ್ತಿಗಳನ್ನು ತಳ್ಳಿಹಾಕದಿದ್ದರೆ, ನಿಧಾನವಾಗಿ ಅವರಿಗೆ ಪುಸ್ತಕಗಳು ಮತ್ತು ಆಲೋಚನೆಗಳ ಜಗತ್ತಿನ ಪರಿಚಯವಾಗುವುದು. ಅವರು ಹೊಸ ಪದಸಂಪತ್ತುಗಳನ್ನು ಕಲಿಯುವರು ಮತ್ತು ಹೊಸ ರೀತಿಯಲ್ಲಿ ಸ್ವತಃ ವ್ಯಕ್ತಪಡಿಸುವುದನ್ನು ಕಲಿಯುವರು. ಅವರ ಶಬ್ದ ಭಂಡಾರ ಹೆಚ್ಚಾಗುವುದು. ಅವರು ತಮ್ಮ ಅನುಭವಕ್ಕೆ ಮೀರಿ ಹೊಸ ಆಲೋಚನೆಗಳು ಮತ್ತು ವಿಚಾರಗಳನ್ನು ಮೈಗೂಡಿಸಿಕೊಳ್ಳುವರು.

**ಬರೆಯುವುದನ್ನು ಪಠ್ಯಕ್ರಮದ ಮುಖ್ಯ ಭಾಗವಾಗಿ ಮಾಡುವುದು**

ಈ ಮೊದಲೇ ಚರ್ಚಿಸಿದಂತೆ, ಮಕ್ಕಳಿಗೆ ಅಕ್ಷರಗಳನ್ನು ಬರೆಯಲು ಅಥವಾ ಸರಿಯಾಗಿ ಕಾಗುಣಿತ ಬರೆಯಲು ಸಾಧ್ಯವಾಗದಿದ್ದರೂ ಕೂಡ ಅವರ ಬರವಣಿಗೆಯ ಪ್ರಯತ್ನಗಳ ಮೂಲಕ ತಮ್ಮನ್ನು ತಾವು ವ್ಯಕ್ತಪಡಿಸಲು ಅವರನ್ನು ಪ್ರೋತ್ಸಾಹಿಸಬೇಕು. ನೀವು ಅವರ ಪ್ರಯತ್ನಗಳನ್ನು ಹಲವಾರು ರೀತಿಯಲ್ಲಿ ಬೆಂಬಲಿಸಬಹುದು. ಉದಾಹರಣೆಗೆ, ಒಂದು ಕ್ಷೇತ್ರ ಭೇಟಿಯನ್ನು ಮಾಡಿ ಅದರ ಬಗ್ಗೆ ಸ್ಥೂಲ ಚರ್ಚೆಯ ನಂತರ, ಭೇಟಿಯ ಕುರಿತು ಕೆಲವು ಸಾಲುಗಳನ್ನು ಬರೆಯಲು ತಮಗೆ ಸಹಾಯ ಮಾಡುವಂತೆ ಮಕ್ಕಳಲ್ಲಿ ಕೇಳಬಹುದು. ಆ ಸಾಲುಗಳನ್ನು ಹೇಗೆ ಬರೆಯುವುದೆಂದು ಅವರಿಗೆ ಮಾದರಿ ಸಾಲುಗಳನ್ನು ಬರೆದು ತೋರಿಸಬಹುದು. ನಂತರ ಮಕ್ಕಳು ಅದನ್ನು ಓದಲು ಚಾರ್ಟ್ ಮಾಡಿ ಹಾಕಬಹುದು.

ಇಲ್ಲವೇ ಕತೆಯನ್ನು ಗಟ್ಟಿಯಾಗಿ ಓದಿ ಅವರಿಗೆ ಮೆಚ್ಚುಗೆಯಾದ ಭಾಗವನ್ನು ಬರೆಯಲು ಅಥವಾ ಚಿತ್ರ ಬರೆಯಲು ನೀವು ಮಕ್ಕಳಿಗೆ ಕೇಳಬಹುದು. ಯಾವುದೇ ಮುಖ್ಯವಾದ ವಿಷಯದ ಬಗ್ಗೆ ಪತ್ರ ಬರೆಯಲು ನೀವು ಅವರಿಗೆ ಸಹಾಯ ಮಾಡಬಹುದು. ಅದು ವಲಸೆ ಹೋದ ಅವರ ಗೆಳೆಯ ಅಥವಾ ಪೋಷಕರು, ಬೇರೆ ಹಳ್ಳಿಯಲ್ಲಿರುವ ತಾತ ಅಥವಾ ಅಜ್ಜಿ ಅಥವಾ ಅವರ ಇಷ್ಟಪಾತ್ರರನ್ನು ಕುರಿತು ಆಗಿರಬಹುದು. ಅವರ ಸಮುದಾಯದ ಯಾವುದಾದರೂ ಜಾನಪದ ಕತೆ ಅಥವಾ ಹಾಡನ್ನು ಬರೆಯಲು ನೆರವು ನೀಡಬಹುದು. ಕಾಲಾಂತರದಲ್ಲಿ, ಅವರಿಗೆ ಬೇರೆಬೇರೆ ಪ್ರಕಾರಗಳ ಬರಹಗಳನ್ನು ಪರಿಚಯಿಸಬಹುದು. (ಅದು ಪದ್ಯಗಳು, ಕವನಗಳು, ಕತೆಗಳು ಇತ್ಯಾದಿ ಆಗಿರಬಹುದು). ಅವರು ಶಾಲೆಯಲ್ಲಿ ಕಲಿಯುವುದಕ್ಕಿಂತ ಇವೆಲ್ಲವೂ ಬಹಳ ಭಿನ್ನವಾಗಿರುತ್ತವೆ!.

ನಾನು ಈ ಲೇಖನವನ್ನು ಒಂದು ಒಗಟಿನಿಂದ ಆರಂಭಿಸಿದೆ: ಪ್ರಾರಂಭಿಕ ಭಾಷಾ ತರಗತಿಗಳಲ್ಲಿ ಗೀತಾಳಂತಹ ಬಹಳ ಬುದ್ಧಿವಂತರಾದ, ಸಮರ್ಥ ಮಕ್ಕಳು ಕಲಿಯಲು ಏಕೆ

ವಿಫಲರಾಗುತ್ತಾರೆ? ಈ ಪ್ರಶ್ನೆಗೆ ಉತ್ತರ ಇಲ್ಲಿ ನಾನು ಸೂಚಿಸಿರುವುದಕ್ಕಿಂತ ಬಹಳ ಸಂಕೀರ್ಣವಾಗಿರಬಹುದು. ಆದರೆ ಈ ಸಮಸ್ಯೆಯನ್ನು ಪರಿಹರಿಸುವತ್ತ ಸಾಗಲು ಚಿಕ್ಕ ಮಕ್ಕಳಿಗೆ ಹೆಚ್ಚು ಸೂಕ್ತ ಕಲಿಕೆಯನ್ನು ಒದಗಿಸಲು ಬಹುದೂರ ಸಾಗಬೇಕಿದೆ ಎಂಬುವುದನ್ನು ನಾನು ಒಪ್ಪುವುದಿಲ್ಲ. ಪ್ರತಿಯೊಂದು ಮಗುವಿಗೆ ಕಲ್ಪನಾತ್ಮಕವಾಗಿ, ಕಲ್ಪನಾಶಕ್ತಿಯನ್ನು ಪ್ರೇರೇಪಿಸುವ ರೀತಿಯಲ್ಲಿ ಊಹಾಪ್ರಪಂಚಕ್ಕೆ ಕೊಂಡೊಯ್ದು ಹೇಳಿಕೊಟ್ಟರೆ ಮಗುವು ಕಲಿಯಬಲ್ಲದು ಮತ್ತು ಕಲಿಯುತ್ತದೆ! ನಾನು ಇದನ್ನು ಸಾಕಾರಗೊಳಿಸಲು ಕೇವಲ ಮೂರು ಪ್ರಮುಖವಾದ ವಿಚಾರಗಳನ್ನು ಸೂಚಿಸಿದ್ದೇನೆ. ಮಕ್ಕಳ ಮನೆ ಭಾಷೆಯನ್ನು ಸ್ವಾಗತಿಸುವುದು, ಒಪ್ಪುವುದು, ಅದರಲ್ಲಿ ಕಲಿಸುವುದು, ಮಕ್ಕಳಿಗೆ ಭಾಷಾ ಕಲಿಕೆಯಲ್ಲಿ ಹೊರಹೊಮ್ಮುತ್ತಿರುವ ಪ್ರಯತ್ನಗಳನ್ನು ಪ್ರೋತ್ಸಾಹಿಸುವುದು ಮತ್ತು ಭಾಷಾ ತರಗತಿಯ ಕೇಂದ್ರವೇ ಅರ್ಥ ನೀಡಿಕೆ, ಅರ್ಥೈಸುವಿಕೆಯಾಗಬೇಕೆಂಬ ಕೆಲವು ಸಲಹೆಗಳನ್ನು ಈಗಾಗಲೇ ನಾನು ಉಲ್ಲೇಖಿಸಿದ್ದೇನೆ. ಕಲಿಕಾಗಾರರಿಗೆ ಸೂಕ್ತತೆಯನ್ನು ಉಂಟುಮಾಡುವ ಸಮಸ್ಯೆಯನ್ನು ನಿವಾರಿಸಲು ಶಿಕ್ಷಕರು ಇನ್ನೂ ಬೇರೆ ಉಪಾಯಗಳು ಹಾಗೂ ವಿಚಾರಗಳನ್ನು ಆಲೋಚಿಸಲು ಸಮರ್ಥರು ಎಂದು ನಾನು ಭಾವಿಸುತ್ತೇನೆ.



[i] Name has been changed to protect identity.

[ii] The Literacy Research in Indian Languages was a longitudinal research project that tracked over 700 students in Palghar district, Maharashtra, and Yadgir district, Karnataka as they moved from Grades 1-3. See Menon, S. et al. (2017). *Literacy research in Indian languages (LiRIL): Report of a three year longitudinal study on early reading and writing in Marathi and Kannada. Bangalore: Azim Premji University and New Delhi: Tata Trusts.*

[iii] For more ideas, please refer to Sinha, S. (2018). Creating spaces for the child's language within classrooms. Retrieved from: http://eli.tiss.edu/wp-content/uploads/2017/08/ELI-Handout-2-Multilingualism-.pdf; and to Menon, S., Sinha, S., Das, H., & Pydah, A. (Eds.) (2019). *Multilingual education in India*. Hyderabad: Early Literacy Initiative, Tata Institute of Social Sciences.

[iv] See, Parikh, R., & Menon, S. (2019). Using mother tongue to facilitate English language learning in low exposure setting. Retrieved from: http://eli.tiss.edu/wp-content/uploads/2017/08/ELI-Practitioner-Brief-18_Using-MT-to-Support-English-Language.pdf

[v] For a more complete discussion of this topic, see Sinha, S., Pydah, A., & Menon, S. (2019). Emergent liter-acy. Retrieved from: http://eli.tiss.edu/wp-content/uploads/2017/08/ELI_Practitioner-Brief-16_Emergent-Literacy.pdf

[vi] More ideas about creating a print-rich classroom can be found at: Pydah, A. (2019). Creating a print-rich environment in the classroom. Retrieved: http://eli.tiss.edu/wp-content/uploads/2017/08/ELI_Practioner_Brief_8_Print-rich-Environment-in-Classroom-1.pdf

[vii] From: Noronha, S. (2016). *Failing Meena* (Unpublished M.Phil dissertation). Hyderabad: Tata Institute of Social Sciences.

[viii] For more ideas on supporting children's writing, see Sinha, S., & Menon, S. (2019). Supporting children's writing in early grades. Retrieved: http://eli.tiss.edu/wp-content/uploads/2017/08/Supporting-Childrens-Writing-in-Early-Grades_Practitioner-Brief_11.pdf; and Pydah, A. (2019). Children's writing: Creating books in the classroom. Retrieved: http://eli.tiss.edu/wp-content/uploads/2017/08/Creating_Books_in_the_Classroom_ELI_Handout_7.pdf

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


Ashton-Warner, S. (1963/1986). Teacher. New York: Simon and Schuster.

Cummins, J. (2001). *Bilingual children's mother tongue: Why is it important to education?* 15-20.

Gee, J. (2003). *What videogames have to teach us about language and literacy*. New York: Palgrave, Macmillan.

Jhingran, D. (2009). Hundreds of home languages in the country and many in most classrooms – Coping with diversity in primary education in India. In T., Skutnabb- Kangas, R., Phillipson, A. K., Mohanty & M., Panda (Eds.), *Social justice through multilingual education*, (pp. 250–267). Bristol: Multilingual Matters.





**ಶೈಲಜಾ ಮೆನನ್** ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಭಾಷೆಗಳು, ಸಾಕ್ಷರತೆ ಮತ್ತು ಮಕ್ಕಳ ಸಾಹಿತ್ಯದ ವಿಷಯಗಳಲ್ಲಿ ಬೋಧಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದಕ್ಕೆ ಮುಂಚೆ ಅವರು ಹೈದರಾಬಾದ್‌ನ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಸೈನ್ಸ್‌ನಲ್ಲಿ ಆರಂಭಿಕ ಸಾಕ್ಷರತೆ ಮುಂದೊಡಗು ಮತ್ತು ಮಹಾರಾಷ್ಟ್ರ ಹಾಗೂ ಕರ್ನಾಟಕದ ಅಟರೆಸಿ ರಿಸರ್ಚ್ ಇನ್ ಇಂಡಿಯನ್ ಲಾಂಗ್ವೇಜಸ್‌ನ (LiRIL) ದೀರ್ಘಕಾಲಾವಧಿ ಪ್ರಾಜೆಕ್ಟ್‌ನ ಮುಂದಾಳತ್ವ ವಹಿಸಿದ್ದರು. ಶೈಲಜಾರವರು ದ್ವಿಭಾಷಾ ಮಕ್ಕಳ ಸಾಹಿತ್ಯ ಹಬ್ಬ 'ಕಥಾವನ'ದ ಸ್ಥಾಪಕ ನಿರೂಪಕಿ. ಅವರು ಹಿಂದೂ ಸಾಹಿತ್ಯದ ಅಜೀವ ಪ್ರಶಸ್ತಿಯ ಮಕ್ಕಳ ಸಾಹಿತ್ಯದ (2016–18) ಮತ್ತು ಸರ್ ರತನ್ ಟಾಟಾ ಟ್ರಸ್ಟ್‌ನ ಬಿಗ್ ಅಟಲ್ ಬುಕ್ ಅವಾರ್ಡ್‌ನ (2016–18) ತೀರ್ಪುಗಾರರಾಗಿದ್ದರು. ಶೈಲಜಾ ಅವರು ಮಿಚಿಗನ್ ವಿಶ್ವವಿದ್ಯಾಲಯದಲ್ಲಿ ತಮ್ಮ ಪಿಹೆಚ್‌ಡಿ ಪದವಿಯನ್ನು ಮುಗಿಸಿದರು ಮತ್ತು ಕೊಲರೆಡೊ ವಿಶ್ವವಿದ್ಯಾಲಯದಲ್ಲಿ ಬೋಧನೆ ಮಾಡಿದರು. ಅವರ ಪ್ರಕಟಣೆಗಳು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವರು ಮಕ್ಕಳು, ಶಿಕ್ಷಕರು ಮತ್ತು ಶಿಕ್ಷಕ ಶಿಕ್ಷಣತಜ್ಞರಿಗೆಸಾಹಿತ್ಯ, ಭಾಷೆ ಮತ್ತು ಸಾಕ್ಷರತೆಯನ್ನು ನಿರಂತರವಾಗಿ ಕಲಿಸುವಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದಾರೆ. ಅವರನ್ನು shailaja.menon@apu.edu.inನಲ್ಲಿ ಸಂಪರ್ಕಿಸಬಹುದು.



ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಲತಾ ಕೆ ಸಿ**

# ಹೋಮ್ ವರ್ಕ್ ಇಲ್ಲವೆ ಮನೆಗೆಲಸ: | ಕೆಲವು ಮಕ್ಕಳು ಹೇಗೆ ನಿಭಾಯಿಸುತ್ತಾರೆ

ಶಾಂತಾ ಕೆ.

'ಪ್ರತೀ ಮಗುವೂ ಕಲಿಯಬಲ್ಲುದು' ಎಂಬ ವಸ್ತು ವಿಷಯವನ್ನು 2019ರ ಡಿಸೆಂಬರ್‌ನಲ್ಲಿ ನಿರ್ಧರಿಸಲಾಯಿತು. ಈ ವಿಷಯಕ್ಕೆ ಸಂಬಂಧಿಸಿದ ಚರ್ಚೆಯೊಂದರಲ್ಲಿ ಭಾಗವಹಿಸುವಾಗ, ನನ್ನ ಮನಸ್ಸಿನಲ್ಲಿ ಪ್ರತಿದಿನ ಬೆಳಗ್ಗೆ ನಾನು ನೋಡುವ ಮಗುವಿನ ಮುಖ ಹಾದುಹೋಯಿತು. ಈ ವಿಷಯವಾಗಿ ನಾನು ಏನಾದರೂ ಬರೆಯಬೇಕು ಎನಿಸಿತು.

ನಾನು ವಾಸಿಸುವ ಪ್ರದೇಶವು ಈಗಷ್ಟೇ ಅಭಿವೃದ್ಧಿ ಹೊಂದುತ್ತಿರುವ ಒಂದು ಬಡಾವಣೆಯಾಗಿದ್ದು, ಅಲ್ಲಿ ಹಲವಾರು ಮನೆಗಳು ನಿರ್ಮಾಣ ಹಂತದಲ್ಲಿವೆ. ಪ್ರತಿದಿನ ಬೆಳಗ್ಗೆ ನಾನು ಅಡುಗೆ ಮನೆಯಲ್ಲಿ ಕೆಲಸ ಮಾಡುವಾಗ, ನಾನು ಆ ಕುಟುಂಬವನ್ನು ಕಿಟಕಿಯ ಮೂಲಕ ಗಮನಿಸುತ್ತ ಇರುತ್ತೇನೆ. ಸಣ್ಣದಾದ ತಾತ್ಕಾಲಿಕ ಶೆಡ್‌ನಲ್ಲಿ ವಾಸಿಸುವ ಕಟ್ಟಡ ನಿರ್ಮಾಣ ಕಾರ್ಮಿಕರ ಸಮುದಾಯಕ್ಕೆ ಸೇರಿದ ಈ ಕುಟುಂಬ ತಮ್ಮ ದೈನಂದಿನ ಕೆಲಸಕಾರ್ಯಗಳಲ್ಲಿ ತೊಡಗಿಸಿ-ಕೊಂಡಿರುತ್ತದೆ. ಅವರ ಈ ಬಿಡುವಿರದ ದೈನಂದಿನ ಬದುಕು ಬೆಳಗ್ಗೆ 6 ಗಂಟೆಗೆ ಶುರುವಾದರೆ ರಾತ್ರಿ 9 ಗಂಟೆಯವರೆಗೆ ನಡೆಯುತ್ತಿರುತ್ತದೆ. ರಾತ್ರಿ ಬೇಗ ಮಲಗಿ, ಬೆಳಗ್ಗೆ ಬೇಗ ಏಳಬೇಕೆಂಬ ಮಾತನ್ನು ಇಲ್ಲಿ ಇವರು ತಪ್ಪದೇ ಅನುಸರಿಸುತ್ತಾರೆ. ನಿರ್ಮಾಣ ಕಾಮಗಾರಿ ಪ್ರದೇಶವೊಂದರಲ್ಲಿ ದಿನಗೂಲಿಗಾಗಿ ಕೆಲಸ ಮಾಡುವ ಮಹಿಳೆಯೇ ಈ ಕುಟುಂಬದ ಮುಖ್ಯಸ್ಥೆ. ಅವರಿಗೆ ಮೂವರು ಮಕ್ಕಳಿದ್ದಾರೆ, ಇಬ್ಬರು ಹುಡುಗರು ಮತ್ತು ಒಬ್ಬಳು ಹುಡುಗಿ.

ಹುಡುಗಿಯ ಹೆಸರು ರೇಖಾ. ಮಹಿಳೆಯ ಅಣ್ಣ ಕೂಡ ಪಕ್ಕದಲ್ಲೇ ನಿರ್ಮಾಣ ಕಾಮಗಾರಿ ಪ್ರದೇಶದಲ್ಲಿ ಕಾವಲುಗಾರನಾಗಿ ಕೆಲಸ ಮಾಡುತ್ತಾನೆ. ಅವನೂ ಆಕೆಯ ಮನೆಯ ಪಕ್ಕದಲ್ಲೇ ಮನೆ ಮಾಡಿಕೊಂಡು ತನ್ನ ಕುಟುಂಬದೊಂದಿಗೆ ವಾಸಿಸುತ್ತಿದ್ದಾನೆ. ಅವನಿಗೂ ಮೂವರು ಹೆಣ್ಣುಮಕ್ಕಳಿದ್ದಾರೆ. ಅವನ ದೊಡ್ಡ ಮಗಳು ಕೂಡ ರೇಖಾಳ ಜೊತೆಗೆ ಶಾಲೆಗೆ ಹೋಗುತ್ತಾಳೆ. ಇಬ್ಬರೂ ಒಂದನೇ ತರಗತಿಯಲ್ಲಿ ಓದುತ್ತಿರುವ ಹುಡುಗಿಯರು.

ನನಗೆ ಆ ಮಹಿಳೆಯ ಮಗಳಾದ ಎಳೆ ಹುಡುಗಿ ರೇಖಾಳ ದೈನಂದಿನ ಕೆಲಸ ಕಾರ್ಯಗಳ ಬಗ್ಗೆ ಬಹಳ ಕುತೂಹಲ ಮೂಡಿತ್ತು. ಬೆಳಗ್ಗೆ ಆರು ಗಂಟೆಗೆಲ್ಲ ಎದ್ದು ಸ್ನಾನ ಮಾಡಿ, ಸ್ವತಃ ಶಾಲೆಯ ಸಮವಸ್ತ್ರ ಧರಿಸಿಕೊಳ್ಳುತ್ತಾಳೆ. ಪಾತ್ರೆ ಮತ್ತು ಬಟ್ಟೆ ತೊಳೆಯಲು ಅಮ್ಮನಿಗೆ ಸಹಾಯ ಮಾಡುತ್ತಾಳೆ. ಬಟ್ಟೆ ಒಣಗಿಸಲು ನೆರವಾಗಿ, ಬೆಳಗ್ಗಿನ ಉಪಾಹಾರ ಸೇವಿಸಿ, ಬಡಾವಣೆಯಲ್ಲ ಇತರ ಶೆಡ್‌ಗಳಿಂದ ಶಾಲೆಗೆ ತೆರಳುವ ತನ್ನ ಗೆಳತಿಯರಿಗಾಗಿ ಕಾಯುತ್ತಾಳೆ. ಐವರು ಮಕ್ಕಳು ಅವಳೊಂದಿಗೆ ಶಾಲೆಗೆ ನಡೆದುಕೊಂಡು ಹೋಗುತ್ತಾರೆ. ಶಾಲೆಯಲ್ಲಿ ಮಧ್ಯಾಹ್ನದ ಬಿಸಿಯೂಟ ಇರುವುದರಿಂದ, ಬುತ್ತಿ ಕಟ್ಟಿಕೊಂಡು ಹೋಗಬೇಕಾದ ಚಿಂತೆ ಇಲ್ಲ. ಸಂಜೆ ನಾಲ್ಕು ಗಂಟೆಗೆಲ್ಲಾ ಆಕೆ ಅದೇ ಉತ್ಸಾಹದಲ್ಲಿ ತನ್ನ ಶೆಡ್‌ಗೆ ಮರಳುತ್ತಾಳೆ. ನನ್ನ ಅಡುಗೆ ಮನೆಯ ಕಿಟಕಿ ಮೂಲಕ ಕಾಣಿಸುವ ಪಕ್ಕದ ಬಯಲಿನಲ್ಲಿಯೇ ಅವರು ಸ್ನಾನ, ಬಟ್ಟೆ- ಪಾತ್ರೆ ತೊಳೆಯುವುದು, ಅಡುಗೆ ಮುಂತಾದ ಎಲ್ಲ ಕೆಲಸಗಳನ್ನೂ ಮಾಡುತ್ತಾರೆ.

ವಾರಾಂತ್ಯದಲ್ಲಿ ನಾನೊಮ್ಮೆ ಈ ಹುಡುಗಿಯ ಬಳಿ, ಅವಳ ಕಲಿಕೆಯ ಹವ್ಯಾಸಗಳ ಕುರಿತು ಮಾತನಾಡಿದೆ. ಶಾಲೆಯ ಕೆಲಸಗಳನ್ನು ಮಾಡುವ ಬಗೆ, ಅವಳಿಗೆ ಹೋಮ್‌ವರ್ಕ್ ಮಾಡಲು ಯಾರು ನೆರವಾಗುತ್ತಾರೆ ಇತ್ಯಾದಿಗಳ ಬಗ್ಗೆ ಅವಳನ್ನು ಪ್ರಶ್ನಿಸಿದೆ. ಅವಳೊಡನೆ ಮಾತನಾಡಿದಾಗ ನಾನು ಸಂಗ್ರಹಿಸಿದ ಕೆಲವು ಅಂಶಗಳು ಇಲ್ಲಿವೆ:

ರೇಖಾಳಿಗೆ ಸುಮಾರು 8 ವರ್ಷ ವಯಸ್ಸು ಮತ್ತು ಆಕೆ ಆನೇಕಲ್‌ನ ಮರ್ಸೂರ್‌ನಲ್ಲಿರುವ ಸರ್ಕಾರಿ ಶಾಲೆಯಲ್ಲಿ ಒಂದನೇ ತರಗತಿ ಓದುತ್ತಿದ್ದಾಳೆ. ಆ ಶಾಲೆಯ ತರಗತಿಯಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಯಲ್ಲಿ ಪಾಠ ಮಾಡುತ್ತಾರೆ. ಅಲ್ಲಿ ಕನ್ನಡ, ಇಂಗ್ಲಿಷ್, ಇವಿಎಸ್ (ಪರಿಸರ ವಿಜ್ಞಾನ) ಮತ್ತು ಗಣಿತ ವಿಷಯಗಳನ್ನು ಕಲಿಸುತ್ತಾರೆ. ಅವಳಿಗೆ ಇವಿಎಸ್ ಮತ್ತು ಗಣಿತ ಎಂದರೆ ತುಂಬ ಇಷ್ಟ. 'ಈಗ ಇವಿಎಸ್‌ನಲ್ಲಿ ಯಾವ ಪಾಠ ಕಲಿಯುತ್ತಿದ್ದೀಯಾ?' ಎಂದು ನಾನು ಪ್ರಶ್ನಿಸಿದಾಗ, 'ಜೀವಿಗಳು ಯಾವುವು?' (What are living beings?) ಎಂಬ ಪಾಠ ಎಂದು ಅವಳು ಉತ್ತರಿಸಿದಳು.

ನಾವು ಸಾಮಾನ್ಯವಾಗಿ, 'ಗಣಿತದಲ್ಲಿ ಹುಡುಗರು ಮತ್ತು ಭಾಷಾ ಕಲಿಕೆಯಲ್ಲಿ ಹುಡುಗಿಯರು ಚುರುಕಾಗಿರುತ್ತಾರೆ' ಎಂದು ಭಾವಿಸುತ್ತೇವೆ. ಆದರೆ ಸಿದ್ಧಮಾದರಿಯ ಈ ನಂಬಿಕೆಯನ್ನು ರೇಖಾ ಸುಳ್ಳು ಮಾಡುತ್ತಾಳೆ. ತರಗತಿಯಲ್ಲಿರುವ ಕೆಲವು ಹುಡುಗರಿಗೆ ಗಣಿತ ಕಷ್ಟ. ಆದರೆ ರೇಖಾಳಿಗೆ ಗಣಿತವೆಂದರೆ ಬಹಳ ಸುಲಭ. ಹೋಮ್‌ವರ್ಕ್ ಮಾಡಲು ಅವಳು ತನ್ನ ಅಣ್ಣನ ನೆರವು ಪಡೆಯುತ್ತಾಳೆ. ಆದರೆ ಅನೇಕ ಸಂದರ್ಭಗಳಲ್ಲಿ ಅವನಿಗೂ ತುಂಬಾ ಹೋಮ್‌ವರ್ಕ್ ಇರುತ್ತದೆ. ಆಗ ಅವಳು ಬೆಳಗ್ಗೆ ಬೇಗನೇ ಶಾಲೆಗೆ ಹೋಗಿ ತನ್ನ ಸ್ನೇಹಿತರ ನೋಟ್ ಬುಕ್ ನೋಡಿ ಹೋಮ್‌ವರ್ಕ್ ಮುಗಿಸುವ ದಾರಿ ಕಂಡುಕೊಂಡಿದ್ದಾಳೆ. ಶಾಲೆಯಲ್ಲಿ ಪ್ರತಿದಿನವೂ ಹೋಮ್‌ವರ್ಕ್ ಕೊಡುತ್ತಾರೆ. ಆದರೆ ಮನೆಯಲ್ಲಿಯೂ ಆಕೆಗೆ ಇತರ ಕೆಲಸಗಳು ಇರುವುದರಿಂದ ಹೋಮ್‌ವರ್ಕ್ ಮುಗಿಸಲು ಅವಳಿಗೆ ಸಾಧ್ಯವಾಗುವುದಿಲ್ಲ. ಹಾಗಾಗಿ ತರಗತಿಯಲ್ಲಿ ಶಿಕ್ಷೆಯನ್ನು ತಪ್ಪಿಸಿಕೊಳ್ಳುವ ಸಲುವಾಗಿ ಅವಳು ಸ್ನೇಹಿತರ ಪುಸ್ತಕದಿಂದ ನಕಲು ಮಾಡುತ್ತಾಳೆ. ಅವಳ ಸ್ನೇಹಿತರು ಎಷ್ಟರಮಟ್ಟಿಗೆ ಹೋಮ್‌ವರ್ಕ್ ಸರಿಯಾಗಿ ಮಾಡುತ್ತಾರೆ ಎಂಬುದು ತರಗತಿಯ ಶಿಕ್ಷಕರಿಗಷ್ಟೇ ಗೊತ್ತು!

### ಕೆಲವು ಮುಖ್ಯ ಪ್ರಶ್ನೆಗಳು

ಒಂದು ಕಡೆಯಿಂದ ಮತ್ತೊಂದು ಕಡೆಗೆ ಆಗಾಗ ವಲಸೆ ಹೋಗುವ ಕಾರ್ಮಿಕರ ಮಕ್ಕಳು, ದಿನವೊಂದರಲ್ಲಿ ಬೆಳಗ್ಗೆ ಮತ್ತು ಸಂಜೆ ಮನೆಯ ನಾನಾ ಕೆಲಸಗಳಲ್ಲಿ ಮುಳುಗಿರುತ್ತಾರೆ ಹಾಗೂ ಈ ನಡುವಿನ ಅವಧಿಯಲ್ಲಿ ಶಾಲೆಗೂ ಹೋಗುತ್ತಾರೆ. ಈ ವಿಷಯವು ನನ್ನಲ್ಲಿ ಹಲವು ಆಲೋಚನೆಗಳನ್ನು ಮೂಡಿಸುತ್ತದೆ: ಹಾಗಾದರೆ ಇವರು ತಮ್ಮ ಹೋಮ್‌ವರ್ಕ್ ಮಾಡಲು ಹೇಗೆ ಮತ್ತು ಯಾವಾಗ ಸಮಯ ಹೊಂದಿಸಿಕೊಳ್ಳುತ್ತಾರೆ? ಡಿಜಿಟಲ್ ಇಂಡಿಯಾದ ಈ

ಯುಗದಲ್ಲಿ ಪ್ರತಿಯೊಂದೂ ಅಂತರ್ಜಾಲದಲ್ಲಿ ಲಭ್ಯ ಇರುವಾಗ, ಅನುಕೂಲಸ್ಥ ಕುಟುಂಬದ ಮಕ್ಕಳಿಗೆ ತಮ್ಮ ಕಲಿಕೆಯ ಸಂದರ್ಭದಲ್ಲಿ ಹೋಮ್‌ವರ್ಕ್ ಮಾಡಲು ಅವರ ಪೋಷಕರ ನೆರವು ಹೆಚ್ಚೇನೂ ಬೇಕಾಗುವುದಿಲ್ಲ. ಆದರೆ ಅವಕಾಶ ವಂಚಿತ ವರ್ಗದ ಮಕ್ಕಳು ಪರಿಹಾರಗಳನ್ನು ಕಂಡುಕೊಳ್ಳಲು ಮತ್ತು ತಮ್ಮ ಜ್ಞಾನದಾಹವನ್ನು ತಣಿಸಿಕೊಳ್ಳಲು ಎಲ್ಲಿ ಹೋಗುತ್ತಾರೆ? ಸ್ಮಾರ್ಟ್‌ಫೋನ್‌ನಲ್ಲಿರುವ ಎಲ್ಲಾ ಬಗೆಯ ಆಪ್‌ಗಳನ್ನು ಪಡೆಯಬೇಕೆಂದರೆ ಇಂಟರ್‌ನೆಟ್ ಸಂಪರ್ಕ ಇರಲೇಬೇಕು. ಆದರೆ ಫೋನ್ ಖರೀದಿಸಲು, ಇಂಟರ್‌ನೆಟ್‌ಗಾಗಿ ಯಾರು ಹಣ ನೀಡುತ್ತಾರೆ?

ಯಾವ ಕುಟುಂಬಗಳಲ್ಲಿ ಮಕ್ಕಳ ಕಲಿಕೆಗೆ ಯಾವುದೇ ನೆರವು ದೊರೆಯುವುದಿಲ್ಲವೋ, ಅಂತಹ ಮಕ್ಕಳನ್ನು ಶಾಲೆಯಲ್ಲಿ ಶಿಕ್ಷಕರು ಗಮನಿಸುವ ಸೂಕ್ಷ್ಮತೆಯನ್ನು ಹೊಂದಿರಬೇಕು. ತರಗತಿಯ ಸಂದರ್ಭದಲ್ಲಿಯೇ ಮಕ್ಕಳ ಕಲಿಕೆಗೆ ಸಾಕಷ್ಟು ಬೆಂಬಲ ಒದಗಿಸಬೇಕು. ತರಗತಿಯಲ್ಲಿ ಅಧ್ಯಾಪನಕ್ಕೆ ಹೆಚ್ಚು ಪ್ರೋತ್ಸಾಹ ನೀಡಬೇಕು. ಹೋಮ್‌ವರ್ಕ್ ಎಂಬ ಪರಿಕಲ್ಪನೆಯ ಮೇಲೆ ಹೆಚ್ಚು ಒತ್ತು ಕೊಡುವ ಬದಲು, ಆ ಒಂದು ಪರಿಕಲ್ಪನೆಯನ್ನೇ ತೆಗೆದು ಹಾಕಬೇಕು.

ಆಸಕ್ತಿಯ ವಿಷಯವೆಂದರೆ ಈ ಎಲ್ಲ ಅಡೆತಡೆಗಳ ಹೊರತಾಗಿಯೂ, ರೇಖಾಳಂತಹ ಮಕ್ಕಳು ಶಾಲೆಗೆ ಹೋಗುತ್ತಾರೆ, ಕಲಿಯುತ್ತಾರೆ ಮತ್ತು ನನ್ನಂತೆಯೇ ಉದ್ಯೋಗಕ್ಕೆ ಹೋಗಬೇಕೆಂಬ ಗುರಿಯನ್ನು ಹೊಂದಿರುತ್ತಾರೆ. 'ನನಗೆ ಕಚೇರಿಯಲ್ಲಿ ಕೆಲಸ ಮಾಡಲು ಆಸಕ್ತಿಯಿದೆ, ಅಮ್ಮನಂತೆ ಇಟ್ಟಿಗೆ ಹೊರುವ ಕೆಲಸ ಮಾಡಲು ಇಷ್ಟವಿಲ್ಲ' ಎಂದು ರೇಖಾ ಹೇಳಿಕೊಂಡಿದ್ದಳು. ಇದು ಅವಳ ಆಸೆ ಮಾತ್ರವಲ್ಲ, ಅವಳ ಅಮ್ಮನ ಆಸೆಯೂ ಅದೇ ಆಗಿದೆ. ಯಾಕೆಂದರೆ ಅವಳಮ್ಮ ಯಾವಾಗಲೂ ಹೇಳುತ್ತಿರುತ್ತಾರೆ: 'ನನ್ನ ಮೂವರೂ ಮಕ್ಕಳೂ ಶಿಕ್ಷಣ ಪಡೆದು, ಕಚೇರಿಯಲ್ಲಿ ಕೆಲಸ ಮಾಡಲು ಹೋಗಬೇಕು'.

ಪ್ರತಿದಿನ ರೇಖಾ ಇದೇ ಗುರಿಯನ್ನು ಸಾಧಿಸುವ ಆಕಾಂಕ್ಷೆ ಮತ್ತು ಉತ್ಸಾಹದೊಂದಿಗೆ ಶಾಲೆಗೆ ಹೋಗುತ್ತಾಳೆ. ಇಂತಹ ಮಕ್ಕಳಿಗೆ ಕಲಿಯಲು ಮತ್ತು ಜ್ಞಾನ ಗಳಿಸಿ ದೀರ್ಘಾವಧಿಯಲ್ಲಿ ಜೀವನೋಪಾಯದ ದಾರಿ ಕಂಡುಕೊಳ್ಳುವಂತಹ ವಾತಾವರಣ ನಿರ್ಮಿಸುವ ದೃಷ್ಟಿಯಿಂದ ರೇಖಾಳಂತಹ ಮಕ್ಕಳ ಸುತ್ತ ಇರುವ ಶಿಕ್ಷಕರು ಮತ್ತು ಸಮುದಾಯದವರು ಪ್ರಯತ್ನ ಮಾಡಬೇಕಾಗಿದೆ. ಆಗ, ಪ್ರತೀ ಮಗುವೂ ಕಲಿಯಲು ಬಯಸುತ್ತದೆ ಮತ್ತು ಅವಕಾಶಗಳನ್ನು ಕಲ್ಪಿಸಿದರೆ, ಪ್ರತೀ ಮಗುವೂ ಕಲಿಯಬಲ್ಲದು ಎಂಬುದನ್ನು ನಾವು ಪ್ರತಿಪಾದಿಸಬಹುದು.

---



ಶಾಂತಾ ಕೆ. ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಕಳೆದ ಎಂಟು ವರ್ಷಗಳಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಸ್ತುತ ಅನುವಾದ ಉಪಕ್ರಮ ಮತ್ತು ಪ್ರಕಟಣೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಾರೆ. ಮಾನವ ಸಂಪನ್ಮೂಲ ನಿರ್ವಹಣೆಯಲ್ಲಿ ಪದವಿ ಪಡೆದಿರುವ ಅವರಿಗೆ ಸಮಾಜ ವಿಜ್ಞಾನದ ದೃಷ್ಟಿಕೋನದಿಂದ ಸುತ್ತಲಿನ ಜಗತ್ತನ್ನು ನೋಡುವುದರಲ್ಲಿ ಆಸಕ್ತಿ. ಶಾಂತಾ ಅವರನ್ನು ಸಂಪರ್ಕಿಸಲು ಇಮೇಲ್: shantha.k@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

**ವಿದ್ಯಾರ್ಥಿಗಳು ಯಾವ ಸಂಕೇತಗಳನ್ನು ಅರ್ಥಮಾಡಿಕೊಳ್ಳುತ್ತಾರೆ ಎಂಬುದನ್ನು ಗುರುತಿಸಲು ಆರಂಭಿಸಿ, ಅವುಗಳಲ್ಲಿ ಅತಿ ಪರಿಣಾಮಕಾರಿ ಸಂಕೇತಗಳನ್ನು ಆರಿಸಿಕೊಂಡು ಬಳಸುವುದರಲ್ಲಿ ಚೆನ್ನಾಗಿ ಪಾಠ ಮಾಡುವುದನ್ನು ಕಲಿಯುವುದರ ಬಹುಪಾಲು ಅಡಗಿದೆ. ವಿದ್ಯಾರ್ಥಿಗಳು ನನ್ನ ತರಗತಿಯಲ್ಲಿ ಆಸಕ್ತಿ ತೋರಿ ಸ್ಪಂದಿಸಲು ತೊಡಗಿದಾಗ (ಅಥವಾ ಯಾವ ಸಂಕೇತಗಳು ಆಸಕ್ತಿಯನ್ನು ಪ್ರತಿನಿಧಿಸುತ್ತವೆ ಎಂದು ನಾನು ಗುರುತಿಸಿದಾಗ) ಅದು ನನ್ನ ಸ್ವಂತಿಕೆಯನ್ನು ರೂಪಿಸುತ್ತದೆ. ಆಗ ನಾನು ಹೆಮ್ಮೆಯಿಂದ ನನ್ನನ್ನು ಓರ್ವ ದಕ್ಷ ಶಿಕ್ಷಕನಾಗಿ ನೋಡಲು ತೊಡಗುತ್ತೇನೆ. ನಾವು ಸದಾ ಸಂಕೇತಗಳ ಮೂಲಕ ಒಡನಾಡುತ್ತಿದ್ದು, ಈ ಪ್ರಕ್ರಿಯೆಯ ಅಧ್ಯಯನವು ಕಲಿಕೆ ಮತ್ತು ಬೋಧನೆಗಳ ವಿಚಾರವಾಗಿ ಮಹತ್ವದ ಒಳನೋಟಗಳನ್ನು ನೀಡುತ್ತದೆ.**

**– ಅಮ್ಮನ್ ಮದನ್, ಆದಿವಾಸಿ ಶಾಲಾ ಪ್ರಕ್ರಿಯೆಯಲ್ಲಿ ಸ್ವಂತಿಕೆ ಮತ್ತು ಅಸ್ಮಿತೆಯನ್ನು ಮರುಕಟ್ಟುವುದು, ಪುಟ 5**

# ಕಟ್ಟಕಡೆಯ ಮಗುವನ್ನೂ ಶಾಲೆಗೆ ಕರೆತರುವುದು

ಶಿವಾನಿ ತನೇಜಾ

ನಾನು 1997ರಲ್ಲಿ ವೃತ್ತಿ ಆರಂಭಿಸಿದಾಗ ಸಮಾನಾವಕಾಶದ ಜಗತ್ತಿನ ದೃಷ್ಟಿಕೋನದ ಮುಖ್ಯ ಕೊಂಡಿ ಎಂಬ ಆಶಯದಿಂದ, ಪ್ರತಿ ಮಗುವೂ ಶಾಲೆಯಲ್ಲಿ ಇರುವಂತಾಗಬೇಕು ಎಂಬ ಒಂದು ಕನಸನ್ನು ಕಟ್ಟಿಕೊಂಡಿದ್ದೆ. ಈ ಹಾದಿಯಲ್ಲೇ ನಮ್ಮಲ್ಲಿ ಬಹುತೇಕರು ಕಾರ್ಯಪ್ರವೃತ್ತರಾಗಿದ್ದರೆಂದು ನಾನು ನಂಬಿದ್ದೇನೆ. ರಾಜ್ಯವೇ ಆಗಲಿ, ಸಮುದಾಯಗಳು, ಪೋಷಕರು ಹೀಗೆ ನಾವು ಎಲ್ಲಾ ಹಿರಿಯರು, ಶಾಲೆಗೆ ತೆರಳುವುದು ಅತ್ಯಗತ್ಯ ಮತ್ತು ಉಪಯುಕ್ತವಾದ ಸಂಗತಿ ಎಂದು ಸ್ವತಃ ನಂಬಿದ್ದೇವೆ / ಕ್ರಿಯಾಶೀಲರಾಗಿದ್ದೇವೆ. ಆದರೆ ನಾವು ಬಾಲಕರಿಂದ ತೊಡಗಿ ವಿಮರ್ಶಾತ್ಮಕವಾಗಿ ಯೋಚಿಸುವ ವಯಸ್ಕರಾಗಿ ಬೆಳೆಯುತ್ತಾ ಹೋದಂತೆ, (ನಮ್ಮ ಸ್ವಂತ ಶಾಲಾ ಶಿಕ್ಷಣದಲ್ಲಿ ಇದು ಸಾಧ್ಯವಾಗದಿರಬಹುದು!) ಇದು ಸತ್ಯಕ್ಕೆ ತುಂಬಾ ದೂರವಾದ ಸಂಗತಿ ಎಂಬುದು ಅರಿವಾಗುತ್ತದೆ.

ತರಗತಿ ವ್ಯವಸ್ಥೆಯ ಹೊರಗೂ ಪರಿಶೀಲಿಸಬೇಕಾದ ಕೆಲವು ಪ್ರಶ್ನೆಗಳು ತಲೆದೋರುತ್ತವೆ: ಕೈಗಾರಿಕೀಕೃತ ಜಗತ್ತು ಮತ್ತು ಆಧುನಿಕ ನಾಗರೀಕತೆಯೊಂದಿಗೆ ವ್ಯವಹರಿಸಲು ಶಿಕ್ಷಣವು ಕೇವಲ ಒಂದು ಸಾಧನವೇ? ಅದರಿಂದ ಲಿಂಗ, ಧರ್ಮ, ಜಾತಿ, ವರ್ಗವನ್ನು ಮೀರಿ ಒಂದು ಬಗೆಯ ಸಮಾನತೆಯನ್ನು ಕಲಿಯಬಲ್ಲೆವೆ? ಮತ್ತು ಸಾಂವಿಧಾನಿಕ ಮೌಲ್ಯಗಳನ್ನು ಬೆಳೆಸಿಕೊಳ್ಳುತ್ತಿದ್ದೇವೆಯೇ ಅಥವಾ ಈ ವ್ಯವಸ್ಥೆಯ ಮೂಲಕ ನಿಜಕ್ಕೂ ವಿರುದ್ಧವಾಗಿ ನಡೆದು-ಕೊಳ್ಳುತಿದ್ದೇವೆಯೇ? ಈ ಶಿಕ್ಷಣವು ಸುಸ್ಥಿರ ಜಗತ್ತನ್ನು ಕಟ್ಟಬಲ್ಲುದೇ?ಯಾವಾಗ ನಾವು ಈ ವ್ಯವಸ್ಥೆಯ ಉತ್ಪನ್ನಗಳು ಎಷ್ಟು ಸಮರ್ಥ ಎಂದು ಯೋಚಿಸಲಾರಂಭಿಸುತ್ತೇವೋ, ನಾಗರೀಕ ಎಂದು ಕರೆಯುವಂಥ ಜಗತ್ತು ಕಾರ್ಯನಿರ್ವಹಿಸುವಂತೆ ನೋಡಲಾರಂಭಿಸುತ್ತೇವೋ ಆಗ ಈ ಪ್ರಶ್ನೆಗಳು, ಸಂಶಯಗಳು ಎದ್ದೇಳುತ್ತವೆ. ಇಷ್ಟಾದರೂ, ಇಂತಹ ಪರಿಸ್ಥಿತಿಯಲ್ಲಿಯೂ, ತರಗತಿ ಎಂಬ ಚೌಕಟ್ಟಿನಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರಾದ ನಾವು, ಪ್ರತಿ ದಿನ ಭೇಟಿಯಾಗುವ ಮಕ್ಕಳಿಗಾಗಿ ವ್ಯವಸ್ಥೆಯೊಳಗೆ ಬದಲಾವಣೆ ತರಲು ಅಗಾಧ ಸಾಮರ್ಥ್ಯವನ್ನು ಕಂಡುಕೊಳ್ಳಬಹುದು.

**ಕೆಲವು ಅವಶ್ಯಕತೆಗಳು: ಪ್ರೀತಿ ಮತ್ತು ಮಮತೆ**

ಪರಸ್ಪರ ಆತ್ಮೀಯತೆ ಇದ್ದರೆ ಮಾತ್ರ ಯಾವುದೇ ಇಬ್ಬರು ವ್ಯಕ್ತಿಗಳ ನಡುವಿನ ಮಾತುಕತೆ ಧನಾತ್ಮಕವಾಗಿ ಮತ್ತು ಇಬ್ಬರಿಗೂ ಅನುಭವ ಗಳಿಸುವಂತಿರಲು ಸಾಧ್ಯ. ಸಮುದಾಯ ಮತ್ತು ತಮ್ಮ ಕುಟುಂಬದ ಸಣ್ಣ ವರ್ತುಲದೊಳಗೆ ಮಾತ್ರ ಅಲಕ್ಷಿತ ಸಮುದಾಯದ ಮಕ್ಕಳಿಗೆ ಪ್ರೀತಿ ಸಿಕ್ಕೀತು ಮತ್ತು ಅವರಲ್ಲಿ ನಗುವನ್ನು ಕಾಣಲು ಸಾಧ್ಯ. ರಸ್ತೆಯಲ್ಲಾಗಲೀ, ಅಂಗಡಿಗಳಲ್ಲಾಗಲೀ ಈ ಮಕ್ಕಳೊಂದಿಗೆ ಯಾರೂ ನಗುವುದಿಲ್ಲ. ಭೇದಭಾವ ತೋರಲು ಅವರ ಬಣ್ಣ, ವರ್ಗ, ಧರ್ಮ ಅಥವಾ ಸಮುದಾಯ, ಒಟ್ಟಾರೆ ಅವರ ಚೆಹರೆಯೇ ಸಾಕು. ಹಾಗಾಗಿ, ಒಬ್ಬ ಶಿಕ್ಷಕ/ಕಿಯಾಗಿ, ಯಾವಾಗ ಮಕ್ಕಳನ್ನು ಒಂದು ಪ್ರೀತಿಯ ನಗು ಅಥವಾ ಆಲಿಂಗನದೊಂದಿಗೆ ಸ್ವಾಗತಿಸಿದರೆ, ನೀವು ಕಾಳಜಿ ತೋರಿಸುತ್ತೀರಿ ಎಂದು ಅವರು ತಿಳಿದುಕೊಳ್ಳುತ್ತಾರೆ. ಅವರು ತಮ್ಮ ಸಮುದಾಯದ ಗುಂಪಿನಿಂದ ಆಚೆಗೂ ಒಂದು ಗುರುತಿಸುವಿಕೆಯನ್ನು ಕಂಡುಕೊಳ್ಳುತ್ತಾರೆ. ಈ ಪ್ರಯತ್ನ ಕಾರ್ಯತಂತ್ರವೆಂದಷ್ಟೇ ಅಲ್ಲ, ಜೊತೆಯಲ್ಲಿ ಕೆಲಸ ಮಾಡುವ ಮಕ್ಕಳನ್ನು ನಾವು ಪ್ರೀತಿಸಿದರೆ ಸಿಗುವ ಸ್ವಯಂಪ್ರೇರಿತ ಸ್ಪಂದನವೂ ಹೌದು. ಔಪಚಾರಿಕವಾದ ಗುಡ್‌ಮಾರ್ನಿಂಗ್ ಮೇಡಂ ಎಂಬುದಕ್ಕಿಂತಲೂ, ಒಂದು ನಗು ಅಥವಾ ಒಂದು ಶುಭಾಶಯದಂತಹ ಸರಳವಾದ ಆದರಿಸುವ ಸಂಕೇತದಿಂದ ದೊಡ್ಡ ಪವಾಡವೇ ನಡೆದುಹೋಗುತ್ತದೆ. ತಮ್ಮಿಂದಾಗಿ ಜಗತ್ತು ಹೆಚ್ಚು ಸುಂದರವಾಗಿದೆ ಎಂದು ಮಕ್ಕಳು ಅರ್ಥ ಮಾಡಿಕೊಳ್ಳಲು ಆರಂಭಿಸುತ್ತಾರೆ. ಶಾಲೆಯು, ತಾವು ಯಾರು, ತಮಗೇನು ಬೇಕಾಗಿತ್ತೋ ಅದನ್ನು ಪಡೆಯುವ ಸ್ಥಳವಾಗುತ್ತದೆ.

**ಗೌರವ ಮತ್ತು ಘನತೆ**

ಮುಖ್ಯವಾಹಿನಿಯ ಸಂಸ್ಕೃತಿಯಲ್ಲಿ, ಅಲಕ್ಷಿತ ಸಮುದಾಯದ ಮಕ್ಕಳ ಭಾಷೆ ಮತ್ತು ಬದುಕು ಅವರಿಗೆ ಅರ್ಹವಾದಷ್ಟು ಅಂತಸ್ತನ್ನು ಕೊಟ್ಟಿರುವುದಿಲ್ಲ. ಅದು ಮಗುವಿನ ಹೆತ್ತವರು ಮಾಡುವ ನೌಕರಿ ಅಥವಾ ಮಗು ಎಲ್ಲಿ ಬದುಕುತ್ತದೆ ಅಥವಾ ಅದು ಆಡುವ ಆಟ-ಪ್ರತಿಯೊಂದೂ ಅವರನ್ನು ಮುಖ್ಯವಾಹಿನಿಯ ಆಕಾಂಕ್ಷೆಗಳಿಗೆ ಕೆಳದರ್ಜೆಯಾಗಿ ಪರಿಗಣಿಸಲ್ಪಟ್ಟು, ಅದರಂತೆ ಉಪಚರಿಸ-ಲಾಗುತ್ತದೆ. ಅವರ ಭಾಷೆಯು ವೃತ್ತಿ ಕ್ಷೇತ್ರದಲ್ಲಿ ಗೌರವ ದಕ್ಕಿಸಿಕೊಡುವಂತಿರುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ, ಈ ವ್ಯತ್ಯಾಸಗಳು ಅನೇಕ ವೇಳೆ ಗುರುತುಗಳು ಅಥವಾ ಸಾಮಾಜಿಕವಾಗಿ ಅರ್ಥೈಸಲಾದ ಸಂಕ್ಷಿಪ್ತ ರೂಪಗಳಾಗಿದ್ದು, ಸಾಮಾನ್ಯ ಸಾಮರ್ಥ್ಯದ ಕೊರತೆಯಿಂದಾಗಿ ಹಲವಾರು ಅಲ್ಪ ಮತ್ತು ದೀರ್ಘಕಾಲೀನ ಭೌತಿಕ ಅನುಕೂಲತೆಗಳ ಸೂಚಕಗಳಾಗಿ ಪರಿಗಣಿತವಾಗುತ್ತದೆ. ಈ ಮನೋಭಾವಗಳು, ಗೌರವ ಮತ್ತು ಘನತೆಗೆ ಸಂಬಂಧಿಸಿದ ಹಲವು ಮನೋಶಾಸ್ತ್ರೀಯ ಪ್ರತಿಫಲನವಾಗಿ ಬದಲಾಗಿ ಹೊರಹೊಮ್ಮುತ್ತವೆ.

ಗೌರವ ಮತ್ತು ಪ್ರತಿಷ್ಠೆ ಹಲವು ರೂಪಗಳಲ್ಲಿ ವ್ಯಕ್ತವಾಗುತ್ತಿದ್ದು, ಇತರರ ಭಾಷೆಯನ್ನು ಗುರುತಿಸುವುದು ಮತ್ತು ಗೌರವಿಸುವುದು ಅತ್ಯಂತ ಸರಳ ಕ್ರಮವಾಗಿದೆ. ಹಾಗಾಗಿ ಸಂಸ್ಕೃತಿ, ಜೀವನಶೈಲಿ, ಗುರುತು ಮತ್ತು ತಿಳುವಳಿಕೆಯು ಶ್ರೀಮಂತ ಮತ್ತು ವಿಶಿಷ್ಟವಾದುದು. ಬಹುಭಾಷಾ ಶಿಕ್ಷಣಶಾಸ್ತ್ರದ ಶಕ್ತಿಯ ಬಗ್ಗೆ ಹಲವಾರು ಅಂಶಗಳನ್ನು ಪ್ರಸ್ತಾಪಿಸಬೇಕಾಗುತ್ತದೆ. ಆದರೆ, ಮಗುವಿನ ಸ್ಥಾನಮಾನದಿಂದಲೇ ಮಾತುಕತೆ ಆರಂಭಿಸುವುದು ಮುಖ್ಯ.

ಶಿಕ್ಷಕಿಯಾಗಿ, ಮಗುವಿನ ಮಾತೃಭಾಷೆಯಲ್ಲಿ ಅಷ್ಟೇನೂ ನೈಪುಣ್ಯತೆಯಿಲ್ಲದ ನಾನು, ಅದರ ಭಾಷೆಯಲ್ಲಿ ಒಂದು ವಾಕ್ಯವನ್ನಾದರೂ ಮಾತನಾಡಿದರೆ, ಆಗ ಆ ಮಗುವಿನ ಕಣ್ಣಿನಲ್ಲಿ ವಿಭಿನ್ನವಾದ ಭಾವವನ್ನು ಕಾಣುತ್ತಿರುತ್ತೇನೆ ಅದು, 'ನೀನು ನನ್ನನ್ನು ಗೌರವಿಸು, ನನ್ನೊಂದಿಗೆ ನಿನಗೆ ಮಾತನಾಡಬೇಕಿದೆಯಾ, ನೀನು ನನ್ನನ್ನು ಸಂಪರ್ಕಿಸಲು ಪ್ರಯತ್ನಿಸುತ್ತಿದ್ದೀಯೆ, ನೀನು ನನ್ನ

ಜೀವನದ ಭಾಗ' ಎಂದು ಮಗು ಭಾವಿಸುತ್ತಿದೆಯೇನೋ ಎಂಬಂತಿರುತ್ತದೆ; ಮಗುವಿನ ತಲೆಯಲ್ಲಿ ಏನೆಲ್ಲಾ ಓಡುತ್ತದೋ ನನಗೆ ಗೊತ್ತಿಲ್ಲ. ಆದರೆ ಅದು ನನ್ನನ್ನು ವಿಭಿನ್ನವಾಗಿ ಸ್ವೀಕರಿಸುತ್ತದೆ. ಅಂತಹ ಸಂದರ್ಭಗಳಲ್ಲಿ, ಸಂವಹನ ಮಾಡಲಷ್ಟೇ ಪ್ರಯತ್ನಿಸುತ್ತೇನೆ. ಇಲ್ಲವೇ ತಮಾಷೆ ಮಾಡುತ್ತೇನೆ. ಆದರೆ ಆ ಮಗು ನನ್ನೊಂದಿಗೆ ಮತ್ತೆ ಸಂವಹನ ಮಾಡುತ್ತದೆ ಮತ್ತು ನಾನು ಅದನ್ನು ಸ್ವೀಕರಿಸಿದ ಕಾರಣ ಅದು ನನ್ನನ್ನು ಸ್ವೀಕರಿಸುತ್ತದೆ. ಎಷ್ಟೋ ಸಲ ನಾನು ಮಗುವಿನ ಮಾತೃಭಾಷೆಯ ಯಾವುದಾದರೂ ಒಂದು ವಾಕ್ಯವನ್ನು ಅನುವಾದಿಸಿ ಬರೆದಿಟ್ಟುಕೊಳ್ಳುತ್ತೇನೆ. ಅವರ ಬಳಿ ಹೋದಾಗ ಆ ವಾಕ್ಯವನ್ನು ಬರೆದೋ, ಓದಿಯೋ ಹೇಳಿದಾಗ ಆ ಮಗುವಿನ ಕಣ್ಣುಗಳಲ್ಲಿ ಒಂದು ಮಿಂಚು ಹಾದುಹೋಗುತ್ತದೆ. ಆ ಕ್ಷಣ ಅಲ್ಲಿ ಏನು ನಡೆಯುತ್ತಿದೆ ಎಂದು ನನ್ನತ್ತ ಅವರು ನೋಡುತ್ತಾರೆ. ಅದೊಂದು ಸುಂದರ ಪ್ರತಿಸ್ಪಂದನೆ.

ಮೇಲು–ಕೀಳು ಎಂಬ ತೀರ್ಮಾನಗಳಿಲ್ಲದೆ ಇತರರ ಬದುಕನ್ನು ಅದು ಇರುವಂತೆಯೇ ಸ್ವೀಕರಿಸುವುದರಿಂದಲೂ ಘನತೆ ಮೂಡುತ್ತದೆ. ಹಾಗೆಂದು, ಎಲ್ಲದಕ್ಕೂ ಅವಕಾಶ ನೀಡುವುದು ಅಥವಾ ಸಹಿಸಿಕೊಳ್ಳುವುದು (Allowing or tolerating) ಎಂದರ್ಥವಲ್ಲ. ಬದಲಿಗೆ ಮಕ್ಕಳು ಅವರ ಬದುಕಿನ ಬಗ್ಗೆ ಮಾಹಿತಿ ನೀಡಲು ಉತ್ತೇಜಿಸುವುದಾಗಿದೆ. ಸಂವಾದಗಳು, ಬರವಣಿಗೆ ಮತ್ತು ಇತರ ವಿನಿಮಯ ಮಾರ್ಗಗಳ ಮೂಲಕ ಅವರ ಬದುಕನ್ನು ತರಗತಿಯೊಳಗೆ ತರಬಹುದು ಮತ್ತು ತರಲೇಬೇಕು, ಅದಕ್ಕೆ ಯಾರೂ ಅಪಹಾಸ್ಯ ಮಾಡುವಂತಿಲ್ಲ ಎಂಬ ಸ್ಪಷ್ಟವಾದ ಸಂದೇಶವನ್ನು ಸಾರಬೇಕಿದೆ. ಇತ್ತೀಚಿನ ದಿನಗಳಲ್ಲಿ, ಮುಸ್ಕಾನ್‌ನ (Muskaan)[i] ನಮ್ಮ ಶಿಕ್ಷಕರು ಮಕ್ಕಳಿಗೆ ಅಡುಗೆ ಮನೆಯ ಅನುಭವಗಳ ಮೂಲಕ ಮತ್ತು ತರಗತಿ ಕೊಠಡಿಯಲ್ಲಿ ಸಾಂಪ್ರದಾಯಿಕ ರೀತಿಯಲ್ಲಿ ಅಡುಗೆ ವಿಧಾನಗಳನ್ನು ಮಾಡಿತೋರಿಸುವ ಮೂಲಕ ಇಂಗ್ಲಿಷ್ ಶಬ್ದಕೋಶವನ್ನು ಕಲಿಸಲು ಆರಂಭಿಸಿದ್ದಾರೆ.

ಅಲಕ್ಷಿತ ಮಕ್ಕಳನ್ನು ಗುರುತಿಸಿದ ಬಳಿಕ, ಸಾಂಪ್ರದಾಯಿಕವಾಗಿ ಅಂತಸ್ತಿನ ಪ್ರಕಾರ ನೀಡಲಾದ ಸವರ್ಣೀಯರು ಅಥವಾ ಬಹುತೇಕ ಶಿಕ್ಷಕರು ಪ್ರತಿನಿಧಿಸುವ ಮೇಲ್ವರ್ಗದವರು ಎಂಬ ಶ್ರೇಣೀಕರಣವನ್ನು ಕೂಡ ಕಡಿಮೆ ಮಾಡಬೇಕಾಗುತ್ತದೆ. ಸರಳವಾದ ಅರ್ಥೈಸುವಿಕೆ ಮತ್ತು ಧೋರಣೆಯೂ ಬದಲಾಗಬೇಕಿದೆ. ಉದಾಹರಣೆಗೆ, ಅಸಮರ್ಥತೆಯ ಸನ್ನಿವೇಶದಲ್ಲಿ ನನಗೆ ಭದ್ರತೆಯ ಭಾವನೆ ತಂದುಕೊಟ್ಟ ಒಂದು ಸನ್ನಿವೇಶ. ನಗರದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ತಲುಪಲು ಪುಡಿಗಾಸೂ ಇಲ್ಲದೆ ದಿಗ್ಮೂಢಳಾದ ಕ್ಷಣ, ಅಥವಾ ದುಡಿಯುವ ವರ್ಗದವರನ್ನೇ ಒಳಗೊಂಡಿರುವ ಮಧ್ಯಮ ವರ್ಗದ ಕುಟುಂಬಗಳಲ್ಲಿ ತುಂಬಾ ಅಥವಾ ಅತ್ಯಧಿಕ ಗಲಾಟೆಗಳು ನಡೆಯುತ್ತವೆ ಎಂದುಕೊಳ್ಳೋಣ. ಇಂತಹ ಸನ್ನಿವೇಶಗಳಲ್ಲಿ, ದೊಡ್ಡ ಮನೆಗಳಲ್ಲಿ ನಡೆಯುವುದು ಅವರ ದೊಡ್ಡದೊಡ್ಡ ಗೋಡೆಗಳನ್ನು ದಾಟಿ ಹೊರಗೆ ಬರುವುದಿಲ್ಲ ಎಂದು ಅವರ ನಂಬಿಕೆ. ಹಾಗಾಗಿ, ನಮ್ಮ ಧೋರಣೆಗಳನ್ನು ನಾವು ಬದಲಾಯಿಸಿಕೊಳ್ಳಬೇಕಿದೆ. ಬಾಹ್ಯ ನೋಟಕ್ಕೆ ಪೂರ್ವನಿರ್ಧರಿತ / ಪೂರ್ವಗ್ರಹಪೀಡಿತ ಕಲ್ಪನೆಗಳಿವೆ. ಒಂದು ವೇಳೆ ಶ್ರೀಮಂತರ ಮನೆಯಲ್ಲಿ ನೀರು ಪೂರೈಕೆಯಲ್ಲಿ ವ್ಯತ್ಯಯವಾದರೆ ಅವರು ಎಂದಿನಂತೆ ಶುಭ್ರ ನೋಟದೊಂದಿಗೆ ಸಮಯಕ್ಕೆ ಸರಿಯಾಗಿ ಶಾಲೆಗೆ ಬರಲು ಸಾಧ್ಯವಾಗದೇ ಇರಬಹುದು.

ಮಕ್ಕಳು ತಮ್ಮ ಅನುಭವಗಳನ್ನು ಹಂಚಿಕೊಂಡು ಕೀಳರಿಮೆ ಅನುಭವಿಸುವಾಗ ನಾನು ಈ ಎಲ್ಲಾ ಸಂಗತಿಗಳನ್ನು ಅವರಿಗೆ ಹೇಳುತ್ತೇನೆ. ಸಾಂಪ್ರದಾಯಿಕ ಔಷಧದ ಹೂರಣ ಗೊತ್ತಿಲ್ಲದವರು ಅದನ್ನು ಮೂಢನಂಬಿಕೆ ಮತ್ತು ಹಿಂದುಳಿದ ಔಷಧ ಎಂದೂ, ಅಲೋಪತಿ ಔಷಧ ಪವಾಡ ಮಾಡುವ ಸರ್ವಶ್ರೇಷ್ಠ ಔಷಧ ಎಂದು ಸರ್ವೇಸಾಮಾನ್ಯವಾಗಿ ನಂಬಲಾಗುತ್ತದೆ. ಜ್ಞಾನವು ಕೂಡ ಹೇಗೆ ಮೇಲ್ದರ್ಜೆ ಮತ್ತು ಸಾಮಾಜಿಕ ವರ್ಗಗಳಾಗಿ ವಿಭಜಿಸಿದೆ ಎಂಬುದನ್ನು ಇದು ತೋರಿಸುತ್ತದೆ. ಎಲ್ಲಾ ಜನರಲ್ಲಿ ಸಮಾನತೆ ಎಂಬುದು ನಮ್ಮ ಮಾತುಕತೆಯ ಮೂಲಕವೇ ಬರಬೇಕಾದ ಅಗತ್ಯವಿದೆ.

**ಕಲಿಕೆಯ ಗ್ರಹಿಕೆ**

ಕಲಿಕೆಯು ಮನುಷ್ಯನ ಬುದ್ಧಿಗೆ ಗುಟುಕು ಅಡ್ರಿನಾಲಿನ್‌ನಂತೆ ಉತ್ತೇಜಕವಾಗಿ ಕೆಲಸ ಮಾಡುತ್ತದೆ. ನಮ್ಮಲ್ಲಿ ಯಾರಿಗಾದರೂ ಏನಾದರೂ ಕಲಿಯಲು ಅವಕಾಶ ಸಿಕ್ಕಿದ್ದು, ಆ ಬಗ್ಗೆ ಪ್ರಜ್ಞಾ–ಪೂರ್ವಕವಾಗಿ ಇದ್ದವರಿಗೆ ನಾನು ಏನು ಹೇಳುತ್ತಿದ್ದೇನೆ ಎಂಬುದು ಅರ್ಥವಾದೀತು. ಒಂದು ಸಂಸ್ಥೆಯಾಗಿ ಶಾಲೆಯು, ಕಲಿಕೆಗಿರುವ ಅವಕಾಶವಾಗಿ ತನ್ನ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳುತ್ತದೆ. ಆದರೂ ಮಕ್ಕಳು ಮಾತ್ರ ಬಹುತೇಕ ಉದಾಸೀನದ ಭಾವವನ್ನು ಅನುಭವಿಸುತ್ತಾರೆ.

ಮಕ್ಕಳು, ಸಹಜವಾಗಿಯೇ ಅಂತರ್ಗತವಾಗಿ ಕ್ರಿಯಾಶೀಲರಾಗಿ, ಜಾಣರಾಗಿ, ಏನನ್ನಾದರೂ ಕಲಿಯಲು ಮುಕ್ತ ಮತ್ತು ನಿರ್ಣಾಯಕರಾಗಿಯೂ ಇರುತ್ತಾರಾದರೂ, ಬಹುತೇಕ ಶಾಲೆಗಳು ಅರ್ಥವತ್ತಾದ ಚರ್ಚೆ ಹಾಗೂ ಕಲಿಕೆಯನ್ನು ಒದಗಿಸುವುದಿಲ್ಲ. ಗಂಟೆಗಟ್ಟಲೆ ಶಾಲಾ ಕೊಠಡಿಯಲ್ಲಿ ಕೂರುವುದು ತ್ರಾಸದಾಯಕವಾಗಿ, ಕಲಿಕೆಯ ಗ್ರಹಿಕೆಯಲ್ಲಿನ ಕೊರತೆಯು ಏನಾಗುತ್ತಿದೆ ಎಂಬುದನ್ನು ಅರ್ಥೈಸಿಕೊಳ್ಳಲಾಗದ ವೈಫಲ್ಯವಾಗಿ ಬಿಡುತ್ತದೆ. ಆದರೆ ಬಹುತೇಕ ಶಾಲಾ ಕೊಠಡಿಗಳಲ್ಲಿ ನಡೆಯುವಂತೆ, ಕಲಿಕೆಯ ಪ್ರಕ್ರಿಯೆಯನ್ನು ಮಕ್ಕಳಿಗೆ ತಲುಪಿಸುವಲ್ಲಿ ಏನೋ ತೊಂದರೆ ಉಂಟಾಗುತ್ತಿದೆ ಎಂಬುದನ್ನು ಸೂಕ್ಷ್ಮಮತಿ ಮಗುವೊಂದು ಅರಿತುಕೊಂಡಿರುತ್ತದೆ. ಮಕ್ಕಳು ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದೇ ಮುಖ್ಯ, ಅದರಲ್ಲಿ ಯಾವುದೇ ರಾಜಿ ಇರುವುದಿಲ್ಲ, ಅಂಕಗಳು ಲೆಕ್ಕಕ್ಕಿಲ್ಲ ಎಂಬುದಾಗಿ ಶಿಕ್ಷಕರಾಗಿ ನಾವು ಅರಿತುಕೊಂಡಿದ್ದೇವೆ ಎಂದು ನಾನು ಆಶಿಸಿದ್ದೇನೆ. ಆದರೆ ಕಲಿಕೆಯೇ ಮುಖ್ಯ. ಈ ಕಲಿಕೆಯ ಗ್ರಹಿಕೆಯು ಒಂದು ಕೌಶಲವನ್ನು ಅಥವಾ ಪರಿಕಲ್ಪನೆಯನ್ನು ಕಲಿಯುವುದೋ ಅಥವಾ ಪರಿಕಲ್ಪನೆಯೋ ಅಥವಾ ಹೊಸ ಚಿಂತನೆಯನ್ನು ಪಡೆಯುವುದೋ ಆಗಿರಬಹುದು. ಹಾಗಾಗಿ, ಕಲಿಕೆಯ ಗ್ರಹಿಕೆಯು ಒಂದು ಲೆಕ್ಕವನ್ನು ಬಿಡಿಸುವುದು ಅಥವಾ ಯಾವುದೋ ಒಂದು ಸರಳ ವಿನ್ಯಾಸವನ್ನು ಅರ್ಥೈಸಿಕೊಳ್ಳುವುದು ಅಥವಾ ಅದಕ್ಕಾಗಿ ಒಂದು ಮಾದರಿಯನ್ನು ಸಿದ್ಧಪಡಿಸಿ ಬಿಡಿಸಲು ಕೊಡುವುದು ಅಥವಾ ಇಂಗ್ಲಿಷ್‌ನಲ್ಲಿ ಒಂದು ಪೂರ್ಣ ವಾಕ್ಯವನ್ನೇ ಹೇಳಬಹುದು–ಇವೆಲ್ಲವೂ ಔಪಚಾರಿಕ ಶಾಲೆ ತಮಗಾಗಿ ಇರುವ ಸ್ಥಳ ಎಂಬುದನ್ನು ಅರ್ಥ ಮಾಡಿಕೊಳ್ಳಲು ಮಕ್ಕಳಿಗೆ ನೆರವಾಗುತ್ತದೆ.

ಔಪಚಾರಿಕ ಕಲಿಕಾ ಸ್ಥಳದಲ್ಲಿ ಮಕ್ಕಳನ್ನು ಪುಸ್ತಕ ಮತ್ತು ಕರಿಹಲಗೆಗಷ್ಟೇ ಮೀಸಲಾಗಿಡದೆ ಸಾಮುದಾಯಿಕ ಪ್ರಜ್ಞೆಯನ್ನು ಪರಿಚಯಿಸುವುದರಿಂದ ಹೆಚ್ಚು ಸಹಜ ಮಾರ್ಗದಲ್ಲಿ ಮಕ್ಕಳನ್ನು ಕಲಿಕೆಯ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಂತಾಗುತ್ತದೆ. ಬೀಜ ಮೊಳಕೆಯೊಡೆಯುವುದನ್ನು ಗಮನಿಸಿದರೆ, ತಮ್ಮ ಸುತ್ತಮುತ್ತಲ ಮರಗಳ ಬಗ್ಗೆ ತಿಳಿದುಕೊಳ್ಳಲು ನೆರವಾಗುತ್ತದೆ. ಹೀಗೆ ಬದುಕಿನ ಕೆಲವು ವಾಸ್ತವಿಕ ಸಂಗತಿಗಳನ್ನು ಕಲಿಕೆಯ ಸ್ಥಳದಲ್ಲಿ ಮಕ್ಕಳಿಗೆ

ತಿಳಿಸಿಕೊಡಬೇಕು. ಈ ಕಲಿಕೆಗೆ ಸಾಂಪ್ರದಾಯಿಕ ಶಿಕ್ಷಕರು ಸಾಕು ಹೊರತು ಬಿ.ಎಡ್ ಕಲಿತ ಶಿಕ್ಷಕರೇ ಬೇಕೆಂದಿಲ್ಲ. ಈ ವಾಸ್ತವಿಕ ಕಲಿಕೆಯು ನಮ್ಮ ಶಾಲೆಗಳ ಉದ್ದೇಶವಾಗಬೇಕು. ಅಲ್ಲದೆ ಈ ಉದ್ದೇಶವನ್ನು ಮಗುವಿಗೆ ಖಚಿತಪಡಿಸುವುದರೊಂದಿಗೆ, ಔಪಚಾರಿಕ ಕಲಿಕಾ ಸ್ಥಳವು ತನಗಾಗಿ ಇರುವುದು ಹೌದೋ ಅಲ್ಲವೋ ಎಂಬುದನ್ನು ಮಗು ತಾನೇ ಪತ್ತೆ ಮಾಡುತ್ತದೆ.

**ಮಾತು ಮತ್ತು ಸಂವಾದ**

ಮುಖ್ಯವಾಹಿನಿಯ ಶಾಲೆಗಳಲ್ಲಿ ಇರಬೇಕಾದ ನಿರ್ಣಾಯಕ ಅಂಶಗಳಾದ ಯಥಾಸ್ಥಿತಿಯನ್ನು ಪ್ರಶ್ನಿಸುವ ಅಗತ್ಯ, ಸ್ವಾತಂತ್ರ್ಯ ಮತ್ತು ಪರಿಣಾಮಕಾರಿ ಚಿಂತನೆಯನ್ನು ಹೆಚ್ಚಿಸಬೇಕಾಗಿರುವುದು ಮರೆಯಾಗಿದೆ. ಹಾಗಾಗಿ, ತಮ್ಮೊಳಗಿನ ಮತ್ತು ಸುತ್ತಮುತ್ತ ಜಗತ್ತಿನ ಕುರಿತು ವಿಭಿನ್ನ ಸಂಗತಿಗಳ ಬಗ್ಗೆ ತಮ್ಮ ಭಾವನೆಗಳನ್ನು ಹಂಚಿಕೊಳ್ಳಲು ಮತ್ತು ಮಾತನಾಡಲು ಮಕ್ಕಳಿಗೆ ಅವಕಾಶ ಕಲ್ಪಿಸಿಕೊಡುವುದು ನಮಗೆ ಮಹತ್ವದ್ದಾಗಿದೆ. ನಾವು ಕೆಲಸ ಮಾಡುವ ಪರಿಸ್ಥಿತಿಗಳನ್ನು ವಿಶ್ಲೇಷಿಸುವುದರಿಂದ ನಮಗೆಲ್ಲರಿಗೂ ಯೋಚನೆಗೆ ಅವಕಾಶವು ಸಿಗುತ್ತದೆ. ಇದಕ್ಕೆ ಶಿಕ್ಷಕರು ಪ್ರಶ್ನೆಗಳನ್ನು ಕೇಳಿ ಪರಿಹಾರವನ್ನೂ ಸೂಚಿಸಬೇಕಾಗುತ್ತದೆ. ಶಿಕ್ಷಣಶಾಸ್ತ್ರದಲ್ಲೇ ಯಾವುದೇ ಪರಿಕಲ್ಪನೆಗಳನ್ನು ಬಳಸುವ ಮೂಲಕ ಇದನ್ನು ಸಾಧಿಸಬಹುದಾಗಿದ್ದು, ಇದಕ್ಕೆ ತನ್ನದೇ ಆದ ಮೌಲ್ಯವೂ ಇದೆ. ಸಾಮಾಜಿಕ ನಿಯಮಗಳು ಮತ್ತು ವೈಯಕ್ತಿಕ ಜವಾಬ್ದಾರಿಗಳ ಬಗ್ಗೆ ವಾರಕ್ಕೊಂದು ಬಾರಿ ಚರ್ಚಿಸುವುದರಿಂದ, ಕೇವಲ ಅಂಗೀಕಾರ ಮತ್ತು ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವುದಕ್ಕಿಂತಲೂ ಯೋಚಿಸುವ, ಮೌಲ್ಯಮಾಪನ ಮಾಡುವ, ಸಕ್ರಿಯರಾಗಲು ಕಲಿತಂತಾಗುತ್ತದೆ.




ಒಂದು ತರಗತಿಯಲ್ಲಿ ನಾನು ಅಲಕ್ಷಿತ ಸಮುದಾಯದ ಮಕ್ಕಳಿಗೆ ಶಾಲಾ ಶಿಕ್ಷಣ ಯಾಕೆ ಅವಶ್ಯ ಮತ್ತು ಅವರು ಯಾಕೆ ಅದನ್ನು ಕೈಬಿಡಬಾರದು ಎಂಬ ಬಗ್ಗೆ ಚರ್ಚಿಸಿದ್ದನ್ನು ನೆನಪಿಸಿಕೊಳ್ಳುತ್ತೇನೆ. ಮಕ್ಕಳು ಮಹತ್ತರವಾದುದನ್ನು ಸಾಧಿಸುವ ದೃಷ್ಟಿಕೋನದೊಂದಿಗೆ ಸಂವಾದ ಆರಂಭಿಸಿದರು ಹಾಗೂ ಅಲಕ್ಷಿತ ಸಮುದಾಯದವರು ತಮ್ಮ ಘನತೆಯನ್ನು ಮರಳಿ ಗಳಿಸಬೇಕು, ಸವರ್ಣೀಯರ ಮಕ್ಕಳಂತೆ ತಮ್ಮ ಸಮುದಾಯದ ಮಕ್ಕಳ ಸಾಮರ್ಥ್ಯ ಏನು ಎಂಬುದನ್ನು ತೋರಿಸಬೇಕು ಎಂದರು. ಈ ಉಪಾಯವನ್ನೇ ಇಟ್ಟುಕೊಂಡು, ನಮ್ಮಲ್ಲಿ ಪ್ರತಿಯೊಬ್ಬರೂ ವಿಭಿನ್ನರು ಮತ್ತು ಪ್ರತಿಯೊಬ್ಬರೂ ಪರಸ್ಪರರಿಗಾಗಿ ವೈಯಕ್ತಿಕವಾಗಿ ಕೆಲಸ ಮಾಡಬಹುದು, ಆಗ ಶಿಕ್ಷಣದ ಮೂಲಕ ಹೆಚ್ಚಿನ ಆಯ್ಕೆಗಳು ನಮಗೆ ಮುಕ್ತವಾಗುತ್ತವೆ ಎಂದು ಹೇಳಿದೆವು.

ಮಹಿಳೆಯರ ಕೆಲಸ ಮತ್ತು ಅಂತಸ್ತು, ಜಾತಿ ಶ್ರೇಣೀಕರಣ, ಕೋಪ ಮತ್ತು ನೋವಿನ ಭಾವನೆ– ಮಕ್ಕಳು ಇದನ್ನೆಲ್ಲ ಗಮನಿಸುವುದಿಲ್ಲ, ಅರ್ಥ ಮಾಡಿಕೊಳ್ಳುವುದಿಲ್ಲ ಎಂದೇನಲ್ಲ. ಅವರು ಇವನ್ನು ನಿರಂತರವಾಗಿ ಗಮನಿಸುತ್ತಾ ತಮ್ಮದೇ ನಿರ್ಧಾರಕ್ಕೆ ಬಂದು, ತಮ್ಮ ಅಭಿಪ್ರಾಯಗಳನ್ನು ವರ್ತನೆಗಳಾಗಿ ಪರಿವರ್ತಿಸಿ ಅಪ್ರಜ್ಞಾ–ಪೂರ್ವಕವಾಗಿ ತಮ್ಮ ನಡತೆಯಲ್ಲಿ ತೋರಿಸುತ್ತಾರೆ. ನಮಗೆ ನೀತಿ ವಿಜ್ಞಾನ ಪಾಠಗಳಲ್ಲ; ನಿರ್ಣಯಾತೀತವಾದ ಮತ್ತು ಮುಕ್ತವಾದ ಚರ್ಚೆಗಳು ಬೇಕಾಗಿದೆ.

**ಅಭಿವ್ಯಕ್ತಿ**

ಎಲ್ಲಾ ಮನುಷ್ಯರೂ ಅನುಭವಗಳು, ನೆನಪುಗಳು ಮತ್ತು ಭಾವನೆಗಳ ದೊಡ್ಡ ಕಂತೆ ಉಳ್ಳವರು. ಇವುಗಳಿಂದಲೇ ವ್ಯಕ್ತಿತ್ವ ರೂಪು–ಗೊಳ್ಳುವುದು. ನಮ್ಮ ಬದುಕಿನಲ್ಲಿ ಬಂದುಹೋಗಿ ನಮ್ಮಲ್ಲೇ ನಿಲ್ಲುತ್ತವೆ ಎಂದು ಭಾವನೆಗಳ ಕಂತೆಯಲ್ಲಿ ಅಭಿವ್ಯಕ್ತಿಸುವ ಸಂಗತಿಗಳಲ್ಲ. ಅದು ಸಾವು, ನೋವು, ಹೀಯಾಳಿಕೆ, ಪ್ರೀತಿಯೋ ಏನೂ ಆಗಿರಬಹುದು. ವಯಸ್ಕರಾಗಿ ನಾವು, ಕ್ಷುಲ್ಲಕ ವಿಚಾರಗಳನ್ನು ಅಥವಾ ನಿಂದನೆಯ ಪರಿಭಾಷೆಯನ್ನು ಬಳಸಲು ಹಿಂಜರಿಯುತ್ತೇವೆ. ಆದರೆ ಮಗುವಿನ ಬುದ್ಧಿ ಮತ್ತು ಸ್ಮರಣಶಕ್ತಿಯ ಭಾಗವೇ ಆಗಿರುವ ಕಾರಣ ನಾವು ಇದನ್ನು ಪ್ರಜ್ಞಾಪೂರ್ವಕವಾಗಿ ತರಗತಿಗೆ ತರಲು ಪ್ರಯತ್ನಿಸಬೇಕು. ಈ ವಿಚಾರಗಳನ್ನು ನಾವು ಅವರ ಜೊತೆಗೆ ಸಭ್ಯತೆಯಿಂದ ಮತ್ತು ನಿಂದನೀಯವಲ್ಲದ ರೀತಿಯಲ್ಲಿ ಚರ್ಚಿಸಬೇಕು. ಮಗುವಿನ ಶೈಕ್ಷಣಿಕ ಗುಣಮಟ್ಟ ಅಥವಾ ನಾವು ಬೋಧಿಸುವ ವಿಷಯಕ್ಕೆ ತಕ್ಕಂತೆ ಅಪೇಕ್ಷಿತ ಅಭಿವ್ಯಕ್ತಿಯ ವಿಧಾನವನ್ನು ಬದಲಾಯಿಸಿಕೊಳ್ಳಬಹುದು. ಚಿತ್ರ ಬರೆಯುವುದು, ಬರವಣಿಗೆ, ಮಾತನಾಡುವುದು, ನಟನೆಯಂತಹ ಚಟುವಟಿಕೆಗಳ ಮೂಲಕ ಅಭಿವ್ಯಕ್ತಿಯನ್ನು ಉತ್ತೇಜಿಸಬಹುದು. ಇದನ್ನು ವಿಧಿವತ್ತಾಗಿಲ್ಲದ ರೀತಿಯಲ್ಲಿ, ಅಂದರೆ 'ಕಳೆದ ರಾತ್ರಿ ನೀನೇನು ಮಾಡಿದೆ?, 'ನಿನ್ನ ಭಯ ಏನು?, 'ಹೊಸ ಸ್ನೇಹಿತನನ್ನು ಹೇಗೆ ಮಾಡಿಕೊಂಡೆ? ಎಂಬಂತಹ ಪ್ರಶ್ನೆಗಳನ್ನು ಕೇಳುವ ಮೂಲಕವೂ ಮಾಡಬಹುದು. ಶ್ರೋತೃಗಳೆಂದು ಭಾವಿಸಿದವರಿಗೆ ಚರ್ಚೆ ಮತ್ತು ಪ್ರಕಟಣೆಯಿಂದ ಹಲವು ಬಗೆಯಲ್ಲಿ ನೆರವು ಸಿಗುತ್ತದೆ.

**ಶಾಲಾ ಕೊಠಡಿಯಿಂದ ಹೊರಬಂದು ಪರಿಚಿತವಾದುದನ್ನು ಮಾಡುತ್ತಾ**

ತರಗತಿಯಿಂದ ಹೊರ ಬಂದು ಅತಿ ಪರಿಚಿತವಾದ ಅಥವಾ ಹೊಸ ಜಾಗದಲ್ಲಿ, ಅವಲೋಕನ, ಚರ್ಚೆ, ಕಲಿಕೆಗಾಗಿ ರೂಪುಗೊಂಡ ಗುಂಪುಗಳಲ್ಲಿ ಕಾಲ್ನಡಿಗೆಯ ಮೂಲಕ ಸಾಗುವುದು ಪ್ರತಿಯೊಬ್ಬರಿಗೂ ಸಾಧ್ಯವಾದ ಸಂಗತಿ. ದುರಾದೃಷ್ಟವಶಾತ್, ಈಗ

ಬಹುತೇಕ ಸಂವಾದಗಳು ಕಂಪ್ಯೂಟರ್ ಅಥವಾ ಫೋನ್‌ಗಳು ವಿವರಿಸಿದಂತೆ ನಡೆಯುತ್ತವೆ. ಆದರೂ, ನಾವು ಅವಕಾಶಗಳನ್ನು ಹುಟ್ಟುಹಾಕಿದರೆ ನಮ್ಮದೇ ರೀತಿಯಲ್ಲಿ ವ್ಯಕ್ತಿಗಳು ಮತ್ತು ಪ್ರಕೃತಿಯನ್ನು ಅರ್ಥ ಮಾಡಿಕೊಳ್ಳಬಹುದು.

ಕೆಲವೊಮ್ಮೆ, ನನ್ನ ತರಗತಿಯ ವಿದ್ಯಾರ್ಥಿನಿಯರನ್ನು ಫೋನ್ ಬಿಲ್ ಪಾವತಿಸಲು ಅಥವಾ ಪತ್ರವನ್ನು ಅಂಚೆಗೆ ಹಾಕಲೆಂದು ಹೊರಗೆ ಕರೆದುಕೊಂಡು ಹೋಗುತ್ತೇನೆ. ಮಕ್ಕಳಿಗೆ ತಮ್ಮ ಶಿಕ್ಷಕಿಯೊಂದಿಗೆ ಸಾರ್ವಜನಿಕವಾಗಿ ಸುತ್ತಾಡುವುದು ಮತ್ತು ಶಿಕ್ಷಕಿಗೆ ಮಕ್ಕಳೊಂದಿಗೆ ಹೊರಗೆ ಸುತ್ತಾಡುವುದು ಹೊಸ ಒಳನೋಟಗಳನ್ನು ತಂದುಕೊಡುತ್ತದೆ. ಮಕ್ಕಳಿಗೆ ಸಂಬಂಧಿಸಿದ ಸ್ಥಳಗಳಲ್ಲಿ ಮತ್ತು ನೆರೆಹೊರೆಯಲ್ಲಿ ನಡೆದಾಡುತ್ತಾ ಅಲ್ಲಿನ ಸಂಗತಿಗಳನ್ನು ಪರಿಚಯಿಸಿಕೊಡುವಂತೆ ಅವರನ್ನು ಕೇಳುವುದರಿಂದ ನಮಗೆ ಹೊಸ ಸಂಗತಿಗಳು ಹಾಗೂ ಒಂದು ಸ್ಥಳದ ಬಗ್ಗೆ ಗ್ರಹಿಸಲು ಸಾಧ್ಯವಾಗುತ್ತದೆ. ಈ ಪ್ರಯತ್ನಕ್ಕೆ ಸಮುದಾಯದ ಹಿರಿಯರಿಂದಲೂ ಉತ್ತೇಜನ ಸಿಗಬಹುದು.

ತಮ್ಮ ಸುತ್ತಲಿನ ವಾಸ್ತವ ಜಗತ್ತನ್ನು ಅರ್ಥ ಮಾಡಿಕೊಂಡಿದ್ದನ್ನು ಮತ್ತು ತಮಗೆ ತಿಳಿದಿದ್ದನ್ನು ಹೇಳಿಕೊಳ್ಳಲು ಹೆಚ್ಚು ಅಧಿಕೃತತೆ ಬರುವುದು ಶಾಲಾ ಕೊಠಡಿಗಿಂತಲೂ ಹೆಚ್ಚಾಗಿ ಕಾಡಿನಲ್ಲೋ, ರಸ್ತೆಬದಿಯಲ್ಲೋ ಎಂಬುದನ್ನು ನಮಗೂ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಕತೆಗಳು ಮತ್ತು ಕತೆ ಪುಸ್ತಕಗಳ ಮೂಲಕ ಸಾಂಸ್ಕೃತಿಕ ಎಲ್ಲೆಗಳನ್ನು ಮೀರುವುದು

ಭಾರತ ಅಥವಾ ಪ್ರಪಂಚದ ಜನರ ವೈವಿಧ್ಯಮಯ ಸಂಸ್ಕೃತಿಯನ್ನು ಅರ್ಥ ಮಾಡಿಕೊಂಡು ತಿಳಿದುಕೊಳ್ಳಲು ಸಹಾಯವಾಗುವ ನಿಟ್ಟಿನಲ್ಲಿ ಬಹುತೇಕ ನಮ್ಮ ಪಠ್ಯಪುಸ್ತಕಗಳಲ್ಲಿ ಆಸಕ್ತಿಕರ ಕಥೆಗಳು ಇಲ್ಲದೆ ಹಿಂದೆ ಬೀಳುತ್ತವೆ. ಯಾಕೆಂದರೆ, ಪಠ್ಯಪುಸ್ತಕಗಳಲ್ಲಿನ 'ಪಾಠಗಳು' ಅವುಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನಷ್ಟೇ ಕಲಿಸಿಕೊಡುತ್ತವೆ ಮತ್ತು ಆಗೊಮ್ಮೆ ಈಗೊಮ್ಮೆ ಮೌಲ್ಯಯುತವಾಗಿ, ಅವಕಾಶಗಳಿರುವ ಮಕ್ಕಳ ಅನುಭವಗಳನ್ನೂ ಪ್ರತಿನಿಧಿಸುವುದಿದೆ. ಹಾಗು ಅವು ಮಧ್ಯಮ ವರ್ಗದವರ ಬಾಲ್ಯದ ಕಲ್ಪನೆಗಳೊಂದಿಗೆ ಮುಖಾಮುಖಿ-ಯಾಗುತ್ತದೆ. ಆದರೆ ಎಲ್ಲೆಡೆ ಅಲಕ್ಷಿತ ಮಕ್ಕಳನ್ನು ಪ್ರತಿನಿಧಿಸುವ ಮತ್ತು ಗೌರವಿಸುವಂತಹ ವೈವಿಧ್ಯಮಯ ಕತೆ ಪುಸ್ತಕಗಳ ಪ್ರಾಮುಖ್ಯತೆ ಮತ್ತು ಪ್ರಸ್ತುತತೆ ಸಂಪೂರ್ಣವಾಗಿ ಕಳೆದು-ಹೋಗಿರುತ್ತದೆ. ದಿನಕ್ಕೊಂದು ಕತೆ ಎಂಬುದು ಶಿಕ್ಷಣತಜ್ಞ ಕೃಷ್ಣಕುಮಾರ್ ಅವರ ಸಲಹೆಯಾಗಿತ್ತು. ನಮ್ಮ ಶಾಲೆಗೆ ಯಾವುದು ಉತ್ತಮ ಎಂಬುದನ್ನು ನಾವೇ ನಿರ್ಧರಿಸಬಹುದು.

ಮಕ್ಕಳ ವಾಸ್ತವಗಳನ್ನು ದೃಢೀಕರಿಸುವ ಕತೆಗಳು ಮತ್ತೊಬ್ಬರ ಬದುಕಿನ ವಾಸ್ತವದೊಳಗೆ ಇಣುಕಿನೋಡಲು ನೆರವಾಗುವ ಕಾರಣ ಬಹಳ ಮಹತ್ವಪೂರ್ಣ. ಯಾರ ಮೇಲಾದರೂ ಸಾಮೂಹಿಕ ಹಲ್ಲೆ ಅಥವಾ ಹಕ್ಕುಗಳ ಉಲ್ಲಂಘನೆಯ ಘಟನೆಯಲ್ಲಿ ಒಂದು ಮಗು ಗಾಯಗೊಂಡಿದ್ದಕ್ಕೆ ಸಂಬಂಧಿಸಿದ ಕತೆಯನ್ನು ಕೈಗೆತ್ತಿಕೊಂಡಾಗ ಓದುಗನಿಗೆ ಆ ವ್ಯಕ್ತಿಯನ್ನಷ್ಟೇ ಅರ್ಥ ಮಾಡಿಕೊಡಲಾಗುತ್ತದೆ. ಎಂಟು ವರ್ಷದ ಒಂದು ಮಗು ಪಾಕಿಸ್ತಾನದ ವಿರುದ್ಧ ಮಾತನಾಡುವುದನ್ನು ಕೇಳಿದಾಗಲೆಲ್ಲ (ಸಂವಾದಗಳಲ್ಲಿ, ಮಕ್ಕಳು ಆ ದೇಶದ ಬಗ್ಗೆ ವೈರತ್ವವನ್ನು ಮತ್ತು 'ಪಶ್ಚಿಮದ ಶತ್ರು' ಎಂಬುದನ್ನು ಹೇಳುತ್ತಿರುತ್ತಾರೆ) ಈ ವೈರತ್ವ ಇನ್ನಷ್ಟು ಬೇರೂರೀತೇ ಅಥವಾ ದ್ವೇಷ ಬಿತ್ತುವ ಮತ್ತು ತಿರುಚಿದ ಇತಿಹಾಸದ ಪಾಠಗಳನ್ನು ಓದುವ ಬದಲು ಇವರು ಗಡಿಭಾಗದ ಮಕ್ಕಳ ಬದುಕಿನ ಕತೆಗಳನ್ನು ಓದಿದ್ದರೆ ಈ ಭಾವನೆ ಬಗೆಹರಿಯುತ್ತಿತ್ತೇ ಎಂದುಕೊಳ್ಳುತ್ತೇವೆ. ಮುಸ್ಕಾನ್‌ನ ಗ್ರಂಥಾಲಯಗಳಲ್ಲಿ ನಾವು ವೈವಿಧ್ಯಮಯ ವಾಸ್ತವದ ಕತೆಗಳನ್ನು ವಿವರಿಸುವ ಪುಸ್ತಕಗಳನ್ನು ತಂದಿರಿಸಿದ್ದು, ನಮ್ಮ ಮಕ್ಕಳ ವಾಸ್ತವ ಸಂಗತಿಗಳನ್ನು ವಿವರಿಸುವ ಪುಸ್ತಕಗಳನ್ನಷ್ಟೇ ಪ್ರಜ್ಞಾಪೂರ್ವಕವಾಗಿ ಪ್ರಕಟಿಸಿದ್ದೇವೆ.

**ವಿವಿಧ ಭಾವನಾತ್ಮಕ ಅವಶ್ಯಕತೆಗಳನ್ನು ಗುರುತಿಸುವುದು**

ಅಲಕ್ಷಿತ ಸಮುದಾಯದ ಮಕ್ಕಳಿಗೆ 12 ವರ್ಷಗಳ ಶಾಲಾ ಶಿಕ್ಷಣ ಪಡೆಯುವುದೆಂದರೆ ಪ್ರಯಾಸದ ಕೆಲಸ ಎಂಬುದನ್ನು ನಾವು ನೋಡಬಹುದು. ಹುಟ್ಟುತ್ತಲೇ ಭವಿಷ್ಯದ ಹಾದಿ ನಿರ್ಧರಿತ-ಗೊಂಡಿರುವ ಸವಲತ್ತುಳ್ಳ ಮಗು ಶಿಕ್ಷಣಕ್ಕೆ ಹಾಕುವ ಶ್ರಮಕ್ಕೆ ಹೋಲಿಸಿದರೆ ಅಲಕ್ಷಿತ ಮಕ್ಕಳು ಕನಿಷ್ಠ ಪಕ್ಷ 50 ಪಟ್ಟು ಹೆಚ್ಚು ಶ್ರಮ ಹಾಕಬೇಕಾಗುತ್ತದೆ. ದೃಢನಿಶ್ಚಯ ಮಾಡುವ ಮಗು ಎಲ್ಲಾ ಎಡರುತೊಡರುಗಳನ್ನು ದಾಟಬಲ್ಲದು ಎಂಬುದರ ಬಗ್ಗೆ ನಾವು ಆಗಾಗ್ಗೆ ಕೇಳುತ್ತಿರುತ್ತೇವೆ. ಆದರೆ ಅಲ್ಲಿ ಪರೀಕ್ಷೆಗೊಳಪಡುವುದು ನಮ್ಮ ದೃಢನಿಶ್ಚಯ ಮತ್ತು ನಮ್ಯತೆಯೇ ಹೊರತು ಮಗುವಿನದ್ದಲ್ಲ.

**ಕಲಿಕೆಯಲ್ಲಿ ಶಿಕ್ಷಕರ ಪಾತ್ರ**

ಕೆಲವೊಂದು ಸಮಸ್ಯಾತ್ಮಕ ಪರಿಸ್ಥಿತಿಗಳನ್ನು ಮೇಲಿನ ಪ್ರಯತ್ನಗಳ ಮೂಲಕ ಬಗೆಹರಿಸಬಹುದು, ಮಗು ಶಾಲೆಯಲ್ಲಿ ಮುಂದುವರಿಯಲಾಗದೇ ಇರುವುದಕ್ಕೆ ನಮ್ಮ ಶ್ರಮದಲ್ಲಿನ ಕೊರತೆ ಮತ್ತು ಸೂಕ್ಷ್ಮತೆ ಕಳೆದುಕೊಂಡಿರುವುದೂ ಕಾರಣವಾಗಬಹುದು. ಶಿಕ್ಷಕರೊಂದಿಗೆ ಭಾವನಾತ್ಮಕ ನಂಟು ಮತ್ತು ನಂಬಿಕೆ ಬಹುತೇಕ ಮಕ್ಕಳಿಗೆ ಬಹಳ ಮುಖ್ಯವೆನಿಸಿದರೆ, ಇನ್ನು ಕೆಲವರಿಗೆ ಅದೇ ಕಗ್ಗಂಟಾಗುವುದೂ ಉಂಟು. ಅಂತಹ ಮಕ್ಕಳನ್ನು ಈ ಕೆಲವು ಲಕ್ಷಣಗಳಿಂದ ಗುರುತಿಸಬಹುದು: ಅಂತಹವರು ತರಗತಿಯಲ್ಲಿ ಇತರರೊಂದಿಗೆ ಬೆರೆಯುವುದಿಲ್ಲ; ಚರ್ಚೆಯಲ್ಲಿ ಭಾಗಿಯಾಗುವುದನ್ನು ತಪ್ಪಿಸಬಹುದು; ಮನೆಯಲ್ಲಿ ಕಷ್ಟಕರ ವಾತಾವರಣ ಇರಬಹುದು ಅಥವಾ ತರಗತಿಯಲ್ಲಿನ ಬಹುಸಂಖ್ಯಾತ ಗುಂಪಿನಿಂದ ದೂರವುಳಿಯಬಹುದು.

ಇದು ವೈಯಕ್ತಿಕ ನಿರೀಕ್ಷೆ ಮತ್ತು ಒಂದಷ್ಟು ಕಠಿಣ ಪರಿಶ್ರಮದಿಂದ ಕೂಡಿದ್ದರೂ, ಶಿಕ್ಷಕರಾಗಬೇಕೆಂದು ವೃತ್ತಿಯನ್ನು ಆಯ್ಕೆ ಮಾಡಿಕೊಂಡವರಿಗೆ, ವಿಶೇಷವಾಗಿ ಅವಕಾಶ ವಂಚಿತ, ಆಪ್ತ ಸಲಹೆಗಾರರಿಲ್ಲದ ಅಥವಾ ತಾಯಿಗೆ ಕೆಲಸ ಬಿಟ್ಟೋ ಹೆರಿಗೆ ರಜೆ ಹಾಕಿಯೋ ಅವರ ಕಾಳಜಿ ಮಾಡುವಷ್ಟು ಅಥವಾ ರಜಾ ದಿನಗಳಲ್ಲಿ ಕುಟುಂಬದೊಂದಿಗೆ ಸಂತಸದ ಸಮಯ ಕಳೆಯಲು ಅವಕಾಶವಿಲ್ಲದ ಕುಟುಂಬದ ಮಕ್ಕಳ ಶಿಕ್ಷಕರಿಗೆ ಇದು ಕರ್ತವ್ಯದ ಭಾಗವೆಂದು ಇದನ್ನು ನಾನು ಗಮನಿಸುತ್ತೇನೆ. ಮಕ್ಕಳು ಪ್ರೀತಿಯಿಂದ ವಂಚಿತರಾಗಿದ್ದಾರೆ ಎಂದು ನಾನು ಹೇಳುತ್ತಿಲ್ಲ. ಆದರೆ ಹೊಸ ಮತ್ತು ಕಠಿಣವಾದ ದಾರಿಯ ಆಯ್ಕೆ ಮಾಡಿಕೊಂಡಾಗ ಬೇಕಾಗುವ ಭಾವನಾತ್ಮಕ ಬಲವನ್ನು ನೀಡುವಲ್ಲಿ ವಿಫಲವಾಗುವ ಪ್ರವೃತ್ತಿಯನ್ನು ದುರ್ಬಲ ಕುಟುಂಬಗಳಲ್ಲಿ ಸಾಮಾನ್ಯವಾಗಿ ಕಾಣಬಹುದು. ಈ ಕುಟುಂಬಗಳಿಗೆ ಮತ್ತು ಸಮುದಾಯಗಳಿಗೆ ಔಪಚಾರಿಕ ಶಿಕ್ಷಣ ಎಂಬುದು ಅಪರಿಚಿತ ದಾರಿ. ಒಂದು ವೇಳೆ, ಇಂತಹ ಅವಕಾಶ ವಂಚಿತ ಮಕ್ಕಳಿಗಾಗಿ ಕೆಲಸ ಮಾಡುವುದನ್ನು ನಾನು ಆರಿಸಿಕೊಂಡರೂ ಆ ಮಕ್ಕಳಿಗೆ ನನ್ನ ನೆರವು ಬೇಕು ಎಂಬುದನ್ನು ನಾನು ತೋರಿಸಿಕೊಡಲು ಬಯಸುತ್ತೇನೆ.

### ನಿಜ ಜೀವನದ ಕತೆಗಳು

ಓರ್ಝಾ ಗೊಂಡರ ಮಗು ಧರ್ಮೇಂದ್ರನಿಗೆ ಆರು ಮಂದಿ ಒಡಹುಟ್ಟಿದವರು. ತಾಯಿ ಅವರನ್ನು ಕಾಳಜಿಯಿಂದ ಕಂಡರೂ, ಅವರು ರಸ್ತೆ ಬದಿಯಲ್ಲಿ ಬದುಕು ಸಾಗಿಸುವವರು ಮತ್ತು ಆಕೆಯ ಬದುಕೂ, ಮೂಲ ಆದಿವಾಸಿ ಬೇರುಗಳಿಂದ ಬೇರ್ಪಟ್ಟಂತೆ ಇರುವುದನ್ನು ಯಾರು ಬೇಕಾದರೂ ಊಹಿಸಬಹುದು. ಧರ್ಮೇಂದ್ರ, ಎಂಟನೇ ತರಗತಿಯವರೆಗೂ ಕಷ್ಟಪಟ್ಟು ಓದಿದ. ಆದರೆ ಆಮೇಲೆ ತನ್ನ ಕುಟುಂಬದ ಏಕೈಕ ಆದಾಯ ಮೂಲವಾದ, ರಸ್ತೆಯಲ್ಲಿ ಚಿಂದಿ ಆಯುವ ಕೆಲಸಕ್ಕಿಳಿದ. ನಾನೊಂದು ವೇಳೆ ಅವನ ತಾಯಿಯ ತಂಗಿಯಾಗಿ ಚಿಕ್ಕಮ್ಮ ಆಗಿದ್ದಿದ್ದರೆ ಅವನ ಜೀವನ ಬೇರೆಯೇ ಗತಿಯಲ್ಲಿರುತ್ತಿತ್ತು ಎಂದು ನಂಬುತ್ತೇನೆ. ಆದರೆ ನಾನು ಹೆಚ್ಚೆಂದರೆ ಅವನ ಬಗ್ಗೆ ಅನುಕಂಪ ವ್ಯಕ್ತಪಡಿಸುವ ಶಿಕ್ಷಕಿಯಷ್ಟೇ ಆಗಿದ್ದೆ.

ಅಂಜಲಿ ಎಂಬ ಪಾರ್ಧಿ ಬುಡಕಟ್ಟು ಕುಟುಂಬದ ಹುಡುಗಿಯ ಕತೆಯೂ ಇದುವೇ. ಅವಳು ಯಾವಾಗಲೂ ಮನೆಯಿಂದ ಓಡಿಹೋಗುತ್ತಿದ್ದಳು. ಅವಳಿಗೆ ತನ್ನದೇ ಆದ ರೀತಿಯಲ್ಲಿ ಬದುಕಬೇಕೆಂಬ ಆಸೆ. ಆದರೆ ಅವಳಿಗಿದ್ದ ವಿಚಿತ್ರ ಕಾಯಿಲೆಯಿಂದಾಗಿ ಎಂಟನೇ ವರ್ಷದಲ್ಲೇ ಅಸುನೀಗಿದಳು. ನಾನು ಒಬ್ಬ ವಯಸ್ಕಳಾಗಿ ಯೋಚಿಸುವುದಾದರೆ, ನಾನು ಅಲ್ಲಿ ಇದ್ದೆನಾದರೂ ಅವಳಿಗೆ ಅವಶ್ಯವಿದ್ದಷ್ಟು ಮಟ್ಟಿಗೆ ಅಲ್ಲ. ಮಕ್ಕಳ ಅವಶ್ಯಕತೆಗಳು ಮತ್ತು ವ್ಯಕ್ತಿತ್ವ ಒಂದೇ ರೀತಿ ಇರುವುದಿಲ್ಲ. ಕೆಲವರಿಗೆ ಹೆಚ್ಚು ಮತ್ತು ಇನ್ನು ಕೆಲವರಿಗೆ ಕಡಿಮೆ ಗಮನದ ಅವಶ್ಯಕತೆಯಿರುತ್ತದೆ. ವಯಸ್ಕರಾಗಿ, ನಾವು ನಮ್ಮ ಬದುಕಿನಲ್ಲಿ ಹುಟ್ಟಿನಿಂದಲ್ಲದೆ ನಮ್ಮದೇ ಆಯ್ಕೆಯ ಮೂಲಕ ಬರುವ / ತರುವ ಮಕ್ಕಳಿಗಾಗಿ ಜಾಸ್ತಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ.

ಅಲಕ್ಷಿತ ಸಮುದಾಯದ ಭಾಗವಾಗಿದ್ದುಕೊಂಡು, ನಿರ್ಲಕ್ಷಿತ ಸ್ಥಿತಿಯಲ್ಲಿ ಮತ್ತು/ ಅಥವಾ ತಾರತಮ್ಯದ ಬದುಕನ್ನು ಅನುಭವಿಸುತ್ತಿರುವುದು ಕಲಿಕೆಗೆ ಎದುರಾಗುವ ನಿಜವಾದ ತೊಡಕುಗಳು ಆಗಬಹುದು. ಉನ್ನತ ಶಿಕ್ಷಣ ಸಂಸ್ಥೆಗೆ ಕಾಲಿಡುವುದಕ್ಕೂ ಮೊದಲು 12 ವರ್ಷಗಳ ಶಾಲಾ ಕಲಿಕೆ, ಮೂರು ವರ್ಷ ಅಥವಾ ಹೆಚ್ಚಿನ ಅವಧಿಯ ಪದವಿ ಶಿಕ್ಷಣದವರೆಗೆ ಹೆಣಗಾಡುವುದೆಂದರೆ ಸಾಂಸ್ಥಿಕವಾಗಿ ತಾರತಮ್ಯ ಅನುಭವಿಸುವ ಅಲಕ್ಷಿತ ಮಕ್ಕಳಿಗೆ ನಿರಂತರ ಪರೀಕ್ಷೆಯಾಗಿ ಪರಿಣಮಿಸುತ್ತದೆ. ಇದನ್ನು ಗಮನಿಸಿದಾಗ, ಶಿಕ್ಷಣ ಸಂಸ್ಥೆಗಳಲ್ಲಿ ನಡೆಯುವ ತಾರತಮ್ಯದ ಬಗ್ಗೆ ಎಷ್ಟು ತುರ್ತಾಗಿ ಗಮನ ಹರಿಸಬೇಕು ಎಂಬುದು ಅರಿವಾಗುತ್ತದೆ.

ಪ್ರಾಥಮಿಕ ಶಾಲಾ ಶಿಕ್ಷಕಿಯರು ಮಾಡುವಂತೆ, ನಮ್ಮ ವರ್ತನೆ ಮಕ್ಕಳನ್ನು ಶಾಲೆಯಿಂದ ಹೊರಗಾದರೂ ಎಳೆಯಬಹುದು, ಒಳಗಾದರೂ ಕಳುಹಿಸಬಹುದಾಗಿದ್ದು, ನಾವು ಬದಲಾವಣೆ ಬಗ್ಗೆ ಪ್ರಜ್ಞೆ ಇಟ್ಟುಕೊಳ್ಳಬೇಕು ಅಷ್ಟೇ. ಶಾಲೆಗಳು ಮತ್ತು ಕಲಿಕೆಯ ಸ್ಥಳಗಳು ತಟಸ್ಥವಾಗಿವೆ, ಪ್ರತ್ಯೇಕಿಸಲ್ಪಟ್ಟಿವೆ, ಅವುಗಳು ಮೆರಿಟ್‌ಗಷ್ಟೇ ಮಹತ್ವ ನೀಡಿ ಜಾತಿ ಮತ್ತು ವರ್ಗದ ಬಗ್ಗೆ ಪ್ರಜ್ಞಾಶೂನ್ಯವಾಗಿವೆ, ತಾವು ಇರುವ ಸಮಾಜೋ ಸಾಂಸ್ಕೃತಿಕ ಚೌಕಟ್ಟನ್ನು ಸಕ್ರಿಯವಾಗಿ ಪ್ರತಿಬಿಂಬಿಸುತ್ತವೆ, ಶಾಲಾ ಶಿಕ್ಷಣ ಕ್ರಮದ ಪ್ರಸ್ತುತತೆಯನ್ನೇ ಪ್ರಶ್ನಿಸುವಂತೆ ಮಾಡಿವೆ. ಇಂಥ ಯೋಚನೆಗಳನ್ನು ಹೊರಗಿಟ್ಟರೆ ಮತ್ತು ವೈವಿಧ್ಯಮಯ ವಾಸ್ತವಗಳನ್ನು ಒಳಗೊಂಡಂತಹ ಪ್ರಜಾಸತ್ತಾತ್ಮಕವಾದ ವಿವಿಧ ದೃಷ್ಟಿಕೋನಗಳನ್ನು ಅಳವಡಿಸಿ- ಕೊಂಡರೆ ಪ್ರತಿ ಮಗುವಿನ ಕಲಿಕೆಯನ್ನು ಪ್ರೋತ್ಸಾಹಿಸಿದಂತೆ ಆಗುತ್ತದೆ.




ಏಕಾಂಗಿಯಾಗಿ ಶಾಲೆಗೆ ಹೋಗುತ್ತಿರುವ ಮಗು; ಕೃತಿಕರ್ತೃ- ಸಿಮ್ರನ್ ಉಯಿಕೆ, ಇಲಸ್ಟ್ರೇಟರ್: ಕೃತಿಕಾ ಸೂಸರ್ಲಾ; ಮುಸ್ಕಾನ್ (2019)




ಮುನ್ನು: ಕಾಶ್ಮೀರದ ಒಬ್ಬ ಬಾಲಕ; ಗ್ರಾಫಿಕ್ ಕಾದಂಬರಿ – ಮಲಿಕ್ ಸಾಜದ್; ಫೋರ್ತ್ ಎಸ್ಟೇಟ್) (2025)

[i] ಮುಸ್ಕಾನ್ ಎಂಬುದು ಲಾಭರಹಿತ, ಸರ್ಕಾರೇತರ ಸಂಸ್ಥೆಯಾಗಿದ್ದು, ಮಧ್ಯಪ್ರದೇಶದ ಭೋಪಾಲ್‌ನ ಬಸ್ತಿಗಳಲ್ಲಿ ಜೀವಿಸುತ್ತಿರುವ ಅಲಕ್ಷಿತ ಸಮುದಾಯಗಳೊಂದಿಗೆ ಕೆಲಸ ಮಾಡುತ್ತದೆ.

---



**ಶಿವಾನಿ ತನೇಜಾ** ಅವರು ಮುಸ್ಕಾನ್ ಸಂಘಟನೆಯ ಮೂಲಕ 1997ರಿಂದ ಪಟ್ಟಣ ಪ್ರದೇಶಗಳಲ್ಲಿ ಬದುಕುತ್ತಿರುವ ಅಲಕ್ಷಿತ ಸಮುದಾಯ ಮತ್ತು ಮಕ್ಕಳಿಗಾಗಿ ದುಡಿಯುತ್ತಿದ್ದಾರೆ. ಮಕ್ಕಳ ಬದುಕು ಮತ್ತು ವಾಸ್ತವಗಳಿಂದ ಶಿಕ್ಷಣವು ಹೊರತಾದುದಲ್ಲ ಎಂದು ಮುಸ್ಕಾನ್ ಬಲವಾಗಿ ನಂಬುತ್ತದೆ. ಮಕ್ಕಳೊಂದಿಗೆ ನಡೆಸುವ ಚರ್ಚೆಯಿಂದ ಅವರಿಗೆ ತರಗತಿಯಲ್ಲಿನ ಕೆಲಸಗಳಿಗೂ, ಡಿನೋಟಿಫೈ ಆಗಿರುವ ಬುಡಕಟ್ಟುಗಳ ಬಗ್ಗೆ ತಿಳಿದುಕೊಳ್ಳಲೂ ಮಾರ್ಗದರ್ಶನ ನೀಡಿದಂತಾಗಿದೆ. ಲೈಂಗಿಕ ದೌರ್ಜನ್ಯಗಳಿಗೆ ಸಂಬಂಧಿಸಿ ಸ್ಪಂದಿಸುವ ಮಹಿಳೆಯರ ಗುಂಪಿನಲ್ಲಿ ಅವರು ಸ್ವಯಂಸೇವಕಿಯೂ ಆಗಿದ್ದು, ರಾಷ್ಟ್ರೀಯ ಮಟ್ಟದಲ್ಲಿ ರಾಜ್ಯದ ಪ್ರತಿನಿಧಿಯೂ ಆಗಿದ್ದಾರೆ. ಶಿವಾನಿ ತನೇಜಾ ಅವರ ಸಂಪರ್ಕಕ್ಕೆ: muskaan.office@gmail.com

---

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಪಠ್ಯಕ್ರಮ ಮಧ್ಯಪ್ರವೇಶದ ಮೂಲಕ ಸಾಮಾಜಿಕ ಅಂತರದ ನಿವಾರಣೆ

ಶುಭ್ರಾ ಚಟರ್ಜಿ

ಕೋಲ್ಕತ್ತಾ ನಗರದ ನೈರುತ್ಯ ಅಂಚಿನಲ್ಲಿ ಸ್ಥಾಪಿತವಾಗಿರುವ ಶಾಲೆಗಳ ಒಂದು ಸಮೂಹದ ಜೊತೆ ಮಾಡಿದ ಕೆಲಸದ ಉದಾಹರಣೆಯನ್ನು ವಿವರಿಸುವ ಮೂಲಕ ನಾನು ಈ ಲೇಖನವನ್ನು ಪ್ರಾರಂಭಿಸುತ್ತೇನೆ. ಆ ಶಾಲೆಗಳ ನೆರೆಹೊರೆಯಲ್ಲಿ ಗಾಳಿಪಟ ತಯಾರಿ, ಝರಿ ಕುಸುರಿ, ಕಸೂತಿ ಇತ್ಯಾದಿ ಅನೌಪಚಾರಿಕ ಆರ್ಥಿಕತೆಯು ಬಲವಾಗಿ ಬೇರೂರಿದ್ದು, ಸಾಮಾನ್ಯವಾಗಿ ಮಕ್ಕಳೂ ತಮ್ಮ ಕುಟುಂಬದ ಆದಾಯವನ್ನು ಹೆಚ್ಚಿಸಿಕೊಳ್ಳಲು ಅವರೊಂದಿಗೆ ತೊಡಗಿಕೊಂಡಿರುವುದನ್ನು ಕಾಣಬಹುದು. ದೈನಂದಿನ ಜೀವನ ನಿರ್ವಹಣೆಗೆ ಎದುರಿಸುವ ಕಷ್ಟಗಳನ್ನು ನೋಡಿದರೆ, ಆ ಕುಟುಂಬಗಳಿಗೆ ಶಿಕ್ಷಣ ಕೊನೆಯ ಆದ್ಯತೆಯಾಗಿ ಇರುವುದು ಕಾಣುತ್ತದೆ. ಮಕ್ಕಳು ಶಾಲೆಗೆ ಹಾಜರಾಗುವುದಕ್ಕೂ ಇಷ್ಟಪಡುವುದಿಲ್ಲ. ಅಲ್ಲಿ ಅವರಿಗೆ ಸರಿಯಾಗಿ ಹೊಂದಾಣಿಕೆಯೂ ಆಗುವುದಿಲ್ಲ.

**ಕಲಿಕಾ ವಾತಾವರಣವನ್ನು ಸೃಷ್ಟಿಸುವುದು**

**ಶಿಕ್ಷಕರ ವಿಧಾನ**

ಪ್ರತಿ ಮಗುವೂ ಕಲಿಕೆಯ ಅವಕಾಶಗಳಿಂದ ಪ್ರಯೋಜನ ಪಡೆದುಕೊಳ್ಳಬೇಕೆಂದು ನಾವು ಬಯಸುವುದಾದರೆ, ಪ್ರೋತ್ಸಾಹಕರ ಮತ್ತು ಪೂರಕ ಕಲಿಕಾ ವಾತಾವರಣವು ಅನಿವಾರ್ಯವಾಗಿ ಬೇಕಾಗುತ್ತದೆ. ವಿಶೇಷವಾಗಿ ಹಲವು ಬಗೆಯ ಅಡೆತಡೆಗಳನ್ನು ಎದುರಿಸುವ ಮಕ್ಕಳಿಗೆ ಅದರ ಅನಿವಾರ್ಯತೆ ತುಂಬಾ ಇದೆ. ನಾನೀಗ ಮಾತನಾಡುವ ಶಾಲೆಗಳ ಮಕ್ಕಳ ಸಂದರ್ಭಕ್ಕೂ ಇದು ಅನ್ವಯಿಸುತ್ತದೆ. ಶಾಲೆಗಳಲ್ಲಿ ಬಂಗಾಲಿ ಭಾಷೆ ಕಲಿಕಾ ಮಾಧ್ಯಮವಾಗಿರುವುದರಿಂದ, ವಲಸೆ ಬಂದ ಕುಟುಂಬಗಳಿಗೆ ಸೇರಿದ ಈ ಮಕ್ಕಳ ಕಲಿಕೆಯ ಮಟ್ಟವು ಕಡಿಮೆ ಇರುವುದಕ್ಕೆ ಸಾಮಾಜಿಕ ಮತ್ತು ಭಾಷಿಕ ಅಡೆತಡೆಗಳೇ ಕಾರಣ ಎಂಬುದು ಸ್ಪಷ್ಟವಾಗಿದೆ. ಮನೆ ಮತ್ತು ಶಾಲಾ ಭಾಷೆಯ ಮಧ್ಯದ ಭಿನ್ನತೆ ಅವರ ಕಲಿಕೆಗೆ ಬಹಳ ದೊಡ್ಡ ಕಂಟಕ ಎಂಬುದರ ಬಗ್ಗೆ ಅನುಮಾನಗಳಿಲ್ಲ. ಆದರೆ ಅದಕ್ಕಿಂತಲೂ, ಶಿಕ್ಷಕರು ಮಕ್ಕಳೊಂದಿಗೆ ಹೊಂದಿರುವ ಸಾಮಾಜಿಕ ಅಂತರವು ಸಮಸ್ಯಾತ್ಮಕವಾಗಿದೆ. ಅವರಿಗೆ ವಿದ್ಯಾರ್ಥಿಗಳ ನಿರ್ದಿಷ್ಟವಾದ ಮತ್ತು ವ್ಯಕ್ತಿಗತವಾದ ಕಲಿಕಾ ಅವಶ್ಯಕತೆಗಳಿಗೆ ಪರಿಣಾಮಕಾರಿಯಾಗಿ ಸ್ಪಂದಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಇದು ಮಕ್ಕಳ ಅಂತಃಪ್ರೇರಣೆ ಬಹಳ ಕೆಳಮಟ್ಟದಲ್ಲಿ ಇರುವುದಕ್ಕೆ ಮೂಲಭೂತ ಕಾರಣವಾಗಿದೆ.

ತರಗತಿಯೊಳಗೆ ಶಿಕ್ಷಕರೇ ಪ್ರಧಾನ ಸೂತ್ರದಾರನಾಗಿ ಇರುವುದರಿಂದ ಅವರೇ ಇಡೀ ತರಗತಿಯ ಸ್ವರೂಪವನ್ನು ರೂಪಿಸುವ ಜವಾಬ್ದಾರಿ ಹೊಂದಿರುತ್ತಾರೆ. ಯಾವಾಗಲೂ ಶಿಕ್ಷಕರ ವ್ಯಕ್ತಿತ್ವದ ಸುತ್ತ ಮಕ್ಕಳ ಪ್ರಾಥಮಿಕ ಸಾಮಾಜೀಕರಣ ಮತ್ತು ಕಲಿಕೆಯು ಸಂಭವಿಸುತ್ತದೆ. ಆದರೆ ನಾನು ಹೇಳಿದ ಶಾಲೆಗಳಲ್ಲಿ ಇದು ಕಾಣೆಯಾಗಿತ್ತು. ಅವರ ವಾಸದ ಸ್ಥಳದ ಸುತ್ತ ನಾವು ಕೆಲವು ಸಮಯಗಳಿಂದ ಕಾರ್ಯನಿರ್ವಹಿಸುತ್ತಿದ್ದ ಕಾರಣ ನಮಗೆ ಆ ಮಕ್ಕಳ ಸಾಮಾಜಿಕ ಸಂದರ್ಭವು ಪರಿಚಿತವಾಗಿತ್ತು. ಅದು ನಗರದ ಪೋಲೀಸರ ಸಹಭಾಗಿತ್ವದಲ್ಲಿ ನಡೆಯುತ್ತಿದ್ದ ಒಂದು ಆಸಕ್ತಿದಾಯಕವಾದ ಯೋಜನೆಯಾಗಿದ್ದು, ಪೋಲೀಸ್ ಠಾಣೆಗಳ ಒಳಗೇ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಲಾಗಿತ್ತು. ವ್ಯಂಗ್ಯ ಎಂದರೆ, ಪೋಲೀಸ್ ಠಾಣೆ ಆವರಣದ ಸುರಕ್ಷಿತ ಸ್ಥಳಗಳಲ್ಲಿ ಈ ಶಿಕ್ಷಣ ಕೇಂದ್ರಗಳು ನಡೆಯುತ್ತಿದ್ದು, ವಯಸ್ಕರು ಮತ್ತು ಸಂಬಂಧಿಸಿದ ಮಕ್ಕಳ ಮಧ್ಯೆ ಭಾವನಾತ್ಮಕ ಸಂಪರ್ಕ ಮತ್ತು ಬಾಂಧವ್ಯ ಸೃಷ್ಟಿಯಾದದ್ದರಿಂದ ಅಲ್ಲಿ ಮಕ್ಕಳಿಗೆ ಮುಕ್ತ ಮತ್ತು ನಿರ್ಭೀತಿಯ ವಾತಾವರಣವನ್ನು ಒದಗಿಸುವುದಕ್ಕೆ ಸಾಧ್ಯವಾಗಿತ್ತು. ಅಲ್ಲಿ ನಿಯೋಜಿತರಾಗಿದ್ದ ನಮ್ಮ ಸಂಸ್ಥೆಯ ಶಿಕ್ಷಕರೂ ಕೂಡಾ ಕಾಳಜಿ ವಹಿಸುವವರಾಗಿ ಪಾತ್ರ ವಹಿಸಿದ್ದರು.

**ಸುರಕ್ಷಿತ ಸ್ಥಳಗಳು**

ಈ ಕೇಂದ್ರಗಳಲ್ಲಿ ಶಿಕ್ಷಕರು ವಿಶೇಷ ಕಾಳಜಿ ವಹಿಸಿ ಮಕ್ಕಳಿಗೆ ತಾವೂ ಶಾಲಾ ವ್ಯವಸ್ಥೆಯ ಜೊತೆಗೆ ಒಂದಾಗಿದ್ದೇವೆ ಎಂಬ ಭಾವನೆಯನ್ನು ತಂದುಕೊಡುತ್ತಿದ್ದರು. ಮತ್ತು ಪಾಲಕರಲ್ಲೂ ಅವರಿಗೂ ಇಲ್ಲಿ ಸ್ವಾಗತವಿದೆ ಮತ್ತು ಭಾಗವಹಿಸುವಿಕೆ ಇದೆ ಎಂಬ ಭಾವನೆಯನ್ನು ಉಂಟುಮಾಡುತ್ತಿದ್ದರು. ತಮ್ಮ ಭಾಷಿಕ ಮತ್ತು / ಅಥವಾ ಧಾರ್ಮಿಕ ಹಿನ್ನೆಲೆಗಳಿಂದಾಗಿ ಈ ಮಕ್ಕಳಲ್ಲಿ ಬಹುಸಂಖ್ಯಾತರು ಪರೋಕ್ಷ ಅಥವಾ ನೇರ ಸ್ವರೂಪದ ಸಾಮಾಜಿಕ ಪ್ರತ್ಯೇಕತೆಯನ್ನು ಎದುರಿಸುತ್ತಾರೆ. ನಗರದ ಈ ಭಾಗದಲ್ಲಿ ಅಪರಾಧ ಪ್ರಮಾಣ ಹೆಚ್ಚಿದ್ದು, ಕುಟುಂಬಗಳ ಹಿನ್ನೆಲೆಯ ಕಾರಣಕ್ಕೆ ಅವರಿಗೆ 'ಸಂಭವನೀಯ ಅಪರಾಧಿತನ'ದ (Potential criminality) ಕಳಂಕ ಅಂಟಿಕೊಂಡಿದೆ. ಆದರೆ ಇಲ್ಲಿಗೆ ಬರುವ ಮಕ್ಕಳು ಕಲಿಯುವುದರಲ್ಲಿ ಉತ್ಸಾಹಿಗಳಾಗಿದ್ದರು ಮತ್ತು ತೀರ ವಿರಳವಾಗಿ ಗೈರುಹಾಜರಾಗುತ್ತಿದ್ದರು.

ಈ ನೆರೆಹೊರೆಯಲ್ಲಿ ಮಕ್ಕಳ ಜೊತೆಗಿನ ನಮ್ಮ ಕೆಲಸದ ಮೂಲಕ, ಕಲಿಕೆಯು ಪರಿಣಾಮಕಾರಿಯಾಗಿ ಆಗುವುದಕ್ಕೆ ಆತಂಕ ರಹಿತ, ಭಾವನಾತ್ಮಕವಾಗಿ ಸುರಕ್ಷಿತವಾದ ಮತ್ತು ಒಳಗೊಳ್ಳುವ ಗುಣ ಇರುವ ಜಾಗ ಪ್ರಧಾನವಾಗಿ ಬೇಕಾಗಿದೆ ಎಂಬುದನ್ನು ನಾವು ಅರಿತುಕೊಂಡೆವು. ಅಲ್ಲಿ ಮಕ್ಕಳಿಗೆ ತಮ್ಮನ್ನು ತಾವೇ ಭಯ ಮತ್ತು ಹಿಂಜರಿಕೆಗಳಿಲ್ಲದೆ ಅಭಿವ್ಯಕ್ತಿಸುವುದು ಸಾಧ್ಯವಾಗುತ್ತದೆ. ಆ ಕಾರಣವಾಗಿ, ಇದೇ ಬಗೆಯ ಬೆಂಬಲವನ್ನು ಅಕ್ಕಪಕ್ಕದ ಸರಕಾರಿ ಪ್ರಾಥಮಿಕ ಶಾಲೆಗಳಲ್ಲೂ ಒದಗಿಸುವಂತೆ ಸರಕಾರವು ನಮ್ಮನ್ನು ಸಂಪರ್ಕಿಸಿದಾಗ, ನಾವು ನಿಜಕ್ಕೂ ಸಂತೋಷಗೊಂಡಿದ್ದೆವು.

ನಮ್ಮ ಮೊದಲ ಮಾತುಕತೆಯ ಸಂದರ್ಭ, ಅಲ್ಲಿಯ ಸನ್ನಿವೇಶಗಳನ್ನು ಅರಿತ ಶಿಕ್ಷಕರು, ಅಂತಹ ಸಂಕೀರ್ಣ ಪರಿಸ್ಥಿತಿಯನ್ನು ನಿಭಾಯಿಸಲು ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸಿದ್ದರು. ಭಾಷೆಯ ಭಿನ್ನತೆಯ ಸುಳಿಯನ್ನು ಅರಿಯದೆ ಪಠ್ಯಪುಸ್ತಕವನ್ನು ಬೋಧಿಸುವುದು ಸರಿಯಾದ ಮಾರ್ಗವಲ್ಲ ಎಂಬುದು ಅವರಿಗೆ ತಿಳಿದಿತ್ತು. ಆದರೆ ಆ ಸುಳಿಯಿಂದ ಹೊರಬರುವುದು ಹೇಗೆ ಎಂಬುದು ಅವರಿಗೆ ತಿಳಿದಿರಲಿಲ್ಲ. ಮಕ್ಕಳು

ಇರುವ ಮಟ್ಟಕ್ಕೆ ಹೋಲಿಸಿದರೆ ಆ ಪಠ್ಯಗಳು ಅವರಿಗೆ ಎಟುಕಲಾರದಂತೆ ಇವೆ ಎಂದು ಅವರು ಹೇಳಿದರು. ಆದರೆ ತಾವು, ಮಕ್ಕಳ ಕಲಿಕೆಗಿಂತ ಪಠ್ಯ ವಿಷಯಗಳನ್ನು ಪೂರ್ತಿ–ಗೊಳಿಸುವುದನ್ನೇ (Completion of syllabus) ಆದ್ಯತೆಯಾ–ಗಿರಿಸಿಕೊಂಡ ಒಂದು ವ್ಯವಸ್ಥೆಯ ಭಾಗ ಎಂಬುದನ್ನು ಅವರು ತಿಳಿದುಕೊಂಡಿದ್ದರು. ತಾವು ಚಕ್ರದ ಹಲ್ಲುಗಳಷ್ಟೇ ಹೊರತು ಅದರ ಮೇಲೆ ಹಿಡಿತ ಇರುವವರಲ್ಲ ಎಂಬುದು ಅವರಿಗೆ ಸ್ಪಷ್ಟವಾಗಿತ್ತು. ಹೀಗೆ ಶಿಕ್ಷಕರಿಗೆ ಸ್ವಾಯತ್ತತೆ ಮತ್ತು ಇಚ್ಛಾಶಕ್ತಿಯ ಕೊರತೆಉಂಟಾಗಿ, ಅದು ಮಕ್ಕಳ ಮೇಲೆ ಪ್ರತಿಫಲನವಾಗಿ, ಅವರು ತಾವು ಅಸಮರ್ಥರು ಮತ್ತು ಕಲಿಯಲಾರದವರು ಎಂಬ ಭಾವನೆಗೆ ಒಳಗಾಗುತ್ತಿದ್ದರು. ತರಗತಿಗಳು ಖಾಲಿಖಾಲಿಯಾಗಿ, ಕಳೆಗುಂದಿ ಮತ್ತು ನಿರ್ವಹಣೆ ಇಲ್ಲದೆ ಸೊರಗುತ್ತಿದ್ದವು. ಮಕ್ಕಳು ನಿರಂತರ ಗೈರು ಹಾಜರಾಗುತ್ತಿದ್ದರು ಶಿಸ್ತನ್ನು ಜಾರಿಗೆ ತರುವುದು ಅಸಾಧ್ಯವೇ ಆತ್ತು.

**ಬದಲಾವಣೆಯ ಕರೆಗಂಟೆ**

**ತರಗತಿಗಳನ್ನು ರೂಪಿಸುವುದು**

ಆತ್ಮೀಯತೆ ಮತ್ತು ಬೆಂಬಲ ನೀಡುವಂತಹ ವಾತಾವರಣವು ಕಲಿಕೆಗೆ ಬೇಕಾದ ಪೂರ್ವನಿರ್ಧರಿತ ಅಂಶವಾಗಿವೆ. ಅಂತಹ ಒಂದು ಸ್ಥಳವನ್ನು ಸೃಷ್ಟಿಸುವುದೇ ಶಿಕ್ಷಕರು ಮುನ್ನಡೆಸಲಿರುವ ಬದಲಾವಣೆಯ ಪ್ರಯಾಣದ ಆರಂಭ ಬಿಂದು ಎಂದು ನಿರ್ಧರಿಸಲಾಯಿತು. ಮೊದಲ ಹೆಜ್ಜೆಯಾಗಿ ಶಿಕ್ಷಕರು ಮತ್ತು ಮಕ್ಕಳು ಜೊತೆ ಸೇರಿ ಅಕ್ಷರಶಃ ತರಗತಿ ಕೊಠಡಿಯನ್ನು ಶುಚಿಗೊಳಿಸುವುದಾಗಿತ್ತು. ಆಮೇಲೆ ಅವರು ತರಗತಿ ಕೊಠಡಿಯ ಗೋಡೆಗಳನ್ನು ನಳನಳಿಸುವಂತೆ ಮಾಡುವುದಕ್ಕೆ ಕೆಲವು ನಕ್ಷೆ ಮತ್ತು ಭಿತ್ತಿಪತ್ರಗಳ ತಯಾರಿಗೆ ಮುಂದಾದರು. ಪ್ರತಿ ಗುಂಪಿಗೂ ಒಂದು ಕೆಲಸವನ್ನು ನಿಗದಿಪಡಿಸಲಾಯಿತು–ಒಂದು ಗುಂಪು ತರಗತಿಯ ನಿಯಮಗಳನ್ನು ರೂಪಿಸುವ ಕೆಲಸ ಮಾಡಿತು. ಇನ್ನೊಂದು ಗುಂಪು ಭಾವನೆಗಳ ಪಟ್ಟಿಯ ಕೋಷ್ಟಕ (Emotion-mapping chart) ರೂಪಿಸಿತು. ಮೂರನೆಯ ಒಂದು ಗುಂಪು ಅಂಕೆ ಸಂಖ್ಯೆಗಳ ನಕ್ಷೆ ತಯಾರಿ ನಡೆಸಿತು. ಮಕ್ಕಳು ಕಾಗದದ ಫಲಕಗಳ ಮೇಲೆ ತಮ್ಮದೇ ಚಿತ್ರಗಳನ್ನು ರಚಿಸಿದರು ಮತ್ತು ಆ ಚಿತ್ರಗಳ ಕೆಳಗೆ ತಮಗೆ ಇಷ್ಟವಾಗುವ ಮತ್ತು ಇಷ್ಟವಾಗದ ವಿಷಯಗಳ ಕುರಿತು ಪುಟ್ಟ ಟಿಪ್ಪಣಿಗಳನ್ನು ಬರೆದರು. ತಕ್ಷಣವೇ ಅವರ ತರಗತಿಗಳು ವರ್ಣಮಯವಾಗಿಯೂ ಆಕರ್ಷಕವಾಗಿಯೂ ಕಾಣತೊಡಗಿದವು: ತಮ್ಮದೇ ಕೈಗೆಲಸದ ಕೃತಿಗಳು ಗೋಡೆಗಳ ಮೇಲೆ ಇರುವುದನ್ನು ಕಂಡು ಅವರಲ್ಲಿ ಹೆಮ್ಮೆ ಮತ್ತು ನಾವೂ ಇಲ್ಲಿಗೆ ಸೇರಿದವರು ಎಂಬ ಭಾವನೆ ಮೊಳಕೆ ಒಡೆಯಿತು.

ಅಲ್ಲದೆ, ಅದೇ ಮೊದಲ ಬಾರಿಗೆ ಅವರೆಲ್ಲ ಜೊತೆಗೆ ಕುಳಿತಿದ್ದರು ಶಿಕ್ಷಕರ ಜೊತೆಗೆ ಗುಂಪುಗಳಾಗಿ ಸುತ್ತ ಕುಳಿತು ಕೆಲಸ ಮಾಡಿದ್ದರು. ನಕ್ಷೆ ಮತ್ತು ಭಿತ್ತಿಪತ್ರಗಳ ತಯಾರಿಯ ಕೆಲಸದ ಮಧ್ಯೆ ಪರಸ್ಪರ ಅನೌಪಚಾರಿಕವಾಗಿ ಮಾತುಕತೆಯಾಡಿದರು, ಶಿಕ್ಷಕರ ಜೊತೆಗೂ ಹರಟಿದರು. ಹೀಗೆ ದೈಹಿಕವಾಗಿ ಮತ್ತು ಭಾವನಾತ್ಮಕವಾಗಿ ಶಿಕ್ಷಕರ ಜೊತೆ ಹತ್ತಿರವಾಗಿ ಇರುವ ಅವಕಾಶವು ಮಕ್ಕಳಿಗೆ ನಿರುಮ್ಮಳವಾಗುವುದಕ್ಕೆ ಮತ್ತು ಮುಕ್ತವಾಗಿರುವುದಕ್ಕೆ ಸಹಾಯ ಮಾಡಿತು. ಅವರು ಚುರುಕಾಗಿದ್ದರು, ಕ್ರಿಯಾಶೀಲವಾಗಿದ್ದರು ಮತ್ತು ಉತ್ಸುಕತೆಯಿಂದ ಇದ್ದರು. ಹಾಗಿದ್ದೂ ಆರಂಭದಲ್ಲಿ ಶಿಕ್ಷಕರು ಆತಂಕಪಟ್ಟಂತೆ ಅಲ್ಲಿ ಶಿಸ್ತಿನ ಕೊರತೆ ಉಂಟಾಗಿಲ್ಲ. ಈ ಅನುಭವದ ನಂತರ ಅವರು ಸಾಲುಗಳಲ್ಲಿ ಕೂರುವ ತಮ್ಮ ಮಾಮೂಲು ವಿಧಾನಕ್ಕೆ ಹಿಂದಿರುಗಿ, ತಮ್ಮ ಹಳೆಯ ಔಪಚಾರಿಕ ಸಂವಹನದ ಕ್ರಮಗಳನ್ನೇ ಅನುಸರಿಸಿದರು. ಆದರೆ ಈ ಸಣ್ಣ ಚಟುವಟಿಕೆ ತರಗತಿಯ ವಾತಾವರಣದಲ್ಲಿ ಒಂದು ಸೂಕ್ಷ್ಮ ಬದಲಾವಣೆಯನ್ನು ತಂದಿತ್ತು.



**ಸಂವಾದದ ಮೂಲಕ ಪರಸ್ಪರ ವಿನಿಮಯ**

ಆ ಉತ್ತಮವಾದ ಆರಂಭವನ್ನು ಮುಂದುವರೆಸಲು, ಸಂವಹನದ ಅಡೆತಡೆಗಳನ್ನು ತೊಡೆದುಹಾಕುವಂಥ ಕೆಲವು ಚಟುವಟಿಕೆಗಳನ್ನು ಪರಿಚಯಿಸುವುದು ಅಗತ್ಯವಾಗಿತ್ತು. ಶಾಲೆಗಳು ಸಾಂಪ್ರದಾಯಿ–ಕತೆಯ ಸ್ಥಳಗಳೂ ಆಗಿರುವ ಕಾರಣ, ಚಟುವಟಿಕೆಗಳು ಅವರ ದಿನನಿತ್ಯದ ಬೋಧನಾ ಪ್ರಕ್ರಿಯೆಯ ಭಾಗವಾಗಿ ಇರಬೇಕಿತ್ತು. ಮೌಖಿಕ ಭಾಷಾ ಬೆಳವಣಿಗೆ (Oral language development) ಯನ್ನು ಇದಕ್ಕೆ ಬಹಳ ಸುಲಭದ ಒಂದು ದಾರಿ ಎಂದು ನಾವು ಭಾವಿಸಿದೆವು.

ಪಠ್ಯಕ್ರಮದೊಳಗೆ ಇದರ ಪ್ರಸ್ತಾಪವಿದ್ದರೂ, ಶಾಲೆಗಳಲ್ಲಿ ಮಾತ್ರ ಶಿಕ್ಷಕರು ಉಪೇಕ್ಷಿಸಿ ಬಿಡುವ, ಬಹಳ ಮುಖ್ಯವಾದ ಒಂದು ಕ್ಷೇತ್ರ ಇದು. ವಾಕ್ಪಟುತ್ವವು (Oracy) ಸಾಕ್ಷರತೆಗೆ ಅಡಿಪಾಯ ಎಂಬುದನ್ನು ಸಾರ್ವತ್ರಿಕವಾಗಿ ಮನ್ನಿಸಿರುವಾಗಲೂ, ಪ್ರಾಥಮಿಕ ಶಾಲೆಗಳಲ್ಲಿ ಓದುವುದು ಮತ್ತು ಬರೆಯುವುದಕ್ಕೆ ಪ್ರತ್ಯೇಕ ಪ್ರಾಮುಖ್ಯತೆ ನೀಡಿ ಭಾಷೆಯ ಮಾತಿನ ರೂಪದ ಜೊತೆಗೆ ಸಂಬಂಧವೇ ಇಲ್ಲದಂತೆ ನೋಡುವುದು ಸಾಮಾನ್ಯವಾಗಿದೆ.

ಭಾಷಾ ಬೆಳವಣಿಗೆಗೆ ಸಂಭಾಷಣೆಗಳು ಕೇಂದ್ರ ಬಿಂದುವಾಗಿವೆ – ಚಿಂತನೆ ಮತ್ತು ಆಲೋಚನೆಗಳ ವಿನಿಮಯ, ಬೇರೆಯವರ ಮಾತನ್ನು ಆಲಿಸಿ ಅವರ ಭಾವನೆಗಳನ್ನು ತಿಳಿಯುವುದು ಮತ್ತು ಅವರ ಅನುಭವಗಳನ್ನು ತಿಳಿಯುವುದು– ಇವು ಕೂಡಾ ಸಾಮಾಜಿಕವಾಗಿ ಮತ್ತು ಭಾವನಾತ್ಮಕವಾಗಿ ಮನಸ್ಸನ್ನು ಸಮೃದ್ಧಗೊಳಿಸುವ ಪ್ರಕ್ರಿಯೆಗಳೇ ಆಗಿವೆ. ಮಕ್ಕಳು ಮತ್ತು ಶಿಕ್ಷಕರು ಪರಸ್ಪರ ಸಂಭಾಷಣೆಗಳ ಮೂಲಕ, ಒಬ್ಬರನ್ನೊಬ್ಬರು ಇನ್ನೂ ಉತ್ತಮವಾಗಿ ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಆದರೆ ಮಕ್ಕಳ ಹಿಂಜರಿಕೆಯನ್ನು ತೊಡೆದುಹಾಕುವಂತಹ ಮತ್ತು ಮಕ್ಕಳು ಕೇವಲ ಪ್ರಶ್ನೆಗೆ ಉತ್ತರಿಸುವುದನ್ನು ಮೀರಿ ನಿಜವಾಗಿಯೂ ಮುಕ್ತವಾದ ಮಾತುಕತೆ ನಡೆಸುವಂತಹ ಒಂದು ಪ್ರಾಮಾಣಿಕ ಸಂಭಾಷಣೆಯನ್ನು ಕೈಗೊಳ್ಳುವುದಕ್ಕೆ ಶಿಕ್ಷಕರು ಅಭ್ಯಾಸ ಮಾಡಬೇಕಿದೆ. ಮಾತನಾಡುವುದು ಕಲಿಕೆಯ ಬಹಳ ಮುಖ್ಯವಾದ ಒಂದು ಮಾಧ್ಯಮವಾಗಿದ್ದು, ಆದರೆ ಸಾಂಪ್ರದಾಯಿಕ ಉಪದೇಶಾತ್ಮಕ ವಿಧಾನದಲ್ಲಿ (Traditional didactic mode of teaching) ತರಗತಿಯ ಮಾತು ಶಿಕ್ಷಕರಿಂದಲೇ ನಿಯಂತ್ರಿಸಲ್ಪಡುತ್ತದೆ. ಮಕ್ಕಳಿಗೆ ಪ್ರತಿಕ್ರಿಯಿಸುವ ಅವಕಾಶವನ್ನು ಬಹಳ ವಿರಳವಾಗಿ, ಶಿಕ್ಷಕರ ಹಾಡಿಗೆ ಧ್ವನಿ ಕೊಡುವ ರೀತಿಯಲ್ಲಿ,

ಅಥವಾ ಪುನರಾವರ್ತನೆಯ ರೀತಿಯಲ್ಲಿ, ಅಥವಾ ಒಂದೇ ಪದದಲ್ಲಿ ಉತ್ತರಿಸುವ ರೀತಿಯಲ್ಲಿ ನೀಡಲಾಗುತ್ತದೆ. ಇದರಿಂದ ಮಕ್ಕಳು ತಟಸ್ಥವಾಗಿ ಕಲಿಯುವ ವಾತಾವರಣಕ್ಕೆ ಯಾಂತ್ರಿಕವಾಗಿ ಬದ್ಧರಾಗುತ್ತಾರೆ. ಅದು ಅವರ ಪ್ರೇರಣೆ ಮತ್ತು ಸಾಧನೆಯ ಮೇಲೆ ವ್ಯತಿರಿಕ್ತ ಪರಿಣಾಮಗಳನ್ನು ಬೀರುತ್ತದೆ.

**ನಿಜ ಜೀವನದ ಉದಾಹರಣೆಗಳು**

**ಪ್ರಕರಣ ಅಧ್ಯಯನ 1**

ನಾವು ಜೊತೆಯಾಗಿ ಕೆಲಸ ಮಾಡುತ್ತಿದ್ದ ನಂದಿತಾ ಎಂಬ ಓರ್ವ ಶಿಕ್ಷಕಿಯು, 3ನೇ ತರಗತಿಯ ಮಕ್ಕಳಿಗೆ ಸಂಭಾಷಣಾ ವಿಧಾನದ ತರಗತಿಯನ್ನು ನಡೆಸಲು ನಿರ್ಧರಿಸಿದಾಗ, ಪ್ರಾರಂಭದಲ್ಲಿ ಅವರ 'ಶಿಕ್ಷಕ ಧ್ವನಿ'ಯನ್ನು ಬಿಟ್ಟುಬಿಡುವುದಕ್ಕೆ ಮತ್ತು ಮಕ್ಕಳ ಜೊತೆ ಸಂಭಾಷಣೆಯ ಶೈಲಿಯಲ್ಲಿ ಮಾತುಕತೆಯಾಡುವುದಕ್ಕೆ ಕಷ್ಟಪಟ್ಟರು. ಆಗ ಅವರು ಒಂದು ಸರಳ ಚಟುವಟಿಕೆಯ ಕುರಿತು ಯೋಚಿಸಿದರು.

ನಂದಿತಾ ಕೆಲವು ಚೀಟಿಗಳನ್ನು ತಯಾರಿಸಿ, ಅದರಲ್ಲಿ ಉರುಟುಕಲ್ಲು, ಅಂಗಡಿ, ಸಿಹಿತಿನಿಸು, ಬೀದಿ ಇತ್ಯಾದಿ ಸಂಭಾಷಣೆಗಾಗಿ ಮನಸ್ಸಿಗೆ ತೋಚಿದ ಕೆಲವು ವಿಷಯಗಳನ್ನು ಬರೆದರು. ಆಮೇಲೆ ಮಕ್ಕಳನ್ನು ಜೋಡಿಗಳಾಗಿ ಮುಂದೆ ಬರುವಂತೆ ತಿಳಿಸಿ ಒಂದು ಚೀಟಿಯನ್ನು ಎತ್ತಿಕೊಳ್ಳಲು ಸೂಚಿಸಿದರು. ಜೊತೆಗಾರನ/ಳ ಜೊತೆಗೆ ಅವರು ಆ ವಿಷಯದ ಬಗ್ಗೆ ಚರ್ಚಿಸಿ, ನಂತರ ತರಗತಿಯನ್ನು ಉದ್ದೇಶಿಸಿ ಅದರ ಕುರಿತು ಮಾತನಾಡಬೇಕಿತ್ತು. ಆರಂಭದಲ್ಲಿ ತಮ್ಮ ಮಾತಿನ ವಿಧಾನವನ್ನು ಬದಲಾಯಿಸಿಕೊಳ್ಳಲು ಮಕ್ಕಳಿಗೂ ಸಮಸ್ಯೆ-ಯಾಯಿತು – ಅವರಿಗೆ ಕಸಿವಿಸಿಯಾಗಿ, ಅದೇ ಅವರ ತರಗತಿಯೊಳಗೆ ಬಳಸುವ ಔಪಚಾರಿಕವಾದ ಭಾಷೆಯಲ್ಲಿಯೇ ಮಾತಾಡಿದರು. ಆದರೆ ಯಾವುದೋ ಒಂದು ಮಗು ಈ ವಿನ್ಯಾಸವನ್ನು ಒಡೆದು, ತನ್ನ ಮಾವನಿಗೆ ಒಂದು ಆಲೂ ಚಾಟ್ ಶಾಪಿದೆ ಎಂದ ತಕ್ಷಣ, ಅಡೆತಡೆಗಳು ಮುರಿದು ಬಿದ್ದವು. ಮತ್ತು ಪ್ರತಿಯೊಬ್ಬರೂ ಸಹಜವಾಗಿ ಸ್ಪಂದಿಸುವುದಕ್ಕೂ, ಸಂಭಾಷಿಸುವುದಕ್ಕೂ ತೊಡಗಿದರು.

ತರಗತಿ ಕೊಠಡಿಯ ಒಳಗಿನ ವಾತಾವರಣವು ಸುಲಭಗ್ರಾಹ್ಯವಾಗಿ ಬದಲಾಯಿತು ಮತ್ತು ಮಕ್ಕಳು ಚಟುವಟಿಕೆಯ ಒಳಗೆ ಸಹಜವಾಗಿ ತಲ್ಲೀನರಾದರು. ಆ ಚಟುವಟಿಕೆಯನ್ನು ಮುಗಿಸುವುದು ಅವರಿಗೆ ಬೇಕಾಗಿರಲಿಲ್ಲ. ಮಾಹಿತಿಯ ಹರಿವು ಏಕಮುಖವಾಗಿರಲಿಲ್ಲ. ಅದು ಮಕ್ಕಳ ಕಡೆಯಿಂದಲೂ, ಅವರ ಜೀವಂತ ಅನುಭವಗಳನ್ನು ಆಧರಿಸಿ, ಹರಿದು ಬಂದಿತು. ನಂತರ, ಈ ಸರಳ ಚಟುವಟಿಕೆಯಿಂದ ಮಕ್ಕಳ ಖಾಸಗಿ ಬದುಕಿನ ಕುರಿತು ಬಹಳ ತಿಳಿದುಕೊಂಡೆ ಎಂದು ನಂದಿತಾ ಹೇಳಿದರು. ಆವರೆಗೆ ಮಕ್ಕಳೊಂದಿಗೆ ತಿಂಗಳುಗಟ್ಟಲೆ ಕಳೆದಿದ್ದರೂ ಈ ವಿಷಯಗಳು ಒಂದೂ ಅವರಿಗೆ ತಿಳಿದಿರಲಿಲ್ಲ. ಹೀಗೆ, ಪ್ರಾಮಾಣಿಕ ಮಾತು ಎಂಬುದು ಭಾಷೆಯ ಬೆಳವಣಿಗೆಗೆ ಮಾತ್ರವಲ್ಲದೆ, ಶಿಕ್ಷಕರಿಗೆ ಮಕ್ಕಳ ಆಸಕ್ತಿಗಳನ್ನುಮತ್ತು ಸಾಮಾಜಿಕ ಸಂದರ್ಭಗಳನ್ನು ಮತ್ತಷ್ಟು ಉತ್ತಮವಾಗಿ ಅರ್ಥೈಸುವುದಕ್ಕೆ ಕೂಡಾ ಬಹಳ ಮುಖ್ಯವಾದ ಸಾಧನವಾಗಿದೆ.



**ಪ್ರಕರಣ ಅಧ್ಯಯನ 2**

ಓದುವುದು ಬರೆಯುವುದರ ಮಹತ್ವವನ್ನು ನಿರ್ಲಕ್ಷಿಸುವುದು ಅಸಾಧ್ಯವಾದ ಕಾರಣ, ನಂದಿತಾ ಅವರು ಬರವಣಿಗೆಗೆ ಸಂಬಂಧಿಸಿ ಭಿನ್ನವಾದ ಒಂದು ವಿಧಾನವನ್ನು ಪ್ರಯೋಗಿಸುವುದಕ್ಕೆ ನಿರ್ಧರಿಸಿದರು: ಮಕ್ಕಳು ತಾವು ಬರೆಯುವ ರೇಖಾಚಿತ್ರಗಳ ವಿಸ್ತರಣೆಯಾಗಿ ವಸ್ತು ವಿಷಯಗಳ ಕುರಿತಾಗಿ ಬರೆಯುವಂತೆ ಮಕ್ಕಳನ್ನು ಪ್ರೇರೇಪಿಸುವ ವಿಧಾನ ಅದು. ಮೊದಲಿಗೆ ಅವರ ಮನಸ್ಸಿಗೆ ಬರುವ ವಿಷಯವನ್ನು ಚಿತ್ರಿಸುವಂತೆ ಹೇಳಲಾಗುತ್ತಿತ್ತು. ನಂತರ ಚಿತ್ರಗಳನ್ನು ಬರೆದು ಮುಗಿಸಿದ ಮೇಲೆ, ಆಕೆ ಅವರನ್ನು ತಮ್ಮ ಚಿತ್ರಗಳ ಬಗ್ಗೆ ಮಾತನಾಡುವಂತೆ ಕೇಳುತ್ತಿದ್ದರು. ಅವರು ಆ ವಸ್ತುವಿಷಯವನ್ನು ಯಾಕೆ ಆಯ್ಕೆ ಮಾಡಿದಿರಿ ಎಂದು ಕೇಳುತ್ತಿದ್ದರು. ಈ ಪ್ರಶ್ನೆ ಮಕ್ಕಳನ್ನು ಯೋಚನೆಗೆ ಹಚ್ಚುತ್ತಿತ್ತು. ಈ ಪ್ರಕ್ರಿಯೆಯನ್ನು ಅವರು ಪ್ರಶ್ನೆಗಳನ್ನು ಕೇಳುತ್ತಾ ಮುಂದಕ್ಕೊಯ್ಯುತ್ತಿದ್ದರು.

ಆ ನಂತರ, ಆಕೆ ನೀವು ಚರ್ಚಿಸಿದ ವಿಷಯಗಳು ಏನೇ ಇದ್ದರೂ ಬರೆದುಬಿಡಿ ಎಂದು ಅವರನ್ನು ಕೇಳಿದರು. ಆದರೆ ಬಹುತೇಕ ಮಕ್ಕಳು ಒಂದು ಮನೆ, ಅದರ ಹಿಂಭಾಗಕ್ಕೆ ಪರ್ವತ ಶ್ರೇಣಿ ಮತ್ತು ಆಕಾಶದಲ್ಲಿ ಸೂರ್ಯ ಹೀಗೆ ಮಾಮೂಲಾದ ವಿಷಯಗಳನ್ನೇ ಚಿತ್ರಿಸುತ್ತಿದ್ದು, ರೂಢಿಯ ಚೌಕಟ್ಟಿನಿಂದ ಮುರಿಯುವುದು ಸಾಹಸದ ಕೆಲಸವೇ ಆಗಿತ್ತು. ಆದರೆ ಕೆಲವರು ಸಹಜತೆಯನ್ನು ಪ್ರದರ್ಶಿಸಿದರು. ಜಲಪಾತದ ಚಿತ್ರವನ್ನು ಬರೆದಿದ್ದ ಒಂದು ಮಗು, ಶಿಕ್ಷಕಿಯ ಹತ್ತಿರ ಬಂದು, ತಂದೆ ಹೇಗೆ ಅವಳನ್ನು ಜಲಪಾತ ನೋಡುವುದಕ್ಕೆ ಕರೆದುಕೊಂಡು ಹೋಗಿದ್ದ ಎಂದು ಹೇಳಿತು. ಗೂಬೆಯ ಚಿತ್ರವನ್ನು ಬರೆದಿದ್ದ ಇನ್ನೊಂದು ಮಗು ಗೂಬೆಯೇ ಎಲ್ಲಕ್ಕಿಂತ ಸುಂದರವಾದ ಹಕ್ಕಿ ಎಂದು ಶಿಕ್ಷಕಿಯ ಬಳಿ ಹೇಳಿತು. ಮತ್ತೊಂದು ಮಗು ಒಬ್ಬ ವ್ಯಕ್ತಿ ಹಸುವೊಂದನ್ನು ಎಳೆದೊಯ್ಯುವ ಚಿತ್ರ ಬರೆದಿತ್ತು. ಆ ದೃಶ್ಯವನ್ನು ತನ್ನ ಮನೆಯ ಬಳಿ ನೋಡಿದ್ದಾಗಿ ಮಗು ಹೇಳಿತ್ತು.

ಎಲ್ಲಾ ಮಕ್ಕಳೂ ಶಾಲೆಯ ಭಾಷೆಯ ವಿಷಯದಲ್ಲಿ ಸಮಸ್ಯೆಯನ್ನು ಎದುರಿಸುತ್ತಿದ್ದರು. ತಾನು ಕೈಗೊಂಡ ಸರಳವಾದ ಚಟುವಟಿಕೆ ಹೇಗೆ ಎಷ್ಟೊಂದು ಭಾಷೆಯನ್ನು ಉತ್ಪಾದಿಸಿತು ಮತ್ತು ಆ ಎಲ್ಲಾ ಮಕ್ಕಳಿಗೂ ತಮ್ಮ ಭಯ ಮತ್ತು ಹಿಂಜರಿಕೆಯನ್ನು ತೊರೆಯಲು ಪ್ರೇರೇಪಿಸಿ ಬರವಣಿಗೆಯಲ್ಲಿ ತೊಡಗುವುದಕ್ಕೆ ಸ್ಫೂರ್ತಿ ಕೊಟ್ಟಿತು ಎಂದು ನಂದಿತಾರಿಗೆ ಆಶ್ಚರ್ಯವಾಯಿತು. ವಿಚಾರಗಳು ಅವರ ಒಳ ಮನಸ್ಸಿನ ಭಾವನೆ ಮತ್ತು ಅನುಭವಗಳೇ ಆಗಿದ್ದ ಕಾರಣ ಅದರ ಜೊತೆ ಸಂಬಂಧ ಏರ್ಪಟ್ಟು, ಬರವಣಿಗೆಯಲ್ಲಿ ತೊಡಗುವುದಕ್ಕೆ ಸಾಧ್ಯವಾಯಿತು.

**ಇಂಗ್ಲಿಷ್ ಕಲಿಕೆಯ ಭಯವನ್ನು ಮೀರುವುದು**

ಇಂಗ್ಲಿಷನ್ನು ಹೇಳಿಕೊಡುವುದು, ವಿಶೇಷವಾಗಿ ಇಂತಹ ಮಕ್ಕಳಿಗೆ ಹೇಗೆ ಎಂಬುವುದು ಶಿಕ್ಷಕರಿಗೆ ಬಹಳ ಸವಾಲಾಗಿ ಕಂಡ ಇನ್ನೊಂದು ಕ್ಷೇತ್ರವಾಗಿತ್ತು. ಭಾಷೆಯನ್ನು ಬಳಸುವುದರಲ್ಲಿ ಶಿಕ್ಷಕರ ಆತ್ಮವಿಶ್ವಾಸದ ಕೊರತೆ, ಜೊತೆಗೆ ಮಕ್ಕಳಿಗೆ ಇಂಗ್ಲಿಷ್ ಭಾಷೆಗೆ ತೆರೆದುಕೊಂಡ ಪ್ರಾಥಮಿಕ ಅನುಭವವೂ ಇಲ್ಲದಿರುವುದು, ಆ ಕಾರಣವಾಗಿ ಪಠ್ಯದ ಜೊತೆಗೆ ತೊಡಗಿಕೊಳ್ಳುವುದು ಸವಾಲಾಗಿತ್ತು. ಪಠ್ಯವೂ ಆ ಮಕ್ಕಳ ಸಾಮರ್ಥ್ಯಕ್ಕಿಂತ ಬಹಳವೇ ಮೇಲು-ಮಟ್ಟದಲ್ಲಿರುವುದು ಒಟ್ಟಾರೆಯಾಗಿ ಕ್ಲಿಷ್ಟತೆಯನ್ನು ಹೆಚ್ಚಿಸಿತ್ತು. ಈ ಬಗೆಯ ಅಂತರಗಳ ಕಾರಣವಾಗಿ, ಇಂಗ್ಲಿಷ್ ಕಲಿಯಬೇಕೆಂಬ ಬಯಕೆ ಇದ್ದಾಗಲೂ, ಅದು ಅವರ ಮನೋಭಿಲಾಷೆಗಳ ಪ್ರತೀಕವಾದ ಭಾಷೆಯೇ ಆಗಿದ್ದಾಗಲೂ, ಮಕ್ಕಳ ಮನಸ್ಸಿನಲ್ಲಿ ಇಂಗ್ಲಿಷ್ ಕುರಿತು ಭಯ ಹುಟ್ಟಿಕೊಂಡಿತ್ತು.

ಈ ಭಯವನ್ನು ಹೋಗಲಾಡಿಸುವುದಕ್ಕೆ, ಸಂಗೀತ ಮತ್ತು ಹಾಡುಗಳು ಒಂದು ತಂತ್ರವಾಗಿ ಪರಿಣಾಮ ಬೀರಬಹುದು ಎಂದು ನಾವು ಭಾವಿಸಿದೆವು. ಸಂಗೀತಕ್ಕೆ ಭಾಷೆಗಳ ಹಂಗಿಲ್ಲದ ಕಾರಣ ಅದು, ಒಂದು ಹೊಸ ಭಾಷೆಯನ್ನು ಕಲಿಸುವುದಕ್ಕೆ ಮತ್ತು ಕಲಿಯುವುದಕ್ಕೆ ಆನಂದದಾಯಕವಾದ ಒಂದು ದಾರಿಯಾಗಿದೆ. ಇಂಗ್ಲಿಷ್‌ನ ಅಭಿನಯ ಗೀತೆಗಳು, ಉದಾಹರಣೆಗೆ, 'When you are happy and you know it, clap your hands' ಅಥವಾ 'In the morning, in the morning, I brush my teeth everyday', ಹಾವಭಾವಯುಕ್ತವಾಗಿ ಹಾಡಿದಾಗ ಸುರಕ್ಷಿತತೆಯ, ಆತ್ಮೀಯತೆಯ ಮತ್ತು ಆಹ್ಲಾದಕರ ಸಾಂಗತ್ಯದ ವಾತಾವರಣವನ್ನು ಸೃಷ್ಟಿಸುವುದಕ್ಕೆ ನೆರವಾಗುತ್ತವೆ. ಶಿಶುಗೀತೆಗಳನ್ನು ಹಾಡುವಾಗ ಸಂಪೂರ್ಣ ದೈಹಿಕ ಪ್ರತಿಸ್ಪಂದನೆ (Total Physical Response - TPR) ತಂತ್ರದ ಬಳಕೆಯು ಮಕ್ಕಳಿಗೆ ಪ್ರಜ್ಞಾಪೂರ್ವಕ ಪ್ರಯತ್ನಗಳಿಲ್ಲದೆ ಹೊಸ ಪದಗಳನ್ನೂ ಮತ್ತು ಕೆಲವು ವಿಧದ ಭಾಷಾ ರಚನೆಗಳನ್ನೂ ಕಲಿಯುವುದಕ್ಕೆ ಸಹಾಯಮಾಡಿತು. ಮಕ್ಕಳಿಗೆ ದೈಹಿಕ ಕ್ರಿಯೆಗಳಿಂದಲೇ ಅರ್ಥವನ್ನು ಊಹಿಸಲಿಕ್ಕೆ ಸಾಧ್ಯವಾದ ಕಾರಣ ಯಾವುದೇ ತರ್ಜುಮೆ ಅಥವಾ ವಿವರಣೆ ಬೇಕಾಗಲಿಲ್ಲ. ಅದೇ ರೀತಿ ಹೇಳಿದ ಸೂಚನೆಗಳನ್ನೂ ಸುಲಭವಾಗಿ ಸಂಬಂಧೀಕರಿಸಿಕೊಳ್ಳಲು ಅವರಿಗೆ ಸಾಧ್ಯವಾಯಿತು. ತಮ್ಮ ವಿದ್ಯಾರ್ಥಿಗಳು ಕಲಿಸದಿದ್ದರೂ, ಮಿಂಚಿನಂತೆ ಎಷ್ಟೊಂದು ಇಂಗ್ಲಿಷ್ ಪದಗಳನ್ನು ಸುಸ್ಪಷ್ಟವಾಗಿ ತಿಳಿದುಕೊಂಡರು ಎಂದು ಶಿಕ್ಷಕರು ಖುಷಿಪಟ್ಟರು.

ಹೊಸ ಕಲಿಕೆ ಯಾವುದೇ ಇದ್ದರೂ ಅಂತರ್ಗತವಾಗುವುದಕ್ಕೆ, ಪುನರ್ಮನನ ಬಹಳ ಅಗತ್ಯವಾಗಿದೆ. ಹಾಗಾಗಿ ಟಿಪಿಆರ್ ಅನ್ನು ಅನುಸರಿಸಿ ಕೆಲವು ಆಟಗಳು ಮತ್ತು ಸಂರಚಿತ ಸಂಭಾಷಣೆಗಳ ತರಗತಿಗಳನ್ನು ಕೈಗೊಳ್ಳಲಾಗುತ್ತಿತ್ತು. ಆಗ ಈ ಹೊಸ ಪದಗಳು ಹಾಗೂ ಭಾಷಾ ರಚನೆಗಳನ್ನು ಬಳಸಲಾಗುತ್ತಿತ್ತು. ಉದಾಹರಣೆಗೆ, ಸೈಮನ್ ಹೇಳುತ್ತಾನೆ (Simon Says) ಆಟದಲ್ಲಿ, 'ಚಪ್ಪಾಳೆ ತಟ್ಟಿ, ಕಾಲುಗಳನ್ನು ಬಡಿಯಿರಿ, ಕಾಲುಗಳನ್ನು ಅಲುಗಾಡಿಸಿ'ಯಂತಹ (Clap your hands, stamp your feet, shake your leg) ಹೊಸ ಪದಗಳ ವಾಕ್ಯ ಭಾಗಗಳನ್ನು ಬಳಸಲಾಯಿತು. ಸಂಭಾಷಣೆಗಾಗಿ, 'ಮುಂಜಾನೆ ನೀನು ಏನು ಮಾಡುತ್ತೀಯಾ?' ಎಂಬಂತಹ ರಚನೆಗಳನ್ನು ಬಳಸಲಾಯಿತು. ಆಗ ಮಕ್ಕಳಿಗೆ ತಾವು ಕಲಿತ ಹಾಡಿನ ವಾಕ್ಯ ಭಾಗಗಳನ್ನು, ಉದಾಹರಣೆಗೆ, ನಾನು ಹಲ್ಲು ಉಜ್ಜುವೆ, ನಾನು ತಲೆ ಬಾಚುವೆ, ನಾನು ಸ್ನಾನ ಮಾಡುವೆ ('I brush my teeth, I comb my hair, I take my bath) ಮುಂತಾದುವನ್ನು ಸುಲಭವಾಗಿ ಬಳಸಲು ಸಾಧ್ಯವಾಯಿತು. ಶಿಶುಗೀತೆಗಳ ಪುನರಾವರ್ತನೆಯ ವಿನ್ಯಾಸದಲ್ಲಿ ಅದರ ಸಂರಚನೆಗೆ ಧಕ್ಕೆಯಾಗದಂತೆ ಪ್ರತಿಯೊಂದು ಸಾಲಿನಲ್ಲೂ ಕೆಲವು ಹೊಸ ಪದಗಳನ್ನು ಪರಿಚಯಿಸಲಾಯಿತು. ಇದು ಮಕ್ಕಳಿಗೆ ಭಾಷೆಯನ್ನು ಹಿಂಜರಿಕೆ ಇಲ್ಲದೆ ಆತ್ಮವಿಶ್ವಾಸದಿಂದ ಬಳಸುವುದನ್ನು ಸುಲಲಿತಗೊಳಿಸಿತು. ಪುನರಾವರ್ತಿತ ಸಾಲುಗಳ ಶಿಶುಗೀತೆಗಳು ಮಕ್ಕಳಿಗೆ ಅವರ ಭಾಷೆಯ ಬಗೆಗಿನ ಹಿಂಜರಿಕೆಗಳನ್ನು ಮೆಟ್ಟಿನಿಲ್ಲುವುದಕ್ಕೆ ಹೇಗೆ ಸಹಾಯ ಮಾಡಿತು ಎಂಬುದನ್ನು ಶಿಕ್ಷಕರು ಕಂಡುಕೊಂಡರು. ಮಕ್ಕಳು ನೋಡನೋಡುತ್ತಾ ದೃಶ್ಯ ಪದಗಳ (Sight vocabulary) ಬೆಳವಣಿಗೆಗೆ ಕೆಲವು ಮುಖ್ಯ ಪದಗಳನ್ನು 'ಪದ ಗೋಡೆ'ಯ (Word wall) ಮೇಲೆ ಬರೆಯಲಾಯಿತು. (Hands, feet, teeth, hair etc) ಶಿಶುಗೀತೆಗಳು ಮತ್ತು ಆಟಗಳು ಮಕ್ಕಳಿಗೆ ಇಂಗ್ಲಿಷ್ ಭಾಷೆಯ ಧ್ವನಿಗಳ ಜೊತೆಗೆ, ಪದಗಳನ್ನು ಉಚ್ಛರಿಸುವ ಕ್ರಮಗಳಿಗೆ ಪರಿಚಿತರಾಗುವುದಕ್ಕೂ ಸಹಾಯ ಮಾಡಿದವು. ಇದು ಮುಂದಿನ ಹಂತಕ್ಕೆ ಉದಾಹರಣೆಗೆ ಅಕ್ಷರ ಮತ್ತು ಧ್ವನಿಯ ಸಂಬಂಧ (Letter-sound connections) ಇತ್ಯಾದಿ ವಿಚಾರದತ್ತ ಹೋಗುವುದಕ್ಕೆ ಉತ್ತಮ ಸಿದ್ಧತೆಯಾಯಿತು.

ಹೊಸ ಪದಗಳ ಕಲಿಕೆ, ಹೊಸ ವಾಕ್ಯ ರಚನೆಗಳ ಕಲಿಕೆ ಹಾಗೂ ಅಕ್ಷರ ಮತ್ತು ಧ್ವನಿಯ ಸಂಬಂಧದ ಕಲಿಕೆ– ಹೀಗೆ ಒಂದು ಭಾಷೆಯನ್ನು ಕಲಿಯುವ ಎಲ್ಲಾ ಮೂರು ಪ್ರಮುಖ ಅಂಶಗಳಲ್ಲೂ ಕೆಲವು ಆನಂದದಾಯಕ ವಿಧಾನಗಳ ಮೂಲಕ ಮಕ್ಕಳು ತೊಡಗಿಕೊಳ್ಳುವುದಕ್ಕೂ ಸಾಧ್ಯವಾಯಿತು. ಭಯ ಮತ್ತು ಆತಂಕಗಳ ನಿವಾರಣೆಯು ಪೂರಕವಾದ ಕಲಿಕಾ ಎಚ್ಚರದ ಸೃಷ್ಟಿಗೂ ನೆರವಾಯಿತು.

**ಕಲಿಕೆಯ ಕಡೆಗಿನ ಹೆಜ್ಜೆಗಳು**

ಇದು ಈಗಷ್ಟೇ ಪ್ರಾರಂಭವಾದ ಪ್ರಯತ್ನವೊಂದರ ಒಂದು ವಿವರಣಾತ್ಮಕ ಉದಾಹರಣೆಯಾಗಿದೆ. ಕಲಿಕೆಯನ್ನು ಮಕ್ಕಳ ಬದುಕಿಗೆ ಜೋಡಿಸಿದರೆ, ಸಹಾನುಭೂತಿಯಿಂದ, ಅರ್ಥೈಸುವಿಕೆ–ಯೊಂದಿಗೆ ಪ್ರಸ್ತುತಿಗೊಳಿಸಿದರೆ ಮತ್ತು ಈ ಪ್ರಕ್ರಿಯೆಯಲ್ಲಿ ಶಿಕ್ಷಕರು ಸಂಪೂರ್ಣವಾಗಿ ತೊಡಗಿಕೊಂಡರೆ, ಅವರೆಲ್ಲರೂ ಕಲಿಯುವುದು ಸಾಧ್ಯವಿದೆ ಎಂಬ ತತ್ವಗಳ ಮೇಲೆ ಇದರ ವಿನ್ಯಾಸವು ರೂಪುಗೊಂಡಿದೆ.

ದೇಶದ ವಿವಿಧ ಭೌಗೋಳಿಕ ಪ್ರದೇಶಗಳಲ್ಲಿ ಅಲಕ್ಷಿತ ಮಕ್ಕಳ ಕುರಿತ ಕಾರ್ಯನಿರ್ವಹಣೆ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ಕಳೆದ ಮೂವತ್ತು ವರ್ಷಗಳಿಂದ ನಾವು ಪಡೆದ ಕಾರ್ಯಾನುಭವಗಳಿಂದ– ಪೂರಕ ಕಲಿಕಾ ಕೇಂದ್ರಗಳು ಅಥವಾ ಸಮುದಾಯ ಆಧಾರಿತ ಕಲಿಕಾ ಶಿಬಿರಗಳ ಮೂಲಕ ಅಥವಾ ಸರಕಾರಿ ಶಾಲೆಗಳ ಔಪಚಾರಿಕ ತರಗತಿ ಸಂರಚನೆಗಳ ಒಳಗಿನ ಅನುಭವಗಳಿಂದ – ತರಗತಿಯ ಕಲಿಕಾ ಪ್ರಕ್ರಿಯೆಯಲ್ಲಿ ಬದಲಾವಣೆಗಳನ್ನು ಉಂಟುಮಾಡುವಂತಹ ಬೌದ್ಧಿಕ ತಂತ್ರಗಳನ್ನು ಬಳಸಿಕೊಂಡಿದ್ದೇವೆ.

**ಇದರ ವಿಶಿಷ್ಟ ಲಕ್ಷಣಗಳು ಈ ಮುಂದಿನಂತೆ ಇವೆ:**

- ಭಾಷಾ ಬೆಳವಣಿಗೆ ಮತ್ತು ಉನ್ನತ ಮಟ್ಟದ ಬೌದ್ಧಿಕ ಕೌಶಲಗಳು, ಸಾಮಾಜಿಕ ಮತ್ತು ಭಾವನಾತ್ಮಕ ಬೆಳವಣಿಗೆಯ ಒಂದು ಮುಖ್ಯ ಸಾಧನವಾಗಿ ತರಗತಿಯ ಸಂವಾದವನ್ನು ಉತ್ತೇಜಿಸುವುದು.

- ಶಿಕ್ಷಕರು ಮತ್ತು ಮಕ್ಕಳು ಜೊತೆಗೂಡಿ ತಯಾರಿಸಿದ ವಸ್ತು ಮತ್ತು ಪರಿಕರಗಳನ್ನು ಪ್ರದರ್ಶಿಸುವ ಮೂಲಕ ಸ್ವಂತಿಕೆಯನ್ನು ಬೆಳೆಸುವುದು ಮತ್ತು ಬೆಚ್ಚಗಿನ ಪೂರಕ ವಾತಾವರಣವನ್ನು ಸೃಷ್ಟಿಸುವುದು.

- ವಿವಿಧ ಇಂದ್ರಿಯ ಮೂಲದ ಕಲಿಕೆಗಳನ್ನು ಸಾಧ್ಯವಾಗಿಸಲು ಸಂಗೀತ, ಆಟಗಳು, ಕಥೆ ಮತ್ತು ಶಿಶುಗೀತೆಗಳನ್ನು ಪರಿಚಯಿಸುವುದು.

- ಈ ಚಟುವಟಿಕೆಗಳು ನಿರೀಕ್ಷಿತ ಕಲಿಕಾ ಫಲಗಳನ್ನು ಸಾಧಿಸುವುದಕ್ಕೆ ಸಹಾಯ ಮಾಡುತ್ತವೆ. ಜೊತೆಗೆ ಇವು ಮಕ್ಕಳಿಗೆ ಮತ್ತು ಶಿಕ್ಷಕರಿಗೆ ಇಬ್ಬರಿಗೂ ಸಂಪೂರ್ಣ ಸಂತೋಷವನ್ನೂ ಕೊಡುತ್ತದೆ. ಅವು ಭಯ ಮತ್ತು

ಆತಂಕವನ್ನು ಹೋಗಲಾಡಿಸುವುದಕ್ಕೂ ಸಹಾಯ ಮಾಡುತ್ತವೆ. ಜೊತೆಗೆ ವಿದ್ಯಾರ್ಥಿಗಳಲ್ಲಿ ಕಲಿಕೆಯ ಎಚ್ಚರವನ್ನೂ ಉಂಟುಮಾಡುತ್ತವೆ. ಒಂದು, ವಿಶಾಲ ಯೋಜನೆಯೊಳಗಿನ ಈ ಸರಳವಾದ ಪುಟ್ಟ ಹೆಜ್ಜೆಗಳು ಮಕ್ಕಳಲ್ಲಿ ಮತ್ತು ಶಿಕ್ಷಕರಲ್ಲಿ ಬಹಳ ಪ್ರಮುಖವಾದ ಎರಡು ಪರಿಣಾಮಗಳನ್ನು ಉಂಟುಮಾಡಿವೆ. ಮೊದಲನೆಯದಾಗಿ, ಪಠ್ಯಪುಸ್ತಕಗಳು ಇಲ್ಲದೆಯೂ ಅಪೇಕ್ಷಿತ ಕಲಿಕಾ ಫಲಿತಾಂಶವವನ್ನು ಪಡೆಯಲು ಸಾಧ್ಯ ಎಂಬುದನ್ನು ಶಿಕ್ಷಕರು ಅರಿತುಕೊಂಡರು. ಮಕ್ಕಳು ಸಾಧಿಸಿದ ಕೆಲವು ಕಲಿಕಾ ಫಲಗಳನ್ನು ಗಮನಿಸಿದಾಗ ಮತ್ತು ಅವರು ಆಗಷ್ಟೇ ಪ್ರಯತ್ನಿಸಿದ ಕಲಿಕಾ ಪ್ರಕ್ರಿಯೆಗಳ ಜೊತೆಗೆ ಪಟ್ಟಿಮಾಡಿದಾಗ, ಇದು ಅವರಲ್ಲಿ ಆಶ್ಚರ್ಯವನ್ನು ಉಂಟುಮಾಡಿತು. ಎರಡನೆಯದಾಗಿ, ಹೆಚ್ಚು ಮುಖ್ಯವಾದದ್ದು, ಅಂತಹ ಚಟುವಟಿಕೆಗಳು ಅವರ ತರಗತಿಯ ವಾತಾವರಣದಲ್ಲಿ ಉಂಟುಮಾಡಿದ ನಿಶ್ಚಿತವಾದ ಭಾವನಾತ್ಮಕ ಬದಲಾವಣೆ. ಇದೊಂದು ಸಣ್ಣ ಪ್ರಾರಂಭ ಎಂಬ ಬಗೆಗೆ ಅನುಮಾನವಿಲ್ಲ. ಎಲ್ಲಿಯವರೆಗೆ ವಿಶಾಲವಾದ ವ್ಯವಸ್ಥೆಯು ಬದಲಾಗದೆ ಉಳಿಯುವುದೋ ಅಲ್ಲಿಯವರೆಗೆ ನಂದಿತಾರಂತಹ ಶಿಕ್ಷಕರು ಸಾಗಬೇಕಾದ ಹಾದಿ ಸುದೀರ್ಘವಾದುದೇ ಆಗಿರುತ್ತದೆ. ಆದರೆ ಸಾವಿರ ಮೈಲಿಗಳ ಪ್ರಯಾಣ ಒಂದು ಹೆಜ್ಜೆಯಿಂದ ಆರಂಭವಾಗಿರುತ್ತದೆ. ನಂದಿತಾ ಅವರು ಈಗಾಗಲೇ ಇರಿಸಿರುವ ಹೆಜ್ಜೆಯಂತೆ.

---



**ಶುಭ್ರಾ ಚಟರ್ಜಿ** ಅವರು 1986ರಿಂದಲೇ ಶಾಲಾ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯನಿರತರಾಗಿದ್ದಾರೆ. ಅವರು ಶಿಕ್ಷಕಿಯಾಗಿ, ಪಠ್ಯಕ್ರಮ ಅಭಿವೃದ್ಧಿಪಡಿಸುವವರಾಗಿ, ಪೂರ್ವ ಪ್ರಾಥಮಿಕ ಮಕ್ಕಳ ಶಿಕ್ಷಣ ಪರಿಣಿತರಾಗಿ, ಶಿಕ್ಷಕರ ಶಿಕ್ಷಕರಾಗಿ ಮತ್ತು ಶಿಕ್ಷಕರ ತಯಾರಿ ಕಾರ್ಯಕ್ರಮಗಳ ವಿನ್ಯಾಸಗಾರರಾಗಿ ಕೆಲಸ ಮಾಡಿದ್ದಾರೆ. ಅವರು ವಿವಿಧ ಸಾಮಾಜಿಕ ಆರ್ಥಿಕ ಪರಿಸರಗಳಲ್ಲಿ ಕೆಲಸ ಮಾಡಿದ್ದು, ದೇಶಾದ್ಯಂತ ಶಿಕ್ಷಣದ ಗುಣಾತ್ಮಕತೆ ಮತ್ತು ಸಮತೆಯ ಕುರಿತು ಕ್ರಿಯಾಶೀಲವಾಗಿರುವ ಸಂಪನ್ಮೂಲ ಸಂಸ್ಥೆ 'ವಿಕ್ರಮಶಿಲಾ'ದ ಸ್ಥಾಪಕ ನಿರ್ದೇಶಕಿಯಾಗಿದ್ದಾರೆ. ಈ ಸಂಘಟನೆಯು ಗ್ರಾಮೀಣ ಭಾಗಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳು ನಡೆಸುವ ಪೂರ್ವ ಪ್ರಾಥಮಿಕ ಶಾಲಾ ಶಿಕ್ಷರಿಗೆ ಬೇಕಾದ ಬೆಂಬಲದ ಜೊತೆಗೆ ಮಕ್ಕಳಿಗೂ ಸೇವೆಯನ್ನು ಒದಗಿಸುವ ಮೂಲಕ ಕಾರ್ಯವನ್ನು ಆರಂಭಿಸಿದ್ದು, ಈಗ ಅದು ಭಾರತದ ಹಲವು ರಾಜ್ಯಗಳಲ್ಲಿ K-10 Spectrumನಡಿ ಕೆಲಸ ಮಾಡುತ್ತಿದೆ. ಇತ್ತೀಚೆಗೆ ಶುಭ್ರಾ ಚಟರ್ಜಿಯವರು ಆರಂಭಿಕ ಬಾಲ್ಯಕಾಲದ ಶಿಕ್ಷಣ (ECE) ಕುರಿತ ಪಠ್ಯಕ್ರಮವನ್ನು ಪುನರ್ ವಿನ್ಯಾಸಗೊಳಿಸುವುದಕ್ಕೆ ಪಶ್ಚಿಮ ಬಂಗಾಳ, ಜಮ್ಮು-ಕಾಶ್ಮೀರ, ಉತ್ತರ ಪ್ರದೇಶ ಮತ್ತು ಅಸ್ಸಾಂನ ಸಮಗ್ರ ಶಿಶು ಅಭಿವೃದ್ಧಿ ಸೇವಾ ಇಲಾಖೆಗೆ (ICDS system) ತಾಂತ್ರಿಕ ಪರಿಣತಿಯನ್ನು ಒದಗಿಸಿದ್ದಾರೆ. 'ಆರಂಭಿಕ ವರ್ಷಗಳಲ್ಲಿ ಭಾಷಾ ಕಲಿಕೆ'ಯು ಅವರ ನಿರಂತರ ಆಸಕ್ತಿಯ ಕ್ಷೇತ್ರವಾಗಿದೆ. ಅವರನ್ನು ಸಂಪರ್ಕಿಸುವ ಮೇಲ್ ಐಡಿ:
shubhra.chatterji@vikramshila.org

---

ಅನುವಾದ: **ದೇವಿಕ ಧರ್ಮಿಷ್ಟೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಹೆಣ್ಣುಮಕ್ಕಳ ಶಿಕ್ಷಣದಲ್ಲಿ ಮಿಷನ್ ಸಂಸ್ಥೆಗಳ ಪಾತ್ರ

ಸೃಜಿತಾ ಚಕ್ರವರ್ತಿ

ಎಲ್ಲರಿಗೂ ಶಿಕ್ಷಣವನ್ನು ಒದಗಿಸುವ ಸರಕಾರದ ದೃಢವಾದ ಪ್ರಯತ್ನದ ಹೊರತಾಗಿಯೂ, ಆರು ಮತ್ತು ಹದಿಮೂರು ವಯಸ್ಸಿನೊಳಗಿನ 11.9 ಮಿಲಿಯನ್ ಮಕ್ಕಳು ಶಾಲೆಯಿಂದ ಹೊರಗೆಯೇ ಉಳಿದಿದ್ದಾರೆ. ಇವರಲ್ಲಿ ಬಹುತೇಕ ಮಕ್ಕಳು ಅಭಿವೃದ್ಧಿಯ ಅಂಚಿನಲ್ಲಿರುವ ಸಮುದಾಯಕ್ಕೆ ಸೇರಿದವರು. ಇಂತಹ ಒಂದು ಪರಿಸ್ಥಿತಿಯು ಪೋಷಕರ ಮನೋಭಾವದಲ್ಲಿ ಆದ ಸ್ಥಿತ್ಯಂತರಗಳಿಂದಾಗಿ ಬದಲಾಗುತ್ತಿದ್ದರೂ, ಮುಸ್ಲಿಂ ಸಮುದಾಯದಲ್ಲಿ ಭೌಗೋಳಿಕ ಸಂಚಾರದ ನಿರ್ಬಂಧಗಳನ್ನು ಹೇರಲ್ಪಡುವ ಕಾರಣದಿಂದಾಗಿ ಆ ಸಮುದಾಯದ ಹೆಣ್ಣುಮಕ್ಕಳಿಗೆ ಶಿಕ್ಷಣದ ಅವಕಾಶಗಳು ಸಾಕಷ್ಟು ದೊರಕುತ್ತಿಲ್ಲ. ಶಿಕ್ಷಣದಿಂದ ದೊರಕುವ ಪ್ರಯೋಜನಗಳನ್ನು ಅರಿತುಕೊಂಡ ಮೇಲೆ, ಉದಾಹರಣೆಗೆ, ಹೆಣ್ಣು ಮಕ್ಕಳಿಗೆ ಉತ್ತಮ ಮದುವೆ ಸಂಬಂಧಗಳು ದೊರಕುವ ಭರವಸೆ ಮತ್ತು ಅದರ ಪರಿಣಾಮವಾಗಿ ಅವರ ಮುಂದಿನ ತಲೆಮಾರು ಸುಶಿಕ್ಷಿತರಾಗುವ ಹೆಚ್ಚಿನ ಅವಕಾಶಗಳು ಒದಗುವುದು, ಇವೆಲ್ಲವನ್ನೂ ಮನಗಂಡ ಪೋಷಕರು ಈಗ ಗುಣಮಟ್ಟದ ಶಿಕ್ಷಣಕ್ಕಾಗಿ ಒಂದಷ್ಟು ಹಣ ವ್ಯಯ ಮಾಡುವುದಕ್ಕೆ ಸಿದ್ಧವಾಗಿದ್ದಾರೆ. ಸಾರ್ವಜನಿಕ ಶಿಕ್ಷಣದ ಕಳಪೆ ಗುಣಮಟ್ಟದ ಕಾರಣದಿಂದಾಗಿ ಖಾಸಗಿ ಮಾರುಕಟ್ಟೆಯು ಬೆಳೆದು ನಿಲ್ಲುವುದಕ್ಕೆ ಕಾರಣವಾಗಿದ್ದು, ಅಲ್ಲಿ ಮಿಷನ್ಸ್ ಎಂದು ಕರೆಯಲ್ಪಡುವ ವಸತಿ ಸಹಿತ ಸಂಸ್ಥೆಗಳು ಹೆಣ್ಣುಮಕ್ಕಳ ಭೌಗೋಳಿಕ ಸಂಚಾರದ ಸಮಸ್ಯೆಗಳಿಗೆ ಪರಿಹಾರವನ್ನು ಮುಂದೆ ಇಟ್ಟಿವೆ.

ಖದಿಜತುಲ್ ಕುಬ್ರ ಗರ್ಲ್ಸ್ ಮಿಷನ್ (ಕೆಕೆಜಿಮ್) ಹೆಣ್ಣು ಮಕ್ಕಳಿಗೆ ಮಾತ್ರ ಶಿಕ್ಷಣ ಒದಗಿಸುವ ಅಂತಹ ಒಂದು ಸಂಸ್ಥೆ. ಆ ಸಂಸ್ಥೆ ಇಲ್ಲವಾಗಿದ್ದರೆ ಬಹುಶಃ ಬಹಳಷ್ಟು ಹೆಣ್ಣುಮಕ್ಕಳು ಶಾಲೆಯಿಂದ ದೂರವುಳಿಯುತ್ತಿದ್ದರು. ಎಲ್ಲವನ್ನು ಒಂದೇ ಸೂರಿನಡಿ ಒದಗಿಸುವ ಸಾಮರ್ಥ್ಯದಿಂದಾಗಿ ಕೆಕೆಜಿಎಂಯು ವಿಶಿಷ್ಟವೆನಿಸಿದೆ ಎಂದು ಅಲ್ಲಿನ ವಿದ್ಯಾರ್ಥಿಗಳು ಹೇಳುತ್ತಾರೆ. ಟ್ಯೂಷನ್, ಆಹಾರ ಮತ್ತು ವಸತಿಗಾಗಿ ಅತ್ಯಲ್ಪ ಮಾಸಿಕ ಶುಲ್ಕವನ್ನು ಪಡೆಯಲಾಗುತ್ತದೆ. ನಿಗದಿತ ಪಠ್ಯಕ್ರಮದ ಜೊತೆಗೆ ಕೆಕೆಜಿಎಂ ವಿದ್ಯಾರ್ಥಿಗಳ ಅನುಭವಗಳನ್ನು ಹೆಚ್ಚಿಸಲು ಡಿಜಿಟಲ್ ತಂತ್ರಾಂಶಗಳನ್ನು ಬಳಸಲು ಶ್ರಮಿಸುತ್ತಿದೆ. ಸ್ಕೈಪ್ ಮೂಲಕ ವರ್ಚುವಲ್ ಇಂಗ್ಲೀಷ್ ತರಗತಿಗಳನ್ನು ನಡೆಸುವುದಕ್ಕಾಗಿ ಅದು ಆ್ಯನ್ ಫೌಂಡೇಷನ್ ಎಂಬ ಲಾಭರಹಿತ ಸಂಸ್ಥೆಯ ಜೊತೆಗೆ ಒಡಂಬಡಿಕೆ ಮಾಡಿಕೊಂಡಿದೆ. ಫೌಂಡೇಷನ್‌ನ ಸ್ವಯಂಸೇವಕ ಬೋಧಕರು ಹುಡುಗಿಯರ ಉದ್ಯೋಗಾರ್ಹತೆ-ಯನ್ನು ಹೆಚ್ಚಿಸಲು ಗುಂಪಿನಲ್ಲಿ ಓದುವುದು, ಬರೆಯುವುದು ಮತ್ತು ಸಂಭಾಷಣಾ ತರಬೇತಿಯನ್ನು ಒಳಗೊಂಡ ತರಗತಿಗಳನ್ನು ನಡೆಸುತ್ತಾರೆ. ಬೋಧಕರೊಂದಿಗಿನ ನಿರಂತರ ಮಾತುಕತೆಯು ಹೊರಗಿನ ಪ್ರಪಂಚವನ್ನು ನೋಡಲು ಹುಡುಗಿಯರಿಗೆ ಕಿಟಕಿಯೊಂದನ್ನು ತೆರೆದು ಕೊಡುತ್ತಿದೆ ಮತ್ತು ಆ ಮೂಲಕ ಅವರ ತಿಳುವಳಿಕೆಯ ಪರಿಧಿಯನ್ನು ವಿಸ್ತರಿಸುತ್ತಿದೆ.

**ಖಾಸಗಿ ಮಿಷನ್‌ಗಳು ಯಾಕೆ ಇಷ್ಟು ಜನಪ್ರಿಯ?**

ಶಿಕ್ಷಣದ ಹಕ್ಕು (ಆರ್‌ಟಿಇ) ಕಾಯ್ದೆಯು ಶಾಲೆಯಿಂದ ಹೊರಗುಳಿಯುವ ಮಕ್ಕಳನ್ನು, ವಿಶೇಷವಾಗಿ 14 ವರ್ಷದೊಳಗಿನ ಮಕ್ಕಳ ಸಂಖ್ಯೆಯನ್ನು ಕಡಿಮೆಗೊಳಿಸುವ ಸಾಧನವಾಗಿದೆ. 2014ರಲ್ಲಿ, ಶೇಕಡಾ 6.4ರಷ್ಟು ಪ್ರಾಥಮಿಕ ಶಾಲಾ ವಯಸ್ಸಿನ ಮಕ್ಕಳು ಮತ್ತು ಶೇಕಡಾ 5.7ರಷ್ಟು ಪ್ರೌಢಶಾಲಾ ವಯಸ್ಸಿನ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದರು. ಎಲ್ಲಾ ಮಕ್ಕಳಿಗೂ ಶಾಲಾ ಅವಕಾಶವನ್ನು ಒದಗಿಸಿಕೊಡುವಲ್ಲಿ ಗಣನೀಯ ಪ್ರಗತಿ ಸಾಧ್ಯವಾಗಿದ್ದರೂ, ಜನಸಂಖ್ಯೆಯ ಭಾರೀ ಗಾತ್ರದ ಕಾರಣದಿಂದಾಗಿ ಈ ಎರಡೂ ಶೇಕಡಾವಾರು ಅಂಕೆಗಳನ್ನು ಕೂಡಿದಾಗ ಸುಮಾರು 11.9 ಮಿಲಿಯನ್ ಮಕ್ಕಳು (6ರಿಂದ 13 ವರ್ಷ) ಶಾಲೆಯಿಂದ ಹೊರಗುಳಿದಂತೆ ಆಗುತ್ತದೆ.[i]

ಶಾಲೆಯಿಂದ ಹೊರಗೆ ಉಳಿಯುವ ಪ್ರವೃತ್ತಿ ಮುಸ್ಲಿಂ ಮಕ್ಕಳಲ್ಲಿ ಗಣನೀಯವಾಗಿ ಚಾಲ್ತಿಯಲ್ಲಿದೆ. ಈ ಹೊರಗುಳಿಯುವಿಕೆಯ ಪ್ರಮಾಣವು ಎರಡೂ ವಯೋಮಾನದ ಗುಂಪಿನವರಲ್ಲೂ ಇತರೆ ಧಾರ್ಮಿಕ ಗುಂಪುಗಳ ಮಕ್ಕಳಲ್ಲಿ ಇರುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿದೆ. ಈ ಪ್ರಮಾಣವು ಕಿರಿಯ ಪ್ರಾಥಮಿಕ ವಯೋಮಾನದ ಮಕ್ಕಳಲ್ಲಿ ಶೇಕಡಾ 9.1 ಇದ್ದು, ರಾಷ್ಟ್ರೀಯ ಸರಾಸರಿಗಿಂತ ಬಹಳವೇ ಹೆಚ್ಚಾಗಿದೆ. ಶಿಕ್ಷಣದ ವೆಚ್ಚ, ಜೊತೆಗೆ ಕೆಲಸಕ್ಕೆ ಹೋಗಲಾರದೆ ಆದಾಯದಲ್ಲಿ ಆಗುವ ಕಡಿತದಂತಹ ಹಣಕಾಸಿನ ಹೊರೆ ಇದರಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದು, ಈ ವಿದ್ಯಾರ್ಥಿಗಳು ಅನಿವಾರ್ಯವಾಗಿ ಶಾಲೆಯಿಂದ ಹೊರಗುಳಿಯುವುದು ಸಾಮಾನ್ಯವಾಗಿದೆ.

ಚಾರಿತ್ರಿಕವಾಗಿ, ಹುಡುಗಿಯರ ಶಾಲೆ ತೊರೆಯುವ ಪ್ರವೃತ್ತಿಯ ದರವು ಹುಡುಗರಲ್ಲಿ ಇರುವುದಕ್ಕಿಂತಲೂ ಹೆಚ್ಚಿಗೆ ಇದೆ. ಈ ದರವು ಪ್ರಾಥಮಿಕ ಹಂತದಿಂದ ಮುಂದಕ್ಕೆ ಹೋದಂತೆ ಇನ್ನಷ್ಟು ಏರುತ್ತಾ ಹೋಗುತ್ತದೆ. ಆರ್ಥಿಕ ಮುಗ್ಗಟ್ಟಿನ ಜೊತೆಗೆ ಇತರೆ ಕೆಲವು ಅಂಶಗಳು ಹುಡುಗಿಯರ ಸಂದರ್ಭದಲ್ಲಿ ಅಸಮಾನ ಪರಿಣಾಮವನ್ನು ಬೀರುವುದು ಕಾಣುತ್ತದೆ. ಮುಸ್ಲಿಂ ನೆರೆಹೊರೆಯಲ್ಲಿ ಇತರರಿಗಿಂತ ಕಡಿಮೆ ಸಂಖ್ಯೆಯ ಶಾಲೆಗಳಿರುವುದು ಸಾಮಾನ್ಯವಾಗಿದೆ. ಹುಡುಗರು ತಾವು ಬಯಸಿದ ಶಿಕ್ಷಣವನ್ನು ಹುಡುಕುತ್ತಾ ದೂರದ ಊರಿಗೆ ಪ್ರಯಾಣಿಸಲು ಸಾಧ್ಯವಿದೆ. ಆದರೆ ಹೆಣ್ಣುಮಕ್ಕಳಿಗೆ ಇದು ಸಾಧ್ಯವಿಲ್ಲ. ಶಾಲೆಗಳಿಗೆ ಪ್ರವೇಶ ಸಾಧ್ಯವಿದ್ದಾಗಲೂ ಮೂಲ ಸೌಕರ್ಯಗಳ ಕೊರತೆ ಶಾಲೆಗಳಿಂದ ಹೊರಗುಳಿಯುವುದಕ್ಕೆ ಕಾರಣವಾಗುವುದೂ ಸಾಮಾನ್ಯವಾಗಿದೆ. ಗ್ರಾಮೀಣ ಭಾಗದ ಮೂರರಲ್ಲಿ ಒಂದರಷ್ಟು ಶಾಲೆಗಳಲ್ಲಿ ಹೆಣ್ಣುಮಕ್ಕಳಿಗೆ ಶೌಚಾಲಯಗಳೇ ಇರುವುದಿಲ್ಲ, ಶೌಚಾಲಯಗಳು ಇರುವ ಶಾಲೆಗಳಲ್ಲಿ ಕಾಲು ಭಾಗದಷ್ಟು ಶೌಚಾಲಯಗಳು ಬಳಕೆಗೆ ಯೋಗ್ಯವಾಗಿ ಇರುವುದಿಲ್ಲ.[ii]

ಶಾಲೆಗಳಿಗೆ ಪ್ರವೇಶ ದೊರಕುವುದರ ಆಚೆಗೂ ಈ ಸಮಸ್ಯೆಯು ಚಾಚಿಕೊಂಡಿದೆ. ಶಾಲೆಯ ಒಳಗಿನ ತಮ್ಮ ಕಲಿಕೆಗೆ ಪೂರಕವಾಗಿ ಹಣ ವ್ಯಯಿಸಬಲ್ಲ ವಿದ್ಯಾರ್ಥಿಗಳು ಸ್ಥಳೀಯ ಖಾಸಗಿ ಟ್ಯೂಷನ್ ತರಗತಿಗಳಿಗೆ ಗುಂಪುಗುಂಪಾಗಿ ಹೋಗುತ್ತಾರೆ. ಮುಸ್ಲಿಂ ಸಮುದಾಯ ಪ್ರಧಾನವಾಗಿರುವ ಪ್ರದೇಶಗಳಲ್ಲಿ ಶಾಲೆಗಳು ಇಲ್ಲದಿರುವ ಕಾರಣಕ್ಕೆ, ಖಾಸಗಿ ಟ್ಯೂಷನ್ ಬೋಧಕರೂ ಇರುವುದಿಲ್ಲ. ಈ ಕಾರಣಕ್ಕೆ ಈ ಸಮುದಾಯದಲ್ಲಿ ಸಾಮಾನ್ಯವಾಗಿ ಕಳಪೆ ಗುಣಮಟ್ಟದ ಶಿಕ್ಷಣವನ್ನು ಕಾಣುತ್ತೇವೆ. ಮತ್ತೆ, ಮುಸ್ಲಿಂ ಹುಡುಗರು ಖಾಸಗಿ ಬೋಧಕರನ್ನು ಹುಡುಕುತ್ತ ದೂರದ ಸ್ಥಳಗಳಿಗೆ ಪ್ರಯಾಣಿಸಲು ಸಾಧ್ಯವಾದರೆ, ಹೆಣ್ಣುಮಕ್ಕಳಿಗೆ ಭೌಗೋಳಿಕ ಚಲನೆಯ ಅವಕಾಶ ಅತಿ ಕಡಿಮೆ ಇರುತ್ತದೆ.

ಆದರೆ ಸದ್ಯ ಮುಖ್ಯವಾಗಿ ಪೋಷಕರ ಮನೋಭಾವದಲ್ಲಿನ ಬದಲಾವಣೆಯ ಕಾರಣದಿಂದ ಲಿಂಗ ಅಸಮಾನತೆಯು ಕಡಿಮೆಯಾಗುತ್ತಿದೆ. ಹೆಚ್ಚಿನ ಶಿಕ್ಷಣ ದೊರೆತರೆ ಹೆಣ್ಣುಮಕ್ಕಳ ಮದುವೆಯ ಸಂಭಾವ್ಯತೆ ಉತ್ತಮವಾಗುವುದು ಹಾಗೂ ಒಂದು ವೇಳೆ ಮದುವೆಯ ನಂತರ ವಿಧವೆಯರಾದರೆ ಅವರುಗಳು ಸ್ವತಂತ್ರರಾಗಿ ಬದುಕಲು ಸಹಾಯಕವಾಗುತ್ತದೆ ಎನ್ನುವ ದೃಷ್ಟಿಕೋನವು ಹೆಣ್ಣುಮಕ್ಕಳನ್ನು ವಿದ್ಯಾವಂತರನ್ನಾಗಿಸುವ ನಿಟ್ಟಿನಲ್ಲಿ ಉತ್ಸಾಹ ಕಂಡುಬರಲು ಕಾರಣವಾಗಿದೆ.[iii] ಪೋಷಕರು ಗುಣಮಟ್ಟದ ಶಿಕ್ಷಣಕ್ಕೆ ಹಣ ವ್ಯಯಿಸಲು ಮನಸ್ಸು ಮಾಡಿದ್ದಾರೆ ಮತ್ತು ಎಲ್ಲಿ ಸಾರ್ವಜನಿಕ ಶಾಲೆಗಳು ಕಡಿಮೆ ಇವೆಯೋ ಅಲ್ಲಿ ಖಾಸಗಿ ವ್ಯವಸ್ಥೆಯು ಹುಟ್ಟಿಕೊಳ್ಳುತ್ತಿದೆ. ಉದಾಹರಣೆಗೆ, ಪಶ್ಚಿಮ ಬಂಗಾಳದಲ್ಲಿ, ಉಚಿತ ಶಿಕ್ಷಣ ಕೊಡುವ ಸರಕಾರದ ಅತ್ಯುತ್ತಮ ಪ್ರಯತ್ನಗಳ ಹೊರತಾಗಿಯೂ, ಹಣ ಪಡೆದು ಶಿಕ್ಷಣ ನೀಡುವ ಮತ್ತು ಸರ್ಕಾರಿ ಶಾಲೆಗಳಲ್ಲಿರುವ ಶಿಕ್ಷಕರಿಗಿಂತ ಕಡಿಮೆ ಅರ್ಹತೆಯ ಶಿಕ್ಷಕರನ್ನು ಹೊಂದಿದ ಖಾಸಗಿ ಸಂಸ್ಥೆಗಳು ಅಥವಾ ಮಿಷನ್‌ಗಳು ಚಿಗುರೊಡೆದಿವೆ. ಈ ಸಂಸ್ಥೆಗಳು ಯಾವುದೇ ಶೈಕ್ಷಣಿಕ ಮಂಡಳಿಗಳ ಜೊತೆ ನೋಂದಣಿಯಾಗದೆ ಇರುವುದರಿಂದ ಅಲ್ಲಿ ಪರೀಕ್ಷೆಗಳನ್ನು ನಡೆಸುವುದು ಸಾಧ್ಯವಿಲ್ಲ. ವಿದ್ಯಾರ್ಥಿಗಳು ಹತ್ತಿರದ ನೋಂದಾಯಿತ ಶಾಲೆಗಳಲ್ಲಿ ದಾಖಲಾಗಿರುತ್ತಾರೆ. ಆದರೆ ತರಗತಿಗಳು ಮತ್ತು ವಾಸ್ತವ್ಯಕ್ಕಾಗಿ ಮಿಷನ್ ಸಂಸ್ಥೆಗಳಿಗೆ ಹಾಜರಾಗುತ್ತಾರೆ. ಕೇವಲ ಪರೀಕ್ಷೆಗಳನ್ನು ಮಾತ್ರ ನೋಂದಾಯಿತ ಶಾಲೆಗಳಲ್ಲಿ ಹಾಜರಾಗಿ ಬರೆಯುತ್ತಾರೆ.

ಕೆಕೆಜಿಎಂ ನಂತಹ ಕೆಲವು ಮಿಷನ್ ಸಂಸ್ಥೆಗಳು ವಿಶೇಷವಾಗಿ ಮುಸ್ಲಿಂ ಹೆಣ್ಣುಮಕ್ಕಳನ್ನು ಮಾತ್ರವೇ ಸೇರಿಸಿಕೊಳ್ಳುತ್ತವೆ. ಇಲ್ಲವಾದರೆ ಅವರಲ್ಲಿ ಬಹಳ ಸಂಖ್ಯೆಯ ಹೆಣ್ಣುಮಕ್ಕಳು ಬಹುಶಃ ಶಾಲೆಯಿಂದ ಹೊರಗುಳಿಯುತ್ತಿದ್ದರು.

**ನಮ್ಮ ಅನುಭವಗಳು:**

ಪಶ್ಚಿಮ ಬಂಗಾಳದ ಹೌರಾ ಜಿಲ್ಲೆಯ ಬೈನನ್ ಹಳ್ಳಿಯಲ್ಲಿ 2014ರಲ್ಲಿ ಖದಿಜತುಲ್ ಕುಬ್ರಾ ಎಜುಕೇಷನ್ ಟ್ರಸ್ಟ್‌ನ ಆರಂಭಿಕ ಬಂಡವಾಳದಿಂದ ಕೆಕೆಜಿಎಂ ಸ್ಥಾಪನೆಯಾಗಿತ್ತು. ಶಾಲೆಯಲ್ಲಿ 6ರಿಂದ 12ನೇ ತರಗತಿಯವರೆಗಿನ ಸುಮಾರು 500 ಮಕ್ಕಳಿದ್ದಾರೆ. ಅವರಲ್ಲಿ ಬಹುತೇಕರು ಕಡಿಮೆ ವರಮಾನವಿರುವ ಕುಟುಂಬದವರು. ಕೆಲವರು ಅನಾಥರು. ವಿದ್ಯಾರ್ಥಿನಿಯರು ಪಶ್ಚಿಮ ಬಂಗಾಳದ ವಿವಿಧ ಜಿಲ್ಲೆಗಳಿಂದ ಬಂದವರಾಗಿದ್ದು, ಪ್ರವೇಶ ಪರೀಕ್ಷೆಯ ಮೂಲಕ ದಾಖಲಾತಿ ಪಡೆದಿದ್ದಾರೆ. ಪರೀಕ್ಷೆಯಲ್ಲಿ ಅವರು ತೋರುವ ಸಾಮರ್ಥ್ಯದ ಜೊತೆಗೆ ಆರ್ಥಿಕ ಸ್ಥಾನಮಾನವು, ಅವರು ಪಾವತಿಸಬೇಕಾದ ಶಾಲಾ ಶುಲ್ಕವನ್ನು ನಿರ್ಣಯಿಸುತ್ತದೆ. ಯಾವ ವಿದ್ಯಾರ್ಥಿಗಳಿಗೆ ಸಾಧ್ಯ ಇದೆಯೋ ಅವರು, ಟ್ಯೂಷನ್, ಊಟ ಮತ್ತು ವಸತಿಯನ್ನು ಒಳಗೊಂಡ ತಿಂಗಳ ವೆಚ್ಚ ರೂ. 4000 ಪಾವತಿಸುತ್ತಾರೆ. ಅಗತ್ಯವಿರುವ ಬಹಳಷ್ಟು ಮಕ್ಕಳಿಗೆ ಈ ಶುಲ್ಕದಲ್ಲೂ ರಿಯಾಯಿತಿ ನೀಡಲಾಗುತ್ತದೆ ಅಥವಾ ಶುಲ್ಕವನ್ನೇ ಮನ್ನಾ ಮಾಡಲಾಗುತ್ತದೆ. ಕೆಲವು ಶಿಕ್ಷಣ ತಜ್ಞರು, ದಾನಿಗಳ ದೇಣಿಗೆಗಳು ಮತ್ತು ಇತರ ಹಿತೈಷಿಗಳು ಈ ವೆಚ್ಚವನ್ನು ಸರಿದೂಗಿಸುತ್ತಾರೆ.

ಶಾಲೆಯು ಬಂಗಾಳಿ ಭಾಷೆಯನ್ನು ಕಲಿಕಾ ಮಾಧ್ಯಮವಾಗಿ ಬಳಸುತ್ತಿದೆ ಮತ್ತು ಧಾರ್ಮಿಕ ಅಧ್ಯಯನಗಳನ್ನೂ ಒಳಗೊಂಡು ಮಾಧ್ಯಮಿಕ ಮತ್ತು ಮದರಸ ಎರಡೂ ಪಠ್ಯಕ್ರಮಗಳನ್ನೂ ಅನುಸರಿಸುತ್ತದೆ. ನಿತ್ಯದ ತರಗತಿಗಳ ಜೊತೆಗೆ, ಕಲಿಕೆಯಲ್ಲಿ ಕಷ್ಟಪಡುವ ವಿದ್ಯಾರ್ಥಿಗಳಿಗಾಗಿ ಪರಿಹಾರ ಬೋಧನೆಯ ತರಗತಿಗಳನ್ನು ಕೂಡ ಕೆಕೆಜಿಎಂ ಒದಗಿಸುತ್ತದೆ. ಹತ್ತನೆಯ ತರಗತಿಯ ಮಂಡಳಿ (Board exams) ಪರೀಕ್ಷೆ ಮುಗಿಸಿದ ಬಳಿಕ, ಅದೇ ಸಂಸ್ಥೆಯಲ್ಲಿಯೇ ಎರಡನೇ ಹಂತದ ಶಿಕ್ಷಣವನ್ನು ಮುಂದುವರೆಸಲು ತನ್ನ ವಿದ್ಯಾರ್ಥಿಗಳನ್ನು ಪ್ರೇರೇಪಿಸುತ್ತದೆ. ಆ ಮೂಲಕ ಎರಡನೇ ಹಂತದಲ್ಲಿ ಶಾಲೆ ತೊರೆಯುವ ಮಕ್ಕಳ ಪ್ರಮಾಣವನ್ನು ಪರಿಣಾಮಕಾರಿಯಾಗಿ ಕಡಿಮೆಯಾಗುವಂತೆ ಮಾಡಿದೆ.

ಆ ಶಾಲೆಯು ಇತರೆ ಯಾವುದೇ ಶಾಲೆಯಷ್ಟೇ ಸುಸಜ್ಜಿತವಾಗಿದೆ. ತರಗತಿ ಕೊಠಡಿಗಳು, ವಿಜ್ಞಾನ ಮತ್ತು ಕಂಪ್ಯೂಟರ್ ಪ್ರಯೋಗಾಲಯಗಳು, ಒಂದು ಗ್ರಂಥಾಲಯ, ಒಂದು ಪ್ರಾರ್ಥನಾ ಕೊಠಡಿ ಮತ್ತು ಒಂದು ಸಣ್ಣ ಆಟದ ಮೈದಾನವು ಹೆಮ್ಮೆಪಡುವಂತೆ ಇವೆ. ವಸತಿ ನಿಲಯದಲ್ಲಿ ವಿಶಾಲವಾದ, ಸಾಮಾನ್ಯ ಕೊಠಡಿಗಳಿದ್ದು, ಪ್ರತಿ ಕೊಠಡಿಯಲ್ಲಿ ಸುಮಾರು ಮೂವತ್ತರವರೆಗೂ ವಿದ್ಯಾರ್ಥಿನಿಯರು ಉಳಿದುಕೊಳ್ಳುತ್ತಾರೆ. ದಿನಕ್ಕೆ ನಾಲ್ಕು ಸಲ ಆಹಾರವನ್ನು ನೀಡಲಾಗುತ್ತದೆ. ದಿನಕ್ಕೆ ಐದು ಸಲ ನಮಾಝ್ ನಿರ್ವಹಿಸುವ ವ್ಯವಸ್ಥೆಯಿದೆ. ಕುಟುಂಬದ ಸದಸ್ಯರು ವಾರಕ್ಕೆ ಒಂದು ಸಲ ಬಂದು ವಿದ್ಯಾರ್ಥಿನಿಯರನ್ನು ಭೇಟಿ ಮಾಡಬಹುದಾಗಿದೆ. ಶಾಲಾ ಆವರಣದೊಳಗೆ ಅವರಿಗೆ ಮೊಬೈಲ್ ಫೋನ್ ಬಳಕೆ ನಿಷೇಧಿಸಲಾಗಿದೆ. ಈ ಸಂಸ್ಥೆಗಳು ಇಷ್ಟೊಂದು ಜನಪ್ರಿಯವಾಗಲು ಕಾರಣ ಅವುಗಳಲ್ಲಿ ಇರುವ ವಸತಿ ಸೌಕರ್ಯಗಳೇ ಆಗಿವೆ. ಆ ಮೂಲಕ ಹೆಣ್ಣುಮಕ್ಕಳಿಗೆ ಇದ್ದ ಭೌಗೋಳಿಕ ಸಂಚಾರ ನಿರ್ಬಂಧ ಕಾರಣವಾದ ಹಲವಾರು ಸವಾಲುಗಳನ್ನು ಮೀರುವುದಕ್ಕೆ ಸಾಧ್ಯವಾಯಿತು. ಈ ಶಾಲೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಮಹಿಳಾ ಶಿಕ್ಷಕಿಯರೇ ಇರುವುದರಿಂದಾಗಿ ಅವು ಹೆಣ್ಣುಮಕ್ಕಳಿಗೆ ಹೆಚ್ಚು ಆಪ್ತವಾಗಿವೆ. ಸ್ಥಳದಿಂದ ಸ್ಥಳಕ್ಕೆ ಸಂಚರಿಸುವುದಕ್ಕೆ ಮಹಿಳೆಯರಿಗೆ ಇರುವ ನಿರ್ಬಂಧಗಳು, ಶಿಕ್ಷಣ ಮತ್ತು ಆರೋಗ್ಯಗಳ ಹೊರತಾದ ಉದ್ಯೋಗಗಳಲ್ಲಿ ಸೇರಿಕೊಳ್ಳುವುದಕ್ಕೆ ಇರುವ ಅಡೆತಡೆಗಳು, ಹೆಣ್ಣುಮಕ್ಕಳ ಪದವಿ ಪೂರ್ವ ಶಾಲೆಗಳು ಇರುವಲ್ಲಿ ಸ್ಥಳೀಯವಾಗಿ ಶಿಕ್ಷಿತ ಮಹಿಳೆಯರ ಗುಂಪುಗಳನ್ನು ಸೃಷ್ಟಿಸಿವೆ (ಅಂದ್ರಾಬಿ, ದಾಸ್ ಮತ್ತು ಖ್ವಾಜ, 2013). ಅದೇ ತತ್ವವು ಇಲ್ಲೂ ಅನ್ವಯವಾಗುತ್ತದೆ. ಕೆಲವು ಮಹಿಳಾ ಶಿಕ್ಷಕರು ಶಾಲಾ ಆವರಣದ ಒಳಗೇ ವಾಸಿಸಿದರೆ ಇತರರು ಪಕ್ಕದ ಊರುಗಳಿಂದ ಬರುತ್ತಾರೆ. ಅದರ ಪರಿಣಾಮವಾಗಿ ಸರಕಾರಿ ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣ ಇಲ್ಲದಿರುವುದಕ್ಕೆ ಕಾರಣವಾಗಿರುವ ಶಿಕ್ಷಕರ ಗೈರು ಹಾಜರಿಯು ಇಲ್ಲಿ ಅಕ್ಷರಶಃ ಇಲ್ಲ. ಕೆಕೆಜಿಎಂ ಸಂಸ್ಥೆಯ ಬಹುತೇಕ ವಿದ್ಯಾರ್ಥಿನಿಯರು, ಪ್ರತಿಯಾಗಿ, ಶಿಕ್ಷಕಿಯರಾಗುವುದನ್ನೇ ಬಯಸುತ್ತಾರೆ. ಈ ವಿದ್ಯಮಾನವು ಮುಸ್ಲಿಂ ಸಮುದಾಯಗಳು ಇರುವಲ್ಲಿ ಖಾಸಗಿ ಶಾಲೆಗಳು ಸ್ಥಾಪನೆಯಾಗುವುದಕ್ಕೆ ಬಹಳ ದೊಡ್ಡ ಕೊಡುಗೆಯನ್ನು ಕೊಡುತ್ತದೆ ಎಂದು ನಾವು ಭಾವಿಸುತ್ತೇವೆ.

### ಇತರ ವೈಶಿಷ್ಟ್ಯಗಳು

### ಪಠ್ಯೇತರ ಬೆಂಬಲ

ತನ್ನ ವಿದ್ಯಾರ್ಥಿಗಳಿಗೆ ಸಮಗ್ರ ಕಲಿಕೆಯ ಅನುಭವವನ್ನು ಒದಗಿಸುವುದಕ್ಕಾಗಿ ಕೆಕೆಜಿಎಂ ಪಠ್ಯಕ್ರಮದ ಜೊತೆಜೊತೆಗೆ ಹಲವು ಚಟುವಟಿಕೆಗಳನ್ನೂ ಒಳಗೊಳಿಸಿದೆ. ಕಂಪ್ಯೂಟರ್ ತರಗತಿಗಳು ಹೆಣ್ಣುಮಕ್ಕಳಿಗೆ ವರ್ಡ್ ಫೈಲ್‌ನಲ್ಲಿ ಬೆರಳಚ್ಚು ಮಾಡುವುದು, ಪವರ್ ಪಾಯಿಂಟ್ ಪ್ರಸ್ತುತಿ ಸಿದ್ಧಪಡಿಸುವುದು ಮತ್ತು ಇಮೇಲ್ ಕಳುಹಿಸುವಂತಹ ಪ್ರಾಥಮಿಕ ಕಾರ್ಯಗಳಲ್ಲಿ ತರಬೇತಿ ಹೊಂದಲು ಸಹಾಯಮಾಡುತ್ತದೆ. ಹೆಣ್ಣುಮಕ್ಕಳಿಗೆ ಬ್ಯಾಡ್ಮಿಂಟನ್ ಅಥವಾ ಕಬಡ್ಡಿ ಆಡುವುದು ಅಥವಾ ಯೋಗವನ್ನು ಕಲಿಯುವಂತಹ ನಿಯಮಿತ ದೈಹಿಕ ತರಬೇತಿ ತರಗತಿಗಳು ನಡೆಯುತ್ತವೆ. ಸಂಸ್ಥೆಯಲ್ಲಿ ವಾರ್ಷಿಕ ಕ್ರೀಡಾ ದಿನವೂ ಇದ್ದು, ವಿವಿಧ ಆಟೋಟ ಮತ್ತು ಕ್ರೀಡಾ ಸ್ಪರ್ಧೆಗಳನ್ನು ಆಯೋಜಿಸಲಾಗುತ್ತದೆ. ಆಸಕ್ತರಿಗೆ ಚಿತ್ರಕಲೆ, ಹೊಲಿಗೆ ಮತ್ತು ಕಸೂತಿ ಕಲೆಯ ತರಗತಿಗಳನ್ನು ಒದಗಿಸುವುದರೊಂದಿಗೆ ಕರಕುಶಲ ಕಲೆಗಳಿಗೂ ಪ್ರೋತ್ಸಾಹಿಸಲಾಗುತ್ತದೆ. ಕೆಲವೊಮ್ಮೆ ಶಾಲೆಯು ಹೆಣ್ಣುಮಕ್ಕಳಿಗೆ ಪ್ರಥಮ ಚಿಕಿತ್ಸೆ ಮತ್ತು ಪ್ರಾಥಮಿಕ ಶುಶ್ರೂಷಾ ಕೌಶಲ್ಯಗಳ ತರಬೇತಿ ಕೊಡಲು ಸ್ಥಳೀಯ ಆರೋಗ್ಯ ಕಾರ್ಯಕರ್ತರನ್ನು ಆಹ್ವಾನಿಸುತ್ತದೆ.

ಇವುಗಳಲ್ಲಿ ಕೆಲವು ಚಟುವಟಿಕೆಗಳು ತರಗತಿಗಳು ಮುಗಿದ ಮೇಲೆ ಸಂಜೆಯ ಹೊತ್ತಿನಲ್ಲಿ ವಿದ್ಯಾರ್ಥಿಗಳು ತೊಡಗಿಕೊಳ್ಳುವಂತೆ ಮಾಡುತ್ತವೆ. 1500ಕ್ಕೂ ಹೆಚ್ಚು ಪುಸ್ತಕಗಳನ್ನು ಹೊಂದಿರುವ ಗ್ರಂಥಾಲಯವು ಎಲ್ಲಾ ಸಮಯದಲ್ಲೂ ತೆರೆದಿರುತ್ತದೆ. ಈ ಸಂಗ್ರಹವು ಹೆಚ್ಚಾಗಿ ಬಂಗಾಳಿ ಭಾಷೆಯಲ್ಲಿರುವ ಪಠ್ಯಪುಸ್ತಕ ಮತ್ತು ಕಾದಂಬರಿಗಳು ಅಥವಾ ಸಣ್ಣ ಕತೆಗಳ ಮಿಶ್ರಣವನ್ನು ಒಳಗೊಂಡಿದೆ. ಇವುಗಳಲ್ಲಿ ಸುಮಾರು 200 ಇಂಗ್ಲಿಷ್ ಪುಸ್ತಕಗಳೂ ಇವೆ. ದೂರದರ್ಶನ, ಮೊಬೈಲ್ ಫೋನ್ ಮತ್ತು ಇತರ ರೀತಿಯ ತೊಡಗಿಕೊಳ್ಳುವಿಕೆಯ ಅವಕಾಶಗಳು ಇಲ್ಲದೇ ಇರುವಾಗ, ವಿದ್ಯಾರ್ಥಿಗಳು ತಮ್ಮ ಸಂಜೆಯ ವಿರಾಮವನ್ನು ಹೆಚ್ಚಾಗಿ ಓದುವುದಕ್ಕೆ ಮತ್ತು ಅಧ್ಯಯನಕ್ಕೆ ಬಳಸುತ್ತಾರೆ.

ಭಾರತದಲ್ಲಿ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಡಿಜಿಟಲ್ ತಂತ್ರಾಂಶವು ವ್ಯಾಪಕವಾಗಿ ಅನ್ವೇಷಿಸಲ್ಪಡುತ್ತಿದೆ; ಕೆಕೆಜಿಎಂ ಕೂಡ ಅದರಲ್ಲಿ ಬಹಳ ಹಿಂದೆ ಬಿದ್ದಿಲ್ಲ. ಅದರ ಕನಿಷ್ಠ ಮಟ್ಟದ ಮೂಲಸೌಕರ್ಯಗಳ ಹೊರತಾಗಿಯೂ, ಕೆಕೆಜಿಎಂ ತನ್ನ ನಿಗದಿತ ಪಠ್ಯಕ್ರಮವನ್ನು ವರ್ಚುವಲ್ ಇಂಗ್ಲಿಷ್ ತರಗತಿಗಳ ಮೂಲಕ ಅಧಿಕಗೊಳಿಸಲು ಶ್ರಮಿಸುತ್ತಿದೆ. ಶಾಲೆಯು ಇಂಗ್ಲಿಷನ್ನು ಎರಡನೇ ಭಾಷೆಯಾಗಿ ಕಲಿಸುತ್ತಿದ್ದರೂ, ವಿದ್ಯಾರ್ಥಿನಿಯರು ಅದನ್ನು ಬಳಸುವುದರಲ್ಲಿ ಸಾಕಷ್ಟು ಪರಿಣಿತರಾಗಿಲ್ಲ. ಈ ಹಿನ್ನಡೆಗೆ ಇಂಗ್ಲಿಷ್ ಭಾಷೆಯನ್ನು ಉರುಹೊಡೆದು ಕಲಿಸುವ ಶಿಕ್ಷಕ ವರ್ಗದ ಮತ್ತು ಸ್ಥಳೀಯ ಶಿಕ್ಷಿತ ಮಹಿಳೆಯರ ಪಾತ್ರವು ಗುರುತರವಾಗಿದೆ.

### ಆ್ಯನ್ ಫೌಂಡೇಷನ್

ತನ್ನದೇ ವ್ಯವಸ್ಥೆಯಲ್ಲಿರುವ ಈ ನ್ಯೂನತೆಗಳನ್ನು ಅರಿತಿರುವ ಮತ್ತು ಉದ್ಯೋಗಾರ್ಹತೆಗೆ ಇಂಗ್ಲಿಷ್ ಭಾಷಾ ಪ್ರಾವೀಣ್ಯತೆಯ ಪ್ರಾಮುಖ್ಯತೆಯನ್ನು ಗುರುತಿಸಿರುವ ಕೆಕೆಜಿಎಂ, ಈ ಅಂತರವನ್ನು ಹೋಗಲಾಡಿಸಲು ಲಾಭ ರಹಿತ ಸಂಸ್ಥೆಯಾದ ಆ್ಯನ್ ಫೌಂಡೇಷನ್ ಜೊತೆಗೆ ಒಡಂಬಡಿಕೆ ಮಾಡಿಕೊಂಡಿದೆ. ಈ ಫೌಂಡೇಷನ್ ಜಾಗತಿಕವಾಗಿ ಅನುಕೂಲತೆ ಇಲ್ಲದಿರುವ ಮಕ್ಕಳಿಗೆ, ಶಾಲೆ ಮತ್ತು ಅನಾಥಾಲಯಗಳ ಯುವಕರಿಗೆ ಆನ್‌ಲೈನ್ ಮೂಲಕ ಇಂಗ್ಲಿಷ್ ಮತ್ತು ಕಂಪ್ಯೂಟರ್ ತರಗತಿಗಳನ್ನು ಒದಗಿಸುತ್ತದೆ. ಯಶಸ್ವೀ ಯುವ ವೃತ್ತಿಪರರು ಸಮಾಜದಿಂದ ತಾವು ಪಡೆದುದನ್ನು ಹಿಂದಿರುಗಿಸಲು, ಸಮಾಜಕ್ಕೆ ತಮ್ಮ ಕೊಡುಗೆ ಕೊಡಲು ನಿರ್ವಹಿಸಬೇಕಾದ ಪಾತ್ರಗಳ ಬಗ್ಗೆ ಹೆಚ್ಚು ಅರಿವು ಬೆಳೆಸಿ-ಕೊಳ್ಳುತ್ತಿದ್ದಾರೆ. ಆದರೆ ಬಹಳ ಸಲ ತಮ್ಮ ಇಚ್ಛೆಯನ್ನು ಕಾರ್ಯರೂಪಕ್ಕೆ ತರಲು ಸಮಯದ ಅಥವಾ ಭೌಗೋಳಿಕ ಅಂತರದ ಅಡೆತಡೆಗಳ ಕಾರಣಕ್ಕೆ ಕಷ್ಟವನ್ನು ಅನುಭವಿಸುತ್ತಾರೆ. ಆ್ಯನ್ ಫೌಂಡೇಷನ್ ಇಂತಹ ಅಡ್ಡಿ ಆತಂಕಗಳನ್ನು ಪರಿಣಾಮ-ಕಾರಿಯಾಗಿ ನಿವಾರಿಸುತ್ತದೆ. ಅದು ಅಂತರ್ಜಾಲದ ಮೂಲಕ ಜಗತ್ತಿನಾದ್ಯಂತ ಇರುವ ಕ್ರಿಯಾಶೀಲ ಸ್ವಯಂ-ಸೇವಕರನ್ನು ಜಗತ್ತಿನಾದ್ಯಂತ ಹುಡುಕಿ ಅವನನ್ನು / ಅವಳನ್ನು ತಮ್ಮ ಒಂದು ಪಾಲುದಾರಿ ಘಟಕದ ಜೊತೆಗೆ ಸೇರಿಸುತ್ತದೆ.

ಕೆಕೆಜಿಎಂನಲ್ಲಿ, ಪ್ರತಿದಿನ ವಿವಿಧ ವರ್ಗಗಳ ಮಕ್ಕಳಿಗೆ ಒಂದು ಗಂಟೆಯ ತರಗತಿಯನ್ನು ಫೌಂಡೇಷನ್ ನಡೆಸುತ್ತದೆ. ಕೆಕೆಜಿಎಂನ ಒಂದು ತರಗತಿಯಲ್ಲಿ ಸುಮಾರು 50 ಮಕ್ಕಳಿರುತ್ತಾರೆ; ಪ್ರತಿ ವರ್ಗವನ್ನು 10-12 ಮಕ್ಕಳ ಸಣ್ಣ ಗುಂಪುಗಳಾಗಿ ವಿಭಜಿಸಿ ಆ ಗುಂಪಿಗೆ ಒಬ್ಬ ಸ್ವಯಂಸೇವಕರನ್ನು ನೇಮಿಸಲಾಗುತ್ತದೆ. ಯುಎಸ್, ಯುಕೆ, ಕೆನಡಾ ಮತ್ತು ಬಾಂಗ್ಲಾದೇಶ ಸೇರಿದಂತೆ ಪ್ರಪಂಚದಾದ್ಯಂತ ನೆಲೆಯೂರಿರುವ, ಚೆನ್ನಾಗಿ ಬಂಗಾಳಿ ಭಾಷೆಯನ್ನು ಬಲ್ಲ ಈ ಸ್ವಯಂಸೇವಕರು ಹೆಚ್ಚಾಗಿ ಹೆಚ್ಚಾಗಿ ಮಹಿಳೆಯರೇ ಆಗಿರುತ್ತಾರೆ.. ಪ್ರತಿ ಗುಂಪಿಗೂ ಒಂದು ಗಂಟೆಯ ಕಾಲ ವಾರದ ಎರಡು ದಿನಗಳಲ್ಲಿ ಕಲಿಸಲಾಗುತ್ತದೆ. ವಾರಾಂತ್ಯದಲ್ಲೂ ಈ ತರಗತಿಗಳು ನಡೆಯುತ್ತವೆ. ಸಂಜೆಯ ವೇಳೆ ತರಗತಿಗಳು ನಡೆಯುವುದರಿಂದ ಅವರ ದೈನಂದಿನ ಕೆಲಸಗಳಿಗೆ ಅಡ್ಡಿಯಾಗುವುದಿಲ್ಲ. ಸ್ಕೈಪ್ ಆಪ್‌ನ ಮೂಲಕ ತರಗತಿಗಳು ನಡೆಯುತ್ತವೆ. ಕೆಕೆಜಿಎಂನಲ್ಲಿ ಹನ್ನೆರಡು ಹುಡುಗಿಯರು ಒಂದು ಲ್ಯಾಪ್‌ಟಾಪ್‌ನ ಎದುರು ಕುಳಿತುಕೊಳ್ಳುತ್ತಾರೆ. ಕೆಕೆಜಿಎಂನ ಒಬ್ಬರು ಶಿಕ್ಷಕರು ತರಗತಿ ನಡೆಯುವಾಗ ಸಹಕರಿಸುತ್ತಾರೆ. ಯಾವುದೇ ಸ್ವಯಂಸೇವಕಿಯು ತರಗತಿಯನ್ನು ನಡೆಸುವುದಕ್ಕೆ ಲಭ್ಯ ಇಲ್ಲದಿದ್ದಾಗ ಆ್ಯನ್ ಫೌಂಡೇಷನ್‌ನ ಕಾರ್ಯಕ್ರಮ ಸಂಯೋಜಕರಿಗೆ ಅವರು ಮಾಹಿತಿ ಕೊಡಬೇಕು. ಆಗ ಅವರು ಬದಲಿ ಬೋಧಕರ ವ್ಯವಸ್ಥೆಯನ್ನು ಮಾಡುತ್ತಾರೆ. ಬದಲಿ ಶಿಕ್ಷಕರು ಕೂಡ ಲಭ್ಯ ಇಲ್ಲದಾಗ ಬಳಸಲೆಂದೇ ಸಾಕ್ಷ್ಯಚಿತ್ರ ಮತ್ತು ಕಿರು ಚಿತ್ರಗಳ ಒಂದು ಭಂಡಾರವೂ ಬೋಧಕರಿಂದ ನಿರ್ವಹಿಸಲ್ಪಡುತ್ತದೆ. ಅಂತಹ ಸಂದರ್ಭಗಳಲ್ಲಿ ಕೆಕೆಜಿಎಂನ ಸುಗಮಕಾರರಿಗೆ ಮಾಹಿತಿ ನೀಡಲಾಗುತ್ತದೆ ಮತ್ತು ವಿಡಿಯೋ ಸಂಪರ್ಕ ಕೊಂಡಿಯನ್ನು ಹಂಚಿಕೊಳ್ಳುತ್ತಾರೆ. ಅವರು ಅದನ್ನು ತರಗತಿಯಲ್ಲಿ ಪ್ರದರ್ಶಿಸುತ್ತಾರೆ.

ಸ್ವಯಂಸೇವಕ ಬೋಧಕರು ತರಗತಿಗೂ ಮೊದಲೇ ತಯಾರಿಸಿದ ಒಂದಷ್ಟು ಓದುವ ಸಾಮಗ್ರಿಗಳು, ಬರವಣಿಗೆ ಮತ್ತು ಸಂಭಾಷಣೆಯ ಚಟುವಟಿಕೆಗಳನ್ನು ಈ ತರಗತಿಗಳು ಒಳಗೊಂಡಿವೆ. ಬರೆಯುವ ಮತ್ತು ಓದುವ ಚಟುವಟಿಕೆಗಳನ್ನು ಹೆಣ್ಣುಮಕ್ಕಳು ತಕ್ಕಮಟ್ಟಿಗೆ ಚೆನ್ನಾಗಿಯೇ ನಿರ್ವಹಿಸುತ್ತಾರೆ, ಆದರೆ ಸರಾಗವಾಗಿ ಸಂವಾದಿಸಲು ಪ್ರಯಾಸಪಡುತ್ತಾರೆ ಎಂಬುದು ಅನುಭವದಿಂದ ಕಂಡುಬಂದಿದೆ. ಇಂಗ್ಲಿಷ್ ಭಾಷೆಯಲ್ಲಿ ಸಂಭಾಷಿಸಲು ಅವರಿಗೆ ಆತ್ಮವಿಶ್ವಾಸದ ಕೊರತೆ ಇರುವ ಕಾರಣಕ್ಕೆ ಬಹಳ ಸಂಕೋಚಪಟ್ಟುಕೊಳ್ಳುವುದೇ ಅವರು ಅನುಭವಿಸುವ ಪ್ರಾರಂಭದ ಅಡೆತಡೆಯಾಗಿದೆ. ಇದನ್ನು ಮೀರಿ ನಿಲ್ಲುವಂತೆ ಮಾಡಲು ಅವರನ್ನು ಇಬ್ಬರ ಗುಂಪಾಗಿಸಿ ಪರಸ್ಪರ ಮಾತನಾಡುವಂತೆ ಹೇಳಲಾಗುತ್ತದೆ. ಪ್ರತೀ ವಿದ್ಯಾರ್ಥಿಯ ಸಾಮರ್ಥ್ಯವನ್ನು ನಿರ್ಣಯಿಸಲು ಬೋಧಕರು ಸಾಕಷ್ಟು

ಸಮಯವನ್ನು ತರಗತಿಯೊಂದಿಗೆ ವ್ಯಯಿಸುತ್ತಾರೆ. ಬಳಿಕ ಹೆಚ್ಚು ಸಮರ್ಥರನ್ನು ಕಡಿಮೆ ಸಾಮರ್ಥ್ಯದ ವಿದ್ಯಾರ್ಥಿಗಳೊಂದಿಗೆ ಸೇರಿಸಲು ಅವರು ಆಗಾಗ ಇಬ್ಬರ ಗುಂಪುಗಳನ್ನು ಅದಲುಬದಲು ಮಾಡುತ್ತಾರೆ. ದುರ್ಬಲ ವಿದ್ಯಾರ್ಥಿಗಳು ಗುರುತಿಸುವಷ್ಟು ಸುಧಾರಿಸಿದರೆ ಸಮರ್ಥ ವಿದ್ಯಾರ್ಥಿಗಳು ಚೆನ್ನಾಗಿ ನಿರ್ವಹಿಸುವುದನ್ನು ಮುಂದುವರಿಸುತ್ತಾರೆ ಎಂಬುದನ್ನು ಆಧಾರಗಳು ತೋರಿಸುತ್ತವೆ.

ಅವರ ಆತ್ಮವಿಶ್ವಾಸವನ್ನು ಮತ್ತಷ್ಟು ಹೆಚ್ಚಿಸಲು, ದಿನನಿತ್ಯದ ಸಾಮಾನ್ಯ ಸಂಭಾಷಣೆಗಳನ್ನು, ಉದಾಹರಣೆಗೆ ಹೊಸಬರ ಜೊತೆಗೆ ತಮ್ಮನ್ನು ತಾವು ಪರಿಚಯಿಸಿಕೊಳ್ಳುವುದು ಅಥವಾ ಪರಸ್ಪರ ಹವ್ಯಾಸಗಳನ್ನು ಅಥವಾ ಆಸಕ್ತಿಗಳನ್ನು ಚರ್ಚಿಸುವುದನ್ನು ಸರಾಗವಾಗಿ ಕೈಗೊಳ್ಳುವಂತೆ ಬೋಧಕರು ಪ್ರಯತ್ನಿಸುತ್ತಾರೆ. ಅಂಗಡಿಗೆ ಭೇಟಿ ನೀಡಿದಾಗ ಅಥವಾ ಪೋಲೀಸರಿಗೆ ಒಂದು ಅಪರಾಧದ ಬಗೆಗೆ ವರದಿ ಕೊಡುವಾಗ ತಮ್ಮನ್ನೇ ತಾವು ಅಭಿವ್ಯಕ್ತಿಸಿಕೊಳ್ಳುವಂಥ ಸಂದರ್ಭ ಆಧಾರಿತ ಸಂವಹನಗಳನ್ನು ಕೂಡಾ ಅವರು ಅಭ್ಯಾಸ ಮಾಡುತ್ತಾರೆ. ವ್ಯಕ್ತಿಗಳು ಪರಸ್ಪರ ಸ್ಪಷ್ಟವಾಗಿ ಸಂವಾದ ನಡೆಸುವ ವೀಡಿಯೋಗಳನ್ನು ವೀಕ್ಷಿಸುವುದೂ ಫಲಪ್ರದ ಪರಿಣಾಮಗಳನ್ನು ಉಂಟುಮಾಡಿದೆ. ಚಟುವಟಿಕೆಗಳನ್ನು ಆಟದ ರೂಪದಲ್ಲಿ ಬಳಸಿದಾಗ ಅಥವಾ ಅವರನ್ನು ನಿಯಮಿತವಾಗಿ ಶ್ರೇಣಿಯಲ್ಲಿ ಗುರುತಿಸಿ ಸಾಧಕರನ್ನು ಪ್ರಶಂಸಿಸಿದಾಗ ವಿದ್ಯಾರ್ಥಿನಿಯರ ಸಾಧನೆಗಳು ಉತ್ತಮಗೊಂಡಿವೆ.

ನಿಜವಾಗಿಯೂ, ಕಣ್ಣಿಗೆ ಕಾಣುವುದಕ್ಕಿಂತ ಹೆಚ್ಚಿನದು ಈ ಇಂಗ್ಲಿಷ್ ತರಗತಿಗಳಲ್ಲಿ ಇದೆ. ಸೀಮಿತ ಮತ್ತು ನಿಷ್ಠುರ ನಿರ್ಬಂಧಿತ ಸನ್ನಿವೇಶಗಳಲ್ಲಿರುವ ಹೆಣ್ಣುಮಕ್ಕಳಿಗೆ, ಪ್ರತಿ ವಾರವು ಒಂದೆರಡು ಗಂಟೆಗಳ ಕಾಲ ಎಲ್ಲಾ ಕಟ್ಟುಪಾಡುಗಳಿಂದ ಮುಕ್ತವಾಗಿರುವುದಕ್ಕೆ ಈ ತರಗತಿಗಳು ಅವಕಾಶ ಮಾಡಿಕೊಡುತ್ತವೆ. ಅವು ಹೊರ ಪ್ರಪಂಚಕ್ಕೆ ಒಂದು ಕಿಟಕಿಯಂತಿದ್ದು, ಆ ನಿಟ್ಟಿನಲ್ಲಿ ಸಾಕಷ್ಟು ವಿಶಿಷ್ಟವಾಗಿದೆ. ಯಶಸ್ವೀ ಯುವ ಮಹಿಳೆಯರಾದ ಈ ಬೋಧಕರು ಕೆಕೆಜಿಎಂನ ವಿದ್ಯಾರ್ಥಿನಿಯರಲ್ಲಿ ಒಂದು ಭರವಸೆಯ ಭಾವವನ್ನು ಉದ್ದೀಪಿಸುತ್ತಾರೆ. ಅದು ಎಲ್ಲಾ ಆಪತ್ತುಗಳ ಹೊರತಾಗಿಯೂ ಸಾಧನೆಯ ಹೊಸ ಮಜಲನ್ನು ಆಶಿಸುವುದಕ್ಕೆ ಸಹಾಯ ಮಾಡುತ್ತದೆ.

ಅಲ್ಲಿಯ ಪರಿಸರವು ಹಲವರಿಗೆ ಉಸಿರುಗಟ್ಟಿಸುವಂತೆ ಕಾಣಿಸಬಹುದು. ಆದರೆ ಕೆಕೆಜಿಎಂನ ವಿದ್ಯಾರ್ಥಿನಿಯರು ಬಹಳ ಖುಷಿಯಿಂದ ಇರುತ್ತಾರೆ ಎಂಬುದು ಗಮನಾರ್ಹವಾಗಿದೆ. ಅವರು ಕುಟುಂಬಗಳಿಂದ ದೂರವಾಗಿ ವಾಸಿಸ ಬೇಕಿರುವುದು ಮತ್ತು ತಮ್ಮೆಲ್ಲಾ ಕೆಲಸಗಳನ್ನು ಸ್ವತಃ ಮಾಡಬೇಕಿರುವುದು ನಿಜವಾದರೂ, ಸ್ನೇಹಿತೆಯರ ಜೊತೆಗಿರುವುದರಿಂದ ಸಂತೋಷದಲ್ಲಿರುತ್ತಾರೆ. ಅವರು ಏನಾದರೂ ಮನೆಯಲ್ಲೇ ಉಳಿದಿದ್ದರೆ ಈ ಸರಳ ಸಂತೋಷದಿಂದ ಅವರು ವಂಚಿತರಾಗುತ್ತಿದ್ದರೋ ಏನೋ.

**ಭವಿಷ್ಯದೆಡೆಗೆ ನೋಡುತ್ತಾ**

2016ರಿಂದ ಪದವಿ ಪಡೆದು ಉನ್ನತ ಶಿಕ್ಷಣಕ್ಕೆ ಹೋಗುವ ಕೆಕೆಜಿಎಂನ ವಿದ್ಯಾರ್ಥಿಗಳ ಪ್ರಮಾಣದಲ್ಲಿ ಹೆಚ್ಚಳವಾಗುತ್ತಿದೆ. ಅವರಲ್ಲಿ ಬಹುತೇಕರು ಆರೋಗ್ಯ ಕ್ಷೇತ್ರದಲ್ಲಿ ನೋಂದಾಯಿಸಿ-ಕೊಳ್ಳುತ್ತಿದ್ದಾರೆ. ಕೆಲವರು ಕೋಲ್ಕತ್ತಾ, ಬೆಂಗಳೂರುಗಳಲ್ಲಿ ನರ್ಸಿಂಗ್ ಅಧ್ಯಯನ ಮಾಡುತ್ತಿದ್ದಾರೆ. ಇನ್ನು ಕೆಲವರು ಔಷಧ ವಿಜ್ಞಾನವನ್ನು ಅಭ್ಯಸಿಸುತ್ತಾರೆ. ಬಹಳ ಸಣ್ಣ ಸಂಖ್ಯೆಯ ಹೆಣ್ಣುಮಕ್ಕಳು ವೈದ್ಯಕೀಯ ಪದವಿಗೂ ಸೇರಿಕೊಳ್ಳುತ್ತಿದ್ದಾರೆ. ಕಾನೂನು, ಇಂಜಿನಿಯರಿಂಗ್, ಮ್ಯಾನೇಜ್‌ಮೆಂಟ್ ಇತ್ಯಾದಿ ಇತರೆ ಜನಪ್ರಿಯ ಕೋರ್ಸುಗಳು ಹಾಗೂ ವಿಜ್ಞಾನ ಮತ್ತು ಮಾನವಿಕ ವಿಭಾಗಗಳ ವಿವಿಧ ಪದವಿ ಕೋರ್ಸುಗಳೂ ಇದರಲ್ಲಿ ಒಳಗೊಂಡಿವೆ. ಹಾಗಿದ್ದರೂ ಕೆಕೆಜಿಎಂನ ನಿರ್ದೇಶಕರಾದ ಜನಾಬ್ ಅಲಿ ಮೊಲ್ಲಾ ಅವರ ಪ್ರಕಾರ ಸದ್ಯ ಪದವಿ ಪಡೆಯುತ್ತಿರುವ ಸುಮಾರು ಶೇಕಡಾ 35ರಷ್ಟು ವಿದ್ಯಾರ್ಥಿನಿಯರಿಗೆ ಸಂಪನ್ಮೂಲದ ಕೊರತೆ ಅಥವಾ ಮದುವೆಯಾಗುವ ಕಾರಣಕ್ಕೆ ಕಾಲೇಜುಗಳಲ್ಲಿ ದಾಖಲುಗೊಳ್ಳಲು ಸಾಧ್ಯವಾಗುತ್ತಿಲ್ಲ. ಪ್ರೌಢ ಶಾಲಾ ಮಟ್ಟದಲ್ಲಿ ಸುಮಾರು 5 ಶೇಕಡಾ ವಿದ್ಯಾರ್ಥಿನಿಯರು ಶಾಲೆ ತೊರೆಯುತ್ತಾರೆ. ಈ ಮಿತಿಗಳನ್ನು ಒಪ್ಪಿಕೊಳ್ಳುತ್ತಾ ಕೆಕೆಜಿಎಂ ಸಂಸ್ಥೆಯು ಕಂಪ್ಯೂಟರ್ ಸಂಬಂಧಿತ ಅಧ್ಯಯನಗಳು ಮತ್ತು ಹೊಲಿಗೆ ತರಬೇತಿಗಳಂತಹ ವೃತ್ತಿಪರ ತರಗತಿಗಳನ್ನು ಒದಗಿಸುತ್ತಿದೆ. ಆ ಮೂಲಕ ಉನ್ನತ ಅಧ್ಯಯನ ಕೈಗೊಳ್ಳಲಾಗದೇ ಇರುವವರು ಆರ್ಥಿಕವಾಗಿ ಸ್ವಾವಲಂಬಿಗಳಾಗುವುದಕ್ಕೆ ಸಹಾಯ ನೀಡಲಾಗುತ್ತದೆ.

ಪದವಿ ಪಡೆಯುವ ವಿದ್ಯಾರ್ಥಿಯರಿಗೆ ನೆರವಾಗುವುದಕ್ಕಾಗಿ 2020ರಲ್ಲಿ ಖದಿಜಾತುಲ್ ಕುಬ್ರಾ ಗರ್ಲ್ಸ್ ಅಕಾಡೆಮಿ ಎಂಬ ಎರಡನೆಯ ಸಾಹಸವನ್ನು ಆರಂಭಿಸಿತು. ಅಕಾಡೆಮಿಯು ನಾಗರಿಕ ಸೇವಾ ಪರೀಕ್ಷೆಗಳು, ಸಿಬ್ಬಂದಿ ಆಯ್ಕೆ ಸೇವಾ ಆಯೋಗದ ಪರೀಕ್ಷೆಗಳು, ಸಾಮಾನ್ಯ ಕಾನೂನು ಪ್ರವೇಶ ಪರೀಕ್ಷೆಗಳು, ಜಂಟಿ ಪ್ರವೇಶ ಪರೀಕ್ಷೆಗಳು (Civil Services Examination, the Staff Selection Commission Examination, the Common Law Admission Test and the Joint Entrance Examination) ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಇಚ್ಛಿಸುವವರಿಗೆ ತರಬೇತಿ ತರಗತಿಗಳನ್ನು ಮತ್ತು ವೃತ್ತಿಪರ ಕೋರ್ಸುಗಳನ್ನು ನಡೆಸುವ ಗುರಿಯನ್ನು ಹೊಂದಿದೆ. ಇದೀಗ ತಾರುಣ್ಯಾವಸ್ಥೆಯಲ್ಲಿರುವ ಅಕಾಡೆಮಿಯು ಹೆಚ್ಚಿನ ಸಂಖ್ಯೆಯ ಹೆಣ್ಣುಮಕ್ಕಳಿಗೆ ಸುರಕ್ಷಿತ ಭವಿಷ್ಯವನ್ನು ಖಾತರಿಪಡಿಸುವ ಪ್ರಾಯೋಜಕ ಕಾರ್ಯಕ್ರಮಗಳನ್ನು ಪ್ರಾರಂಭಿಸಲು ಯೋಜಿಸುತ್ತಿದೆ.

ಕೆಕೆಜಿಎಂನ ಸಮಗ್ರ ವಿಧಾನವು ಸರಿಯಾದ ಸನ್ನಿವೇಶಗಳು ಸೃಷ್ಟಿಯಾದರೆ ಪ್ರತೀ ಮಗುವೂ ಕಲಿಯಬಲ್ಲುದು ಎಂಬ ನಂಬಿಕೆಯನ್ನು ಮರುಸ್ಥಾಪಿಸಿದೆ. ವಸತಿ ಸೌಕರ್ಯಗಳು ಹೆಣ್ಣು ಮಕ್ಕಳನ್ನು ಶಾಲೆಯತ್ತ ಆಕರ್ಷಿಸಿ, ಶಾಲೆಯಲ್ಲಿ ಉಳಿಯುವಂತೆ ನೆರವಾದರೆ, ಪರಿಹಾರ ಬೋಧನೆಯ ತರಗತಿಗಳು ನಿಧಾನ ಕಲಿಕೆಯ ವಿದ್ಯಾರ್ಥಿನಿಯರು ಕೂಡ ಸೋಲದೆ ಮುಂದುವರಿಯಬಲ್ಲರು ಎಂಬುದನ್ನು ಖಾತರಿಪಡಿಸುತ್ತದೆ. ಅಕಾಡೆಮಿಯ ಹೆಚ್ಚುವರಿ ತರಬೇತಿ ತರಗತಿಗಳು ವಿದ್ಯಾರ್ಥಿನಿಯರನ್ನು ಹೊರಗಡೆಯ ಪ್ರಪಂಚಕ್ಕೆ ಸಜ್ಜುಗೊಳಸುತ್ತಿದೆ. ಅದೇ ವೇಳೆ, ಅವರೇ ಎಲ್ಲಾದರೂ ತರಬೇತಿಗಳಿಗೆ ಭಾಗವಹಿಸುವುದಿದ್ದರೆ ಎದುರಿಸಬಹುದಾದ ಅಡೆತಡೆಗಳನ್ನು ನಿವಾರಿಸುತ್ತದೆ. ಅಂತಿಮವಾಗಿ, ವಿದ್ಯಾರ್ಥಿನಿಯರಲ್ಲಿ ಇಂಗ್ಲಿಷ್ ಭಾಷಾ ನೈಪುಣ್ಯತೆಯನ್ನು ಬೆಳೆಸುವ ಸಂಸ್ಥೆಯ ದೂರಗಾಮಿ ವಿಧಾನವು ಪೋಷಕರಿಗೆ ಹೆಚ್ಚುವರಿ ಪ್ರೇರಣೆಯ ಅಂಶವಾಗಿ ಪರಿಣಮಿಸಿದೆ. ವಿದ್ಯಾರ್ಥಿನಿಯರ ಶಿಕ್ಷಣಕ್ಕೆ ಆರ್ಥಿಕ ಪರಿಸ್ಥಿತಿಯು ಮಿತಿಯನ್ನು ಹೇರುವ ಅಂಶವಾಗಿದೆ. ಪ್ರಾಥಮಿಕ ಶಾಲಾ ಮಟ್ಟದಲ್ಲಿ ಮಾತ್ರವಲ್ಲದೆ ಉನ್ನತ ಶಿಕ್ಷಣದ ಸಂದರ್ಭದಲ್ಲೂ ಕೆಕೆಜಿಎಂ ನೀಡುವ ಆರ್ಥಿಕ ಬೆಂಬಲ ಇಲ್ಲದಿದ್ದರೆ ಶಿಕ್ಷಣದಿಂದ ಹೊರಗೆ ಉಳಿಯಬೇಕಿದ್ದ ವಿದ್ಯಾರ್ಥಿನಿಯರು, ಶಿಕ್ಷಣವನ್ನು ಕೊನೆ ತಲುಪಿಸುವುದನ್ನು ಖಾತರಿಪಡಿಸುತ್ತದೆ.

ಅಂತಿಮವಾಗಿ ಆರ್ಥಿಕ ಬೆಂಬಲದ ಹೊರತಾಗಿಯೂ ಯಾವುದೋ ಒಂದು ವಿಭಾಗಕ್ಕೆ ಶಿಕ್ಷಣವನ್ನು ಮುಂದುವರೆಸುವುದಕ್ಕೆ ಸಾಧ್ಯವಾಗುವುದಿಲ್ಲ ಎಂಬುದನ್ನು ಒಪ್ಪಿಕೊಳ್ಳಬೇಕು. ಅಂತಹ ವಿದ್ಯಾರ್ಥಿನಿಯರಿಗೆ ಶಾಲೆಯು ವೃತ್ತಿಪರ ತರಬೇತಿಯನ್ನು ಒದಗಿಸಿ ಅವರ ಮನೆಯ ನಿರ್ಬಂಧಗಳ ಆಚೆಗೆ ಆರ್ಥಿಕವಾಗಿ ಸ್ವತಂತ್ರರಾಗುವುದಕ್ಕೆ ಸಹಾಯ ಮಾಡುತ್ತದೆ. ಈ ನಿಲುವು, ಕಲಿಕೆ ಎಂದರೆ ಉನ್ನತ ಪದವಿಗಳನ್ನು ಪಡೆಯುವ ಶಿಕ್ಷಣ ಮಾತ್ರ ಅಲ್ಲ ಎಂಬ ಭಾವನೆಯನ್ನು ಒತ್ತಿ ಹೇಳುತ್ತದೆ. ಪ್ರತೀ ವಿದ್ಯಾರ್ಥಿನಿಯು ಒಂದಲ್ಲಾ ಒಂದು ಕೌಶಲವನ್ನು ಪಡೆಯುವುದಕ್ಕೆ ಸಹಾಯ ಮಾಡುವುದರ ಮೂಲಕ ಕೆಕೆಜಿಎಂ ಸಂಸ್ಥೆಯು ಪ್ರತಿಯೊಬ್ಬರು ಒಂದು ಉಜ್ವಲ ಭವಿಷ್ಯ ಪಡೆಯುವಂತೆ ಸಿದ್ಧಗೊಳಿಸುತ್ತಿದೆ.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


[i] United Nations International Children's Emergency Fund (UNICEF), *All Children in School by 2015: Global Initiative on Out-of-School Children*. UNESCO Institute for Statistics, New Delhi, 2014

[ii] ASER 2018, *Annual Status of Education Report (Rural): 'Young Children'*, ASER Centre, 2020

[iii] The Print, *Muslim girls less likely to drop out of school than boys at higher education level*, 22 October 2018





**ಸೃಜಿತಾ ಚಕ್ರವರ್ತಿ** ಅವರು ಆ್ಯನ್ ಫೌಂಡೇಷನ್‌ನಲ್ಲಿ ಸ್ವಯಂಸೇವಕರಾಗಿದ್ದು, ಆನ್‌ಲೈನ್ ಮೂಲಕ ಹೆಣ್ಣು ಮಕ್ಕಳಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸುತ್ತಿದ್ದಾರೆ. ಸದ್ಯ ಅವರು ಗಾರ್ಟ್‌ನರ್‌ನಲ್ಲಿ ಹಿರಿಯ ಸಂಶೋಧನಾ ಪರಿಣಿತರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರನ್ನು ಈ ಮಿಂಚಂಚೆಯ ಮೂಲಕ ಸಂಪರ್ಕಿಸಬಹುದು: srijitac@gmail.com

ಅನುವಾದ: **ದೇವಿಕ ಧರ್ಮಿಷ್ಟೆ** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಸ್ಪಂದನಶೀಲ ಶಾಲೆಗಳೇಕೆ ಬೇಕು?

ಸುಬೀರ್ ಶುಕ್ಲ

'ಇಲ್ಲ, ಸರ್. ಅವರು ಯಾವುದಕ್ಕೂ ಸ್ಪಂದಿಸುವುದಿಲ್ಲ, ಸರ್'.

ಅದು 1990ರ ಸಮಯ. ಕೇರಳದಲ್ಲಿ ಬಾಲಕಾರ್ಮಿಕರಿಗಾಗಿ ನಡೆಸುತ್ತಿದ್ದ ಅನೌಪಚಾರಿಕ ಶಿಕ್ಷಣ ಕೇಂದ್ರವೊಂದಕ್ಕೆ (ಇನ್ನೂ ಅವು ಅಸ್ತಿತ್ವದಲ್ಲಿದ್ದ ದಿನಗಳು) ಆಗ ನಾನು ಭೇಟಿ ನೀಡಿದ್ದೆ. ದಿನಪೂರ್ತಿ ದುಡಿಯುತ್ತಿದ್ದ 8ರಿಂದ 12ನೇ ವಯಸ್ಸಿನ ಮಕ್ಕಳು ರಾತ್ರಿ ವೇಳೆ ಈ ಶಿಕ್ಷಣ ಕೇಂದ್ರದಲ್ಲಿರುತ್ತಿದ್ದರು. ಸುಸ್ತಾಗಿ ಬರುವ ಮಕ್ಕಳು ಆಸಕ್ತಿ ತೋರದೇ ಇದ್ದುದರಿಂದ, ಅವರ ಬೋಧಕರು ಪ್ರಾಥಮಿಕ ಸಾಕ್ಷರತಾ ಕೌಶಲಗಳನ್ನು ಕಲಿಸಲು ಪ್ರಯತ್ನಿಸಿ ಹೈರಾಣಾಗಿದ್ದರು. ಅಲ್ಲಿ ಬಳಕೆಯಾಗುತ್ತಿದ್ದ ಪ್ರಾಥಮಿಕ ಪುಸ್ತಕಗಳೆಡೆಗೆ ನಾನು ಕಣ್ಣು ಹಾಯಿಸಿದೆ. ಅದರಲ್ಲಿ ಮಕ್ಕಳ ಬದುಕಿಗೆ ಸಂಬಂಧಿಸಿದ ವಿಚಾರ ಯಾವುದೂ ಇದ್ದಂತೆ ಕಾಣಿಸಲಿಲ್ಲ!! ಹಾಗಾಗಿ ದ್ವಿಭಾಷಿಯ ಸಹಾಯ ಪಡೆದು ಈ ಮಕ್ಕಳೊಡನೆ ನಾನೊಮ್ಮೆ ಮಾತನಾಡಬಹುದೇ ಎಂದು ಕೇಳಿದೆ. ಮಕ್ಕಳು ಇದಕ್ಕೆ ಸ್ಪಂದಿಸುವುದಿಲ್ಲ ಎಂಬುದೇ ಆಗ ನನಗೆ ದೊರೆತ ಉತ್ತರವಾಗಿತ್ತು.

ಆದಾಗ್ಯೂ, ನಾವು ಮುಂದುವರಿದೆವು. ಮಕ್ಕಳು ಬೆಳಗ್ಗಿನಿಂದ ಸಂಜೆಯವರೆಗೆ ಬಳಸಿದ ಸಲಕರಣೆಗಳನ್ನು ಹೆಸರಿಸುವಂತೆ ಅವರನ್ನು ಕೇಳಿದೆ. ಮೊದಮೊದಲು ಸ್ವಲ್ಪ ಹಿಂಜರಿದರೂ, ಸ್ವಲ್ಪದರಲ್ಲೇ ಒಂದು ದೊಡ್ಡ ಪಟ್ಟಿಯನ್ನೇ ನನ್ನ ಮುಂದಿಟ್ಟರು. ಶಿಕ್ಷಕರು ಅವುಗಳನ್ನು ಕಪ್ಪುಹಲಗೆಯ ಮೇಲೆ ಬರೆದುಕೊಳ್ಳಲು ಕಷ್ಟಪಡುವಷ್ಟು ವೇಗವಾಗಿ ಅವನ್ನು ಹೇಳುತ್ತಾ ಹೋದರು. ಬಳಿಕ ನಾವು ಪ್ರತಿ ಸಲಕರಣೆಯೂ ಏತಕ್ಕಾಗಿ ಬಳಕೆಯಾಗುತ್ತದೆ, ಅದರ ಬದಲಿಗೆ ಬೇರೆ ಏನನ್ನಾದರೂ ಬಳಸಲು ಸಾಧ್ಯವೇ ಎಂದು ಮುಂತಾಗಿ ಚರ್ಚಿಸಿದೆವು. ಕಪ್ಪು ಹಲಗೆಯ ಭರ್ತಿ ಮಕ್ಕಳ ಪದಗಳು ಕಾಣತೊಡಗಿದಂತೆ, ಅದೊಂದು 'ಕಲಿಕಾರ್ಥಿ ಉತ್ಪಾದಿತ ಪಠ್ಯ'ವಾಗಿ (Learner-generated text) ಮಾರ್ಪಾಡಾಗಿತ್ತು. ಅದರಲ್ಲಿನ ಪುನರಾವರ್ತನೆಗಳು ಹಾಗು ವಿನ್ಯಾಸಗಳ ಕಾರಣದಿಂದ ಅದು ನಮಗೆ ಓದುವುದನ್ನು ಪರಿಚಯಿಸುವ ಸಾಮಗ್ರಿಯಾಗಿ ಒದಗಿಬಂದಿತು.

ಹಲವು ವರ್ಷಗಳ ಬಳಿಕ, ಜಾರ್ಖಂಡ್‌ನ ಅತಿದೂರದ ಗ್ರಾಮವೊಂದರಲ್ಲಿ ತಡವಾಗಿ ಶಾಲೆಗೆ ಸೇರಿದ ಹುಡುಗನೊಂದಿಗೆ (ಅವನೊಬ್ಬ ಕುರಿಗಾಹಿಯಾಗಿದ್ದ) ಮಾತನಾಡುತ್ತ, ಎಲ್ಲ ಕುರಿಗಳೂ ಒಂದೇ ರೀತಿ ಕಾಣುತ್ತಿದ್ದರೂ ಅವುಗಳನ್ನು ಗುರುತಿಸುವ ಬಗೆ ಹೇಗೆ ಎಂದು ಅವನಲ್ಲಿ ಪ್ರಶ್ನಿಸಿದ್ದೆ. ಅದಕ್ಕೆ ಆತ, ನನ್ನನ್ನು ಬೆರಗಿನಿಂದ ನೋಡಿ, 'ಯಾಕೆ ಸರ್, ನೀವು ಮಕ್ಕಳನ್ನು ನೋಡಿದಾಗ ನಿಮಗೆ ಅವರ ಗುರುತು ಸಿಗುವುದಿಲ್ಲವೇ' ಎಂದು ಉತ್ತರಿಸಿದ್ದ. ಬಳಿಕ ನಾವು ಕುರಿ ಕಾಯುವ ಕಸುಬಿನಲ್ಲಿರುವ ಸವಾಲುಗಳ ಬಗ್ಗೆ ಚರ್ಚಿಸಿದೆವು. ಕುರಿಮಂದೆಯನ್ನು ಒಂದೇ ಕಡೆ ಮೇಯುವಂತೆ ನೋಡಿ–ಕೊಳ್ಳುವುದು ಹೇಗೆ ಎಂಬುದರಿಂದ ಹಿಡಿದು ಬೇರೆಬೇರೆ ಋತುಗಳಲ್ಲಿ ಮಂದೆಯನ್ನು ಹಿಂದಕ್ಕೆ ಅಟ್ಟಿಕೊಂಡು ಹೋಗುವ ಬಗ್ಗೆ, ಕುರಿಗಳಿಗೆ ರೋಗಬಂದಾಗ ಯಾವ ರೋಗಕ್ಕೆ ಯಾವ ಗಿಡಮೂಲಿಕೆ ಬಳಕೆಯಾಗುತ್ತದೆ ಎಂಬದವರೆಗೂ ನಮ್ಮ ಚರ್ಚೆ ಸಾಗಿತ್ತು. ಆ ಹುಡುಗ ಶಾಲೆಗೆ ತಡವಾಗಿ ಸೇರಿದ್ದರಿಂದ ಅವನಿಗೆ 'ವಿಶೇಷ ತರಬೇತಿ' ನೀಡಲಾಗುತ್ತಿತ್ತು. ಉಳಿದ ಮಕ್ಕಳು ಅವನ ಜೊತೆಗೆ ಸಂವಾದಿಸುತ್ತಿರಲಿಲ್ಲ. ತರಗತಿಯಲ್ಲಿ ಮಾತನಾಡದ್ದರಿಂದ ಅವನು ಕಲಿಯುತ್ತಿದ್ದಾನೋ, ಇಲ್ಲವೋ ಎಂದು ಶಿಕ್ಷಕರೂ ಹೇಳಲಾರದಾಗಿದ್ದರು. ಇಷ್ಟಾಗಿಯೂ, ತನ್ನ ಕಸುಬಿನ ಕ್ಷೇತ್ರದಲ್ಲಿ ಅವನು ನಿಷ್ಣಾತನಾಗಿದ್ದು, ತನ್ನ ಜೊತೆಗಾರರ ಮೆಚ್ಚುಗೆ ಗಳಿಸಿದ್ದ.

ಇತ್ತೀಚೆಗೆ, ಮುಂಬೈನ ಧಾರಾವಿ ಕೊಳೆಗೇರಿಯ ಶಾಲೆಯಲ್ಲಿ ನಾಲ್ಕನೇ ತರಗತಿಯ 'ಹಿಂದುಳಿದ' ಎನ್ನಲಾದ ವಿದ್ಯಾರ್ಥಿಗ–ಳೊಂದಿಗೆ ಸಂವಾದಿಸುವಾಗ, ಅವರು ದಿನ ಪೂರ್ತಿ ಏನನ್ನು ಮಾಡಿದರು, ಏನನ್ನು ತಿಂದರು ಎಂದು ಕೇಳಿದೆ. ಅವರಲ್ಲಿ ಅನೇಕರು ಬಿರಿಯಾನಿ ಸವಿದಿದ್ದರು ಎಂದು ತಿಳಿದು ಬಂದಿತು. ಬಿರಿಯಾನಿ ತಯಾರಿಸಲು ಬರುತ್ತದೆಯೇ ಎಂದು ಕೇಳಿದಾಗ, ಸುಮಾರು ಹದಿನೈದು ಮಕ್ಕಳು ಕೈ ಮೇಲೆತ್ತಿದ್ದರು. ಅವರಲ್ಲಿ ಒಬ್ಬನನ್ನು ಕರೆದು ಅದರ ಬಗ್ಗೆ ತರಗತಿಗೆ ವಿವರಿಸು ಎಂದೆ. ಅವನು ವಿವರಿಸತೊಡಗಿದ. ನಡುವೆ, ಹುಡುಗಿಯೊಬ್ಬಳು ಅವನು ಹೇಳುತ್ತಿರುವ ವಿಧಾನ 'ಸರಿ'ಯಲ್ಲ ಎಂದು ತಡೆದಳು. ಅದು ಅವರಿಬ್ಬರ ನಡುವೆ ಬಿರಿಯಾನಿ ತಯಾರಿಸುವ ವಿಧಾನದ ಸೂಕ್ಷ್ಮತೆಗಳ ಬಗ್ಗೆ ಒಂದು ಸುಂದರ ಚರ್ಚೆಗೆ ಕಾರಣವಾಯಿತು!

ಬೇರೆ ಎಲ್ಲೆಡೆಯೂ ಆದಂತೆ, ಮಕ್ಕಳು ಅದೆಷ್ಟು ವಾಚಾಳಿಗಳಿದ್ದಾರೆ ಎಂದು ಅಚ್ಚರಿಪಡುವುದು ಈಗ ಶಿಕ್ಷಕರ ಸರದಿಯಾಗಿತ್ತು. ಏಕೆಂದರೆ, ಮಕ್ಕಳು ಮಾತಾಡುವುದನ್ನೇ ಶಿಕ್ಷಕರು ಕೇಳಿರಲಿಲ್ಲ. ಕೆಲ ನಿಮಿಷಗಳ ಬಳಿಕ, ಮಕ್ಕಳು ತಾವು ಇಷ್ಟಪಡುವ ಓರ್ವಸ್ಥಳೀಯ ಬಿರಿಯಾನಿವಾಲಾನ ಬಗ್ಗೆ ತಿಳಿಸಿದಾಗ, ಅವನು ಪ್ರತಿದಿನ ಎಷ್ಟು ಲಾಭ ಗಿಟ್ಟಿಸುತ್ತಾನೆ ಎಂದು ನಿಮಗೆ ಅನಿಸುತ್ತದೆ ಎಂದು ನಾನು ಕೇಳಿದೆ. ಆಗ ಮಕ್ಕಳು ಅವನ ಆಯವ್ಯಯಗಳನ್ನು ವಿವರವಾಗಿ ಒಡೆದು ಬೇರ್ಪಡಿಸಿ ಲೆಕ್ಕ ಹಾಕಲು ತೊಡಗಿದುದನ್ನು ಕಂಡು ಶಿಕ್ಷಕರು ಮೂಕವಿಸ್ಮಿತರಾದರು. 'ಆದರೆ ಈ ಮಕ್ಕಳು ಗಣಿತದಲ್ಲಿ ಆಸಕ್ತಿಯೇ ಇಲ್ಲದವರು, ಯಾವುದೇ ಲೆಕ್ಕ ಬಿಡಿಸುವ ಸಾಮರ್ಥ್ಯ ಇಲ್ಲದವರು' ಎಂದು ಅವರ ಶಿಕ್ಷಕರು ಹೇಳಿದ್ದರು.

**ಬದಲಾದ ವಸ್ತುಸ್ಥಿತಿಯಲ್ಲಿ ಪಾಠಮಾಡುವುದು**

ತಾವು ಭಾವಿಸಿದಂತೆ ಈ ಮಕ್ಕಳು ಎಂದಿಗೂ ದಡ್ಡರಲ್ಲ ಎಂಬುವುದು ಅರಿವಾದಾಗ ಶಿಕ್ಷಕರು ಹಾಗೂ ಇತರ ಹಿರಿಯರು ಬೆರಗಾಗುವುದನ್ನು ಗುರುತಿಸುವಾಗಲೆಲ್ಲ ಕೊಂಚ ಅಚ್ಚರಿಯಾಗುತ್ತದೆ. ಕೆಲವು ಕಾರಣಗಳಿಗಾಗಿ, ಶಾಲೆಯ ಹೊರಗಿನ ಜೀವನದಿಂದ ಮಕ್ಕಳು ತರುವ ಸಮೃದ್ಧ ಜ್ಞಾನವನ್ನು ಗಮನಿಸಲು ನಮಗೆ ಸಾಧ್ಯವಾಗುವುದಿಲ್ಲ. ಬಹಳಷ್ಟು ಸಾರಿ ಮಕ್ಕಳಿಗೆ ತಮ್ಮ ವಾತಾವರಣದ ಬಗ್ಗೆ ಆಳವಾದ ಅರಿವು ಇರುತ್ತದೆ. ಉದಾಹರಣೆಗೆ, ಬುಡಕಟ್ಟು ಜನಾಂಗದ ಮಗು, ಚಿಂದಿ ಆಯುವ ಮಗು, ಅಡುಗೆ ಮಾಡುವ ಮಕ್ಕಳು ಹಾಗು ಚಿಕ್ಕಮಕ್ಕಳನ್ನು ನೋಡಿಕೊಳ್ಳುವ ಮಕ್ಕಳು ಮತ್ತು ನಾವು 'ಜ್ಞಾನ'ವೆಂದೇ ಪರಿಗಣಿಸದ, ನಮ್ಮ ಪಠ್ಯ–ಪುಸ್ತಕಗಳಲ್ಲಾಗಲೀ, ತರಗತಿಯ ಪ್ರಕ್ರಿಯೆಗಳಲ್ಲಾಗಲೀ ಕಂಡುಬರದ ಇನ್ನೂ ಇತರ ಅನೇಕ ಆಯಾಮಗಳ ಬಗ್ಗೆ ಒಮ್ಮೆ ಯೋಚಿಸಿದರೆ ಸಾಕು.

ಈ ವಿಚಾರದಲ್ಲಿ, ಬೇರೊಂದು ಕಾಲಘಟ್ಟ ಹಾಗೂ ಸನ್ನಿವೇಶದಲ್ಲಿ ಸೃಷ್ಟಿಸಲಾದ ಒಂದು ವ್ಯವಸ್ಥೆಗೆ ಕಾಲಿಟ್ಟಿರುವ ಶಿಕ್ಷಕರ ತಪ್ಪು ನಿಜವಾಗಿಯೂ ಏನೂ ಇಲ್ಲ. ನಾನು ೧೯೮೦ರ ದಶಕದಲ್ಲಿ ಶಿಕ್ಷಣಕ್ಷೇತ್ರದಲ್ಲಿ ಕೆಲಸಮಾಡಲು ಆರಂಭಿಸಿದಾಗ ಸುಮಾರು ಶೇಕಡಾ 40ರಷ್ಟು ಮಕ್ಕಳು ಶಾಲೆಗೆ ಹೋಗುತ್ತಿದ್ದರು ಹಾಗು, ಐದನೇ ತರಗತಿ ಮುಗಿಸುವ ಮುನ್ನವೇ ದೊಡ್ಡ ಪ್ರಮಾಣದಲ್ಲಿ ಮಕ್ಕಳು ಶಾಲೆ ತೊರೆಯುತ್ತಿದ್ದರು. ಯಾರಿಗೆ ಶಾಲೆಗೆ ಹೋಗಲು ಸಾಮರ್ಥ್ಯ-ವಿದೆಯೋ, ಯಾರು ದಿನವೂ ಶಾಲೆಗೆ ಹಾಜರಾಗುತ್ತಾರೋ, ಯಾರಿಗೆ ಮನೆಯಲ್ಲಿ ಬೆಂಬಲ ದೊರೆತು, ಶಾಲೆಯ ಭಾಷೆಯಲ್ಲಿ ಕಲಿಕೆಯನ್ನು ನಿರ್ವಹಿಸುವ ಸಾಮರ್ಥ್ಯವಿರುವುದೋ ಅಂತಹವರನ್ನು ಅಂದು ಚಾಲ್ತಿಯಲ್ಲಿದ್ದ ಶಾಲಾ ವ್ಯವಸ್ಥೆ ಪೊರೆಯುತ್ತಿತ್ತು. ಆದರೆ, ಕೇವಲ ಎರಡು ದಶಕಗಳ ಬಳಿಕ ಶೇಕಡಾ ೯೦ರಷ್ಟು ಮಕ್ಕಳು ಶಾಲೆಯಲ್ಲಿದ್ದರು. ಇದರ ಅರ್ಥ ಈಗ ಶಾಲೆಯಲ್ಲಿ ಇರುವ ಬಹುತೇಕ ಮಕ್ಕಳು ಔಪಚಾರಿಕವಾಗಿ ಶಾಲೆಯ ಮೆಟ್ಟಿಲನ್ನೇ ತುಳಿಯದ ವರ್ಗಗಳಿಂದ ಬಂದವರಾಗಿದ್ದರು. ಆದರೆ, ಅವರೇನೂ ಮೊದಲ ತಲೆಮಾರಿನ ಕಲಿಕಾರ್ಥಿಗಳಲ್ಲ-ಎಲ್ಲಾ ತಲೆಮಾರಿನವರೂ ಬಹಳಷ್ಟು ಕಲಿಯುತ್ತಾರೆ-ಕೇವಲ ಶಾಲಾ ಮೆಟ್ಟಿಲು ತುಳಿಯುವವರ ಪೈಕಿ ಅವರು ಮೊದಲ ತಲೆಮಾರಿನವರು ಆಗಿದ್ದರು, ಅಷ್ಟೇ.

ಇಂದು ವಿದ್ಯಾರ್ಥಿಯ ಚಹರೆ ಬದಲಾಗಿರುವುದೇ ನಾವು ಮಕ್ಕಳನ್ನು ಶಾಲೆಗೆ ಕರೆತರುವುದರಲ್ಲಿ ಕಂಡ ಯಶಸ್ಸಿನ ಮಹತ್ತರ ಫಲವೆನ್ನಬಹುದು. ಬಹುತೇಕ ಸರ್ಕಾರಿ ಶಾಲೆಗಳಲ್ಲಿ ಹಾಗು ಕಡಿಮೆ ಶುಲ್ಕ ಪಡೆಯುವ ಖಾಸಗಿ ಶಾಲೆಗಳಲ್ಲಿ ಈಗ ಇರುವ ವಿದ್ಯಾರ್ಥಿಗಳಿಗೆ ಮಧ್ಯಮವರ್ಗದ ಹಿನ್ನೆಲೆಯಾಗಲೀ, ಅಥವಾ ನಮ್ಮ ಪಠ್ಯಕ್ರಮ, ಪಠ್ಯ ಪುಸ್ತಕ ಹಾಗು ಪ್ರಕ್ರಿಯೆಗಳು ಭಾವಿಸುವ ಸಾಂಸ್ಕೃತಿಕ ಬಂಡವಾಳವಾಗಲೀ ಇಲ್ಲ. ಬಡತನದಲ್ಲಿರುವ ವಿದ್ಯಾರ್ಥಿಗಳಿಗೆ ಶಾಲೆಗೆ ಪ್ರತಿದಿನವೂ ಹಾಜರಾಗಲು ವಿವಿಧ ಕಾರಣಗಳಿಂದಾಗಿ ಕಷ್ಟವಾಗಬಹುದು. ಅವರ ಮನೆಗಳಲ್ಲಿ ಮಗುವಿನ ಅಧ್ಯಯನಕ್ಕೆ ನೆರವಾಗುವ ಹಿರಿಯರೂ ಇಲ್ಲದಿರಬಹುದು. ಅವರಲ್ಲಿ ಬಹುತೇಕ ಮಕ್ಕಳಿಗೆ ಶಾಲಾ ಭಾಷೆಯೂ ಚೆನ್ನಾಗಿ ಬಾರದೇ ಇರಬಹುದು. ಉದಾಹರಣೆಗೆ, ದೆಹಲಿಯ ಕೊಳೆಗೇರಿಯ ಶಾಲೆಯೊಂದರಲ್ಲಿ ವಲಸೆ ಹಾಗು ನಗರೀಕರಣಗಳ ಕಾರಣದಿಂದ ಒಂದು ತರಗತಿಯಲ್ಲಿ ಹತ್ತಕ್ಕೂ ಹೆಚ್ಚು ಭಾಷೆಗಳನ್ನು ಆಡುವ ಮಕ್ಕಳನ್ನು ಕಾಣುವುದು ಸಾಮಾನ್ಯವಾಗಿದೆ. ಇಲ್ಲಿನ ತರಗತಿಗಳಲ್ಲಿ ಪಂಜಾಬಿ ಮಾತನಾಡುವ ಮಗು ಒಡಿಯಾ ಮಾತೃಭಾಷೆಯ ಮಗುವಿನ ಪಕ್ಕದಲ್ಲಿ ಕುಳಿತಿರಲು ಸಾಧ್ಯ. ಅಂತಹ ತರಗತಿಯಲ್ಲಿ ಪಾಠ ಮಾಡುವುದಾದರೂ ಹೇಗೆ?

**'ವಿಫಲವಾಗಲೆಂದೇ ವಿನ್ಯಾಸಗೊಂಡಿರುವ' ಪರಿಸ್ಥಿತಿ**

ನಮ್ಮ ದೇಶದ ವೈವಿಧ್ಯದ ಕಾರಣದಿಂದ ನಮ್ಮ ವಿದ್ಯಾರ್ಥಿ ಜನಸಂಖ್ಯೆಯಲ್ಲಿ ಯಾವಾಗಲೂ ಒಂದು ಮಟ್ಟದ ವ್ಯತ್ಯಾಸ ಕಂಡುಬರುವುದು ಸಾಮಾನ್ಯ. ಆದಾಗ್ಯೂ, ನಾವು ಶಿಕ್ಷಣದ ಸಾರ್ವತ್ರೀಕರಣದ ಕಡೆಗೆ ಸಾಗುವಲ್ಲಿ ಸಫಲರಾಗಿರುವುದರಿಂದ, ಈ ವ್ಯತ್ಯಾಸವು 'ಅತಿ ವೈವಿಧ್ಯ'ವಾಗಿ (Super-diversity) ಪರಿವರ್ತಿತವಾಗಿದೆ. ಇಷ್ಟಾಗಿಯೂ, ವಿದ್ಯಾರ್ಥಿಗಳ ಕಲಿಕೆಯ ವಿಚಾರವಾಗಿ ನಮ್ಮ ವಿಧಾನಗಳು ಹೆಚ್ಚು ಕಡಿಮೆ ಹಿಂದಿನಂತೆಯೇ ಉಳಿದುಬಂದಿದೆ. ಶಿಕ್ಷಕರು ಎಲ್ಲ ಮಕ್ಕಳಿಗೂ ಒಂದೇ ಬಗೆಯ ವಿಷಯವನ್ನು, ಒಂದೇ ವೇಳೆಗೆ, ಏಕಪ್ರಕಾರದ ವಿಧಾನದಿಂದ ಬೋಧಿಸಿ, ಒಂದೇ ತೆರನ ಫಲಿತಾಂಶಗಳನ್ನು ಪಡೆಯಬೇಕು ಎಂದು ಇನ್ನೂ ನಾವು ನಿರೀಕ್ಷಿಸುತ್ತೇವೆ. ಇದು ಸೋಲಲೆಂದೇ ವಿನ್ಯಾಸಗೊಳಿಸಿದಂತಹ (Designed to fail) ವಿಚಾರವಾಗಿದೆ; ಏಕೆಂದರೆ, ಉಳಿದಂತೆ ಬಹು ಚುರುಕಾಗಿಯೂ, ಸಮರ್ಥರಾಗಿಯೂ ಇರುವ ಬಹುದೊಡ್ಡ ಪ್ರಮಾಣದ ಮಕ್ಕಳು ಒಂದಲ್ಲ ಒಂದು ಕಾರಣಕ್ಕೆ ಕಲಿಕಾ ಪ್ರಕ್ರಿಯೆಯಿಂದ ಹೊರಗೆ ಉಳಿಯುವುದನ್ನು ಖಾತ್ರಿಪಡಿಸಿರುವುದಷ್ಟೇ ಇದರ ಸಾಧನೆ. ಎಲ್ಲರಿಗೂ ಒಂದೇ ಅಳತೆಯ ಮಾನದಂಡವನ್ನು ಹುಟ್ಟುಹಾಕುವ ಮೂಲಕ ನಾವು ಬಹುತೇಕ ಮಕ್ಕಳು (ಹಾಗು ಅವರ ಕುಟುಂಬಗಳು) ವ್ಯವಸ್ಥೆಯ ಮೂಲಭೂತ ನಿರೀಕ್ಷೆಗಳನ್ನು ಪೂರೈಸಲು ಆಗದಂತಹ, ಬಹುಭಾಗವನ್ನು ಕೈಬಿಡಬೇಕಾಗಿ ಬರುವಂತಹ ಪರಿಸ್ಥಿತಿಯನ್ನು ನಿರ್ಮಿಸಿದ್ದೇವೆ. ನಮ್ಮ ಶಿಕ್ಷಕರು ಎದುರಿಸುವ ಕ್ಲಿಷ್ಟ ಸಮಸ್ಯೆಗಳು, ನಮ್ಮ ವ್ಯವಸ್ಥೆಯು ಉತ್ಪಾದಿಸುವ ಕಳಪೆ ಗುಣಮಟ್ಟದ ಕಲಿಕೆ ಹಾಗು ಅದು ಹುಟ್ಟುಹಾಕುವ ಕೀಳು ಮಟ್ಟದ ಪ್ರೇರಣೆಗಳು ನಮ್ಮ ವ್ಯವಸ್ಥೆಯ ಸಹಜ ಬಹಿಷ್ಕಾರಾತ್ಮಕ ಸ್ವಭಾವದ ಪರಿಣಾಮಗಳನ್ನು ಪ್ರತಿನಿಧಿಸುತ್ತವೆ.

**ಸ್ಪಂದನಶೀಲ ವಿಧಾನದ ಹಾದಿ**

ಈ 'ವಿಫಲವಾಗಲೆಂದೇ ವಿನ್ಯಾಸಗೊಂಡಿರುವ' ಪರಿಸ್ಥಿತಿಯನ್ನು ನಿಭಾಯಿಸಲು ನಾವು ಏನನ್ನು ಮಾಡಬಹುದು? ಮೊದಲಿಗೆ, ನೀವೇನಾದರೂ ಶಿಕ್ಷಕರಾಗಿದ್ದರೆ, ಯಾವುದನ್ನು ಮಕ್ಕಳ 'ಜ್ಞಾನ ಸಂಚಯ' (Fund of knowledge) ಎನ್ನುತ್ತೇವೆಯೋ ಅದರಿಂದ ಆರಂಭಿಸಬೇಕು. ಇದು ಶಾಲೆಯ ಹೊರಗಿನ ಜಗತ್ತಿನಿಂದ ಮಕ್ಕಳು ತಮ್ಮ ತರಗತಿಗೆ ತರುವ ಜ್ಞಾನವಾಗಿರುತ್ತದೆ. ಪ್ರತಿ ಮಗುವೂ ಒಂದಲ್ಲ ಒಂದರಲ್ಲಿ ನೈಪುಣ್ಯತೆ ಗಳಿಸಿರುತ್ತದೆ. ಉದಾಹರಣೆಗೆ, ಬೌದ್ಧಿಕ ವಿಕಲತೆಯಿಂದ ಬಳಲುವ ಮಗುವು ತನಗಾಗಿ ಕಾಳಜಿ ತೋರುವವರ ಭಾವನೆಗಳನ್ನು ಎಷ್ಟು ಚೆನ್ನಾಗಿ ಅರಿತಿರುತ್ತದೆ ಎಂಬ ವಿಚಾರವು ನಮಗೆ ಅಚ್ಚರಿ ತರಬಹುದು.

ಆ ನೈಪುಣ್ಯ ಹಾಗು ಜ್ಞಾನಗಳು ಹೊರಬಂದು, ಎಲ್ಲರೊಂದಿಗೆ ಹಂಚಿಕೆಯಾಗಿ, ಚರ್ಚೆಗೊಳಪಟ್ಟು, ನಾವು ಏನನ್ನು ಬೋಧಿಸಲು ಪ್ರಯತ್ನಿಸುತ್ತೇವೋ ಅದರೊಂದಿಗೆ ಬೆಸೆಯಲ್ಪಡುವುದಾದರೂ ಎಂತು? ನಿಮ್ಮ ತರಗತಿಯಲ್ಲಿ ಮಕ್ಕಳಿಗೆ ಮಾತನಾಡಲು ಅವಕಾಶವಿದೆ ಎಂದು ಇದು ಭಾವಿಸುತ್ತದೆ. ಆದ್ದರಿಂದ, ನಮ್ಮ ತರಗತಿಗಳು ಉಲ್ಲಾಸಭರಿತವಾಗಿದ್ದು, ಮಕ್ಕಳು ಸಕ್ರಿಯವಾಗಿ ಭಾಗವಹಿಸಲು ಹಿಂಜರಿಯದಂತಹ ವಾತಾವರಣವನ್ನು ಖಾತ್ರಿಪಡಿಸುವುದೇ ಈ ನಿಟ್ಟಿನಲ್ಲಿ ನಿಜವಾಗಿಯೂ ನಮ್ಮ ಮೊದಲ ನಿರೀಕ್ಷೆಯಾಗಿದೆ. ಈ ವಿಚಾರದಲ್ಲಿ ನಮ್ಮ ರಹಸ್ಯ ಅಸ್ತ್ರವೆಂದರೆ ನಗುನಗುತ್ತಿರುವುದು. ಇದರಿಂದ ಲಾಭವಿದೆ! ಬಳಿಕ, ಮೇಲೆ ಹೇಳಿದಂತೆ, ಮಕ್ಕಳ ಅನುಭವಗಳ ಬಗ್ಗೆ ಪ್ರಶ್ನೆಗಳನ್ನು ಕೇಳುವ ಮೂಲಕ ನಾವು ಬೋಧಿಸಬೇಕಿರುವ ವಿಷಯಕ್ಕೆ ಅವರ ಮನಸ್ಸನ್ನು ಬೆಸೆಯುವ ಮಾರ್ಗಗಳನ್ನು ಕಂಡುಕೊಳ್ಳುವುದು. ಇದರಿಂದ ಅನೇಕ ಬಾರಿ ಕೆಲಸ ಕೈಗೂಡುತ್ತದೆ (ಆದರೆ ಯಾವಾಗಲೂ ಅಲ್ಲ). ಆದರೆ, ಒಮ್ಮೆ ನಿರ್ಣಾಯಕ ತಿರುವು ದೊರೆತಿದ್ದೇ ಆದರೆ, ಅಂದರೆ, ಮಕ್ಕಳನ್ನು ಕಲಿಕೆಯ ಪ್ರಕ್ರಿಯೆಯಲ್ಲಿ ತೊಡಗಿಸಿದರೆ ಬಳಿಕ, ಹಲವು ವೇಳೆ ನಾವು ಸಾಮಾನ್ಯವಾಗಿ ಬಳಸುವ ವಿಧಾನಗಳಲ್ಲೇ ಇನ್ನೂ ತೀವ್ರಗತಿಯಿಂದ ಮುಂದುವರಿಯಬಹುದು.

ಶಿಕ್ಷಕರು ಪಠ್ಯವಿಷಯವನ್ನು 'ಬೋಧಿಸಿ ಮುಗಿಸುವ' ಅಥವಾ ಪಠ್ಯಪುಸ್ತಕದ ಎಲ್ಲಾ ಪಾಠಗಳನ್ನು ನಿಗದಿತ ಸಮಯಕ್ಕೆ 'ಮಾಡಿ ಮುಗಿಸುವ' ಒತ್ತಡದಲ್ಲಿ ಸದಾ ಸಿಲುಕುವುದು ಸ್ವಾಭಾವಿಕ. ಅವರು ಬೋಧಿಸಬೇಕಿರುವ ಪಠ್ಯಪುಸ್ತಕಗಳು ನೀರಸವಾಗಿಯೂ, ಮಕ್ಕಳು ಸಕ್ರಿಯವಾಗಿ ತೊಡಗಿಸಿಕೊಳ್ಳಲು ತಕ್ಕಮಟ್ಟಿನ ಸಾಧ್ಯತೆಗಳನ್ನು ತೆರೆಯದೇ ಇರುವಂತೆಯೂ, ಮಕ್ಕಳ ಬದುಕಿಗೂ, ಪಾಠಕ್ಕೂ ಸಂಬಂಧವೇ ಇರದಂತೆಯೂ ತೋರಬಹುದು. ಆದರೆ, ಇಂತಹ ಪರಿಸ್ಥಿತಿಯಲ್ಲೂ, ಅತಿ ಕ್ರಿಯಾತ್ಮಕವಾದ, ಪ್ರತಿ ಮಗುವೂ ಕಲಿಕೆಯಲ್ಲಿ ತೊಡಗಿರುವಂತಹ ತರಗತಿಗಳನ್ನು ನಡೆಸಲು ಸಾಧ್ಯವಿದೆ. ಉದಾಹರಣೆಗೆ, ಮೊಲ ಮತ್ತು ಆಮೆಯ ಸ್ಪರ್ಧೆಯ ಹಳೆ ಕಥೆಯನ್ನೇ ತೆಗೆದುಕೊಳ್ಳೋಣ. ಮಕ್ಕಳು ಮೊಲಕ್ಕೆ

ಸಮಾಧಾನಕರ ಪ್ರಶಸ್ತಿಪತ್ರ ತಯಾರಿಸುವಂತೆಯೋ, ಮೊಲ ಮಲಗಿದ್ದಾಗ ಅದು ಕಂಡ ಕನಸನ್ನು ಹಂಚಿಕೊಳ್ಳುವಂತೆಯೋ ಅಥವಾ, ಗೆದ್ದು ಬೀಗುತ್ತಿರುವ ಶ್ರೀಯುತ ಆಮೆಯವರು ಕರೆದಿರುವ ಪತ್ರಿಕಾ–ಗೋಷ್ಠಿಯಲ್ಲಿ ನೀಡಬಹುದಾದ ಸಂದರ್ಶನದ ಕುರಿತೋ ಹೇಳುವಂತೆ ಕೇಳಬಹುದು.

ಎಲ್ಲ ಶಿಕ್ಷಕ ತರಬೇತಿ ಕಾರ್ಯಕ್ರಮಗಳೂ ಒಂದಲ್ಲ ಒಂದು ಬಗೆಯ ಚಟುವಟಿಕೆ ಆಧಾರದ ಕಲಿಕೆ ಅಥವಾ ರಚನಾತ್ಮಕ ಬೋಧನಕಲೆಯ (Activity-based learning or constructivist pedagogy) ಪರವಾದ ಸಲಹೆಗಳನ್ನು ನೀಡುತ್ತವೆ. ಹೀಗಾಗಿ, ಮಕ್ಕಳನ್ನು ಸವಾಲಿಗೊಡ್ಡುವ ಕಾರ್ಯಗಳಲ್ಲಿ ಭಾಗವಹಿಸುವಂತೆ ಮಾಡುವ, ಅವುಗಳ ಬಗ್ಗೆ ಚಿಂತನೆಗೆ ಹಚ್ಚುವ ಅಥವಾ ಹೊಸ ಪರಿಸ್ಥಿತಿಗಳಲ್ಲಿ ಮಕ್ಕಳು ತಾವು ಕಲಿತಿದ್ದನ್ನು ಪ್ರಯೋಗಿಸಲು ಮುಂದಾಗುವಂತೆ ಮಾಡುವ ಶಿಕ್ಷಕರು, ಅವರಿಂದ ನಿರೀಕ್ಷಿಸುವುದನ್ನೇ ನಿಜವಾಗಿಯೂ ಮಾಡುತ್ತಿರುತ್ತಾರೆ.

ಇಂತಹ ಪ್ರಕ್ರಿಯೆಯಲ್ಲಿ ಮಕ್ಕಳ ವಿವಿಧ ಅಗತ್ಯಗಳನ್ನು ಪೂರೈಸಲು ಯತ್ನಿಸುವುದು ಹೇಗೆ? ಹೆಚ್ಚಿನ ಸಂಖ್ಯೆಯ ಮಕ್ಕಳು ತಮ್ಮಷ್ಟಕ್ಕೆ ತಾವೇ ಮಾಡುವಂತಹ ಕೆಲಸವನ್ನು ನೀವು ನೀಡಿದಾಗಲೆಲ್ಲಾ ಇದು ಸಾಧ್ಯವಾಗುತ್ತದೆ. ಉದಾಹರಣೆಗೆ, ನಾವೀಗ ಕಟ್ಟಿದ ಕಥೆಯನ್ನು ಆಧರಿಸಿ ಒಂದು ಚಿತ್ರವನ್ನು ಬಿಡಿಸುವಂತೆಯೋ, ಅಲ್ಲಿನ ಪಾತ್ರಗಳಿಗೆ ಜೀವ ತುಂಬಿ ಅಭಿನಯಿಸುವಂತೆಯೋ, ತರಗತಿಯ ನಕ್ಷೆಯನ್ನು ತಯಾರಿಸುವಂತೆಯೋ ಅಥವಾ ಪ್ರತಿ ಮಗುವಿನ ಬಿಸಿಯೂಟದ ಖರ್ಚನ್ನು ಅಂದಾಜು ಮಾಡುವಂತೆಯೋ ಹೇಳಬಹುದು. ಆಗ, ತರಗತಿ ಸಾಗುತ್ತಿರುವಂತೆಯೇ, ನಿಮಗೆ 10–15 ನಿಮಿಷ ಬಿಡುವು ದೊರೆತು ಒಂದಲ್ಲ ಒಂದು ಕಾರಣಕ್ಕೆ ಹಿಂದೆ ಬೀಳುವ ಮಕ್ಕಳನ್ನು ಗಮನಿಸಿಕೊಳ್ಳಲು ಸಾಧ್ಯವಾಗುತ್ತದೆ. ಹೆಚ್ಚಿನ ಕಾಲಾವಕಾಶ ಹಾಗು ಬೆಂಬಲಗಳನ್ನು ಬಯಸುವ ಆ ಮಕ್ಕಳಿಗೆ ವೈಯಕ್ತಿಕವಾಗಿ ವಿಶೇಷ ಗಮನವಿತ್ತು ಬೇಕಾದದ್ದನ್ನು ನೀಡಲು ಇದು ಅವಕಾಶ ಮಾಡಿಕೊಡುತ್ತದೆ. ಈ ರೀತಿ, ತರಗತಿಯಲ್ಲಿ ನಿಷ್ಪಕ್ಷಪಾತ ಎಂದರೆ, 'ಪ್ರತಿ ಮಗುವಿಗೂ ಅದರ ಅಗತ್ಯಕ್ಕೆ ತಕ್ಕಂತೆ' ಬೆಂಬಲ, ಅವಕಾಶ ಹಾಗು ಶಿಕ್ಷಕರ ಸಮಯ ದೊರೆಯುವುದು ಎಂಬ ಅರ್ಥವನ್ನು ಪಡೆಯುತ್ತದೆ. ಇಡೀ ತರಗತಿಗೆ ಪಾಠಹೇಳಿದ ಬಳಿಕ 'ಪರಿಹಾರಾತ್ಮಕ' (Remedial) ತರಗತಿಗಳನ್ನು ನಡೆಸುವ ವಿಧಾನಕ್ಕಿಂತ ಇದು ಬಹುಪಟ್ಟು ಉತ್ತಮ. ಆದರೆ ಇದನ್ನೆಲ್ಲ ಮಾಡಲು ನಮಗೆ ಸ್ವಾತಂತ್ರ್ಯವಿಲ್ಲ ಎಂದು ನೀವು ಹೇಳಬಹುದು. ಕೆಟ್ಟದಾಗಿ ಪಾಠ ಮಾಡಿ ಕಳಪೆ ಫಲಿತಾಂಶಗಳನ್ನು ಪಡೆಯಲು ನಮಗೆ ಸ್ವಾತಂತ್ರ್ಯವಿದೆ, ಆದರೆ, ನಮ್ಮ ತರಗತಿಯ ಪ್ರಕ್ರಿಯೆಗಳನ್ನು ಸುಧಾರಿಸುವ ಸಂಗತಿಗಳನ್ನು ಪ್ರಯೋಗಿಸಿ ನೋಡಲು ಸ್ವಾತಂತ್ರ್ಯವಿಲ್ಲ! ಇದಕ್ಕೇನು ಕಾರಣ ಎಂಬುದು ನಿಜಕ್ಕೂ ಯೋಚಿಸಬೇಕಾದ ವಿಷಯವೇ ಹೌದು. ಇದನ್ನೊಮ್ಮೆ ಪ್ರಯತ್ನಿಸಿ ನೋಡಿ, ಬಳಿಕ ಏನಾಗುತ್ತದೋ ಅದರ ಆಧಾರದ ಮೇಲೆ ನಿಮ್ಮ ನಿರ್ಧಾರಗಳಿಗೆ ಬನ್ನಿ ಎಂದಷ್ಟೇ ನಾನು ಹೇಳಬಹುದು.

**ಹೊಣೆಗಾರಿಕೆ ತೋರುವುದು**

ಇದರ ಅರ್ಥ ಪರಿಹಾರಗಳನ್ನು ಶಿಕ್ಷಕರು ಮಾತ್ರ ಶೋಧಿಸಬೇಕು ಎಂಬುದಲ್ಲ. ಅದಕ್ಕೆ ಬದಲಾಗಿ, ನಮ್ಮ ವಾಸ್ತವಿಕತೆಗಳ ಜೊತೆಗೆ ಸಮಕಾಲೀನ, ಸಾಕ್ಷ್ಯಾಧಾರಿತ ಚಿಂತನೆಯನ್ನು ಪರಿಗಣಿಸಿ ನಾವು ನಮ್ಮ ಮೂಲ ಶಿಕ್ಷಣ ಪ್ರಕ್ರಿಯೆಗಳನ್ನು ಪುನರ್‌ವಿನ್ಯಾಸಗೊಳಿಸುವ ಮೂಲಕ ಶಿಕ್ಷಕರ ಪ್ರಯತ್ನಗಳನ್ನು ಬಲಪಡಿಸುವ ಅಗತ್ಯವಿದೆ. ನಮ್ಮ ಪಠ್ಯಕ್ರಮವು ವಿಷಯಾಧಾರಿತ ಪಠ್ಯಕ್ರಮದಿಂದ ಮೂಲ ಸಾಮರ್ಥ್ಯಗಳೆಡೆಗೆ ಬದಲಾಗುವಂತೆ ಅದನ್ನು ಪುನರ್ ಪರಿಶೀಲನೆಗೆ ಒಳಪಡಿಸುವ ವಿಚಾರಕ್ಕೂ ಇದು ಅನ್ವಯಿಸುತ್ತದೆ. ಮಾಹಿತಿಯ ಆಕರಗಳಾಗಿರುವ ನಮ್ಮ ಪಠ್ಯಪುಸ್ತಕಗಳು ಕಲಿಕಾ ಪ್ರಕ್ರಿಯೆಯನ್ನು ಪ್ರಚೋದಿಸುವಂತೆ ಮಾಡಬೇಕಿದೆ; ನಮ್ಮ ಮೌಲ್ಯಮಾಪನ ಪದ್ಧತಿಯನ್ನು ಭಯ ಉತ್ಪಾದಿಸುವ, ತರ್ಕರಹಿತ ತೀರ್ಮಾನಗಳಿಗೆ ಬರುವ ಪ್ರಕ್ರಿಯೆಯಿಂದ ಮುಕ್ತಗೊಳಿಸಿ ಮಕ್ಕಳು ತಮ್ಮ ಪ್ರಗತಿಯ ಜವಾಬ್ದಾರಿಯನ್ನು ತಾವೇ ತೆಗೆದುಕೊಳ್ಳುವಂತೆ ಅವರ ಸಬಲೀಕರಣಕ್ಕೆ ಎಡೆಮಾಡುವ ಬೋಧನಕಲೆಯ ಸಾಧನವನ್ನಾಗಿಸಬೇಕಿದೆ; ಶ್ರೇಣೀಕೃತವೂ, ಬೋಧನ ರೂಪದ್ದೂ ಆದ ನಮ್ಮ ಶಿಕ್ಷಕ ವೃತ್ತಿಕೌಶಲ ವಿಕಾಸವು ಶಿಕ್ಷಕರೊಂದಿಗೆ ಅಧಿಕಾರದ ಪಾಲುಗಾರಿಕೆಯ, ಜೊತೆ ಸೇರಿ ಅವರ ಗುರಿಗಳನ್ನು ರೂಪಿಸಿ, ಅವುಗಳನ್ನು ತಲುಪಲು ಅವರ ಬೆನ್ನೆಲುಬಾಗಿ ನಿಲ್ಲಬಲ್ಲ ಕಾರ್ಯಕ್ರಮವಾಗಿ ಬದಲಾಗಬೇಕಿದೆ. ಶಾಲೆಗೆ ಮಕ್ಕಳು ಹೊಂದಿಕೊಳ್ಳುವುದಲ್ಲ, ಶಾಲೆಯು ಮಕ್ಕಳಿಗೆ ಹೊಂದಿಕೊಳ್ಳ–ಬೇಕಿರುವುದರಿಂದ ದೃಷ್ಟಿಕೋನಕ್ಕೆ ಸಂಬಂಧಿಸಿದಂತೆ ಈ ಬದಲಾವಣೆಗಳ ಅಗತ್ಯವಿದೆ. ಅಂತಹ ಶಾಲೆಯು 'ಸಂವೇದನಶೀಲ' ಶಾಲೆ ಎನಿಸಿಕೊಳ್ಳುತ್ತದೆ. ಮಕ್ಕಳೇ ನಿಜವಾದ ಹಕ್ಕುದಾರರಾಗಿದ್ದು, ನಾವು ಕರ್ತವ್ಯ ನಿರ್ವಾಹಕರಾಗಿರುವಂತಹ ಪರಿಸ್ಥಿತಿಯಲ್ಲಿ ನಾನು 'ಸಮನ್ವಯ' (Inclusive) ಎಂಬ ಪದವನ್ನು ಬಳಸಲು ಬಯಸುವುದಿಲ್ಲ; ಏಕೆಂದರೆ ಈ ಪದವು, ಯಾಕೋ ಏನೋ, 'ನಾವು ನಿನ್ನನ್ನು ಒಪ್ಪಿಕೊಂಡಿದ್ದೇವೆ' ಎಂಬ ಅನುಗ್ರಹ ತೋರಿಸುವ ಅರ್ಥವನ್ನು ಸೂಚಿಸುತ್ತದೆ. ಹೀಗಾಗಿ, ಪ್ರತಿ ಮಗುವೂ ಒಂದು ಸಾರ್ಥಕತೆಯ ಮನೋಭಾವದ ಕಲಿಕಾ ಅನುಭವವನ್ನು ಪಡೆಯುವುದರ ಮೂಲಕ ತನ್ನ ಸಾಮರ್ಥ್ಯವನ್ನು ಸಾಕ್ಷಾತ್ಕರಿಸಿ–ಕೊಳ್ಳುವಂತೆ ಆಗಲು ಬಹುಶಃ ಶಿಕ್ಷಣವನ್ನು ನೋಡುವ ನಮ್ಮ ರೀತಿಯಲ್ಲಿ ಗಮನಾರ್ಹ ಬದಲಾವಣೆಯನ್ನು ತರುವ ಅಗತ್ಯವಿದೆ.

---



**ಸುಬೀರ್ ಶುಕ್ಲಾ** ಅವರು ಗ್ರೂಪ್ ಇಗ್ನಸ್ ಜೊತೆಗಿದ್ದು, ಅಂಚಿನಲ್ಲಿರುವ ಮಕ್ಕಳ ಅಗತ್ಯಗಳತ್ತ ಗಮನಹರಿಸುವ, ಭಾರತ ಹಾಗು ಏಷಿಯಾ, ಆಫ್ರಿಕಾ ಖಂಡಗಳ ಇತರ ದೇಶಗಳ ಶೈಕ್ಷಣಿಕ ವ್ಯವಸ್ಥೆಗಳ ಗುಣಮಟ್ಟ ಸುಧಾರಿಸುವ ವಿಷಯದಲ್ಲಿ ಕಾರ್ಯನಿರತರಾಗಿದ್ದಾರೆ. ಅವರು 1995–98ರಲ್ಲಿ 'ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ'ದ ಮುಖ್ಯ ಸಲಹೆಗಾರರಾಗಿದ್ದರು ಹಾಗು 2009–11ರಲ್ಲಿ ಮಾನವ ಸಂಪನ್ಮೂಲ ಸಚಿವಾಲಯದ ಶಿಕ್ಷಣ ಗುಣಮಟ್ಟ ಸುಧಾರಣಾ ಸಲಹೆಗಾರರಾಗಿದ್ದು, 2009ರ ಶಿಕ್ಷಣ ಹಕ್ಕು ಕಾಯ್ದೆಯ ಗುಣಮಟ್ಟ ಚೌಕಟ್ಟನ್ನು ವಿಕಾಸಗೊಳಿಸುವಲ್ಲಿ ಮುಂಚೂಣಿಯಲ್ಲಿದ್ದರು. ಅವರು 'ಶಾಲಾ ಶಿಕ್ಷಣ–2035ರ ಭಾರತದ ಕಾಣ್ಕೆ'ಯನ್ನು ಅಭಿವೃದ್ಧಿಗೊಳಿಸುವ ಜವಾಬ್ದಾರಿ ಹೊತ್ತು ನೀತಿ ಆಯೋಗದ ತಜ್ಞರ ತಂಡದ ಸದಸ್ಯರಾಗಿದ್ದಾರೆ. ಸುಬೀರ್ ಅವರು ಮನನ್ ಪುಸ್ತಕ ಸರಣಿಯನ್ನು ಮಕ್ಕಳಿಗಾಗಿ ಪ್ರಕಟಿಸುತ್ತಾರೆ; ಮೂಲಭೂತ ಕಲಿಕೆಯ ವಿಚಾರಗಳನ್ನು ಪ್ರತಿಪಾದಿಸುವ 'ಚಾಹಕ್' ಎಂಬ ನಿಯತಕಾಲಿಕವೊಂದನ್ನು ಮಕ್ಕಳಿಗಾಗಿ ಹೊರತರುತ್ತಿದ್ದಾರೆ. ಇತ್ತೀಚೆಗೆ, ಸ್ಪ್ರಿಂಗರ್ (ಸಿಂಗಾಪೂರ) ಪ್ರಕಾಶನಾಲಯವು ಹೊರತಂದಿರುವ (ಅಕ್ಟೋಬರ್, 2019) 'ಇಪ್ಪತ್ತೊಂದನೆಯ ಶತಮಾನದಲ್ಲಿ ಮಗುವಿನ ವಿಕಾಸ ಹಾಗು ಶಿಕ್ಷಣ' ಎಂಬ ಪುಸ್ತಕದ ಲೇಖಕರಲ್ಲಿ ಒಬ್ಬರಾಗಿದ್ದಾರೆ. ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: subirshukla@gmail.com

---

ಅನುವಾದ: **ಕುಶಾಲ್ ಬಿ ಎಸ್** । ಪರಿಶೀಲನೆ: **ಚಂದ್ರಶೇಖರ್ ಮಂಡೆಕೋಲು**

# ಶಿಕ್ಷಾಮಿತ್ರ | ಒಂದು ಪ್ರಾಯೋಗಿಕ ಶಾಲೆ ಮತ್ತು ಸಂಪನ್ಮೂಲ ಕೇಂದ್ರ

ಸುದೇಷ್ಣಾ ಸಿನ್ಹಾ

ವಿಶೇಷ ಶಿಕ್ಷಣದಲ್ಲಿರುವ ಹಿನ್ನೆಲೆ ಹಾಗೂ ಕೋಲ್ಕತ್ತಾದಲ್ಲಿ (1994–2004) ವಲಸೆ ಮಕ್ಕಳಿಗಾಗಿ ಹಿಂದಿ ಮಾಧ್ಯಮ ಶಾಲೆಯನ್ನು ನಡೆಸುವಲ್ಲಿನ ಹಲವು ವರ್ಷಗಳ ಅನುಭವ ಎರಡೂ ಸೇರಿ ನನ್ನನ್ನು ಮತ್ತು ನನ್ನ ಆತ್ಮೀಯ ಜೊತೆಗಾರರನ್ನು ಹಲವಾರು ಬಾರಿ ಮಕ್ಕಳ ಶಿಕ್ಷಣದ ಅಗತ್ಯಗಳನ್ನು ಅದರಲ್ಲೂ ವಿಶೇಷವಾಗಿ ಕಡಿಮೆ ಆದಾಯದ ಗುಂಪಿನ ಮಕ್ಕಳ ಅಗತ್ಯಗಳನ್ನು ವಿಶ್ಲೇಷಿಸುವಂತೆ ಮಾಡಿವೆ. ಈಗಾಗಲೇ ಬಹಳಷ್ಟು ಮಂದಿಗೆ ತಿಳಿದಿರುವ ವಿಷಯವನ್ನು ನನ್ನ ಇಷ್ಟು ಅನುಭವವೂ ನನಗೆ ಮನದಟ್ಟು ಮಾಡಿದೆ. ಅಂದರೆ ಎಲ್ಲರಿಗೂ ಹತ್ತು – ಹನ್ನೆರಡು ವರ್ಷಗಳ ಕಾಲ ಒಂದೇ ಬಗೆಯ ನಿರ್ಧರಿತ ಪಠ್ಯಕ್ರಮವನ್ನು ಭಾಷೆಯಲ್ಲಿ ಬೋಧಿಸುವ ವ್ಯವಸ್ಥೆಯು ಯಾವುದೇ ರೀತಿ ಅವರವರ ವೈಯಕ್ತಿಕತೆ ಮತ್ತು ಸಾಮರ್ಥ್ಯಗಳಿಗೆ ಗೌರವ ನೀಡುವುದಿಲ್ಲ. ಜೊತೆಗೆ ಅವರ ಮುಂದಿನ ಬದುಕಿಗೆ ಉತ್ತಮವಾಗಿ ಸಿದ್ಧ ಮಾಡುವುದಿಲ್ಲ. ಅಷ್ಟೇ ಅಲ್ಲ ವ್ಯವಸ್ಥೆಯೊಳಗೆ ಹೊಂದಿಕೊಳ್ಳಲು ಪ್ರಯತ್ನಪಡುತ್ತಲೇ ಅಂಚಿನಲ್ಲಿದ್ದ ಬಹಳಷ್ಟು ಮಂದಿ ತಮ್ಮ ಬದುಕಿನ ಕೌಶಲ್ಯಗಳನ್ನು ಕಳೆದುಕೊಂಡು ಹೊರದೂಡಲ್ಪಟ್ಟರು.

2004ರಲ್ಲಿ ಕೆಲವು ಜೊತೆಗಾರರೊಂದಿಗೆ, ನಾನು 10ರಿಂದ 14 ವರ್ಷದ ವಯೋಮಾನದ ಸೃಜನಾತ್ಮಕ ಮತ್ತು ಉತ್ತಮ ತಾರ್ಕಿಕತೆಯ ಸ್ಥಿತಿಯಲ್ಲಿದ್ದ ಮಕ್ಕಳಿಗೆ ಬಂಗಾಲಿ ಮಾಧ್ಯಮದ ಶಾಲೆಯನ್ನು ತೆರೆಯಲು ನಿರ್ಧರಿಸಿದೆನು. ಆ ಮಕ್ಕಳು ಅವರು ಬಹಳ ಸೂಕ್ಷ್ಮ ಸ್ಥಿತಿಯಲ್ಲಿದ್ದು ಶಾಲೆಯಿಂದ ಹೊರ ಬೀಳುವ ಸಾಧ್ಯತೆಗಳು ಹೆಚ್ಚಿತ್ತು. ಅಲ್ಲದೆ ಆ ವಯಸ್ಸಿನಲ್ಲಿ ಮಕ್ಕಳು ಮೂಲ ಅಕ್ಷರ ಜ್ಞಾನ ಮತ್ತು ಸಂಖ್ಯೆಗಳ ಜ್ಞಾನವನ್ನು ಪಡೆದುಕೊಂಡಿರಬೇಕೆಂಬ ನಿರೀಕ್ಷೆ ಇದ್ದಿತು. ಹಾಗಾಗಿ ನಮ್ಮ ಚಿಂತನೆಯಲ್ಲಿದ್ದ ವಿವಿಧ ಪಠ್ಯಕ್ರಮದ ಪ್ರಯೋಗಗಳಿಗೆ ನಾವು ಸಿದ್ಧರಾಗಿದ್ದೆವು.

**ಆರಂಭ (2005–2011)**

ನಾವು ದಕ್ಷಿಣ ಕೋಲ್ಕತ್ತದ ಪ್ರಸಿದ್ಧ ಕಾಳಿಘಾಟ್ ದೇವಸ್ಥಾನದ ಸಮೀಪದಲ್ಲಿದ್ದ ಚೇಟ್ಲಾ ಎಂಬ ಪ್ರದೇಶದಲ್ಲಿ ಒಂದು ಸ್ಥಳವನ್ನು ಆಯ್ಕೆ ಮಾಡಿಕೊಂಡೆವು. ಸುತ್ತಮುತ್ತಲಿನ ನೋಂದಣಿಯಾಗಿರುವ ಕೊಳೆಗೇರಿಗಳಲ್ಲಿ ಸಮೀಕ್ಷೆ ನಡೆಸಿದಾಗ, ನಾವು ಅಲ್ಲಿನ ಜನರಿಗೆ ಸುಮಾರು ಎರಡು ತಿಂಗಳ ಕಾಲ ಹೊಸ ಶಾಲೆಯ ಪರಿಕಲ್ಪನೆಗಳನ್ನು ಪದೇಪದೇ ವಿವರಿಸುತ್ತಿದ್ದೆವು. 17 ಮಕ್ಕಳು ದಾಖಲಾಗುವುದರೊಂದಿಗೆ ಏಪ್ರಿಲ್ 2005ರಲ್ಲಿ 'ಶಿಕ್ಷಾಮಿತ್ರ' ಆರಂಭವಾಯಿತು. ಹೆಚ್ಚಿನ ಮಕ್ಕಳು ಸರ್ಕಾರಿ ಶಾಲೆಗೆ ಹೋಗುತ್ತಿದ್ದರು, ಕೆಲವರು ಶಾಲೆಯಿಂದ ಹೊರಬಿದ್ದವರಾಗಿದ್ದರು. ಎಲ್ಲರೂ ತಮ್ಮ ಶಾಲೆಗಳ ಬಗ್ಗೆ ಬೇಸರದ ಭಾವನೆ ಹೊಂದಿದ್ದರಾದರೂ ಹೊಸತನ್ನು ಪ್ರಯತ್ನಿಸಲು ಬಂದಿದ್ದರು. 'ಶಿಕ್ಷಾಮಿತ್ರ' ಶಾಲೆಯು ಸುಮಾರು ಆರು ವರ್ಷಗಳ ಕಾಲ ನಡೆಯಿತು ಮತ್ತು ಕೊನೆಯವರೆಗೂ ದಾಖಲಾತಿ ಸಂಖ್ಯೆಯು 25ರಿಂದ 30ರ ಮಧ್ಯದಲ್ಲಿತ್ತು.

**ಮೊದಲಿನ ಅವಧಿಯ ಅಲ್ಲೋಲಕಲ್ಲೋಲ**

ಈ ಮಕ್ಕಳು ಪ್ರಕ್ಷುಬ್ಧರೂ, ಆಕ್ರಮಣಶೀಲರೂ ಹಾಗೂ ಶಿಕ್ಷಕ ಸಮುದಾಯದೆಡೆಗೆ ತಮ್ಮ ಗುಮಾನಿಯನ್ನು ಮತ್ತು ತಿರಸ್ಕಾರವನ್ನು ಬಹಿರಂಗವಾಗಿ ತೋರಿಸಿಕೊಳ್ಳುವವರೂ ಆಗಿದ್ದರು. ಹಿಂಸಾ ಪ್ರವೃತ್ತಿಗೆ ತುತ್ತಾಗಬಲ್ಲ ಅವರು ಕಲಿಕೆಗೆ ವಿಮುಖರೂ ಆಗಿದ್ದರು. ಇವರಿಗೆ ಕಲಿಸುವಾಗ ನಾವು ಸಾಕಷ್ಟು ಕಲಿಕಾ ಯೋಜನೆಗಳನ್ನು ಮುಂದೂಡಬೇಕಾಯಿತು. ಕಲೆ ಮತ್ತು ಜೇಡಿಮಣ್ಣಿನ ಕೆಲಸಗಳು ಮಕ್ಕಳನ್ನು ಸ್ವಲ್ಪಮಟ್ಟಿಗೆ ಶಾಂತಗೊಳಿಸಲು ಸಹಾಯ ಮಾಡಿದವು. ಬಿಡುವಿನ ಸಮಯ, ತರಗತಿಯಲ್ಲಿನ ಬೋಧನೆ, ಹೊರಗೆ ಆಡುವ ಆಟಗಳು, ಶಾಲೆಯ ಮುಚ್ಚುವ ವೇಳೆ, ಮನೆಯಲ್ಲಿ ಕಳೆದ ಸಮಯ ಮುಂತಾದವುಗಳ ಬಗ್ಗೆ ನಟನೆಯ ಮೂಲಕ ಮಾಡಿ ತೋರಿಸಲು ಮಕ್ಕಳಿಗೆ ಹೇಳಲಾಯಿತು. ನಟನೆಯ ಮುಸುಕಿನ ಹಿಂದೆ ಮಕ್ಕಳು ಅಂಚಿನಲ್ಲಿರುವುದರಿಂದ ತಾವು ತಮ್ಮ ಸುತ್ತಮುತ್ತಲು ಮತ್ತು ಹಿಂದಿನ ಶಾಲೆಗಳಲ್ಲಿ ಅನುಭವಿಸಿದ ಅವಹೇಳನ ಮತ್ತು ಕ್ರೌರ್ಯದ ಹಲವಾರು ಕಥೆಗಳನ್ನು ಪ್ರಸ್ತುತಪಡಿಸಿದರು. ಜೊತೆಗೆ ಹೇಗೆ ಅವರು ಪ್ರತೀಕಾರ ಧೋರಣೆಯಿಂದ ಶರಣಾಗತಿಯ ಮನಸ್ಥಿತಿಗೆ, ಕೊನೆಯಲ್ಲಿ ಕೈಚೆಲ್ಲುವ ಪರಿಸ್ಥಿತಿಗೆ ತಲುಪಿದರು ಎಂಬುದನ್ನು ತೋರಿಸಿದರು.

ಈ ಪಾತ್ರ – ನಟನೆಗಳು ನಿಧಾನವಾಗಿ ಹಂತಹಂತವಾಗಿ ಅರ್ಥ ಮಾಡಿಕೊಳ್ಳುವಿಕೆಯ ಸೇತುವೆಯನ್ನು ನಿರ್ಮಿಸಿದವು. ಶಿಕ್ಷಕರು ಮತ್ತು ಮಕ್ಕಳು ಒಟ್ಟಿಗೆ ಕುಳಿತು ಸಮಸ್ಯೆಗಳು, ತೊಂದರೆಗಳು, ಸಂತಸದ ಕ್ಷಣಗಳ ಬಗ್ಗೆ ಚರ್ಚಿಸುವ ಹಾಗೂ ಶಾಲಾ ಚಟುವಟಿಕೆಗಳನ್ನು ಸಲಹೆಗಳೊಂದಿಗೆ ಪರಾಮರ್ಶಿಸುವಂತಹ ಮುಕ್ತ ಅವಕಾಶವನ್ನು ಪ್ರಾರಂಭಿಸುವ ಸ್ಥಿತಿಗೆ ತಲುಪಲು ಸಹಾಯವಾಯಿತು. ಸಹಕಾರ, ಕಾಳಜಿ ಹಾಗೂ ಕಲಿಯಲು ಹಾಕಿದ ಪರಿಶ್ರಮ ಮತ್ತು ಮಾಡಿದ ತಪ್ಪುಗಳನ್ನು ಒಪ್ಪಿಕೊಳ್ಳುವ ಪ್ರಯತ್ನಗಳಿಗೆ ಪ್ರೋತ್ಸಾಹ ಮತ್ತು ಮುಕ್ತ ಮೆಚ್ಚುಗೆಗಳೊಂದಿಗೆ ಬಹುಮಾನಗಳು ಅವರಿಗೆ ಪ್ರತಿಫಲವಾಗಿ ದೊರೆತವು. ದೈಹಿಕ ಪರಿಶ್ರಮದ ಘನತೆ ಮತ್ತು ಮಾಲಿಕತ್ವದ ಭಾವನೆಯನ್ನು ಎತ್ತಿ ಹಿಡಿಯಲು ಮತ್ತು ಅವು ಆಳವಾಗಿ ಇಳಿಯುವಂತೆ ಮಾಡಲು ಶಿಕ್ಷಕರು ಮತ್ತು ಮಕ್ಕಳು ಇಬ್ಬರನ್ನೂ ಪ್ರತಿದಿನದ ಶಾಲಾ ನಿರ್ವಹಣೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲಾಗಿದೆ. ವಿವಿಧ ಚಟುವಟಿಕೆಗಳಾದ ಕಸ ಗುಡಿಸುವುದು, ಒರೆಸುವುದು, ಕಿಟಕಿ–ಬಾಗಿಲುಗಳನ್ನು ಹಾಕುವುದು, ಶೌಚಾಲಯವನ್ನು ಶುಚಿಗೊಳಿಸುವುದು, ಗಂಟೆ ಹೊಡೆಯುವುದು ಮುಂತಾದ ಕೆಲಸಗಳ ಪಟ್ಟಿಯನ್ನು ತಯಾರಿಸಿ ಕೆಲಸದ ಹೊಣೆಗಾರಿಕೆಯನ್ನು ನೀಡಲಾಯಿತು. ಕೆಲವರನ್ನು ಹೊರತುಪಡಿಸಿ, ಶಾಲಾ ಸಮುದಾಯವು ಇದನ್ನು ಒಪ್ಪಿಕೊಂಡು ಬೆಲೆ ನೀಡುವಂತಾಗಲು ಸ್ವಲ್ಪ ಸಮಯ ಹಿಡಿಯಿತು.

ಸುಮಾರು ಆರು ತಿಂಗಳಿನಲ್ಲಿ ಶಾಲೆಯು ಒಂದು ಹಂತಕ್ಕೆ ಅಚ್ಚುಕಟ್ಟಾಗಿ ನಡೆಯಲಾರಂಭಿಸಿತು. ವಾರದಲ್ಲಿ ಐದು ದಿನದಂತೆ ಸುಮಾರು 6–7 ಗಂಟೆಗಳವರೆಗೆ ಶಾಲೆಯನ್ನು ನಡೆಸಲಾಯಿತು. ಪಠ್ಯಕ್ರಮದಲ್ಲಿ ಸಾಕಷ್ಟು ಸಂಗೀತ, ಕಲೆ, ಕರಕುಶಲ, ಮಾಡುವ ಕೆಲಸಗಳು, ನೃತ್ಯ, ನಾಟಕಗಳು, ಆಟಗಳು, ಸಿನಿಮಾಗಳು, ಹಾದಿಬೀದಿಯ ಭೇಟಿಗಳು, ಹಳೆಯ ಬಂದರು, ಬಜಾರ್‌ಗಳು, ಕಲಾ ಪ್ರದರ್ಶನಗಳು, ತೋಟಗಾರಿಕಾ ಉದ್ಯಾನಗಳು, ಕರಕುಶಲ ಸಂಸ್ಥೆಗಳು ಮತ್ತು ಇವುಗಳ ಭೇಟಿ ಮುಂತಾದುವುಗಳನ್ನು ಸೇರಿಸಿಕೊಳ್ಳಲಾಗಿತ್ತು ಮತ್ತು ಸಾಮಾನ್ಯವಾಗಿ ಇವುಗಳನ್ನು ನಿಯಮಿತ ಪಠ್ಯಗಳೊಂದಿಗೆ ಸಮೀಕರಿಸಲಾಯಿತು. ಕಲೆಯ ಬಗ್ಗೆ ಬಹಳ ಒತ್ತು ನೀಡಲಾಗಿತ್ತು, ಮಕ್ಕಳನ್ನು ಸೇರಿಸಲು ಶಾಲೆಗೆ ಬಂದ ಪೋಷಕರು ಇದು ಸಂಗೀತ ಮತ್ತು ನೃತ್ಯ ಶಾಲೆ ಎಂದೇ ಭಾವಿಸಿದ್ದರು.

**ಬಂಗಾಲಿಯ ಕಲಿಕೆ**

ಎರಡು, ಮೂರು ಹಾಗೂ ನಾಲ್ಕನೇ ತರಗತಿಗಳಲ್ಲಿ ಔಪಚಾರಿಕವಾಗಿ ತೇರ್ಗಡೆ ಹೊಂದಿದ್ದರೂ ಕೂಡ 9 ಮತ್ತು 14 ವಯಸ್ಸಿನ ನಡುವಿನ ಶೇಕಡ 60 ಮಕ್ಕಳಿಗೆ ಮೂಲ ಅಕ್ಷರ ಜ್ಞಾನ ಮತ್ತು ಸಂಖ್ಯಾಜ್ಞಾನ ಇರಲಿಲ್ಲ, ಎಷ್ಟೆಂದರೆ ಬಂಗಾಲಿಯಲ್ಲಿ ತಮ್ಮ ಹೆಸರುಗಳನ್ನು ಬರೆಯಲೂ ಕೂಡ ಕೆಲವರಿಗೆ ಬರುತ್ತಿರಲಿಲ್ಲ. ಅವರಿಗೆ ಬಂಗಾಲಿಯಲ್ಲಿ ಪ್ರಾಥಮಿಕ ಓದು ಮತ್ತು ಬರಹದ ಕೌಶಲ್ಯವನ್ನು ಕಲಿಸುವುದು ಈಗ ನಮ್ಮ ಪ್ರಮುಖ ಸವಾಲಾಗಿದ್ದಿತು. ಈ ಹಿಂದೆ ಬೇರೆಡೆ ಉತ್ತಮವಾಗಿ ಫಲ ನೀಡಿದ ವಿವಿಧ ಪದ್ಧತಿಗಳನ್ನು ನಾವು ಪ್ರಯೋಗಿಸಿದೆವು. ಇವು ಸತತವಾಗಿ ವಿಫಲವಾದಾಗ ನಾವು ಪ್ರೊಫೆಸರ್ ಜಲಾಲುದ್ದೀನ್ ಅವರು ಆರಂಭಿಸಿದ ಓದು ಖಾತರಿ ಯೋಜನೆಯೆಡೆಗೆ ಗಮನಹರಿಸಿದೆವು. ಈ ಪದ್ಧತಿಯಿಂದ ಬಹಳಷ್ಟು ಮಕ್ಕಳು ಸಾಮಾನ್ಯವಾಗಿ ಮೂರು ತಿಂಗಳಿನಲ್ಲಿ ಓದಲು ಮತ್ತು ಬರೆಯಲು ಕಲಿತರು ಕೆಲವು ಮಕ್ಕಳು ಸ್ವಲ್ಪ ಹೆಚ್ಚು ಸಮಯ ತೆಗೆದುಕೊಂಡರು.

**ಈ ಪದ್ಧತಿಯಲ್ಲಿ:**

- ಒಂದು ಚಿತ್ರ ಅಥವಾ ಕಥೆಯನ್ನು ಮಕ್ಕಳ ಸ್ವಂತ ಚಿಂತನೆಯ ದೃಷ್ಟಿಕೋನದಿಂದ ವಿವರಿಸುವುದು. ಮಕ್ಕಳು ತಮ್ಮದೇ ಭಾಷೆಯಲ್ಲಿ ಶಿಕ್ಷಕರ ಸಹಾಯದೊಂದಿಗೆ ಒಂದು ಕಥೆಯನ್ನು ಬರೆದರು. ಇದರಿಂದ ಓದುವುದು ಮತ್ತು ಬರೆಯುವುದು ಅವರಿಗೆ ಅರ್ಥಪೂರ್ಣ ಮತ್ತು ಸಂತೋಷದಾಯಕವೆನಿಸಿತು. ಅವು ಅವರದೇ ಒಂದು ಸನ್ನಿವೇಶದ ಹಿನ್ನೆಲೆಯಿಂದ ಮೂಡಿದವುಗಳಾಗಿದ್ದವಾದ್ದರಿಂದ ಪದಗಳನ್ನು ಕಲಿಯುವುದು ಮತ್ತು ನೆನಪಿನಲ್ಲಿಟ್ಟು–ಕೊಳ್ಳುವುದು ಸುಲಭವಾಯಿತು.

- ಜೊತೆಗೆ ಸ್ವರ ಚಿಹ್ನೆಗಳು ಮತ್ತು ವ್ಯಂಜನಗಳು ಮಿಳಿತವಾದ ಬಾಂಗ್ಲಾ ಬರಕ್ಕರಿ (ಗುಣಿತಾಕ್ಷರ ಮಾಲೆ) ನಕ್ಷೆಯನ್ನು ಪರಿಚಯಿಸಲಾಯಿತು.. ಒತ್ತಕ್ಷರಗಳು ಇಲ್ಲದ ಸರಳ ಪದಗಳನ್ನು ರಚಿಸಲು ಇದು ಸಹಾಯ ಮಾಡಿತು. ಇದರೊಟ್ಟಿಗೆ ಸ್ವರ (ಕಾಗುಣಿತ) ಚಿಹ್ನೆಗಳನ್ನು ಸರಿಯಾಗಿ ಬರೆಯಲು ಕಷ್ಟಪಡುತ್ತಿದ್ದ ಡಿಸ್ಲೆಕ್ಸಿಯಾ ಉಳ್ಳ ಮಕ್ಕಳಿಗೂ ಇದು ಸಹಾಯ ಮಾಡಿತು. ಬರಕ್ಕರಿಯನ್ನು ಪರಿಚಯಿಸುವ ಮುನ್ನ ಮಕ್ಕಳಿಗೆ ಬಂಗಾಲಿ ಅಕ್ಷರಗಳು ಮತ್ತು ಸ್ವರ ಚಿಹ್ನೆಗಳನ್ನು ತಿಳಿದಿದ್ದರು ಎಂಬುದನ್ನು ನಾವು ಖಚಿತಪಡಿಸಿಕೊಂಡಿದ್ದೆವು.

- ಸೂಕ್ತವಾದ ಅಭ್ಯಾಸ ಪುಸ್ತಕಗಳ ಬಳಕೆಯನ್ನು ಮೂರನೆಯ ವಿಷಯವಾಗಿ ಪರಿಚಯಿಸಿದೆವು. ಇದು ಶಿಕ್ಷಕರು ಮತ್ತು ಮಕ್ಕಳಲ್ಲಿ ಬಹಳ ಜನಪ್ರಿಯ ವಿಷಯವಾಯಿತು.

ಸರಳವಾದ ಭಾಷೆಯಲ್ಲಿರುವ ಸೂಕ್ತವಾದ ಬರಹಗಳನ್ನು ಉಪಯೋಗಿಸುವುದು ಅತಿಮುಖ್ಯ ಎಂದು ನಾವು ಬೇಗನೆ ಕಂಡುಕೊಂಡೆವು. ಎಲ್ಲರೂ ಕಲಿಯಲು ಆರಂಭಿಸುತ್ತಿದ್ದವರೇ ಆದರೂ ದೊಡ್ಡ ಮಕ್ಕಳು ಕೂಡ ಪುಟ್ಟ ಮಕ್ಕಳಿಗೆ ಉಪಯೋಗಿಸುವ ಬರಹಗಳನ್ನು ಆನಂದಿಸುತ್ತಾರೆ ಎಂದು ಹೇಳಲಾಗದು. ಪ್ರಸಿದ್ಧ ಲೇಖಕರ ಬರಹಗಳು ಚೆನ್ನಾಗಿದ್ದರೂ ಕೂಡ ಈ ಮಕ್ಕಳಿಗೆ ಮೆಚ್ಚುಗೆಯಾಗುವಂತಹವು ಬಹಳ ಕಡಿಮೆ ಇದ್ದವು. ಶಾಲೆಗೆ–ಬರುತ್ತಿರುವ ಮೊದಲ ತಲೆಮಾರಿನ ಈ ಮಕ್ಕಳಿಗೆ ಬಹಳಷ್ಟು ಸನ್ನಿವೇಶಗಳು ಅಪರಿಚಿತವಾಗಿದ್ದವು.

ಒಂದು ಪುಟಕ್ಕಿಂತ ಹೆಚ್ಚಿಲ್ಲದ ದೊಡ್ಡ ಅಕ್ಷರಗಳಲ್ಲಿ ಮುದ್ರಿತವಾಗಿರುವ ಮತ್ತು ಸ್ಥಳಾವಕಾಶವಿರುವ ಪುಟ್ಟ ಬರಹಗಳು ಹೆಚ್ಚು ಬಳಕೆಯಾಗುತ್ತಿದ್ದವು. ಹಾಗಾಗಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಸೇರಿ ಹೆಚ್ಚಾಗಿ ತಮ್ಮದೇ ಬರಹಗಳನ್ನು ತರಗತಿಯಲ್ಲಿ ರಚಿಸಲಾರಂಭಿಸಿದೆವು. ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಗ್ರಿಮ್ಸ್ ಫೇರಿ ಟೇಲ್ಸ್, ಚೆಕೋವ್, ಟಾಲಸ್ಟಾಯ್, ಸುಕುಮಾರ್ ರಾಯ್, ಲೀಲಾ ಮಜುಂದಾರ್ ಮತ್ತಿತರ ಬರಹಗಾರರ ಬರಹಗಳನ್ನು ಪುಟ್ಟ ಕಥೆಗಳ ರೂಪಕ್ಕೆ ತಂದೆವು. ಸರಳ ಭಾಷೆಯಲ್ಲಿ ಆದರೂ ಸಂಕೀರ್ಣ ವಿಷಯಗಳ ದೊಡ್ಡ ಮತ್ತು ಪುಟ್ಟ ಬರಹಗಳನ್ನು ರಚಿಸುವುದರಲ್ಲಿ ಇಡೀ ಶಾಲೆಯೇ ಮುಳುಗಿಹೋಗಿತ್ತು. ವಿದ್ಯಾರ್ಥಿಗಳ ಚಿತ್ರಗಳೊಂದಿಗೆ ಇವುಗಳನ್ನು ಮುದ್ರಿಸಲು ಶಿಕ್ಷಾಮಿತ್ರವು ಆರಂಭಿಸಿತು. ಒಂದೇ ವರ್ಷದಲ್ಲಿ ಗ್ರಂಥಾಲಯದ ಪುಸ್ತಕಗಳು, ಚಿತ್ರಗಳ ಮತ್ತು ಅವುಗಳ ವಿನ್ಯಾಸಗಳ ಬಗ್ಗೆ ಆಸಕ್ತಿ ಮಾಂತ್ರಿಕವಾಗಿ ಹೆಚ್ಚಿತು.

**ಇಂಗ್ಲಿಷ್ ಕಲಿಯುವುದು**

ಮೊದಲ ತಲೆಮಾರಿನ ಓದುಗರಿಗೆ ಇಂಗ್ಲಿಷ್ ಹೇಳಿಕೊಡುವ ಸಿದ್ಧ ಮಾದರಿಯು ಬಂಗಾಲಿಗೆ ಇದ್ದಂತೆ ಇರಲಿಲ್ಲ. ಇಸಾಯ್ ಅಂಬಲಂ ಸ್ಕೂಲ್ ಹಾಗೂ ಅರೋವಿಲ್ ಇಂತಹ ಶಾಲೆಗಳಿಂದ ನಾವು ಕೆಲವು ಸಲಹೆಗಳನ್ನು ಪಡೆದೆವು ಮತ್ತು ವಿಶೇಷ ಶಿಕ್ಷಣದ ತಂತ್ರಗಳನ್ನು ಬಳಸಿಕೊಂಡೆವು. ನಮ್ಮದೇ ಆದ ಇಂಗ್ಲಿಷ್ ಪದ್ಧತಿಯನ್ನು ಪ್ರಯೋಗಗಳ ಮೂಲಕ ರಚಿಸಿಕೊಂಡೆವು. ಉಪಯೋಗಿಸಿದ ಕೆಲವು ರೀತಿಗಳೆಂದರೆ:

- ಪದಗಳನ್ನು ತಿಳಿದುಕೊಳ್ಳಲು (ವರ್ಡ್ ಅಟ್ಯಾಕ್) ಮತ್ತು ಅಕ್ಷರಗಳನ್ನು ಗುರುತಿಸಲು ವಿದ್ಯಾರ್ಥಿಗಳಿಗೆ ಧ್ವನಿಗಳ ಕೌಶಲವನ್ನು ಹೇಳಿಕೊಡಲಾಯಿತು ಹಾಗೂ 50 ಪದಗಳ ಪದಸಂಪತ್ತನ್ನು ಮೂರು ತಿಂಗಳಿನಲ್ಲಿ ಪಡೆದುಕೊಳ್ಳಲು ಸಹಾಯ ಮಾಡಿದೆವು. ಮುಂದುವರೆಯುತ್ತ ಹೆಚ್ಚುಹೆಚ್ಚು ಪದಗಳನ್ನು ಪದಸಂಪತ್ತಿನಲ್ಲಿ ಸೇರಿಸಲಾಯಿತು. ವರ್ಡ್ ಅಟ್ಯಾಕ್ – ಇದೊಂದು ಮುದ್ರಿತ ಪದಗಳನ್ನು ಮಾತನಾಡುವ ಪದಗಳಿಗೆ ಹೋಲಿಸಿ, ಹೊಂದಿಸಿ ಗುರುತಿಸುವ ಕೌಶಲ, ಇದು ಓದುವುದರ ಮೂಲಾಧಾರ. ಒಂದೇ ರೀತಿಯ ಧ್ವನಿಗಳುಳ್ಳ ಪದಗಳನ್ನು ಗುರುತಿಸಲೂ ಇದು ಸೂಕ್ತವಾಗಿದೆ ಉದಾ: ಚಾಂಟ್ ಹಾಗೂ ಪ್ಯಾಂಟ್.

- ಈ ಮೂಲ ಪದಸಂಪತ್ತನ್ನು ಉಪಯೋಗಿಸಿ (ನಾಮಪದಗಳು, ಕ್ರಿಯಾಪದಗಳು, ಲೇಖನಗಳು, ವಿಶೇಷಣಗಳು, ನಾಮವಾಚಕ ಮತ್ತು ಗುಣವಾಚಕ) ಹಂತಹಂತವಾಗಿ ಸರಳ ವಾಕ್ಯಗಳನ್ನು ರಚಿಸುವುದನ್ನು ಮಕ್ಕಳಿಗೆ ಹೇಳಿಕೊಡಲಾಯಿತು. ವಾಕ್ಯಗಳನ್ನು ಕಟ್ಟುವ, ಬರೆಯುವ, ಓದುವ ಮತ್ತು ಜೋರಾಗಿ ಓದುವ ವಿಷಯಗಳಲ್ಲಿ ಮಕ್ಕಳು ಐದು ತಿಂಗಳಿನಲ್ಲಿ ನಂಬಿಕೆ ಬೆಳೆಸಿಕೊಂಡಂತೆ ತಾವೇ ಸ್ವಂತವಾಗಿ ಬರೆಯಲು ಕೂಡ ಆರಂಭಿಸಿದರು. ನಂತರ ಪುಟ್ಟದಾದ ವಿವರಗಳನ್ನು ಬರೆಯಲು ಮುಂದೆ ಸಂಪೂರ್ಣ ಪ್ಯಾರಾಗಳನ್ನು ಮತ್ತು ಸಣ್ಣ ಕಥೆಗಳನ್ನು ಬರೆಯಲು ವರ್ಷದೊಳಗೆ ಸಮರ್ಥರಾದರು.

- ಓದಿದ ಅಥವಾ ಕೇಳಿಸಿಕೊಂಡ ಬರಹವನ್ನು ಚಿತ್ರದ ಮೂಲಕ ನಿರೂಪಿಸುವುದನ್ನು ಪ್ರೋತ್ಸಾಹಿಸಲಾಯಿತು. ಇದರಿಂದ ಮಕ್ಕಳು ಎಷ್ಟರಮಟ್ಟಿಗೆ ಗ್ರಹಿಸಿದ್ದಾರೆ ಎನ್ನುವುದನ್ನು ಶಿಕ್ಷಕರು ತಿಳಿಯಲು ಅನುಕೂಲವಾಯಿತು. ಈ ಪ್ರಕ್ರಿಯೆಯಲ್ಲಿ ಆಸಕ್ತಿಕರವಾದ ಕಡಿಮೆ ವೆಚ್ಚದ ಹಲವು ಸಾಮಗ್ರಿಗಳು ಮೂಡಿಬಂದವು.

- ಅದೇ ಸಮಯದಲ್ಲಿ ಇತರ ರೀತಿಗಳನ್ನು ಪ್ರಯತ್ನಿಸಿದೆವು – ಸೂಕ್ಷ್ಮವಾಗಿ ಆರಿಸಿದ ಹಾಡುಗಳು ಮತ್ತು ಕಥೆಗಳನ್ನು ಕೇಳುವುದು, ಚಲನಚಿತ್ರಗಳನ್ನು ನೋಡುವುದು, ಶಿಕ್ಷಕರು ಮತ್ತು ಅತಿಥಿಗಳ ಜೊತೆಗೆ ಇಂಗ್ಲಿಷ್‌ನಲ್ಲೇ ವ್ಯವಹರಿಸುವುದು. ಈ ಎಲ್ಲವೂ ಮಕ್ಕಳು ಭಾಷೆಯೆಡೆಗೆ ಆಸಕ್ತಿಯನ್ನು ಮತ್ತು ಸಂವೇದನೆಯನ್ನು ಬೆಳೆಸಿಕೊಳ್ಳಲು ಸಹಾಯ ಮಾಡಿದವು.

**ಸಂಖ್ಯಾ ಜ್ಞಾನದ ಕಲಿಕೆ**

ಒಂದು ರೀತಿಯಲ್ಲಿ ಇದನ್ನು ಸುಲಭವಾಗಿ ಸಾಧಿಸಲು ಸಾಧ್ಯವಾಯಿತು. ಜೋಡಿಸುವ ಚಟುವಟಿಕೆಯ ಸಾಮಗ್ರಿಗಳನ್ನು ಶಾಲೆಯೊಳಗೇ ರಚಿಸಿದೆವು. ಹೊರಗಿನ ಸಂಸ್ಥೆಗಳಾದ ಜೋಡೋ ಗ್ಯಾನ್‌ನಂತಹ ಸಂಸ್ಥೆಗಳಿಂದ ಪಡೆದ ಕೆಲವು ಸಾಮಗ್ರಿಗಳನ್ನು ನಮ್ಮ ಅಗತ್ಯಗಳಿಗೆ ಮತ್ತು ಸಂಪನ್ಮೂಲಗಳಿಗೆ ತಕ್ಕಂತೆ ಬದಲಾಯಿಸಿ–ಕೊಳ್ಳಲಾಯಿತು.

ಒಂದೇ ಪರಿಕಲ್ಪನೆಯ ಮೇಲೆ ಹಲವಾರು ಸಾಮಗ್ರಿಗಳನ್ನು ರಚಿಸಿ, ಇವುಗಳನ್ನು ವಿವಿಧ ವಿದ್ಯಾರ್ಥಿಗಳಿಗೆ, ಸಂಖ್ಯಾ ದೌರ್ಬಲ್ಯ ಇದ್ದವರಿಗೂ ಕೂಡ ನೀಡಲಾಯಿತು. ಸಾಮಾನ್ಯವಾಗಿ ಗಣಿತದ ಸಾಮಗ್ರಿಗಳು ಕೆಳಗಿನ ತರಗತಿಗಳಿಗೆ ಮೀಸಲಾಗಿರುತ್ತವೆ. ಮೊಟ್ಟಮೊದಲ ಬಾರಿಗೆ ನಾವು ಬೀಜಗಣಿತ ಮತ್ತು ರೇಖಾಗಣಿತ ಇವುಗಳಿಗೂ ಕುಶಲತೆಯಿಂದ ಮಾಧ್ಯಮಿಕ ಶಾಲೆಯ ಮಟ್ಟದಲ್ಲಿ ಈ ಸಾಮಗ್ರಿಗಳನ್ನು ರಚಿಸಿದೆವು. ಇದರಿಂದಾಗಿ ಮಾಧ್ಯಮಿಕ ಶಾಲಾ ಮಕ್ಕಳ ಪರಿಕಲ್ಪನೆಗಳ ಅರ್ಥ ಗ್ರಹಿಕೆಯು ಹೆಚ್ಚಾದುದನ್ನು ನಾವು ಗಮನಿಸಿದೆವು.

**ಇತರ ವಿಷಯಗಳು**

ವಿಶ್ವದಾದ್ಯಂತ ಸಾಮಾನ್ಯವಾದ ಶಾಲಾ ವಿಷಯಗಳಾದ ಚರಿತ್ರೆ, ಭೂಗೋಳ ಮತ್ತು ವಿಜ್ಞಾನಗಳ ಬೋಧನೆಗಾಗಿ ಬೇರೆಬೇರೆ ಕಡೆಗಳಲ್ಲಿ ಅಭಿವೃದ್ಧಿಪಡಿಸಲಾದ ಎಲ್ಲಾ ಶ್ರೀಮಂತ ಶಿಕ್ಷಣಶಾಸ್ತ್ರ ಪ್ರಯೋಗಗಳನ್ನು ಗಮನಿಸಿ ಅವುಗಳಲ್ಲಿ ಸೂಕ್ತವಾದುದನ್ನು ಪ್ರಯತ್ನಿಸಲು ನಮಗೆ ಮುಕ್ತ ಅವಕಾಶವಿದ್ದಿತು. ಸುತ್ತಮುತ್ತಲಿನ ಪ್ರದೇಶಗಳಿಗೆ ಹೋಗಿ ಸ್ಥಳೀಯರೊಡನೆ ಮಾತನಾಡಿ ಸಂದರ್ಶಿಸಲು ಮತ್ತು ವಿಷಯ ಸಂಗ್ರಹಿಸಲು ಭೇಟಿ ನೀಡುವುದು, ಪ್ರಸ್ತುತ ವಿದ್ಯಮಾನಗಳ ಬಗ್ಗೆ ಚರ್ಚಿಸುವುದು, ತಳಮಟ್ಟದಿಂದ ಆರಂಭಿಸಿ ಜಾಗತಿಕ ಮಟ್ಟದವರೆಗೆ ಚರಿತ್ರೆ ಮತ್ತು ಭೂಗೋಳಗಳನ್ನು ಕಲಿಯುವುದು, ಖುದ್ದು ಪ್ರಯೋಗಗಳನ್ನು ಮಾಡುವುದು ಹಾಗೂ ಸುಲಭವಾಗಿ ದೊರಕುವ ವಸ್ತುಗಳಿಂದ ದುರಸ್ತಿ ಮಾಡುವುದು, ಪರಿಸರ ವಿಜ್ಞಾನದ ಬಗ್ಗೆ ಒತ್ತು ನೀಡುವುದು ಹಾಗೂ ದಿನನಿತ್ಯದ ಸೂಕ್ತ ವರ್ತನೆಗಳ ಬಗ್ಗೆ ಕೆಲಸ ಮಾಡುವುದು, ದಿನದ ಅಡುಗೆ ಹೇಳಿಕೊಡುವುದು, ಕಲಾ ಗ್ಯಾಲರಿಗಳಿಗೆ ಭೇಟಿ ನೀಡುವುದು. ನಾಟಕಗಳನ್ನು ಪಠ್ಯದ ಜೊತೆಗೆ ಹೊಂದಿಸುವುದು, ಪೋಷಕರೇ ಮಾಪಕರಾಗಿ ಇರುವಂತಹ ವಾರ್ಷಿಕ ಪರೀಕ್ಷೆಗಳನ್ನು ನಡೆಸುವುದು, ತಮ್ಮ ಪ್ರಗತಿಯನ್ನು ಮಾಪನ ಮಾಡುವುದು ಹೇಗೆ ಎನ್ನುವುದನ್ನು ಕಲಿಯುವುದು – ಹೀಗೆ ಕಲಿಕೆಯನ್ನು ಬಲಪಡಿಸುವ ಏನೆಲ್ಲವನ್ನು ಪ್ರಯತ್ನಿಸಲು ಶಾಲೆ ಸಿದ್ಧವಿದ್ದಿತು.

**ಮುಕ್ತ ವಲಯದ ತಂತ್ರ**

ಇವುಗಳು ಮಕ್ಕಳಲ್ಲಿ ಅಭ್ಯಾಸ ಮಾಡಲು ಮತ್ತು ಸ್ವಂತವಾಗಿ ಕಲಿಯಲು ಉತ್ತೇಜಿಸಿದವು. 45 ನಿಮಿಷಗಳ ಅವಧಿಯಲ್ಲಿ ವಿದ್ಯಾರ್ಥಿಗಳು ತಾವೇ ವಿವಿಧ ವಿಷಯಗಳಲ್ಲಿ ಕೊಟ್ಟಿರುವ ಅಭ್ಯಾಸ ಹಾಳೆಗಳನ್ನು ಮಾಡಿ ಮುಗಿಸಬೇಕಿತ್ತು. ಯಾವುದೇ ಶಿಕ್ಷಕರ ಉಪಸ್ಥಿತಿ ಇಲ್ಲದೆ, ಸ್ವಂತವಾಗಿ ಸರಿಪಡಿಸಿಕೊಳ್ಳುವ ವಿಧಾನಗಳನ್ನು ಕೂಡ ಹೇಳಿಕೊಡಲಾಯಿತು. ಕೆಲವೊಮ್ಮೆ ನಿಯಮಗಳನ್ನು ಮೀರುವುದು ಮತ್ತು ಸರಿಯಾಗಿ ಮಾಡದಿರುವುದು ಕಂಡು–ಬರುತಿತ್ತು. ಅದರೂ, ಸ್ವತಂತ್ರವಾಗಿ ಕಲಿಯುವುದನ್ನು ಕಲಿತಿರುವ ಮಕ್ಕಳು ತಯಾರಾಗುತ್ತಿದ್ದರು.

**ಕಲೆ**

ಮಕ್ಕಳು ಮತ್ತು ಶಿಕ್ಷಕರು ಇಬ್ಬರ ಬದುಕಿನ ಆಳದಲ್ಲಿ ರೂಪು ಪಡೆದಿದ್ದರಿಂದ ಕಲೆ, ಮತ್ತು ಅದು ಏನೆಲ್ಲವನ್ನೂ ಒಳಗೊಂಡಿರುತ್ತ–ದೆಯೋ ಎಲ್ಲವೂ ನಮ್ಮ ಬದುಕಿನ ಭಾಗವಾಗಿ ಹೋಯಿತು. ಕಲೆ ಎನ್ನುವುದು ಕೇವಲ ಒಂದು ತರಗತಿಯೋ ಅಥವಾ ಸಹಪಠ್ಯವೋ ಆಗಿರಲಿಲ್ಲ. ಅದು ಎಲ್ಲೆಲ್ಲೂ ಇದ್ದಿತು–ಗೋಡೆಗಳ ಮೇಲೆ, ಬಾಗಿಲುಗಳ ಮೇಲೆ, ಪುಸ್ತಕಗಳ ಮೇಲೆ, ಕಾಗದಗಳ ಮೇಲೆ, ಮತ್ತು ಬಟ್ಟೆಗಳ ಮೇಲೆ, ಹೀಗೆ ಅದು ಎಲ್ಲಾ ಮಾಪನಗಳಲ್ಲೂ, ಪರೀಕ್ಷೆಗಳಲ್ಲೂ ಸೇರಿಹೋಗಿತ್ತು.

**ಚಲನ ಚಿತ್ರಗಳು, ಹಾಡುಗಳು ಮತ್ತು ಸಂಗೀತ**

ಡಿಸ್ಲೆಕ್ಸಿಯಾ ಹೊಂದಿರುವ ಮಕ್ಕಳಲ್ಲಿ ಉತ್ತಮವಾದುದನ್ನು ಇವು ಸಾಮಾನ್ಯವಾಗಿ ಹೊರತರುವುದರಿಂದ ನಾವು ಇವುಗಳನ್ನು ಆಧಾರಗಳನ್ನಾಗಿಯೂ, ಆಕಾರಗಳನ್ನಾಗಿಯೂ ಉಪಯೋಗಿ–ಸಿದೆವು. ಇವನ್ನು ಅವರು ಓದಬೇಕಾಗಿರಲಿಲ್ಲವಾದ್ದರಿಂದ, ಅವರು ಚರ್ಚೆಗಳಲ್ಲಿ, ಚಟುವಟಿಕೆಗಳಲ್ಲಿ ಉತ್ತಮ ಒಳ ದೃಷ್ಟಿಗಳೊಂದಿಗೆ ಕೆಲವೊಮ್ಮೆ ಉಳಿದೆಲ್ಲ ಮಕ್ಕಳಿಗಿಂತ ಉತ್ತಮವಾಗಿ ಭಾಗವಹಿ–ಸುತ್ತಿದ್ದರು. ಹಾಗೂ ಇತರ ಮಕ್ಕಳಂತೆಯೇ ಆಸಕ್ತಿಯಿಂದ ಸಂಬಂಧಪಟ್ಟ ಅಭ್ಯಾಸಗಳನ್ನು ಮಾಡುತ್ತಿದ್ದರು.

**ಶಾಲೆಯನ್ನು ಮುಚ್ಚಲಾಯಿತು**

ಶ್ರೀಮಂತ ಶಿಕ್ಷಣ ಪದ್ಧತಿ ಇದ್ದರೂ ಕೂಡ 'ಶಿಕ್ಷಾಮಿತ್ರ' ಅಗತ್ಯವಿದ್ದಷ್ಟು ಮಕ್ಕಳನ್ನು ಆಕರ್ಷಿಸಲಿಲ್ಲ. ತಂದೆಯಾದವರು ಸಾಂಪ್ರದಾಯಿಕ ಶಾಲಾಶಿಕ್ಷಣವನ್ನು ಇಷ್ಟಪಡುತ್ತಿದ್ದರು. ಹಾಗಾಗಿ ಅಂತಿಮವಾಗಿ

ಆರ್ಥಿಕ ಸಂಪನ್ಮೂಲ ಇಲ್ಲದಿರುವುದು, ಆರ್‌ಟಿಇ ಬಂದದ್ದು ಮುಂತಾದ ಕಾರಣಗಳಿಂದಾಗಿ ಮುಚ್ಚಬೇಕಾಗಿತ್ತು. ಮೆಚ್ಚಿನ ಮಕ್ಕಳು ಸರ್ಕಾರಿ ಶಾಲೆಗಳನ್ನು ಸೇರಿದರು. ಕೆಲವರು ಕಾಲೇಜು ಹಂತಕ್ಕೂ ತಮ್ಮ ಶಿಕ್ಷಣವನ್ನು ಮುಂದುವರೆಸಿದರೆ, ಉಳಿದವರು ನೌಕರಿಗೆ ಸೇರಿದರು.

**ಶಿಕ್ಷಾಮಿತ್ರ ಸಂಪನ್ಮೂಲ ಕೇಂದ್ರ**

ಶಿಕ್ಷಣ ಪದ್ಧತಿಯನ್ನು, ಇತರ ಸಂಸ್ಥೆಗಳೊಂದಿಗೆ ಹಂಚಿಕೊಳ್ಳಲು 2007ರಿಂದ ಶಿಕ್ಷಾಮಿತ್ರವು ಆರಂಭಿಸಿತು. 2011ರಲ್ಲಿ ಶಾಲೆಯು ಮುಚ್ಚಿದ ನಂತರ, ಈ ಸಂಸ್ಥೆಯು ಇತರರಿಗೆ ತರಬೇತಿ ನೀಡುವುದು, ಸಾಮಗ್ರಿಗಳನ್ನು ರಚಿಸುವುದು ಮತ್ತು ವಿತರಿಸುವುದನ್ನು ಪೂರ್ಣಾವಧಿಯ ಚಟುವಟಿಕೆಯನ್ನಾಗಿ ಆರಂಭಿಸಲಾಯಿತು.

**ಬಂಗಾಲಿ ತರಬೇತಿ**

ಶೀಘ್ರದಲ್ಲಿ ಓದುವುದು ಮತ್ತು ಕಲಿಯುವುದನ್ನು ಬಂಗಾಲಿಯಲ್ಲಿ ಕಲಿಸುವ ಪದ್ಧತಿಗಳ ತರಬೇತಿಯನ್ನು ಮೂರು ದಿನಗಳ ಕಾರ್ಯಾಗಾರದ ಮೂಲಕ ಆರಂಭಿಸಲಾಯಿತು. ವಿವಿಧ ಹಿನ್ನೆಲೆಯ ಶಿಕ್ಷಕರಲ್ಲಿ ಇದು ಆಸಕ್ತಿಯನ್ನು ಕೆರಳಿಸಿತು ಎನ್ನುವುದು ನಮ್ಮ ಅರಿವಿಗೆ ಬಂದಿತು. ಒಂದು ಬರಹವನ್ನು ವಿಶ್ಲೇಷಿಸುವುದು, ಅಭಿಪ್ರಾಯವನ್ನು ವ್ಯಕ್ತಪಡಿಸುವುದು, ತಮ್ಮದೇ ಆದ ಬರಹಗಳನ್ನು ತಯಾರಿಸುವುದು, ಇವುಗಳ ಮೂಲಕ ಶಿಕ್ಷಕರಲ್ಲಿ ಸಬಲತೆಯ ಮತ್ತು ಆನಂದದ ಭಾವನೆಗಳನ್ನು ಮೂಡಿಸಿದವು. ಈ ಪದ್ಧತಿಯನ್ನು ಅಳವಡಿಸಿಕೊಳ್ಳಲು ಅವರು ಧೈರ್ಯತಳೆದರು. ಕೋಲ್ಕತ್ತಾ ಹಾಗೂ ಪಶ್ಚಿಮ ಬಂಗಾಳದ ಇತರ ಜಿಲ್ಲೆಗಳಿಂದ ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿಂದ ನಾವು ಅನೇಕ ಸರ್ಕಾರಿ ಶಾಲೆಯ ಶಿಕ್ಷಕರಿಗೆ ತರಬೇತಿ ನೀಡಿದೆವು.

ಜೊತೆಗೆ ಇಂಗ್ಲಿಷ್ ಮಾಧ್ಯಮ ಶಾಲೆಯ ಶಿಕ್ಷಕರು ಕಿಷ್ಟ ಪರಿಸರದ ಮಕ್ಕಳೊಡನೆ ಅಂದರೆ ಕೆಲಸ ಮಾಡುತ್ತಿರುವ ರೈಲ್ವೆ ಪ್ಲಾಟ್-ಫಾರ್ಮ್‌ಗಳು, ಬೀಡಿ ಕಾರ್ಮಿಕರು, ಚಿಂದಿ ಆಯುವವರ ಮಕ್ಕಳು, ಬುಡಕಟ್ಟು ಜನಾಂಗದವರು, ಕೋಲ್ಕತ್ತಾ ಮತ್ತಿತರ ಊರುಗಳ ಹಲವಾರು ಸ್ಲಂಗಳಲ್ಲಿ ವಾಸಿಸುವ ಮಕ್ಕಳು ಇಂತಹ ಮಕ್ಕಳೊಡನೆ ಕೆಲಸ ಮಾಡುವ ಸರ್ಕಾರೇತರ ಸಂಸ್ಥೆಗಳ (ಎನ್‌ಜಿಒ) ಶಿಕ್ಷಕರಿಗೂ ಕೂಡ ತರಬೇತಿ ನೀಡಿದೆವು. ಈ ಗುಂಪುಗಳು ತಮ್ಮ ಪರಿಸರಕ್ಕೆ ಹೊಂದುವ ಹಲವಾರು ಬರಹಗಳನ್ನು ರಚಿಸಿದರು. ಬೋಧನಾ ಕಲಿಕಾ ಸಾಮಗ್ರಿಗಳು, ಅಭ್ಯಾಸ ಪುಸ್ತಕಗಳು ಮತ್ತು ಶಿಕ್ಷಾಮಿತ್ರ ರಚಿಸಿದ ಪುಸ್ತಕಗಳು ನಿರಂತರವಾಗಿ ಬೇಡಿಕೆಯಲ್ಲಿವೆ.

**ಇಂಗ್ಲಿಷ್ ತರಬೇತಿ**

ಮೂಲ ಇಂಗ್ಲಿಷ್‌ನ ಅಡಿಪಾಯಗಳು ಎಂಬ ನಮ್ಮ ತರಬೇತಿಯು ಬಹಳ ಪ್ರಸಿದ್ಧವೂ ಮತ್ತು ಇದು ಶಿಕ್ಷಾಮಿತ್ರದ ಹೆಚ್ಚು ಬೇಡಿಕೆಯಲ್ಲಿರುವ ತರಬೇತಿ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಭಾರತದ ವಿವಿಧ ರಾಜ್ಯಗಳಲ್ಲಿ ಹರಿಯಾಣ, ಈಶಾನ್ಯ ರಾಜ್ಯಗಳು ಮತ್ತು ಬಿಹಾರ್ ಇಲ್ಲಿ ಈ ತರಬೇತಿಯನ್ನು ನೀಡಲಾಗಿದೆ. ಅಜೀಂ ಪ್ರೇಮ್‌ಜಿ ಫೌಂಡೇಷನ್ ಶಾಲೆಗಳಲ್ಲಿ, ಬೆಂಗಳೂರಿನ ಹಲವಾರು ಶಾಲೆಗಳಲ್ಲಿ ಮತ್ತು ಬಾಂಗ್ಲಾದೇಶದಲ್ಲಿ ಅವುಗಳನ್ನು ಬಳಸಲಾಗಿದೆ. ಹೊಸದಾಗಿ ಇಂಗಿಷನ್ನು ವಿನೂತನ ರೀತಿಯಲ್ಲಿ ಕಲಿಸುವ ಈ ಕಾರ್ಯಕ್ರಮವು ಇಂಗ್ಲಿಷಿನಲ್ಲಿ  ದುರ್ಬಲ ಕಲಿಕೆ ಇದ್ದ ಶಿಕ್ಷಕರಿಗೆ ಬಹಳ ಸಹಕಾರಿಯಾಗಿದೆ.

ಎರಡನೇ ತರಗತಿಯಿಂದ, ಏಳನೇ ತರಗತಿಯವರೆಗಿನ ಸರ್ಕಾರಿ ಶಾಲೆಯ ಶಿಕ್ಷಕರು (ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆ) ಈ ಕಾರ್ಯಕ್ರಮವನ್ನು ಫಲಪ್ರದವಾಗಿ ಬಳಸುತ್ತಿದ್ದಾರೆ. ಪ್ರಾಥಮಿಕ ಶಾಲೆಯಲ್ಲಿ ಕಲಿಯದಿದ್ದ ಮಕ್ಕಳಿಗೆ ಕಡಿಮೆ ಸಮಯದಲ್ಲಿ ಪರಿಹಾರ ಪದ್ಧತಿಯಲ್ಲಿ ಇಂಗ್ಲಿಷ್ ಕಲಿಸುವ ಸಾಧನವಾಗಿ ಉಪಯೋಗಿ-ಸುತ್ತಿದ್ದಾರೆ. ಹರಿಯಾಣ ಸರ್ಕಾರದ ಸಂಪನ್ಮೂಲ ಶಿಕ್ಷಕರು ತರಬೇತಿಯ ನಂತರ ಹೇಳಿದ ಮೊದಲ ಮಾತೆಂದರೆ ಈ ತರಬೇತಿ ಕಾರ್ಯಕ್ರಮವು ತರಗತಿಯಲ್ಲಿ ನಿಜಕ್ಕೂ ಮಾಡಬೇಕಾದುದು ಏನು ಎಂಬುದನ್ನು ತಿಳಿಸಿತು, ಕೇವಲ ಇತರ ತರಬೇತಿ ಕಾರ್ಯ-ಕ್ರಮಗಳಂತೆ ಸಿದ್ಧಾಂತಗಳನ್ನು ಅಷ್ಟೇ ಹೇಳಲಿಲ್ಲ. ಬಂಗಾಲಿ ತರಬೇತಿಯಲ್ಲಿದ್ದಂತೆ ಅಭ್ಯಾಸ ಪುಸ್ತಕಗಳ ತಯಾರಿಯು ಈಗಾಗಲೇ ನಿರೂಪಿತವಾಗಿರುವಂತೆ ಕಲಿಕಾ ಪ್ರಕ್ರಿಯೆಯಲ್ಲಿ ಸಹಾಯ ಮಾಡುತ್ತದೆ.

**ಗಣಿತ ತರಬೇತಿ**

ನಮ್ಮ ಭಾಷಾ ತರಬೇತಿ ಕಾರ್ಯಕ್ರಮವನ್ನು ಉಪಯೋಗಿಸಿ-ಕೊಂಡಿದ್ದ ಸರ್ಕಾರಿ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಮತ್ತು ಕಲಿಕಾ ಸಂಸ್ಥೆಗಳು ಗಣಿತ ಕಾರ್ಯಾಗಾರಗಳಿಗೂ ಬೇಡಿಕೆ ನೀಡಿದವು.

ನಮ್ಮ ಗಣಿತ ಕಲಿಕಾ ಸಾಮಗ್ರಿಗಳನ್ನು ಭಾರತದ ಹಲವಾರು ಭಾಗದ ಶಾಲೆಗಳು ಮತ್ತು ವೈಯಕ್ತಿಕವಾಗಿಯೂ ಖರೀದಿಸಿದ್ದಾರೆ. ಖರ್ಚು ಕಡಿಮೆ ಮಾಡಿಕೊಳ್ಳಲು ಕೆಲವು ಶಾಲೆಗಳು ಸಾಮಗ್ರಿಗಳನ್ನು ತಾವೇ ತಯಾರಿಸಿಕೊಂಡರು. ಸಾಮಗ್ರಿಗಳನ್ನು ಪಾಲ್ಗೊಂಡವರು ತಮ್ಮದೇ ಆದ ರೀತಿಯಲ್ಲಿ  ಮಾಡಿಕೊಂಡಾಗಲೇ ಗಣಿತ ಕಲಿಕೆಯು ಹೆಚ್ಚು ಸುಲಭವಾಗುತ್ತದೆ ಎಂದು ಶಿಕ್ಷಾಮಿತ್ರವು ಈ ಕಾರ್ಯಾಗಾರಗ-ಳಿಂದಲೇ ಕಂಡುಕೊಂಡಿತು. ಆಗಿನಿಂದಲೂ ಈ ಪ್ರಕ್ರಿಯೆಯನ್ನೇ ಪ್ರೋತ್ಸಾಹಿಸಲಾಗುತ್ತದೆ.  ಹಲವಾರು ಸಂಸ್ಥೆಗಳು ಮತ್ತು ಶಾಲೆಗಳಲ್ಲಿ ಗಣಿತ ಮತ್ತು ಬಂಗಾಲಿ ಕಲಿಸಲು ಸಂಪನ್ಮೂಲ ವ್ಯಕ್ತಿಗಳನ್ನು ರೂಪಿಸಲಾಗಿದೆ. ಆದರೆ ಇಂಗ್ಲಿಷ್ ಶಿಕ್ಷಕರನ್ನು  ಹುಡುಕುವುದು ಒಂದು ಸವಾಲಿನ ಕೆಲಸವೇ ಆಗಿ ಉಳಿದಿದೆ.

ಶಿಕ್ಷಾಮಿತ್ರವು ಶೈಕ್ಷಣಿಕ ಸಂಪನ್ಮೂಲ ಕೇಂದ್ರವಾಗಿ ಕೆಲಸ ಮಾಡುತ್ತಿದ್ದು ಶಿಕ್ಷಣ ಶಾಸ್ತ್ರದ ಜ್ಞಾನವನ್ನು, ಸಾಮಗ್ರಿಗಳನ್ನು ಪೂರೈಸಲು ಹಾಗೂ ಭಾರತದ ಹಲವಾರು ರಾಜ್ಯಗಳಲ್ಲಿನ ಅನೇಕ ಶಾಲೆಗಳಿಗೆ, ಸಂಸ್ಥೆಗಳಿಗೆ ಮತ್ತು ಪೋಷಕರಿಗೂ ಕೂಡ ಸಲಹೆಗಾರರಾಗಿ ಕಾರ್ಯನಿರ್ವಹಿಸುತ್ತಿದೆ. ಎಲ್ಲ ಮಗುವಿಗೂ ಕಲಿಕೆ ಸಾಧ್ಯ, ಕೇವಲ ಅವಕಾಶಗಳನ್ನು ನೀಡಬೇಕು ಅಷ್ಟೇ ಎಂಬ ದೃಢ ನಂಬಿಕೆಯೇ ನಮ್ಮ ಚಲನಶಕ್ತಿ.



ವೃತ್ತಿಯಲ್ಲಿ ವಿಶೇಷ ಶಿಕ್ಷಕಿಯಾಗಿರುವ **ಸುದೇಷ್ಣಾ ಸಿನ್ಹಾ** ಅವರು ಪ್ರಯೋಗಾತ್ಮಕ ಪ್ರಾಥಮಿಕ ಶಾಲೆಗಳನ್ನು ಆರಂಭಿಸುವುದು (ಸೇಂಟ್ ಜೋಸೆಫ್ ಶಾಲೆಯಲ್ಲಿ ಆಶೀರ್ವಾದ್ ವಿದ್ಯಾಲಯ ಮತ್ತು ಶಿಕ್ಷಾಮಿತ್ರ), ಪಠ್ಯಕ್ರಮ ರಚನೆ, ಶಿಕ್ಷಣಶಾಸ್ತ್ರ, ಸಾಮಗ್ರಿಗಳು, ಪುಸ್ತಕಗಳು ಮತ್ತು ಮೌಲ್ಯಮಾಪನ ಸಾಧನಗಳು ಇವುಗಳ ರಚನೆಯಲ್ಲಿ ಹೆಚ್ಚಾಗಿ ತೊಡಗಿಕೊಂಡಿದ್ದಾರೆ. ಮಕ್ಕಳು ಮತ್ತು ಶಿಕ್ಷಕರಿಗೆ ಸರಳ ಭಾಷೆಯಲ್ಲಿ ಪುಸ್ತಕಗಳು ಮತ್ತು ಲೇಖನಗಳನ್ನು ಬರೆದು ಸಿದ್ಧಪಡಿಸುವುದು ಮತ್ತು ಶಿಕ್ಷಕರ ತರಬೇತಿ ಇವರ ವಿಶೇಷ ಆಸಕ್ತಿಯ ಕ್ಷೇತ್ರಗಳು. ಪರಿಣಾಮಕಾರಿ ಬೋಧನೆಗಾಗಿ ಅದರಲ್ಲೂ ಮುಖ್ಯವಾಗಿ ಭಾಷಾ ಶಿಕ್ಷಣಕ್ಕಾಗಿ ಪದ್ಧತಿ ಮತ್ತು ಸಾಮಗ್ರಿಗಳನ್ನು ವಿನ್ಯಾಸಗೊಳಿಸುವುದು ಅವರ ವಿಶೇಷ ಪರಿಣತಿಯಾಗಿದೆ. ಟೀಚರ್ಸ್ ಸೆಂಟರ್, ಮಾಡರ್ನ್ ಅಕಾಡೆಮಿ ಆಫ್ ಕಂಟಿನ್ಯೂಯಿಂಗ್ ಎಜುಕೇಶನ್, ದಿಗಂತರ್, ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾನಿಲಯ ಮತ್ತು ವಿಪ್ರೋ ಫೌಂಡೇಷನ್ ಮುಂತಾದೆಡೆ ಸಂಪನ್ಮೂಲ ಶಿಕ್ಷಕಿಯಾಗಿ ಅವರು ತರಗತಿಗಳನ್ನು ತೆಗೆದುಕೊಂಡಿದ್ದಾರೆ. ಬಾಂಗ್ಲಾದೇಶದ ಒಂದು ಪರ್ಯಾಯ ಶಾಲೆಗೆ ಮತ್ತು ಪಶ್ಚಿಮ ಬಂಗಾಳದ ಅರಿಯಾದಹದಲ್ಲಿನ ಟೆಕ್ನೋ ಇಂಡಿಯಾ ಶಾಲೆಯ ಗುಂಪುಗಳಿಗೆ ಸಂಪನ್ಮೂಲ ಸಲಹೆಗಾರರಾಗಿದ್ದಾರೆ. ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ಗೂ ಕೂಡ ಅವರು ಸಲಹೆಗಾರರಾಗಿದ್ದಾರೆ. ಅವರ ಸಂಸ್ಥೆ ಶಿಕ್ಷಾಮಿತ್ರದ ಜೊತೆಗೆ ಅವರು ಪ್ರಸ್ತುತ ವಿಪ್ರೋ ಫೌಂಡೇಷನ್‌ಗೂ ಕೂಡ ಸಂಪನ್ಮೂಲ ನೀಡುವವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಅವರನ್ನು shompare@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಜನಾರ್ದನ ಸಿ ಎಸ್** । ಪರಿಶೀಲನೆ: **ಲತಾ ಕೆ ಸಿ**

# ದ್ವಿತೀಯ ಲಿಂಗ? | ಗ್ರಾಮೀಣ ತರಗತಿಯಲ್ಲಿ ಲಿಂಗದ ಕುರಿತ ಒಂದು ಸಂಭಾಷಣೆ

ಸುನಿಲ್ ಕುಮಾರ್

ಒಬ್ಬ ಸಮಾಜವಿಜ್ಞಾನ ಶಿಕ್ಷಕನಾಗಿರುವ ನನಗೆ ತರಗತಿಯ 30 ವಿದ್ಯಾರ್ಥಿಗಳಲ್ಲಿ 19 ವಿದ್ಯಾರ್ಥಿಗಳು ಹೆಣ್ಣುಮಕ್ಕಳಿರುವಾಗ ಈ ವಿಷಯವನ್ನು ಸುಲಭವಾಗಿ ವ್ಯವಹರಿಸಲು ಸಾಧ್ಯವಿರಲಿಲ್ಲ. ತರಗತಿಯಲ್ಲಿರುವ ಬಹುತೇಕ ಮಕ್ಕಳು ಬೇರೆಬೇರೆ ಸಾಮಾಜಿಕ ಆರ್ಥಿಕ ಹಿನ್ನೆಲೆಯಿಂದಲೂ ಬಂದಿರುತ್ತಾರೆ. 'ಸಮಾಜ ಹಾಗೂ ಮಹಿಳೆಯರ ಪಾತ್ರ' ಈ ಅಧ್ಯಾಯವನ್ನು ಏಳನೇ ತರಗತಿಯವರಿಗೆ ಬೋಧಿಸುತ್ತಿದ್ದಾಗ ಮಕ್ಕಳಿಗೆ ತಮ್ಮ ಮನೆಗಳಲ್ಲಿಯೇ ಪ್ರತಿದಿನ ಅನುಭವಿಸುವ ಹಾಗೂ ಅವುಗಳನ್ನು ಸಹಿಸಿಕೊಳ್ಳುವ ಸನ್ನಿವೇಶಗಳು ನೆನಪಿಗೆ ಬರುವಂತೆ ಮಾಡಿದವು. ಪಿತೃಪ್ರಧಾನ ವ್ಯವಸ್ಥೆಯೇ ಇನ್ನೂ ಅವರ ಮನೆಗಳಲ್ಲಿ ಬಹಳ ಪ್ರಾಧಾನ್ಯತೆಯನ್ನು ಪಡೆದಿದೆ. ಗಂಡು ಮಗುವನ್ನು ಖಾಸಗಿ ಆಂಗ್ಲ ಮಾಧ್ಯಮ ಶಾಲೆಗೆ ಹಾಗೂ ಹೆಣ್ಣು ಮಗುವನ್ನು ಸರ್ಕಾರಿ ಶಾಲೆಗೆ ಕಳುಹಿಸುವಂತಹ ಹುಡುಗರನ್ನು ಹಾಗೂ ಹುಡುಗಿಯರನ್ನು ಬೆಳೆಸುವ ರೀತಿಯಲ್ಲೇ ಇರುವ ಬಹಳಷ್ಟು ವ್ಯತ್ಯಾಸಗಳನ್ನು ಕಾಣಬಹುದು. ಮಕ್ಕಳು ತಾರತಮ್ಯದ ಹಲವಾರು ರೀತಿಗಳು ಹಾಗೂ ವಿಧಾನಗಳ ಕುರಿತು ಬಹಳ ಬೇಗ ಅರಿವನ್ನು ಹೊಂದಲಿದ್ದರು.

ಈ ವಿಷಯದ ನನ್ನ ಮೊದಲ ದಿನದ ಯೋಜನೆಯು ಲಿಂಗ ವಹಿಸುವ ಪಾತ್ರಗಳ ಬಗೆಗಿನ ಚರ್ಚೆಯೊಂದಿಗೆ ಆರಂಭವಾಯಿತು. ಒಂದು ಹಳ್ಳಿಯಲ್ಲಿ ಹಾಗೂ ಸಮಾಜದಲ್ಲಿ ಗಂಡಸರು ಹಾಗೂ ಹೆಂಗಸರು ಒಟ್ಟಾರೆಯಾಗಿ ಪ್ರತಿದಿನ ನಿರ್ವಹಿಸುವ ಕೆಲಸಗಳು ಹಾಗೂ ವಹಿಸುವ ಪಾತ್ರಗಳ ಕುರಿತು ಒಂದು ಪಟ್ಟಿಮಾಡಲು ಮಕ್ಕಳಿಗೆ ಹೇಳಲಾಯಿತು. ಎಲ್ಲಾ ಮಕ್ಕಳು ಈ ಚರ್ಚೆಯ ಭಾಗವಾಗಿದ್ದರು.

ಚರ್ಚೆಯು ಹುಡುಗರಿಂದ ಆರಂಭವಾಯಿತು. ಅಂದು ಹಾಜರಿದ್ದ ಎಲ್ಲಾ ಹನ್ನೆರಡು ಹುಡುಗರು ಗಂಡಸರು ನಿರ್ವಹಿಸುವ ಕೆಲಸದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಇವುಗಳಲ್ಲಿ ಕೆಲವು ಮುಖ್ಯವಾದವುಗಳು: ಗಂಡಸರು ಗೃಹಕೃತ್ಯವಲ್ಲದ ವ್ಯವಹಾರಗಳನ್ನು ನಿರ್ವಹಿಸುತ್ತಾರೆ, ಅವರು ಹೊರಹೋಗಿ ಕೆಲಸವನ್ನು ಅರಸುತ್ತಾರೆ, ಅವರು ಹೊಲಗಳಲ್ಲಿ ದುಡಿಯುತ್ತಾರೆ ಹಾಗೂ ಕುಟುಂಬದ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆ. ಹುಡುಗರು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುತ್ತಿರುವಂತೆಯೇ ಅವುಗಳನ್ನು ಕಪ್ಪುಹಲಗೆಯ ಮೇಲೆ ಬರೆಯಲಾಯಿತು. ಗಂಡಸರು ಮಾಡುವ ಕೆಲಸಗಳು ಕಪ್ಪುಹಲಗೆಯ ಹತ್ತನೇ ಒಂದು ಭಾಗದ ಜಾಗವನ್ನು ಆಕ್ರಮಿಸಿತ್ತು.

ಆನಂತರ ಹುಡುಗಿಯರ ಸರದಿ. ಅವರು ದಿನದ ಆರಂಭದೊಂದಿಗೆ ನಡೆಯುವ ಎಲ್ಲಾ ಕಾರ್ಯಗಳನ್ನು ನೆನಪಿಸಿಕೊಳ್ಳತೊಡಗಿದರು – ನೀರು ತರಲೆಂದು ಬೇಗ ಏಳುವುದು, ಮನೆಯ ಕಸ ಗುಡಿಸುವುದು, ಪ್ರಾಣಿಗಳಿಗೆ ಆಹಾರ ಕೊಡುವುದು, ಮನೆಯ ಎಲ್ಲ ಸದಸ್ಯರಿಗೆ ತಿಂಡಿಯನ್ನು ಮಾಡುವುದು, ಮಕ್ಕಳನ್ನು ಶಾಲೆಗೆ ಹೊರಡಿಸುವುದು, ಮಧ್ಯಾಹ್ನದ ಅಡುಗೆಯನ್ನು ತಯಾರಿಸುವುದು, ಪಾತ್ರೆ ತೊಳೆಯುವುದು, ಮನೆಯಲ್ಲಿರುವ ಮಕ್ಕಳನ್ನು ಹಾಗೂ ಹಿರಿಯರನ್ನು ನೋಡಿಕೊಳ್ಳುವುದು, ಹೊಲದಲ್ಲಿರುವ ಗಂಡಸರಿಗೆ ಸಹಾಯ ಮಾಡುವುದು ಇತ್ಯಾದಿ. ಅವರು ಪಟ್ಟಿ ಮಾಡಿದ ಕಾರ್ಯಗಳಿಂದ ಕಪ್ಪುಹಲಗೆ ಸಂಪೂರ್ಣ ತುಂಬಿಹೋಯಿತು. ಈ ಎಲ್ಲಾ ದುಡಿಮೆಗೆ ಹೆಂಗಸರಿಗೆ ಸಂಭಾವನೆ ಸಿಗುತ್ತದೆಯೇ ಎಂದು ಮಕ್ಕಳನ್ನು ಪ್ರಶ್ನಿಸಿದೆ. ಯಾವುದೇ ಉತ್ತರ ಬರಲಿಲ್ಲ. ಮನೆಯಿಂದ ಹೊರಗೆ ಕೆಲಸ ಮಾಡುವ ಗಂಡಸರ ದುಡಿಮೆಗೆ ಸಂಭಾವನೆ ಸಿಗುತ್ತದೆಯೇ ಎಂದು ಎರಡನೆಯ ಪ್ರಶ್ನೆಯನ್ನು ಕೇಳಿದೆ. ಹೌದೆಂದು ಎಲ್ಲ ಮಕ್ಕಳೂ ಉತ್ತರಿಸಿದರು.

ಗೃಹಕೃತ್ಯದ ಭಾಗವಾಗಿ ಮಕ್ಕಳಿಗೆ ಎರಡು ಪ್ರಶ್ನೆಗಳನ್ನು ಕೊಡಲಾಯಿತು. ಮೊದಲಿಗೆ ಅವರು ಮಾಡುವ ಕೆಲಸಕ್ಕಾಗಿ ಹೆಂಗಸರಿಗೆ ವೇತನ ಏಕೆ ಸಿಗುವುದಿಲ್ಲ ಎಂಬುದಕ್ಕೆ ಕಾರಣ ಹುಡುಕುವುದು. ಎರಡನೆಯದಾಗಿ ತಮ್ಮ ಮನೆಗಳಲ್ಲಿ ಹಾಗೂ ನೆರೆಹೊರೆಯಲ್ಲಿ ಗಂಡಸರು ಹಾಗೂ ಹೆಂಗಸರನ್ನು (ಅದರಲ್ಲಿಯೂ ಎಳೆಯ ಹುಡುಗರು ಹಾಗೂ ಹುಡುಗಿಯರು) ಬೆಳೆಸುವ ರೀತಿಯಲ್ಲಿ ಏನಾದರೂ ವ್ಯತ್ಯಾಸ ಕಾಣುತ್ತದೆಯೇ ಎಂದು ಗಮನಿಸಲು ಹೇಳಲಾಯಿತು. ಚರ್ಚೆಯ ಪ್ರಾರಂಭದಲ್ಲಿ ಹೆಂಗಸರು ವೇತನರಹಿತ ದುಡಿಮೆಯನ್ನು ಬಹಳಷ್ಟು ಮಾಡಿದರೂ ಗಂಡಸರಿಗೆ ಮನೆಯಲ್ಲಿ ಸಿಗುವಷ್ಟು ಗೌರವ ಹೆಂಗಸರಿಗೆ ಸಿಗುವುದಿಲ್ಲ ಎಂದು ಮಕ್ಕಳಿಗೆ ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು.

ಮರುದಿನ, ಮನೆಕೆಲಸಕ್ಕಾಗಿ ನೀಡಿದ ಪ್ರಶ್ನೆಗಳನ್ನು ಚರ್ಚಿಸುವುದರೊಂದಿಗೆ ಪಾಠ ಆರಂಭವಾಯಿತು. ಮನೆಗೆಲಸವನ್ನು ಮಾಡುವುದು ಅವರ ಕರ್ತವ್ಯವಾದ್ದರಿಂದ ಹೆಂಗಸರಿಗೆ ಅವರು ಮಾಡುವ ಕೆಲಸಕ್ಕಾಗಿ ವೇತನ ಕೊಡುವುದಿಲ್ಲ ಎಂದು ಬಹಳಷ್ಟು ಮಕ್ಕಳು ಸೂಚಿಸಿದರು. ಮಹಿಳೆಯರಲ್ಲದೆ ಈ ಕೆಲಸಗಳನ್ನು ಬೇರೆ ಯಾರು ನಿರ್ವಹಿಸಬಲ್ಲರು ಎಂದು ಅವರು ಗೊಂದಲ–ಕ್ಕೊಳಗಾಗಿದ್ದರು. ಇದೇ ಕೆಲಸವನ್ನು ಮಹಿಳೆಯರು ಹೊರಗೆ ಮಾಡಿದಾಗ ಅವರ ದುಡಿಮೆಗೆ ವೇತನ ಸಿಗುತ್ತದೆ ಎನ್ನುವ ದೃಷ್ಟಿಕೋನವನ್ನು ಇತರ ಮಕ್ಕಳು ಮುಂದಿಟ್ಟರು.

ಚರ್ಚೆಯ ನಡುವೆ ಇನ್ನಷ್ಟು ಪ್ರಶ್ನೆಗಳು ಹೊರಬಂದವು: ಇತರ ದುಡಿಮೆಯಂತೆ ಮನೆಗೆಲಸವೂ ಅಷ್ಟೇ ಮುಖ್ಯವೆಂದು ಪರಿಗಣಿಸಲಾಗದೆ? ಮನೆಗೆಲಸವನ್ನು ಮಾಡುವುದು ಕೇವಲ ಹೆಂಗಸರ ಕರ್ತವ್ಯವೇ? ಚರ್ಚೆಯ ಕೊನೆಗೆ ಮನೆಗೆಲಸವನ್ನು ಮಾಡುವುದು ಗಂಡಸರು ಹಾಗೂ ಹೆಂಗಸರು ಇಬ್ಬರ ಕರ್ತವ್ಯವಾಗಿದ್ದು, ಇಬ್ಬರೂ ಅದನ್ನು ಸಮಾನವಾಗಿ ಹಂಚಿಕೊಳ್ಳಬೇಕು ಎಂಬ ಒಮ್ಮತಕ್ಕೆ ಎಲ್ಲ ಮಕ್ಕಳು ಬಂದರು. ಭಾರತದ ಸಂವಿಧಾನವು ಸಮಾನವಾದ ದುಡಿಮೆಗೆ ಸಮಾನ ವೇತನವಿರಬೇಕು ಎನ್ನುತ್ತದೆ. ಹಾಗಾಗಿ ಲಿಂಗದ ಆಧಾರದ ಮೇಲೆ ತಾರತಮ್ಯ ಮಾಡುವುದು ತಪ್ಪು ಎಂಬ ನನ್ನ ದೃಷ್ಟಿಕೋನವನ್ನೂ ಮುಂದಿಟ್ಟೆ.

ಆನಂತರ ಎರಡನೆಯ ಪ್ರಶ್ನೆಯನ್ನು ಕುರಿತು ಚರ್ಚಿಸಲಾಯಿತು. ಹುಡುಗಿಯರು ತಾವು ಗಮನಿಸಿದ ಹಾಗೂ ಎದುರಿಸಿದ ಅಸಂಖ್ಯಾತ ರೀತಿಯ ತಾರತಮ್ಯಗಳ ಕುರಿತು ಹೇಳಿದರು. ಹುಡುಗರಿಗೆ ವಿಮಾನಗಳನ್ನು ಹಾಗೂ ಕಾರುಗಳನ್ನು ಆಟವಾಡಲು ನೀಡಿದರೆ, ಹುಡುಗಿಯರಿಗೆ ಗೊಂಬೆಗಳನ್ನು ಕೊಡಲಾಗುತ್ತದೆ. ಹುಡುಗರಿಗೆ ತಿನ್ನಲು ಸಾಕಷ್ಟು ಆಹಾರವನ್ನು ನೀಡಿದರೆ ಹುಡುಗಿಯರಿಗೆ ತಿಂದುಳಿದದ್ದನ್ನು ನೀಡಲಾಗುತ್ತದೆ. ಹುಡುಗಿಯರಿಗೆ ವಿಧೇಯರಾಗಿ ಮಾತನಾಡಲು ಕಲಿಸಲಾಗುತ್ತದೆ. ಆದರೆ ಹುಡುಗರಿಗಲ್ಲ. ಹುಡುಗರಿಗೆ ತಮಗೆ ಇಷ್ಟವಾದ ಜಾಗದಲ್ಲಿ ಹಾಗೂ ಯಾವ ಹೊತ್ತಿನಲ್ಲಿ ಬೇಕಾದರೂ ಆಟವಾಡಲು ಮತ್ತು ಹೊರಗಡೆ ತಿರುಗಾಡಲು  ಮುಕ್ತವಾಗಿ ಅವಕಾಶ ಕೊಡಲಾಗುತ್ತದೆ. ಆದರೆ ಹುಡುಗಿಯರ ಚಲನವಲನದ ಮೇಲೆ ಕಟ್ಟುನಿಟ್ಟಾದ ನಿಗಾ ಇಡಲಾಗುತ್ತದೆ ಹಾಗೂ ರಾತ್ರಿಯ ಹೊತ್ತಿನಲ್ಲಿ ಹೊರಗೆ ಹೋಗುವುದನ್ನು ನಿಷೇಧಿಸಲಾಗುತ್ತದೆ. ಹುಡುಗರಿಗೆ ಉಡಲು ಒಳ್ಳೆಯ ಬಟ್ಟೆಗಳನ್ನು ಕೊಡಲಾಗುತ್ತದೆಯಲ್ಲದೇ,  ಒಳ್ಳೆಯ ಶಾಲೆ ಹಾಗೂ ಮನೆಪಾಠಕ್ಕೂ ಕಳುಹಿಸಲಾಗುತ್ತದೆ. ಹುಡುಗಿಯರಿಗೆ ಅದೇ ರೀತಿಯ ಉಪಚಾರ ಅತಿ ವಿರಳವಾಗಿ ಸಿಗುತ್ತದೆ. ಹುಡುಗಿಯರನ್ನು ಸಣ್ಣ ವಯಸ್ಸಿನಲ್ಲಿಯೇ ಮದುವೆ ಮಾಡಿ ಕಳುಹಿಸಲಾಗುತ್ತದೆ, ಆದರೆ ಹುಡುಗರನ್ನಲ್ಲ.

ಸಂಭಾಷಣೆಯ ನಂತರ ನಾನು ಸಮಾನತೆಯ ತತ್ವವನ್ನು ಮಕ್ಕಳಿಗೆ ತಿಳಿಸುತ್ತಾ, ಅದರಲ್ಲಿಯೂ ವಿಶೇಷವಾಗಿ ಎಲ್ಲ ಜನರು ಸಮಾನರು ಹಾಗೂ ಇವುಗಳ ಮೇಲೆ ಲಿಂಗ ಪ್ರಭಾವ ಬೀರುವುದಿಲ್ಲ ಎಂದು ಹೇಳಿದೆನು. ಆದರೂ ನಮ್ಮ ಸಾಮಾಜಿಕ ವ್ಯವಸ್ಥೆ ಗಂಡಸರು ಹಾಗೂ ಹೆಂಗಸರನ್ನು ಸಮಾನರೆಂದು ಪರಿಗಣಿಸಬಾರದು ಎಂಬ ಕಟ್ಟಳೆಯನ್ನು ವಿಧಿಸಿದೆ. ಮನೆಗೆಲಸವು ಕೆಳದರ್ಜೆಯದ್ದು ಎಂದು ನಿಗದಿಪಡಿಸಿ ಇದನ್ನು ಕುಟುಂಬದ ಖಾಸಗಿ ವಿಚಾರ ಹಾಗೂ ಮಹಿಳೆಯರೇ ಇದನ್ನು ಮಾಡಬೇಕಾದುದು ಎಂದು ಹೇಳಲಾಗುತ್ತದೆ. ನಮ್ಮ ಸಮಾಜದಲ್ಲಿರುವ ಲಿಂಗ ಆಧಾರಿತ ತಾರತಮ್ಯಕ್ಕೆ ಇದುವೇ ಬುನಾದಿ. ನಮ್ಮ ಸಂವಿಧಾನವು ಲಿಂಗ ತಾರತಮ್ಯವನ್ನು ತಿರಸ್ಕರಿಸಿದ್ದರೂ,  ಇದರ ವಿರುದ್ಧ ಕಾನೂನು ಕ್ರಮಗಳನ್ನು ಕೈಗೊಳ್ಳುವ ಅವಕಾಶವಿದ್ದರೂ ಲಿಂಗ ತಾರತಮ್ಯ ಇನ್ನೂ ಉಳಿದಿದೆ. ಇಂತಹ ಹಲವಾರು ಕಾರಣಗಳಿಂದಾಗಿ, ಹುಡುಗಿಯರು ಶಾಲೆಗಳಿಗೆ ಹೋಗಿ ವಿದ್ಯಾಭ್ಯಾಸವನ್ನು ಪಡೆಯುವುದು ಅಸಾಧ್ಯವಾಗಿದೆ. ಉದ್ಯೋಗ ಪಡೆಯುವುದು ಸಾಧ್ಯವಾಗುತ್ತಿಲ್ಲ ಹಾಗೂ ಅವರಲ್ಲಿ ಅನೇಕರಿಗೆ ಒಂದು ಗೌರವಯುತ ಹಾಗೂ ಪರಿಪೂರ್ಣ ಜೀವನ ದೊರಕುವುದೇ ಬಹು ದೂರದ ಕನಸಾಗಿದೆ.

ನಮ್ಮ ಸಮಾಜವು ಹೆಣ್ಣನ್ನು ದೇವಿಗೆ ಹೋಲಿಸುತ್ತಾ ಅವರನ್ನು ಎತ್ತರದ ಪೀಠದ ಮೇಲೆ ಪ್ರತಿಷ್ಠಾಪಿಸಲು ಉತ್ಸುಕವಾಗಿರುತ್ತದೆ. ಇಷ್ಟಾಗಿಯೂ ಸಮಾಜವು ಎಂದಿಗೂ ಹೆಣ್ಣಿನ ಸಮಾಜೋ –ಆರ್ಥಿಕ ಸ್ಥಿತಿಯ ಕುರಿತು ಯಾವುದೇ ಚರ್ಚೆಯನ್ನು ಕೈಗೊಳ್ಳುವುದಿಲ್ಲ. ತರಗತಿಯಲ್ಲಿ ಇಂತಹ ವಿಷಯಗಳ ಸುತ್ತಲೂ ಚರ್ಚೆಯು ನಡೆಯಿತು.  ಮಕ್ಕಳು ಹಲವಾರು ಪ್ರಶ್ನೆಗಳನ್ನು ಕೇಳಿದರು: 'ಗಂಡಸರು ಹೀಗೇಕೆ ವರ್ತಿಸುತ್ತಾರೆ?', 'ಈ ನಿಯಮಗಳನ್ನು ಮಾಡಿದವರು ಹಾಗೂ ಸಮಾಜದಲ್ಲಿ ಈ ಪಾತ್ರಗಳನ್ನು ನಿಯೋಜಿಸಿದವರು ಯಾರು?' 'ಹೆಣ್ಣು ಮಗುವಿನ ಜನನವನ್ನು ಏಕೆ ಅಪಶಕುನ ಎಂದು ಪರಿಗಣಿಸಲಾಗುತ್ತದೆ?', 'ಹೆಣ್ಣುಮಕ್ಕಳನ್ನು ಗರ್ಭದಲ್ಲಿರುವಾಗಲೇ ಅಥವಾ ಹುಟ್ಟಿದ ನಂತರ ಕೊಲ್ಲುವುದು ಏಕೆ?' ರಾಷ್ಟ್ರದ ಅಭಿವೃದ್ಧಿಗಾಗಿ ತಮ್ಮ ಕೊಡುಗೆಯನ್ನು ನೀಡಿದ



ಚಿತ್ರ ಕೃಪೆ *: SCERT*

ಮಹಿಳೆಯರ ಬಗ್ಗೆ ಮಾಹಿತಿಯನ್ನು ಹುಡುಕಿ  ಸಂಗ್ರಹಿಸುವುದೇ ಆ ದಿನದ ಮನೆಕೆಲಸದ ಕಾರ್ಯವಾಗಿತ್ತು.

ಮೂರನೆಯ ದಿನದ ತರಗತಿಯೂ ಮಕ್ಕಳು ಈ ಹಿಂದೆ ನೀಡಿದ ಪ್ರತಿಕ್ರಿಯೆಗಳಿಂದಲೇ ಆರಂಭವಾಯಿತು. ದೇಶದ ಬೆಳವಣಿಗೆಗಾಗಿ ಕೊಡುಗೆ ನೀಡಿದ ಹಲವಾರು ಮಹಿಳೆಯರ ಹೆಸರುಗಳನ್ನು ಮಕ್ಕಳು ಸೂಚಿಸಿದರು: ಇಂದಿರಾ ಗಾಂಧಿ, ಸಾನಿಯಾ ಮಿರ್ಜಾ, ಪಿ.ವಿ.ಸಿಂಧು, ಸೈನಾ ನೆಹ್ವಾಲ್, ಮನೀಶಾ ಠಾಕೂರ್, ಕಲ್ಪನಾ ಚಾವ್ಲಾ, ಕಮಲಾ ಭಸಿನ್ ಹಾಗೂ ಇನ್ನೂ ಹಲವರು. ಇದರೊಂದಿಗೆ ಎಲ್ಲ ಮಹಿಳೆಯರ ಯಶಸ್ಸು ಹಾಗೂ ಅವರ ಕೊಡುಗೆಯ ಹಿಂದಿನ ಪ್ರೇರಕ ಶಕ್ತಿಯೆಂದರೆ ಅವರಿಗೆ ದೊರೆತ ವಿದ್ಯಾಭ್ಯಾಸ ಹಾಗೂ ಅವರ ಹಕ್ಕುಗಳ ಬಗೆಗಿನ ಅರಿವು ಎಂದೂ ಹೇಳಿದೆ.

ಆ ದಿನದ ಯೋಜನೆಯ ಭಾಗವಾಗಿ, ಪ್ರಸ್ತುತ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯಗಳನ್ನು ಮಕ್ಕಳ ಗಮನಕ್ಕೆ ತರುವುದರ ಜೊತೆಗೆ ಮಹಿಳೆಯರನ್ನು ಕಿರುಕುಳ ಹಾಗೂ ಲೈಂಗಿಕ ದೌರ್ಜನ್ಯದಿಂದ ರಕ್ಷಿಸುವ ಕಾನೂನುಗಳ ಬಗ್ಗೆ ಅರಿವು ಮೂಡಿಸುವುದೂ ಒಳಗೊಂಡಿತ್ತು. ಮಕ್ಕಳಿಗೆ 2005ರ ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆಯನ್ನು ಪರಿಚಯಿಸಲಾಯಿತು. ಈ ಕಾಯ್ದೆಯ ವ್ಯಾಪ್ತಿಯಲ್ಲಿ ಕೌಟುಂಬಿಕ ಸ್ಥಳಗಳಲ್ಲಿ ದೈಹಿಕ ಹಿಂಸೆ ಹಾಗೂ ಮಾನಸಿಕ ಕಿರುಕುಳವನ್ನು ಎದುರಿಸುವ ಮಹಿಳೆಯರಿಗೆ ಕಾನೂನು ರಕ್ಷಣೆ ಹೇಗೆ ಒದಗಿಸಲಾಗುತ್ತದೆ ಎಂದು ಅವರಿಗೆ ತಿಳಿಸಲಾಯಿತು. ಕೆಲಸ ಮಾಡುವ ಜಾಗದಲ್ಲಿ ಲೈಂಗಿಕ ಕಿರುಕುಳದಿಂದ ಮಹಿಳೆಯರನ್ನು ರಕ್ಷಿಸಲು ಇರುವ ವಿಶಾಖ ಮಾರ್ಗಸೂಚಿಗಳು ವಿಧಿಸುವ ನಿಬಂಧನೆಗಳನ್ನು ಚರ್ಚಿಸಲಾಯಿತು. ಕೊನೆಯದಾಗಿ ಸಂವಿಧಾನವು ದೇಶದ ಎಲ್ಲಾ ನಾಗರೀಕರಿಗೆ ಸಮಾನ ಹಕ್ಕುಗಳನ್ನು ನೀಡಿದ್ದು ಕಾನೂನುಬದ್ಧವಾಗಿ ಅವರನ್ನು ಲಿಂಗ, ಜಾತಿ ಅಥವಾ

ಧರ್ಮದ ಆಧಾರದ ಮೇಲೆ ತಾರತಮ್ಯವನ್ನು ಮಾಡಬಾರದು ಎಂಬುದರ ಅರಿವನ್ನು ಮಕ್ಕಳಿಗೆ ಮೂಡಿಸಲಾಯಿತು.

ಈ ಪಾಠವನ್ನು ಮಕ್ಕಳಿಗೆ ಬೋಧಿಸುವಾಗ ನಾನು ಎದುರಿಸಿದ ಅತ್ಯಂತ ದೊಡ್ಡ ಸವಾಲೆಂದರೆ ಅವರ ಕುಟುಂಬಗಳಲ್ಲಿಯೇ ಲಿಂಗ ಆಧಾರಿತ ತಾರತಮ್ಯದ ವರ್ತನೆಗಳನ್ನು ಗುರುತಿಸುವುದಾಗಿತ್ತು. ತಮ್ಮ ವೈಯಕ್ತಿಕ ಹಾಗೂ ಕೌಟುಂಬಿಕ ವಿಷಯಗಳನ್ನು ಹಂಚಿಕೊಳ್ಳುವುದು ಮಕ್ಕಳಿಗೆ ಸುಲಭವಾಗಿರಲಿಲ್ಲ. ಅವರೆಡೆಗೆ (ಹೆಣ್ಣುಮಕ್ಕಳು) ತೋರುತ್ತಿದ್ದ ಕೆಟ್ಟ ನಡವಳಿಕೆ ಹಾಗೂ ಹಿಂಸೆಯ ವಿರುದ್ಧ ಧ್ವನಿ ಎತ್ತುವಷ್ಟು ಅರಿವು ಹಾಗೂ ಸ್ವಸಾಮರ್ಥ್ಯವನ್ನು ಮೂಡಿಸುವುದು ಒಂದು ಕಠಿಣವಾದ ಕಾರ್ಯವೇ ಆಗಿತ್ತು. ಮಕ್ಕಳ ಅನುಭವಗಳು ಕಣ್ಣು ತೆರೆಸುವಂತಹುದು, ಚಿಂತನೆಗೆ ಹಚ್ಚುವಂಥದ್ದು ಹಾಗೂ ಹೃದಯಸ್ಪರ್ಶಿಯಾಗಿದ್ದವು. ಇವು ವಿವಿಧ ರೀತಿಯ ತಾರತಮ್ಯಗಳ ಬಗೆಗೆ ತಿಳಿದುಕೊಳ್ಳುವುದಕ್ಕೆ ಹೆಚ್ಚಿನ ಅವಕಾಶ ಒದಗಿಸಿದವು.



**ಸುನಿಲ್ ಕುಮಾರ್** ಅವರು ಧಮ್‌ತರಿಯಲ್ಲಿರುವ (ಛತ್ತಿಸ್‌ಗಢ್) ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಸಮಾಜವಿಜ್ಞಾನ ಶಿಕ್ಷಕರಾಗಿದ್ದಾರೆ. ಇವರು ಮೊದಲು ನವದೆಹಲಿಯಲ್ಲಿರುವ ಒಂದು ಅಂತರರಾಷ್ಟ್ರೀಯ ಶಾಲೆಯಲ್ಲಿ ಬೋಧಕರಾಗಿದ್ದರು. ಇವರು ಬನಾರಸ್ ಹಿಂದೂ ವಿಶ್ವವಿದ್ಯಾಲಯದಿಂದ ರಾಜ್ಯಶಾಸ್ತ್ರದಲ್ಲಿ ಪದವಿಯನ್ನು ಪಡೆದಿದ್ದು, ದೆಹಲಿ ವಿಶ್ವವಿದ್ಯಾಲಯದಿಂದ ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಹಾಗೂ ಬಿ.ಎಡ್ ಪೂರೈಸಿರುತ್ತಾರೆ. ಇವರಿಗೆ ಚಿತ್ರಕಲೆ ಹಾಗೂ ಪ್ರಯಾಣ ಎಂದರೆ ಬಲು ಇಷ್ಟ. ಇವರನ್ನು sunil.kumar1@azimpremjifoundation.org ಇಲ್ಲಿ ಸಂಪರ್ಕಿಸಬಹುದು.

ಅನುವಾದ: **ವಿನಯಾ ವಿಠ್ಠಲ** । ಪರಿಶೀಲನೆ: **ಲತಾ ಕೆ ಸಿ**

# ಪ್ರಯೋಗದ ಮೂಲಕ ಕಲಿಕೆ | ವಸ್ತುಗಳೇಕೆ ತೇಲುತ್ತವೆ ಅಥವಾ ಮುಳುಗುತ್ತವೆ?

ಉಮಾಶಂಕರ್

ನಮ್ಮ ದೈನಂದಿನ ಜೀವನದಲ್ಲಿ ನಾವು ಕೆಲವು ವಸ್ತುಗಳು ನೀರಿನಲ್ಲಿ ಮುಳುಗುವುದನ್ನು ಮತ್ತು ಕೆಲವು ವಸ್ತುಗಳು ತೇಲುವುದನ್ನು ನೋಡುತ್ತೇವೆ. ಇದರಿಂದ ನಮ್ಮ ಮನಸ್ಸಿಗೆ ಬರುವ ಸಹಜ ಭಾವನೆಯೆಂದರೆ ಒಂದು ಕಲ್ಲು ಭಾರದ ವಸ್ತುವಾಗಿರುವುದರಿಂದ ಮುಳುಗುತ್ತದೆ. ಪ್ಲಾಸ್ಟಿಕ್ ಅಥವಾ ಕಾಗದ ಹಗುರವಾಗಿರುವುದರಿಂದ ತೇಲುತ್ತದೆ. ಆದರೆ ಇನ್ನೂ ಕೆಲವು ಪ್ರಶ್ನೆಗಳಿಗೆ ಇದು ಉತ್ತರ ನೀಡುವುದಿಲ್ಲ. ಉದಾಹರಣೆಗೆ, ಹಡಗು ದೊಡ್ಡದಾಗಿದ್ದರೂ ಮುಳುಗುವುದಿಲ್ಲ. ಆದರೆ ಒಂದು ಸಣ್ಣ ಕಲ್ಲು ಮುಳುಗುತ್ತದೆ. ಆದ್ದರಿಂದ, ಈ ಒಗಟುಗಳ ಹಿಂದೆ ಕೆಲವು ಕಾರಣಗಳಿರಬೇಕು ಎಂದು ನಾವು ಅರ್ಥಮಾಡಿಕೊಳ್ಳುತ್ತೇವೆ. ಪ್ರಮುಖವಾಗಿ ಇದರ ಹಿಂದೆ ಒಂದು ವೈಜ್ಞಾನಿಕ ಕಾರಣ ಅಥವಾ ವಿಚಾರವಿದೆ. ಹೀಗಾಗಿ ನಮ್ಮ ಮುಂದಿರುವ ಪ್ರಶ್ನೆಯೆಂದರೆ ಆ ವಿಜ್ಞಾನವೇನು?

ನಾನು ಏಳನೆಯ ತರಗತಿಯಲ್ಲಿ ಅಳತೆಯ ಬಗ್ಗೆ ಪಾಠ ಮಾಡುವಾಗ ಸಾಂದ್ರತೆಯ ಪರಿಕಲ್ಪನೆಯನ್ನು ಕಲಿಸಬೇಕಾಯಿತು.

ಆಗ ನಾನು ವಿದ್ಯಾರ್ಥಿಗಳಿಗೆ 'ಕೆಲವು ವಸ್ತುಗಳು ಏಕೆ ನೀರಿನಲ್ಲಿ ಮುಳುಗುತ್ತವೆ ಮತ್ತು ಕೆಲವು ಏಕೆ ತೇಲುತ್ತವೆ' ಎಂಬ ಪ್ರಶ್ನೆಯನ್ನು ಕೇಳಿದೆ.

'ಕೆಲವು ವಸ್ತುಗಳು ಹಗುರವಾಗಿರುತ್ತವೆ, ಅವುಗಳ ತೂಕ ಕಡಿಮೆಯಾಗಿರುತ್ತದೆ. ಕೆಲವು ವಸ್ತುಗಳ ತೂಕ ಹೆಚ್ಚಾಗಿರುವುದರಿಂದ ಅವು ಭಾರವಾಗಿರುತ್ತವೆ. ಹಗುರವಾದ ವಸ್ತುಗಳು ತೇಲುತ್ತವೆ ಮತ್ತು ಭಾರವಾದವು ಮುಳುಗುತ್ತವೆ'. ಮಕ್ಕಳ ಈ ಉತ್ತರದಲ್ಲಿ ಒಂದು ತರ್ಕವಿತ್ತು.

'ಸರಿ. ಹಾಗಾದರೆ, ನಾವು ಈಗ ಒಂದು ಪ್ರಯೋಗ ನಡೆಸೋಣ. ಇಲ್ಲಿ ಒಂದು ಬಟ್ಟಲು ಮತ್ತು ಒಂದು ಸಣ್ಣ ಕಬ್ಬಿಣದ ಮೊಳೆಯಿದೆ. ಈಗ ಯಾವುದು ಹಗುರ, ಯಾವುದು ಭಾರ ಹೇಳಿ?' ಎಂದು ಮಕ್ಕಳನ್ನು ಕೇಳಿದೆ.

'ಬಟ್ಟಲು ಭಾರವಾಗಿರುತ್ತದೆ. ಕಬ್ಬಿಣದ ಮೊಳೆ ಹಗುರವಾಗಿರುತ್ತದೆ' ಎಂದು ಮಕ್ಕಳು ಉತ್ತರಿಸಿದರು.

ನಾನು ಎರಡೂ ವಸ್ತುಗಳನ್ನು ನೀರಿನಿಂದ ತುಂಬಿದ ಒಂದು ಧಾರಕದಲ್ಲಿ (ಕಂಟೇನರು) ಹಾಕಿದೆ. ಆಗ ಮೊಳೆ ಮುಳುಗಿ ತಳ ಸೇರಿತು. ಆದರೆ ಬಟ್ಟಲು ತೇಲಿತು.

'ಇದಕ್ಕೆ ಕಾರಣವೇನು?' ಎಂದು ನಾನು ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳಿದೆ.

ಒಬ್ಬ ವಿದ್ಯಾರ್ಥಿ 'ಬಟ್ಟಲು ಅಗಲವಾಗಿದೆ, ಅದ್ದರಿಂದ ಅದು ತೇಲಿತು. ಆದರೆ ಮೊಳೆಯು ಅಗಲವಾಗಿಲ್ಲ ' ಎಂದು ಹೇಳಿದ.

'ಆದರೆ ನೀವೆಲ್ಲರೂ ಭಾರವಾದ ವಸ್ತು ಮುಳುಗುತ್ತದೆ ಎಂದು ಹೇಳಿದಿರಿ' ಎಂದು ಅವರನ್ನು ಕೇಳಿದೆ.

ಈಗ ಮಕ್ಕಳು ಇಕ್ಕಟ್ಟಿಗೆ ಸಿಲುಕಿದರು. ಆಗ ಅವರು 'ಇಲ್ಲ, ಇಲ್ಲ, ಹಾಗೆ ಹೇಳಲಾಗದು' ಎಚಿದರು.

'ಹಾಗಾದರೆ, ಈ ಫಲಿತಾಂಶಕ್ಕೆ ಕಾರಣವೇನಿರಬಹುದು?' ಎಂದು ನಾನು ಕೇಳಿದೆ.

ಮಕ್ಕಳು ತಮ್ಮೊಳಗೆ ಚರ್ಚೆ ಮಾಡಲು ಪ್ರಾರಂಭಿಸಿದರು. ಆದರೆ ಅವರಿಗೆ ಯಾವುದೇ ಸರಿಯಾದ ಉತ್ತರ ನೀಡಲಾಗಲಿಲ್ಲ. ನಂತರ ನಾನು ಅವರಿಗೆ ಇನ್ನೊಂದು ಪ್ರಯೋಗ ಮಾಡಿ ತೋರಿಸಿದೆ.

ಒಂದು ಬೀಕರಿನಲ್ಲಿ 200 ಮಿ.ಲೀ. ನೀರನ್ನು ತುಂಬಿದೆ. ನಂತರ, ಅದರೊಳಗೆ 200 ಮಿ.ಲೀ. ಸೀಮೆಎಣ್ಣೆ ಎಣ್ಣೆಯನ್ನು ಹಾಕಿದೆ. ಸ್ವಲ್ಪ ಸಮಯದ ಬಳಿಕ ನೀರು ಮತ್ತು ಸೀಮೆಎಣ್ಣೆ ಬೇರೆ ಬೇರೆಯಾಗಿ ಪ್ರತ್ಯೇಕ ಪದರಗಳಾಗಿರುವುದನ್ನು ನಾವು ನೋಡಿದೆವು. ಪ್ರಾಯಶಃ ಮಕ್ಕಳು ಇದನ್ನು ಮೊದಲೇ ನೋಡಿರಬಹುದು. ಏಕೆಂದರೆ ಕೆಲವು ಮಕ್ಕಳು 'ನೋಡು, ನೋಡು, ಎರಡೂ ಬೇರೆ ಬೇರೆಯಾದವು' ಎಂದು ಹೇಳಿದ್ದನ್ನು ನಾನು ಕೇಳಿಸಿಕೊಂಡೆ.

'ನೋಡಿ, ಹೇಗೆ ಎರಡೂ ಬೇರೆ ಬೇರೆಯಾಗುತ್ತವೆ' ಎಂದು ಹೇಳಿ, 'ಈ ಎರಡೂ ದ್ರವಗಳು ಏಕೆ ಪರಸ್ಪರ ಬೆರೆಯಲಿಲ್ಲ?' ಎಂಬ ಪ್ರಶ್ನೆಯನ್ನು ಕೇಳಿದೆ.

ಒಂದು ಮಕ್ಕಳ ಗುಂಪು, 'ಏಕೆಂದರೆ ಸೀಮೆಎಣ್ಣೆ ನೀರಿನಲ್ಲಿ ಕರಗುವುದಿಲ್ಲ' ಎಂದಿತು.

ಮಕ್ಕಳ ಎರಡನೆಯ ಗುಂಪು 'ನೀರಿನಲ್ಲಿ ಲವಣಗಳಿವೆ, ಇದರಿಂದ ನೀರು ಭಾರವಾಗಿರುತ್ತದೆ. ಆದ್ದರಿಂದಲೇ ನೀರು ತಳ ಸೇರುತ್ತದೆ. ಆದರೆ ಸೀಮೆಎಣ್ಣೆಯಲ್ಲಿ ಅನಿಲವಿರಬಹುದು. ಆದ್ದರಿಂದಲೇ ಅದು ಮೇಲೆ ಬರುತ್ತದೆ' ಎಚಿದರು.

ಮಕ್ಕಳ ಮೂರನೇ ಗುಂಪು 'ನೀವು ಮೊದಲು ಹಾಕುವ ವಸ್ತು ತಳ ಸೇರುತ್ತದೆ. ನಂತರ ಹಾಕುವ ವಸ್ತು ಮೇಲಕ್ಕೆ ಬರುತ್ತದೆ. ನೀವು ಮೊದಲೇ ಸೀಮೆಎಣ್ಣೆ ಹಾಕಿದ್ದರೆ ಅದು ತಳ ಸೇರುತ್ತಿತ್ತು' ಎಂದರು. ಒಬ್ಬ ವಿದ್ಯಾರ್ಥಿ 'ಮೊದಲ ಪ್ರಯೋಗದಲ್ಲಿ ಮೊಳೆ ಮುಳುಗಿದ್ದನ್ನು ನಾವು ನೋಡಿದೆವು. ಆದರೆ ಭಾರವಾದ ಬಟ್ಟಲು ಮುಳುಗಲಿಲ್ಲ. ಇಲ್ಲಿ ಕಂಡುಬರುವ ವ್ಯತ್ಯಾಸವೆಂದರೆ ಒಂದು ವಸ್ತುವು ಎಷ್ಟು ಪ್ರಸರಿತವಾಗಿದೆ ಎಂಬುದು ಮುಖ್ಯ. ಸೀಮೆಎಣ್ಣೆ ಹೆಚ್ಚು ಪ್ರಸರಿತವಾಗುವಂತಹದ್ದಾಗಿರಬಹುದು' ಎಂದು ಹೇಳಿದ.

ಎಲ್ಲರಿಗೂ ತಮ್ಮ ತಮ್ಮ ತರ್ಕವು ಸರಿಯೆಂದು ಅನಿಸಿದ್ದರಿಂದ ಸ್ಪಷ್ಟವಾದ ತೀರ್ಮಾನ ನೀಡಬಲ್ಲ ಇನ್ನೊಂದು ಪ್ರಯೋಗವನ್ನು

ನಡೆಸುವ ಮೂಲಕ ಕಂಡುಕೊಳ್ಳುವುದು ಬಿಟ್ಟು ಬೇರೆ ದಾರಿ ಇರಲಿಲ್ಲ. ಒಂದು ಸ್ಪಷ್ಟ ತೀರ್ಮಾನಕ್ಕೆ ಬರಲೇಬೇಕಿತ್ತು. ಮುಂದೆ ನಾವು ಒಂದು ಪ್ರನಾಳದಲ್ಲಿ ಸ್ವಲ್ಪ ನೀರನ್ನು ತೆಗೆದುಕೊಂಡು ಅದಕ್ಕೆ ಶಾಖವನ್ನು ನೀಡಿದೆವು. ಸ್ವಲ್ಪ ಸಮಯದ ನಂತರ ಅದರಿಂದ ನೀರಿನ ಗುಳ್ಳೆಗಳು ಹೊರಬರಲಾರಂಭಿಸಿದವು. ನೀರಿನಲ್ಲಿ ಅನಿಲವಿದೆಯೆಂಬುದನ್ನು ಇದು ಸಾಬೀತುಪಡಿಸಿತು. ನೀರಿನಲ್ಲಿ ಅನಿಲವಿದೆ. ಇದರಿಂದ ಮೊದಲ ಎರಡು ತರ್ಕಗಳು ನಿಲ್ಲಲಾರವೆಂಬುದು ಮಕ್ಕಳಿಗೆ ತಿಳಿಯಿತು.

ನಂತರ, ನಾವು ಇನ್ನೊಂದು ತರ್ಕವನ್ನು ಮಾಡಿದೆವು. ಒಬ್ಬ ವಿದ್ಯಾರ್ಥಿ ಸೇರಿಗೆ ಮೊದಲು ಸೀಮೆಎಣ್ಣೆ ತುಂಬಿಸಿದ. ನಂತರ ನೀರನ್ನು ಸುರಿದ. ಆಗಲೂ ಕೂಡ ಸೀಮೆಎಣ್ಣೆ ನಿಧಾನವಾಗಿ ನೀರಿನ ಮೇಲೆ ಬಂದಿತು. ಇದರಿಂದ ಮೂರನೆಯ ತರ್ಕವೂ ತಪ್ಪು ಎಂದು ಸಾಬೀತಾಯಿತು.

ನಂತರ, ನಾವು ಇನ್ನೊಂದು ತರ್ಕವನ್ನು ಪರೀಕ್ಷಿಸಲು ಮುಂದಾದೆವು. ನಾನು ಒಂದು ಬೀಕರಿನಲ್ಲಿ ಸುಮಾರು 100 ಮಿ.ಲೀ. ನೀರನ್ನು ಹಾಕಿದೆ. ನಂತರ ನಿಧಾನವಾಗಿ ಗ್ಲಿಸರಿನನ್ನು ಪ್ರನಾಳದ ಒಳ ಮೇಲ್ಮೈಭಾಗದಲ್ಲಿ ಸುರಿದೆ. ಏನಾಗುತ್ತದೆಂದು ತಿಳಿಯಲು ಮಕ್ಕಳು ಸಾಕಷ್ಟು ಕಾತುರದಿಂದ ನೋಡುತ್ತಿದ್ದರು. ಗ್ಲಿಸರಿನ್ ಒಂದು ಪದರವಾಗಿ ತಳವನ್ನು ಸೇರಿತು. ನೀರು ಮೇಲಕ್ಕೆ ಬಂತು.

ಆಗ ನಾನು ಮಕ್ಕಳನ್ನು ಕೇಳಿದೆ. 'ಗ್ಲಿಸರಿನ್ ನೀರಿನೊಂದಿಗೆ ಬೆರೆತಾಗ ಏಕೆ ಹೀಗಾಯಿತು?' ಎಂದು ಪ್ರಶ್ನಿಸಿದೆ. 'ದ್ರವ್ಯವು ಕರಗುವುದಿಲ್ಲ ಎಂದು ನಾವು ಹೇಳಲಾಗದು. ಏಕೆಂದರೆ ಒಂದು ಪದರ ಉಂಟಾಗಿದೆ. ಕರಗಿದಾಗಲೂ ಈ ಪದರ ಉಂಟಾಗಿದೆ. 'ನೀರಿಗಿಂತ ಗ್ಲಿಸರಿನ್ ಹೆಚ್ಚು ಸ್ನಿಗ್ಧವಾಗಿರಬಹುದು' ಎಂದರು. ಆದರೆ ಇದು ಕರಗದ ದ್ರವ್ಯದ ತರ್ಕವನ್ನು ಬಹುತೇಕ ತಳ್ಳಿಹಾಕಿತು.

ಕೊನೆ ತರ್ಕವು ಬಹಳ ಭಿನ್ನವಾಗಿದ್ದು, ನಮ್ಮನ್ನು ಆಲೋಚನೆಗೆ ಪ್ರೇರೇಪಿಸಿತು. ಒಬ್ಬ ವಿದ್ಯಾರ್ಥಿ ಈ ಮೊಳೆಯನ್ನು ಹೊಡೆದು ಹಿಗ್ಗಿಸಿದರೆ ಅದು ಕೂಡ ತೇಲಬಹುದು ಎಂದು ಹೇಳಿದ. ಎಣ್ಣೆಗೆ ಹರಡುವ ಗುಣ ಹೆಚ್ಚು. ಆದರೆ ನೀರು ಕಡಿಮೆ ಹರಡುತ್ತದೆ ಎಂದು ಮತ್ತೊಬ್ಬ ಹುಡುಗ ಹೇಳಿದ. ಈ ತರ್ಕವು ನಮ್ಮ ತಿಳುವಳಿಕೆಗೆ ಹೊಸ ತಿರುವನ್ನು ನೀಡಿತು. ಆದರೆ ಬಹಳಷ್ಟು ಮಕ್ಕಳಿಗೆ ಇದು ಅರ್ಥವಾಗಲಿಲ್ಲ.

'ಒಂದು ಕೆ.ಜಿ ಹತ್ತಿ ಮತ್ತು ಒಂದು ಕೆಜಿ ಸಕ್ಕರೆ ಇವೆರಡರಲ್ಲಿ ಯಾವುದು ಹಗುರ?' ಎಂಬ ಪ್ರಶ್ನೆಯನ್ನು ನಾನು ಮಕ್ಕಳಿಗೆ ಕೇಳಿದೆ.

'ಹತ್ತಿ' ಎಂದು ಹಲವು ವಿದ್ಯಾರ್ಥಿಗಳು ಒಮ್ಮೆಲೇ ಉತ್ತರಿಸಿದರು.

ಆದರೆ ಸ್ವಲ್ಪ ಸಮಯದ ನಂತರ ಸ್ವಲ್ಪ ಆಲೋಚಿಸಿ, ಎರಡೂ ವಸ್ತುಗಳ ಪ್ರಮಾಣ ಒಂದೇ ಆಗಿರುವುದರಿಂದ ಅವುಗಳ ತೂಕ ಒಂದೇ ಆಗಿರುತ್ತದೆ ಎಚಿದರು.

ನಂತರ 'ಯಾವುದು ಹೆಚ್ಚು ಸ್ಥಳವನ್ನು ಆಕ್ರಮಿಸುತ್ತದೆ?' ಎಂದು ನಾನು ಪ್ರಶ್ನೆ ಕೇಳಿದೆ,

'ಹತ್ತಿ. ಏಕೆಂದರೆ ಅದು ಒತ್ತೊತ್ತಾಗಿಲ್ಲ. ಆದರೆ ಸಕ್ಕರೆ ಕಣಗಳು ಪರಸ್ಪರ ಹತ್ತಿರದಲ್ಲಿರುತ್ತವೆ' ಎಂದು ಮಕ್ಕಳು ಹೇಳಿದರು.

ಕಡಿಮೆ ದಟ್ಟ (ಒತ್ತೊತ್ತಾಗಿಲ್ಲ) = ಹೆಚ್ಚು ಪ್ರದೇಶ ಪ್ರಸರಣೆ = ಕಡಿಮೆ ಸಾಂದ್ರತೆ

ಹೆಚ್ಚು ದಟ್ಟ = ಕಡಿಮೆ ಪ್ರದೇಶ ಪ್ರಸರಣೆ = ಹೆಚ್ಚು ಸಾಂದ್ರತೆ

ಈ ರೀತಿಯಾಗಿ, ನಾನು ಬಹುತೇಕ ಎಲ್ಲ ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ಸಾಂದ್ರತೆಯ ಗುಣಲಕ್ಷಣಗಳನ್ನು ವಿವರಿಸಿದೆ. ಘನವಸ್ತುಗಳಿಗೆ ಅನ್ವಯಿಸುವ ತತ್ವವು ದ್ರವಗಳಿಗೆ ಕೂಡ ಅನ್ವಯಿಸಿಲ್ಲವೇ? ಪ್ರಯೋಗ ಮಾಡುವಾಗ, ನೀರು ಮತ್ತು ಸೀಮೆಎಣ್ಣೆ ಎರಡರ ಪ್ರಮಾಣ ಒಂದೇ ಆಗಿತ್ತು. ಅವುಗಳ ತೂಕ ಬೇರೆಯಾಗಿದ್ದರಿಂದ ಅವು ಬೇರೆಬೇರೆ ಪದರಗಳಾದವೇ? ಈ ಪ್ರಶ್ನೆ ಅವರ ಮನದಲ್ಲಿ ಉಂಟಾಯಿತು.

ಇದನ್ನು ಸರಳೀಕರಿಸಲು, ನಾನು ನೀರು ಮತ್ತು ಸೀಮೆಎಣ್ಣೆ ಜೊತೆಗೆ ಸಮ ಪ್ರಮಾಣದ ಗ್ಲಿಸರಿನ್ ಮತ್ತು ಎಳ್ಳೆಣ್ಣೆಯನ್ನು ಬೀಕರಿನಲ್ಲಿ ತುಂಬಿಸಿದೆ. ನಾನು ಒಂದರ ನಂತರ ಒಂದನ್ನು ಸುರಿಯುತ್ತಿದ್ದಂತೆಯೇ ಕೆಲವು ದ್ರವಗಳು ಮೇಲಕ್ಕೆ ಬಂದವು. ಕೆಲವು ಕೆಳಕ್ಕೆ ಇಳಿದವು. ಪ್ರತಿಯೊಂದು ದ್ರವವೂ ಪ್ರತ್ಯೇಕ ಪದರದಲ್ಲಿ ಬಂದಿರುವುದನ್ನು ನೋಡಿ ಮಕ್ಕಳಿಗೆ ಆಶ್ಚರ್ಯವಾಯಿತು.

ಆಗ ಒಬ್ಬ ವಿದ್ಯಾರ್ಥಿ 'ಟೀಚರ್, ಎಲ್ಲಾ ದ್ರವ್ಯಗಳು ಒಂದೇ ಪರಿಮಾಣವನ್ನು (ಘನ ಅಳತೆ) ಹೊಂದಿದ್ದರೂ ಬೇರೆ ಬೇರೆ ಪದರಗಳಾದವು. ಹಾಗಾದರೆ ಅವುಗಳ ತೂಕದಲ್ಲಿ ವ್ಯತ್ಯಾಸವಿರಬಹುದು. ನಾವು ಪ್ರತಿಯೊಂದು ದ್ರವದ ತೂಕವನ್ನು ನೋಡಬೇಕು' ಎಂದನು. ಎಲ್ಲ ಮಕ್ಕಳು ಇದಕ್ಕೆ ಒಪ್ಪಿದರು.

ಪ್ರತಿಯೊಂದು ದ್ರವ್ಯದ ರಾಶಿಯನ್ನು ಹೇಗೆ ಅಳೆಯುವುದು? ಒಂದು ಸಿರಿಂಜಿನಿಂದ ಒಂದೇ ಪ್ರಮಾಣದ ಬೇರೆ ಬೇರೆ ದ್ರವಗಳನ್ನು ತೆಗೆದುಕೊಳ್ಳೋಣ. ನಂತರ ಒಂದು ಎಲೆಕ್ಟ್ರಾನಿಕ್ ತೂಕದ ಯಂತ್ರವನ್ನು ಬಳಸಿ ಅದರ ತೂಕವನ್ನು ನೋಡೋಣ ಎಂದು ಒಬ್ಬ ವಿದ್ಯಾರ್ಥಿ ಸಲಹೆ ನೀಡಿದನು. ಮಕ್ಕಳು ಒಬ್ಬೊಬ್ಬರಾಗಿ ತರಗತಿಯಲ್ಲಿ ಇದನ್ನು ಪ್ರದರ್ಶಿಸಿದರು. ಒಂದು ಕೋಷ್ಟಕವನ್ನು ರೂಪಿಸಿದರು.

**ತೂಕದ ಅವರೋಹಣ ಕ್ರಮದಲ್ಲಿ ಹೀಗೆ ದ್ರವಗಳನ್ನು ಮಕ್ಕಳು ಇಟ್ಟರು. ಸೀಮೆಎಣ್ಣೆ> ನೀರು >ಗ್ಲಿಸರಿನ್ > ಎಳ್ಳೆಣ್ಣೆ**

| ಕ್ರ.ಸಂ | ವಸ್ತು | ಪರಿಮಾಣ | ಪ್ರಮಾಣ / ತೂಕ |
|---|---|---|---|
| 1. | ಸೀಮೆಎಣ್ಣೆ | 1 ಮಿಲಿ | 7.6 ಮಿಗ್ರಾಂ |
| 2. | ನೀರು | 1 ಮಿಲಿ | 8.7 ಮಿಗ್ರಾಂ |
| 3. | ಗ್ಲಿಸರಿನ್ | 1 ಮಿಲಿ | 11.7 ಮಿಗ್ರಾಂ |
| 4. | ಎಳ್ಳೆಣ್ಣೆ | 1 ಮಿಲಿ | 8.3 ಮಿಗ್ರಾಂ |

ಗ್ಲಿಸರಿನ್ನಿನ ತೂಕವು ಅತ್ಯಧಿಕವಾಗಿತ್ತು. ಸೀಮೆಎಣ್ಣೆಯ ತೂಕವು ಅತಿ ಕಡಿಮೆಯಾಗಿತ್ತು. ಸೇರಿನಲ್ಲಿ ದ್ರವಗಳ ಪದರಗಳು ಈ ಕ್ರಮದಲ್ಲಿ ಕಾಣಿಸಿತು. ಆಗ ಮಕ್ಕಳಿಗೆ  ದ್ರವ್ಯದ ಪರಿಮಾಣ ಮತ್ತು ದ್ರವ್ಯರಾಶಿಗಳು ಸಾಂದ್ರತೆಯ ಮೇಲೆ ಹೇಗೆ ಪರಿಣಾಮ ಬೀರುತ್ತವೆ ಮತ್ತು ವಸ್ತುಗಳು ಏಕೆ ತೇಲುತ್ತವೆ ಅಥವಾ ಕರಗುತ್ತವೆಂಬುದು ಅರ್ಥವಾಯಿತು.

ತರ್ಕ, ಪ್ರಯೋಗ, ವಿಶ್ಲೇಷಣೆಗಳಿಂದ ದೈನಂದಿನ ಬದುಕಿನ ಉದಾಹರಣೆಯ ಮೂಲಕ ಮಕ್ಕಳಿಗೆ  ಒಂದು ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಮಕ್ಕಳಂತೆ ನನಗೆ ಕೂಡ ಇದು ಒಂದು ಉತ್ತಮ ಅನುಭವವಾಗಿತ್ತು.



**ಉಮಾಶಂಕರ್** ಅವರು 2016ರಿಂದ ಧಮ್‌ತರಿಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ವಿಜ್ಞಾನ ಶಿಕ್ಷಕರಾಗಿದ್ದಾರೆ. ಅವರು ಜೈವಿಕ ತಂತ್ರಜ್ಞಾನದಲ್ಲಿ ಪದವಿ ಮತ್ತು ಪ್ರಾಣಿಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ.  ಓರ್ವ ಶಿಕ್ಷಕರಾಗಿ ಅವರಿಗೆ ವಿಜ್ಞಾನದ ಕಲಿಕೆಯ ಪ್ರಕ್ರಿಯೆಗಳನ್ನು ಮಕ್ಕಳೊಂದಿಗೆ ಪ್ರಯೋಗ,  ಅನ್ವೇಷಣೆ ಮತ್ತು ವಿಶ್ಲೇಷಣೆ ಮಾಡುವ ಮೂಲಕ ಕಲಿಕೆಯಲ್ಲಿ ಬಹಳ ಆಸಕ್ತಿಯಿದೆ. ಅವರನ್ನು umashankar@azimpremjifoundaton.org ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಹೇಮಾದೇವಿ ಬಿ ಎನ್** । ಪರಿಶೀಲನೆ: **ಲತಾ ಕೆ ಸಿ**

# ನಲಿ–ಕಲಿ: ಎಲ್ಲರಿಗೂ ಗುಣಮಟ್ಟದ ಶಿಕ್ಷಣ ನೀಡುವತ್ತ ಒಂದು ಹೆಜ್ಜೆ

ಉಮಾಶಂಕರ್ ಪೆರಿಯೋಡಿ

**ಹಿಂದಿನ ಇತಿಹಾಸ**

2007ರಲ್ಲಿ– ಯಾದಗಿರಿ ಜಿಲ್ಲೆಯ ಸುರಪುರದಲ್ಲಿ ನಡೆದ ಮಕ್ಕಳ ಸ್ನೇಹಿ ಶಾಲಾ ಉಪಕ್ರಮ (ಸಿಎಫ್‌ಎಸ್‌ಐ)ದ ಮೂಲಕ ನನಗೆ ನಲಿ–ಕಲಿ ಪರಿಚಯವಾಯಿತು. ನಾವು ಸರ್ಕಾರಿ ಶಾಲೆಗಳ ಒಟ್ಟಾರೆ, ಸಮಗ್ರ ಸುಧಾರಣೆಗಾಗಿ ಒಂದು ಬ್ಲಾಕ್‌ನಲ್ಲಿ ಕಾರ್ಯ–ನಿರ್ವಹಿಸುತ್ತಿದ್ದೆವು. ಈ ಉಪಕ್ರಮದಲ್ಲಿ ನಲಿ–ಕಲಿ ಅತ್ಯಂತ ಮಹತ್ವದ ಭಾಗವಾಗಿತ್ತು. ಬೋಧನೆ ಮತ್ತು ಕಲಿಕಾ ಪ್ರಕ್ರಿಯೆಯ ಮೇಲೆ ಗಮನವನ್ನು ಕೇಂದ್ರೀಕರಿಸಿದರೆ ಮಾತ್ರ ಈ ಮಕ್ಕಳ ಶಿಕ್ಷಣದ ಮಟ್ಟ ಸುಧಾರಣೆ ಕಾಣಲು ಸಾಧ್ಯ ಎಂಬುದು ಸುರಪುರದಲ್ಲಿರುವ ತಂಡಕ್ಕೆ ಸುದೀರ್ಘ ಸಂಘರ್ಷದ ಬಳಿಕ ಸ್ಪಷ್ಟವಾಗಿತ್ತು ಮತ್ತು ಅದು ನಲಿ–ಕಲಿ ವಿಧಾನದ ಮೂಲಕ ಸಾಧ್ಯವಾಗಿತ್ತು.

ಈ ಬಹು–ದರ್ಜೆ, ಬಹು ಹಂತದ, ಚಟುವಟಿಕೆ ಆಧಾರಿತವಾದ ಬೋಧನೆ–ಕಲಿಕಾ ಪ್ರಕ್ರಿಯೆಯ ಮೂಲಕ ಅಗತ್ಯ ಸಂಖ್ಯೆಯ ಶಿಕ್ಷಕರ ಇನ್ನೊಂದು ಬಗೆಯ ತೀವ್ರ ರೀತಿಯ ಕೊರತೆಯನ್ನು ನಿಭಾಯಿಸಬೇಕಾಗಿದ್ದರಿಂದಲೂ ನಲಿಕಲಿ ಅತ್ಯಂತ ಮಹತ್ವದ್ದಾಗಿತ್ತು. ಈ ನಿಟ್ಟಿನಲ್ಲಿ ನಾವು ಕಾರ್ಯನಿರ್ವಹಿಸುತ್ತಿದ್ದಂತೆ ಈ ವಿಧಾನವು ಎಲ್ಲಕ್ಕಿಂತ ಮುಖ್ಯವಾಗಿ ಪ್ರತಿ ಮಗುವಿಗೂ ಗುಣಮಟ್ಟದ ಶಿಕ್ಷಣವನ್ನು ನೀಡುತ್ತದೆ ಎಂಬುದು ನಮಗೆ ಮನವರಿಕೆಯಾಗಿತ್ತು. ಯಾಕೆಂದರೆ ನಲಿ–ಕಲಿ ವಿಧಾನಶಾಸ್ತ್ರದ ಮೂಲ ವಿನ್ಯಾಸವನ್ನೇ ಆ ರೀತಿ ರೂಪಿಸಲಾಗಿತ್ತು. ಇದು ಸುರಪುರದಲ್ಲಿರುವ ಎಲ್ಲ 309 ಶಾಲೆಗಳ ಪ್ರತಿಯೊಂದು ಮಗುವಿಗೂ ಗುಣಮಟ್ಟದ ಶಿಕ್ಷಣವನ್ನು ನೀಡಲು ಸಾಧ್ಯ ಎಂಬ ನಂಬಿಕೆ ನಮ್ಮಲ್ಲಿ ಮೂಡಲು ಕಾರಣವಾಯಿತು.

ಇದನ್ನು ಸಾಧ್ಯವಾಗಿಸುವ ಮೊದಲ ಹೆಜ್ಜೆಯಾಗಿ ಮೇ ತಿಂಗಳ ಮೂರನೇ ವಾರದಲ್ಲಿ ಈಶಾನ್ಯ ಕರ್ನಾಟಕದ ಆರು ಜಿಲ್ಲೆಗಳ ನಲಿ–ಕಲಿ ಶಿಕ್ಷಕರಿಗೆ ಆನ್‌ಲೈನ್ ಸಾಮರ್ಥ್ಯ ವೃದ್ಧಿ ಪ್ರಕ್ರಿಯೆಯನ್ನು ಬೃಹತ್ ಪ್ರಮಾಣದಲ್ಲಿ ಸಂಘಟಿಸಿದೆವು. ಕಲಬುರ್ಗಿಯ ಶಿಕ್ಷಣ ಆಯುಕ್ತರ ಕಚೇರಿಯ ಆಹ್ವಾನದ ಮೇರೆಗೆ ಒಂದು ವಾರ ಕಾಲ ನಡೆದ ಸಾಮರ್ಥ್ಯ ವೃದ್ಧಿ ಪ್ರಕ್ರಿಯೆಯಲ್ಲಿ 11 ಸಾವಿರ ಶಿಕ್ಷಕರು ಪಾಲ್ಗೊಂಡಿದ್ದರು. ದೃಷ್ಟೀಕರಣ, ಯೋಜನೆ, ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ ನೀಡುವುದು ಮತ್ತು ಕ್ಷೇತ್ರದಲ್ಲಿರುವ ಸಣ್ಣಪುಟ್ಟ ಗುಂಪುಗಳಿಗೆ ಸಹಾಯ ಮಾಡುವುದು ಸೇರಿದಂತೆ ಎಲ್ಲ ಸ್ವರೂಪಗಳಲ್ಲಿ ಡಿಜಿಟಲ್ ವೇದಿಕೆಯನ್ನು ನಿಭಾಯಿಸುವುದು ಹೇಗೆ ಎಂಬುದರ ಬಗ್ಗೆ ನಾವು ಸಹಾಯ ಮಾಡಿದೆವು. ಆಸಕ್ತಿಯ ವಿಚಾರ ಏನೆಂದರೆ ವಾರವಿಡೀ ನಡೆದ ಈ ಕಾರ್ಯಕ್ರಮಕ್ಕೆ ಶಿಕ್ಷಕರು ಹಾಗೂ ನೌಕರರಿಂದ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಯಿತು. ಕೆಲವು ಆರಂಭಿಕ ತೊಂದರೆಗಳನ್ನು ಹೊರತುಪಡಿಸಿದರೆ ಇಲ್ಲಿ ನಡೆದ ಚರ್ಚೆಗಳು ಮತ್ತು ಸಂವಾದಗಳಲ್ಲಿ ಶಿಕ್ಷಕರು ಸಕ್ರಿಯವಾಗಿ ಭಾಗವಹಿಸುವ ಮೂಲಕ ಇದನ್ನೊಂದು ಅರ್ಥಪೂರ್ಣ ಕಾರ್ಯಕ್ರಮವನ್ನಾಗಿ ಮಾಡಿದರು.

ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ, ಮುಖ್ಯವಾಗಿ ಪ್ರಾಥಮಿಕ ಶಾಲಾ ಶಿಕ್ಷಕರಲ್ಲಿ ಹೆಚ್ಚಿನವರು ಕರ್ನಾಟಕದ ಹಿಂದುಳಿದ ಜಿಲ್ಲೆಗಳ ಗ್ರಾಮೀಣ ಶಾಲೆಗಳಿಂದ ಬಂದವರೆಂಬುದನ್ನು ಪರಿಗಣಿಸಿದರೆ ಇದೊಂದು ಸಾಧನೆಯಾಗಿದೆ. ನಲಿ–ಕಲಿಯ ಸಂಘಟಿತ ವ್ಯವಸ್ಥೆ ಮತ್ತು ಸುಸ್ಪಷ್ಟವಾದ ವಿಧಾನಕ್ರಮಕ್ಕೆ ಈ ಯಶಸ್ಸಿನ ಪೂರ್ಣ ಪಾಲು ದಕ್ಕಬೇಕು. ಒಟ್ಟಾರೆಯಾಗಿ ಸೂಚನೆಗಳು ಮತ್ತು ಒದಗಿಸಲಾದ ಟಿಎಲ್‌ಎಂಗಳು (ಕಲಿಕಾ ಬೋಧನಾ ಸಾಮಗ್ರಿಗಳು) ಪ್ರಕ್ರಿಯೆಯಲ್ಲಿ ಒಳಗೊಂಡಿತ್ತು. ಇದು ಎಲ್ಲ ಮಕ್ಕಳಿಗೆ ಕಲಿಕೆಯ ಪ್ರಾಥಮಿಕ ಹಂತದ ಖಾತರಿ ನೀಡುತ್ತದೆ. ಜೊತೆಗೆ ಶಿಕ್ಷಕರು ಮತ್ತು ಸಮಾನ ಮನಸ್ಕರ ಗುಂಪಿನ ಸಹಾಯದೊಂದಿಗೆ ಇದು ಸ್ವ–ಪ್ರಚೋದನೆ, ಸ್ವಯಂ–ಗತಿಯ (Self-initiated, selfpaced Learning) ಕಲಿಕೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತದೆ. ಈ ವಿಧಾನಕ್ರಮದಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿ ಶಿಕ್ಷಕರ ಪಾತ್ರ ಅತ್ಯಂತ ಮಹತ್ವದ್ದು. ಹಾಗಾಗಿ ಪ್ರತಿಯೊಬ್ಬ ನಲಿ–ಕಲಿ ಶಿಕ್ಷಕರನ್ನು ತಲುಪುವುದು ಕೂಡ ಈ ಕಾರ್ಯಕ್ರಮದ ಯಶಸ್ಸಿನಲ್ಲಿ ನಿರ್ಣಾಯಕ.

ಸುರಪುರ ತಂಡದಲ್ಲಿ ನಲಿ–ಕಲಿ ಕಾರ್ಯಕ್ರಮದ ಕೆಲಸಗಳು ತೀವ್ರಗತಿಯಲ್ಲಿದ್ದವು; ಯಾಕೆಂದರೆ ನಾವು ಮೂರು ಹಂತಗಳಲ್ಲಿ ಭಾಗಿಯಾದ್ದೆವು. ಮೊದಲನೆಯದಾಗಿ, ತರಗತಿಯ ಹಂತದಲ್ಲಿ ವಾರಕ್ಕೊಮ್ಮೆ ಪ್ರತಿಯೊಬ್ಬ ಶಿಕ್ಷಕರಿಗೂ ಆಯಾ ಸ್ಥಳದಲ್ಲಿಯೇ ಸಹಕಾರ ನೀಡುವುದು, ಎರಡನೆಯದು, ನಡೆದ ಕೆಲಸದ ಪರಾಮರ್ಶೆಗಾಗಿ ಹದಿನೈದು ದಿನಗಳಿಗೊಮ್ಮೆ ಪರಿಶೀಲನಾ ಸಭೆಗಳನ್ನು ನಡೆಸುವುದು ಮತ್ತು ಮೂರನೆಯದಾಗಿ ಕ್ಲಸ್ಟರ್ ಮತ್ತು ಬ್ಲಾಕ್ ಹಂತಗಳಲ್ಲಿ ಎರಡು ತಿಂಗಳಿಗೊಮ್ಮೆ ಶಿಕ್ಷಕ ಸಾಮರ್ಥ್ಯ ವೃದ್ಧಿ ಪ್ರಕ್ರಿಯೆಯ ಯೋಜನೆ ರೂಪಿಸುವುದು. ನಮ್ಮ ತಂಡಕ್ಕೆ ಕೂಡ ಇದು ಶಿಕ್ಷಕರ ಸೇವಾ ತರಬೇತಿಯ ರೀತಿಯಲ್ಲಿ ಉದ್ಯೋಗ ಕಲಿಕಾ ಪ್ರಕ್ರಿಯೆಯೂ ಆಗಿತ್ತು. ಈ ಕಾರಣದಿಂದಲೇ ಕಲಿಕೆ ಮತ್ತು ಪ್ರತಿಯೊಬ್ಬ ಸದಸ್ಯನ ಕೊಡುಗೆ ಅತ್ಯಂತ ಅಮೂಲ್ಯವಾದುದಾಗಿತ್ತು.

ನಾವು 2004 ರಲ್ಲಿ ಸಿಎಫ್‌ಎಸ್‌ಐನ್ನು ಆರಂಭಿಸಿದ್ದೆವು ಮತ್ತು 2007 ರಲ್ಲಿ ಮಕ್ಕಳ ಕಲಿಕಾ ಹಂತಗಳ ಮೌಲ್ಯಮಾಪನವನ್ನು ನಾವು ಕೈಗೊಂಡಿದ್ದೆವು. ಆದರೆ ಫಲಿತಾಂಶಗಳು ನಮ್ಮನ್ನು ನಿರಾಶೆಗೊಳಿಸಿದ್ದು ನಮಗೆ ಅಚ್ಚರಿ ಮೂಡಿಸಿತ್ತು. ಮೌಲ್ಯ–ಮಾಪನದಿಂದ ತಿಳಿದುಬಂದ ಅಂಶವೇನೆಂದರೆ ಮೂರು ವರ್ಷ ಕಳೆದ ಬಳಿಕವೂ ಮಕ್ಕಳ ಕಲಿಕಾ ಮಟ್ಟಗಳಲ್ಲಿ ಯಾವ ಸುಧಾರಣೆಯೂ ಆಗಿರಲಿಲ್ಲ. ನಿಸ್ಸಂಶಯವಾಗಿ ನಾವು ಪ್ರಶ್ನೆಗೆ ಗುರಿಯಾಗಿದ್ದೆವು. ಅಷ್ಟೊಂದು ಹೂಡಿಕೆಯ ಬಳಿಕವೂ ಯಾವುದೇ ಫಲಿತಾಂಶ ಬಾರದೇ ಇರಲು ಅಥವಾ ಮಕ್ಕಳ ಕಲಿಕೆಯ ಮಟ್ಟಗಳಲ್ಲಿ ಯಾವುದೇ ಸುಧಾರಣೆ ಕಾಣದಿರಲು ಹೇಗೆ ಸಾಧ್ಯ? ಇದು ಸ್ವಲ್ಪಮಟ್ಟಿಗೆ ನಮ್ಮ ನೆಮ್ಮದಿಯನ್ನು ಕೆಡಿಸಿತ್ತು. ನಾವು ಇನ್ನೂ ಮೂರು ವರ್ಷಗಳ ಕಾಲಾವಕಾಶ ಬೇಕೆಂದು ಕೇಳಿದೆವು ಮತ್ತು ಆ ಕಾಲಾವಕಾಶ ನಮಗೆ ಲಭ್ಯವಾಯಿತು ಕೂಡ. ಈಗ ನಮ್ಮ ಮುಂದಿನ ನಿರೀಕ್ಷೆ ಅತ್ಯಂತ ಸ್ಪಷ್ಟವಾಗಿತ್ತು.

## ಬದಲಾವಣೆಯ ಸದ್ದು

ಇಲ್ಲಿ ಮುಖ್ಯವಾಗಿ ಶಿಕ್ಷಕರ ಸಾಮರ್ಥ್ಯವನ್ನು ಇನ್ನಷ್ಟು ವೃದ್ಧಿಸುವ ನಿಟ್ಟಿನಲ್ಲಿ ನಾವು ನಮ್ಮ ಗಮನವನ್ನು ಕೇಂದ್ರೀಕರಿಸಿದೆವು. ಆದರೆ ಶಿಕ್ಷಕರಿಗೆ ತಮ್ಮ ಬೆಳವಣಿಗೆಗೆ ಬೇಕಾದ ಸಂಪನ್ಮೂಲಗಳು ಮುಕ್ತವಾಗಿ ಲಭ್ಯವಿರಲಿಲ್ಲ ಎಂಬ ವಿಚಾರಕ್ಕೆ ಸಾಕಷ್ಟು ಪುರಾವೆಗಳೂ ಇದ್ದವು. ಜೊತೆಗೆ, ಶಿಕ್ಷಕರಿಗೆ ಒಂದೆಡೆ ಸಭೆ ಸೇರಲು, ಚರ್ಚೆ ಮಾಡಲು, ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಮತ್ತು ಸವಾಲುಗಳಿಗೆ ಮುಖಾಮುಖಿಯಾಗಲು, ಹೊಸ ಸಂಗತಿಗಳನ್ನು ಪಡೆದುಕೊಳ್ಳಲು ಮತ್ತು ತಮಗೆ ತಾವು ಸುಧಾರಣೆ ಹೊಂದಲು ಅವಕಾಶವೇ ಇರಲಿಲ್ಲ. ಶಿಕ್ಷಕರ ವೃತ್ತಿಯಲ್ಲಿನ ಸುಧಾರಣೆಗೆ ಅವರಿಗಾಗಿ ಸ್ವಯಂ ಕಲಿಕಾ ಸಮುದಾಯವನ್ನು ಹುಟ್ಟುಹಾಕುವುದು ಅತ್ಯಗತ್ಯವಾಗಿತ್ತು ಎಂಬ ಬಹುಮುಖ್ಯ ಸಂಗತಿಯನ್ನು ನಾವು ಕಂಡುಕೊಂಡೆವು.

## ಶಿಕ್ಷಕರ ವೇದಿಕೆಗಳು ಮತ್ತು ಕಲಿಕಾ ಕೇಂದ್ರಗಳು

ಹೀಗಾಗಿ ಸಭೆ ಸೇರಲು, ಚರ್ಚೆ ನಡೆಸಲು ಮತ್ತು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳಲು, ತಮಗೆ ತಾವು ಸುಧಾರಣೆ ಹೊಂದಲು ಅವಕಾಶ ಬೇಕು ಎಂಬ ದೃಷ್ಟಿಯಿಂದ ಶಿಕ್ಷಕರ ಸ್ವಯಂಸೇವಾ ವೇದಿಕೆ (Voluntary Teachers' Forum -VTF) ಹುಟ್ಟಿಕೊಂಡಿತು. ಇದರಿಂದಾಗಿ ಸಂಪನ್ಮೂಲಗಳಿಂದ ತುಂಬಿದ್ದ ಶಿಕ್ಷಕರ ಕಲಿಕಾ ಕೇಂದ್ರ(ಟಿಎಲ್‌ಸಿ)ಗಳನ್ನು ರಚಿಸಲು ದಾರಿ ಮಾಡಿತು. ಅವರಿಗಾಗಿ ಉತ್ತಮ ಗ್ರಂಥಾಲಯವಿತ್ತು, ವಿಜ್ಞಾನ ಮತ್ತು ಗಣಿತಶಾಸ್ತ್ರದ ಟಿಎಲ್‌ಎಂಗಳಿದ್ದವು ಮತ್ತು ಇಂಟರ್‌ನೆಟ್ ಸಂಪರ್ಕವಿರುವ ಕಂಪ್ಯೂಟರ್‌ಗಳಿದ್ದವು. ಇಷ್ಟೆಲ್ಲ ಸಂಪನ್ಮೂಲಗಳು ತುಂಬಿದ್ದರೂ ಕೂಡ ಈ ಕೇಂದ್ರಗಳ ಕಡೆಗೆ ಶಿಕ್ಷಕರನ್ನು ಸೆಳೆಯುವುದು ಸುಲಭದ ಕೆಲಸವಾಗಿರಲಿಲ್ಲ. ಆದರೆ ಕ್ರಮೇಣ ಟಿಎಲ್‌ಸಿಗಳು ಜನಪ್ರಿಯವಾಗುತ್ತ ಹೋದವು. ಸದ್ಯ ಕರ್ನಾಟಕದ ಹತ್ತು ಜಿಲ್ಲೆಗಳಲ್ಲಿ ನಾವು ಇಂತಹ 50 ಶಿಕ್ಷಕ ಕಲಿಕಾ ಕೇಂದ್ರಗಳನ್ನು ಹೊಂದಿದ್ದೇವೆ.

## ವಾರ್ತಾಪತ್ರ ಆರಂಭ

ಈಗಿರುವ ಸ್ವರೂಪದಲ್ಲಿ ಶಿಕ್ಷಕರ ಯೋಚನೆಗಳು ಮತ್ತು ಪರ್ಯಾಲೋಚನೆಗಳಿಗೆ ಅವಕಾಶವೇ ಇಲ್ಲ ಎಂಬುದು ನಲಿ-ಕಲಿ ಬಗ್ಗೆ ಇದ್ದ ಒಂದು ಟೀಕೆ. ಆದರೆ ಶಿಕ್ಷಕರು ತಮ್ಮ ಅನುಭವಗಳ ಬಗ್ಗೆ ಮಾತನಾಡುವುದರಿಂದ, ಅದು ಅವರ ಯೋಚನೆಗಳು ಮತ್ತು ಪರ್ಯಾಲೋಚನೆಗಳ ಮೇಲೆ ಪ್ರಭಾವ ಬೀರುತ್ತದೆ. ಬರವಣಿಗೆಯು ಜನರ ಪರ್ಯಾಲೋಚನೆಗೆ ಸಹಾಯ ಮಾಡುತ್ತದೆ ಎಂಬ ಉದ್ದೇಶದಿಂದ ನಾವು ಒಂದು ವಾರ್ತಾಪತ್ರವನ್ನು ಆರಂಭಿಸಿದೆವು. ಇದು ಶಿಕ್ಷಕರ ಕ್ಲಾಸ್‌ರೂಂ ಅನುಭವಗಳನ್ನು ಪ್ರಕಟಿಸುವ ವಾರ್ತಾಪತ್ರ. ಆರಂಭದಲ್ಲಿ ಶಿಕ್ಷಕರು ತಾವು ಮಾಡಿದ್ದನ್ನು ಮಾತ್ರ ಬರೆಯುತ್ತಿದ್ದರು, ಆದರೆ ಕ್ರಮೇಣ ಒಂದು ಹೆಜ್ಜೆ ಮುಂದೆ ಹೋಗಿ ತಮ್ಮ ಅನುಭವಗಳನ್ನು ದಾಖಲಿಸಲು ಆರಂಭಿಸಿದರು. ಹೀಗೆ ಬರೆಯುವುದರಿಂದ ಅವರು ಇತರ ವಿಷಯಗಳನ್ನು ಓದಲಿಕ್ಕೂ ದಾರಿ ಮಾಡಿತು ಮತ್ತು ಇದರಿಂದ ಅವರ ಯೋಚನಾ ಲಹರಿ ವಿಸ್ತಾರವಾಗುತ್ತ ಸಾಗಿತು.

## ಮೇಳಗಳು

ತರಗತಿ ಕೊಠಡಿ ಮತ್ತು ಪಠ್ಯಪುಸ್ತಕಗಳನ್ನು ಹೊರತಾದ ಕಲಿಕೆಗೆ ದಾರಿ ಮಾಡಿದ ಇನ್ನೊಂದು ವಿನೂತನ ಯೋಜನೆ ಎಂದರೆ ಮೇಳಗಳು. ಇಲ್ಲಿ ಮಕ್ಕಳು ವಿಜ್ಞಾನ, ಭಾಷೆ, ಗಣಿತ ಮತ್ತು ಸಾಮಾಜಿಕ ವಿಜ್ಞಾನದ ವಿಷಯದಲ್ಲಿ ಮಾಡಿದ ವಿಭಿನ್ನ ಪರಿಕಲ್ಪನೆಗಳನ್ನು ಇತರ ವಿದ್ಯಾರ್ಥಿಗಳು, ಪಾಲಕರು ಮತ್ತು ಸಮುದಾಯಕ್ಕಾಗಿ ಸಾರ್ವಜನಿಕ ಪ್ರದರ್ಶನಕ್ಕೆ ಇಡುತ್ತಾರೆ. ಇಲ್ಲಿ ಯಾವುದೇ ಗಣನೀಯ ಫಲಿತಾಂಶಗಳು ಇಲ್ಲದೇ ಇದ್ದರೂ ಕೂಡ ಇಂತಹ ಸಂಗತಿಗಳು ಸಂಕುಚಿತ ಸ್ವರೂಪದಿಂದ ಹೊರಬರಲು ನೆರವಾಗಿವೆ ಮತ್ತು ನಲಿ-ಕಲಿ ಪ್ರಕ್ರಿಯೆಗೆ ಕೊಡುಗೆಗಳನ್ನು ನೀಡಿವೆ.

## ಮೇಲ್ವಿಚಾರಣೆ

ನಲಿ-ಕಲಿ ಕಾರ್ಯಕ್ರಮದ ಸಂಪೂರ್ಣ ಮೇಲ್ವಿಚಾರಣೆ ನಡೆಸುತ್ತಿದ್ದವರು ನಮ್ಮ ಜೊತೆಗೆ ನಿಕಟವಾಗಿ ಕಾರ್ಯ-ನಿರ್ವಹಿಸುತ್ತಿದ್ದ ಹೃದಯಕಾಂತ್ ದಿವಾಣ್ ಅವರು ನಲಿ-ಕಲಿ ಕಾರ್ಯಕ್ರಮದ ಕರಾರುವಕ್ಕಾದ ವಿಶ್ಲೇಷಣೆ ಮಾಡಿ ಅದನ್ನು ನಾವು ಅರ್ಥ ಮಾಡಿಕೊಳ್ಳುವಲ್ಲಿ ಸಹಾಯ ಮಾಡಿದ್ದರು. ಇದರಿಂದಾಗಿ ನಮ್ಮ ವಿಧಾನಕ್ರಮವು ನಿಜಕ್ಕೂ ರಚನಾತ್ಮಕ ಮತ್ತು ಸಂರಚಿತವಾಗಿವೆ ಎಂಬ ಮಹತ್ವದ ಒಳನೋಟಗಳು ದೊರೆಯಲು ಸಾಧ್ಯವಾಯಿತು. ಒಬ್ಬ ಶಿಕ್ಷಕಿಗೆ ಯೋಚನೆ ಮಾಡಲು, ಸಹಜವಾಗಿ ಪ್ರತಿಕ್ರಿಯೆ ನೀಡಲು ಮತ್ತು ಆ ಮೂಲಕ ನಿರ್ದಿಷ್ಟ ಸನ್ನಿವೇಶದಲ್ಲಿ, ಒಂದು ನಿರ್ದಿಷ್ಟ ಮಗುವಿಗೆ ಕಲಿಕೆ ನಡೆಯುವಂತೆ ಮಾಡಲು ಯಾವುದೇ ಅವಕಾಶ ಕೊಡದೆ ಎಲ್ಲವನ್ನೂ ಮೊದಲೇ ವಿನ್ಯಾಸಗೊಳಿಸಲು ಮತ್ತು ರಚನೆ ಮಾಡಲು ಸಾಧ್ಯವಿಲ್ಲ. ಇದು ಶಿಕ್ಷಕರು ಕೇವಲ ತಮಗೆ ನೀಡಿದ ಸೂಚನೆಗಳನ್ನು ಅನುಸರಿಸುವಂತೆ ಮತ್ತು ಅವರಿಗೆ ಏನನ್ನು ಹೇಳಲಾಗಿದೆಯೋ ಅದನ್ನು ಮಾತ್ರ ಪಾಲಿಸುವಂತೆ ಮಾಡಲಾಗಿತ್ತು!

ಇಚಿತಹ ಒಂದು ವಿಧಾನವು ಶಿಕ್ಷಣಕ್ಕಿಂತ ಹೆಚ್ಚಾಗಿ ಚಟುವಟಿಕೆ ಆಧಾರಿತವಾದುದು ಎಂಬುದನ್ನು ಹೃದಯಕಾಂತ್ ದಿವಾಣ್ ಅವರು ಬೊಟ್ಟು ಮಾಡಿ ಹೇಳಿದರು. ಹಾಗಾಗಿ ಇದೊಂದು ಉತ್ತಮ ಆರಂಭವಾದರೂ ಕೂಡ ಶಿಕ್ಷಕರು ಈ ಮಿತಿಯನ್ನು ಮೀರಿ ಮುಂದಕ್ಕೆ ಸಾಗಬೇಕಾಗಿತ್ತು. ಅವರು ಸ್ವತಂತ್ರವಾಗಿ, ಸೃಜನಾತ್ಮಕವಾಗಿ ಯೋಚನೆ ಮಾಡಬೇಕಾಗಿತ್ತು, ಮಗುವನ್ನು ಮತ್ತು ಅದರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು ಪೂರಕವಾಗಿ ಸ್ಪಂದಿಸಬೇಕಾಗಿತ್ತು. ಶಿಕ್ಷಕರು ತಮಗೆ ಸೂಚಿಸಿದ್ದನ್ನು ಮಾತ್ರ ಮಾಡದೆ ಆ ನಿದರ್ಶನಗಳನ್ನು ಮೀರಿ ಮುನ್ನಡೆಯಬೇಕಾಗಿತ್ತು! ಅವರು ಸ್ವ ಚಿಂತನೆಯನ್ನು ಬೆಳೆಸಿಕೊಳ್ಳಬೇಕಿದ್ದು, ಅದು ಅವರ ಇಡೀ ಪ್ರಕ್ರಿಯೆಯಲ್ಲಿ ವ್ಯಕ್ತವಾಗಬೇಕು ಹಾಗೂ ಪ್ರತಿಯೊಬ್ಬ ಮಗುವಿನ ಕಲಿಕೆಯಲ್ಲಿ ಹೊಸತನವನ್ನು ತರುವಂತೆ ಮಾಡಬೇಕಿತ್ತು. ಶಿಕ್ಷಕರ ಶಿಕ್ಷಣಕ್ಕೆ ಅವಕಾಶಗಳನ್ನು ಸೃಷ್ಟಿಸುವ ನಮ್ಮ ಇಡೀ ಪ್ರಕ್ರಿಯೆ ಆರಂಭವಾಗಿದ್ದು ಹೀಗೆ. ನಾವು ಶಿಕ್ಷಕರ ಜೊತೆ ಅತ್ಯಂತ ನಿಕಟವಾಗಿ ಕಾರ್ಯನಿರ್ವಹಿಸಲು ಆರಂಭಿಸಿದೆವು. ನಮ್ಮ ಇತರ ಉಪ-ಕ್ರಮಗಳಾದ ವಿಟಿಎಫ್‌ಗಳು, ಮೇಳಗಳು ಮತ್ತು ಟಿಎಲ್‌ಸಿಗಳನ್ನು ಮುಂದುವರಿಸುತ್ತಲೇ ಸಹ-ಬೋಧನೆ, ಬೆಂಬಲ ಹೀಗೆ ಶಿಕ್ಷಕರಿಗೆ ಸಾಥ್ ನೀಡುವ ಕೆಲಸ ಮಾಡಿದೆವು. ಬೋಧನೆ ಮತ್ತು ಕಲಿಕಾ ಪ್ರಕ್ರಿಯೆ ಮೇಲೆ ನಮ್ಮ ಸಂಪೂರ್ಣ ಗಮನ ನೀಡಿದ್ದೆವು.

## ಸುದೀರ್ಘ ಅವಧಿ

ಸುಧಾರಣೆಗೆ ಸುದೀರ್ಘ ಅವಧಿ ಬೇಕಾಗುತ್ತದೆ ಎನ್ನುವುದು ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸಿದ ಪ್ರತಿಯೊಬ್ಬರಿಗೂ ಗೊತ್ತಿರುವ ಸಂಗತಿ. ಫಲಿತಾಂಶಗಳನ್ನು ನೋಡುವುದು ಮತ್ತು ಪರಿಣಾಮವನ್ನು ಹುಟ್ಟುಹಾಕುವುದು ನಿಜಕ್ಕೂ ನಿಧಾನ ಪ್ರಕ್ರಿಯೆ;

ಅದು ಸುದೀರ್ಘಾವಧಿಯ ಕಾರ್ಯಯೋಜನೆ. ಒಂದು ಸಣ್ಣ ಸುಧಾರಣೆಯನ್ನು ಕಾಣಲೂ ನಾವು ಬಹಳ ಕಾಲ ಕಾಯಬೇಕಾಗುವುದರಿಂದ ಇದು ನಮ್ಮ ತಾಳ್ಮೆಯನ್ನು ಪರೀಕ್ಷಿಸುತ್ತದೆ. ಏಳು ವರ್ಷಗಳ ಕಾಲ ನಡೆಸಿದ ನಿರಂತರ ಪರಿಶ್ರಮದ ಬಳಿಕವಷ್ಟೇ ನಾವು ಮಕ್ಕಳ ಕಲಿಕಾ ಮಟ್ಟದಲ್ಲಿ ತಕ್ಕಮಟ್ಟಿನ ಸುಧಾರಣೆ ಕಾಣಲು ಸಾಧ್ಯವಾಯಿತು. ಇದೀಗ ಅಂದರೆ 2015ರ ಬಳಿಕ, ಈಶಾನ್ಯ ಕರ್ನಾಟಕದ ಇತರ ಎಲ್ಲ ಬ್ಲಾಕ್‌ಗಳಿಗೆ ಹೋಲಿಸಿದರೆ ಸುರಪುರ ಎಸ್‌ಎಸ್‌ಎಲ್‌ಸಿ ಫಲಿತಾಂಶದಲ್ಲಿ ಸತತವಾಗಿ ಉತ್ತಮ ನಿರ್ವಹಣೆಯನ್ನು ತೋರುತ್ತಿರುವುದನ್ನು ಕಾಣಬಹುದು.

ನಲಿ-ಕಲಿ ಕಾರ್ಯಕ್ರಮ ಕಳೆದ 25 ವರ್ಷಗಳಿಂದ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದೆ. 1995ರಲ್ಲಿ ಇದು ಮೈಸೂರು ಜಿಲ್ಲೆ ಎಚ್.ಡಿ. ಕೋಟೆಯಲ್ಲಿ ಯೂನಿಸೆಫ್ ನೆರವಿನ ಪೈಲಟ್ ಪ್ರಾಜೆಕ್ಟ್ ಆಗಿ ಆರಂಭವಾಗಿತ್ತು. ಈ ಬಹು-ದರ್ಜೆ, ಬಹು-ಹಂತದ ಹಾಗೂ ಚಟುವಟಿಕೆ ಆಧಾರಿತ ಬೋಧನೆ-ಕಲಿಕೆ ಪ್ರಕ್ರಿಯೆ ಆರಂಭದ ಹಿಂದೆ ಸೂತ್ರಧಾರರಾಗಿ ಕೆಲಸ ಮಾಡಿದವರು ಎಚ್.ಡಿ.ಕೋಟೆಯ ಅಂದಿನ ಬ್ಲಾಕ್ ಶಿಕ್ಷಣಾಧಿಕಾರಿ (ಬಿಇಓ) ಎಂ.ಎನ್.ಬೇಗ್. ಅವರು ಕೆಲವೇ ಕೆಲವು ಆಸಕ್ತ ಶಿಕ್ಷಕರೊಂದಿಗೆ ಈ ಕಾರ್ಯಕ್ರಮವನ್ನು ಆರಂಭಿಸಿದರು. ಆಂಧ್ರ ಪ್ರದೇಶದ ಮದನಪಲ್ಲಿಯಲ್ಲಿರುವ ರಿಶಿ ವ್ಯಾಲಿ ಶಾಲೆಗೆ ಭೇಟಿ ನೀಡಿದ ಅವರು ಅಲ್ಲಿ ರಿಶಿ ವ್ಯಾಲಿ ಸ್ಯಾಟಲೈಟ್ ಎಕ್ಸ್‌ಟೆನ್ಷನ್ ಕಾರ್ಯಕ್ರಮವನ್ನು (Rishi Valley Satellite Extension Programme) ಅಧ್ಯಯನ ಮಾಡಿದರು. ಈ ಶಾಲೆಯಲ್ಲಿ ರಾಮಾ ಮತ್ತು ಪದ್ಮನಾಭ ರಾವ್ ಅವರು ರಿಶಿ ವ್ಯಾಲಿ ಶಾಲೆಯ ಗ್ರಾಮೀಣ ವಿಸ್ತರಣಾ ಕೇಂದ್ರವನ್ನು ಗ್ರಾಮೀಣ ಪ್ರದೇಶದ ಪರಿಣಾಮಕಾರಿ ಪ್ರಾಥಮಿಕ ಶಿಕ್ಷಣಕ್ಕೆ ಮಾದರಿಯಾಗಿ ಪರಿವರ್ತಿಸಿದ್ದರು.

1995ರಲ್ಲಿ ಎಚ್.ಡಿ.ಕೋಟೆಯ ಶಿಕ್ಷಕರು ಮಾಡಿದ ಕೆಲಸಗಳು ಮಾತ್ರ ಸ್ತುತ್ಯರ್ಹ. ಅವರ ಪ್ರೇರಣಾದಾಯಿ ಮತ್ತು ಕಠಿಣ ಪರಿಶ್ರಮದ ಕೆಲಸಗಳು ಎಲ್ಲರಿಗೂ ಮಾದರಿ. ಪಠ್ಯಕ್ರಮ, ಬೋಧನೆ-ಕಲಿಕಾ ಸಾಮಗ್ರಿಗಳು, ಒಟ್ಟು ಪ್ರಕ್ರಿಯೆ, ಪರಾಮರ್ಶೆ ಮತ್ತು ಸಂಶೋಧನೆ ಸೇರಿದಂತೆ ನಲಿ-ಕಲಿ ಕಾರ್ಯಕ್ರಮಕ್ಕೆ ಬೇಕಾದ ಎಲ್ಲವನ್ನೂ ಅವರು ಸೃಷ್ಟಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಈ ಪ್ರಯೋಗದಲ್ಲಿ ಅವರಿಗೆ ಅಪಾರವಾದ ನಂಬಿಕೆ ಹಾಗೂ ಭರವಸೆ ಇತ್ತು.

**ಮಗು-ಕೇಂದ್ರಿತ ವಿಧಾನ**

ತರಗತಿ ಕೊಠಡಿಯಲ್ಲಿ ಬಹು-ದರ್ಜೆ, ಬಹು-ಹಂತದ ಕಲಿಕೆಗೆ ಹೆಚ್ಚಿನ ಗಮನವನ್ನು ನೀಡುವ ನಲಿ-ಕಲಿ ಕಾರ್ಯಕ್ರಮವು, ನಲಿವಿನಿಂದ ಕೂಡಿದ ಮಗು-ಕೇಂದ್ರಿತ ವಿಧಾನವಾಗಿ ವಿನ್ಯಾಸವನ್ನು ಹೊಂದಿದೆ ಎಂದು ಶ್ರೀಯುತ ಬೇಗ್ ಅವರು ಸದಾ ಹೇಳುತ್ತಿದ್ದ ಮಾತಾಗಿದೆ. ನಾನಾ ಕಲಿಕಾ ಶೈಲಿಗಳನ್ನು ಗಮನಕ್ಕೆ ತೆಗೆದುಕೊಂಡರೆ, ಈ ಕಾರ್ಯಕ್ರಮವು ಕಲಿಕೆಯನ್ನು ಭಯ ಮತ್ತು ಒತ್ತಡಮುಕ್ತ ಅನುಭವವನ್ನು ನೀಡುವಂತೆ ಮಾಡುತ್ತದೆ. ಇದು ಕಲಿಕಾ ಪ್ರಕ್ರಿಯೆಯ ಭಾಗವಾಗಿ ಮಾಮೂಲಿ ಮೌಲ್ಯಮಾಪನಕ್ಕೆ ಬದಲಾಗಿ ನಿರಂತರ ಹಾಗೂ ಸಮಗ್ರ ಮೌಲ್ಯಮಾಪನ ಶೈಲಿಯನ್ನಾಗಿ ಬದಲಾಯಿಸುತ್ತದೆ.

ಪಠ್ಯಕ್ರಮವನ್ನು ನಿರ್ವಹಣೆ ಸಾಧ್ಯವಾದ ಸಣ್ಣ ವಿಭಾಗಗಳಾಗಿ ಮಾಡಲಾಗಿದ್ದು ಅವುಗಳನ್ನು ಮೈಲುಗಲ್ಲುಗಳೆಂದು ಗುರುತಿಸಲಾಗಿದೆ. ಪ್ರತಿಯೊಂದು ವಿಷಯಕ್ಕೂ (ಭಾಷೆ, ಗಣಿತಶಾಸ್ತ್ರ, ಪರಿಸರ ಅಧ್ಯಯನಗಳು) ಮೈಲುಗಲ್ಲುಗಳಿವೆ. ಮಗುವು ಕಾರ್ಯಚಟುವಟಿಕೆಗಳು ಮತ್ತು ಕಲಿಕಾ ಸಾಮಗ್ರಿಗಳನ್ನೇ ಮೆಟ್ಟಿಲುಗಳನ್ನಾಗಿ ಮಾಡಿಕೊಂಡು ಕಲಿಕಾ ಏಣಿಯ ಮೂಲಕ ಮುಂದೆ ಕ್ರಮಿಸುತ್ತದೆ. ತರಗತಿಗಳನ್ನು ಜೊತೆಯಲ್ಲಿ ಸೇರಿಸುವುದರಿಂದ ಸಮಾನ ಮನಸ್ಕ ಗುಂಪು ಕಲಿಕೆಗೆ ಸಾಕಷ್ಟು ಅವಕಾಶ ದೊರೆಯುತ್ತದೆ. ಮಕ್ಕಳು ಕಲಿಕಾ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗಿಯಾಗುತ್ತಾರೆ, ಅವರಿಗೆ ತಮ್ಮ ಸ್ಥಾನವನ್ನು ತಾವೇ ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ, ಕಾರ್ಯ-ಚಟುವಟಿಕೆಗೆ ಸಂಬಂಧಿಸಿದ ಗುಂಪು ಕಾರ್ಡ್‌ಅನ್ನು ಆಯ್ಕೆ ಮಾಡಿಕೊಂಡು ಆಯಾ ಚಟುವಟಿಕೆ ಗ್ರೂಪ್‌ನ್ನು ಸೇರಿಕೊಳ್ಳುತ್ತಾರೆ. ಅವುಗಳೆಂದರೆ:

1. ಪ್ರಿಪರೇಟರಿ ಪೂರ್ವ
2. ಪ್ರಿಪರೇಟರಿ
3. ಸಾಮರ್ಥ್ಯ ಪ್ರಿಪರೇಟರಿ ಚಟುವಟಿಕೆಗಳು
4. ಕಲಿಕೆ
5. ಅಭ್ಯಾಸ
6. ಮೌಲ್ಯಮಾಪನ

ಶಿಕ್ಷಕರು ತರಗತಿಯ ಸುತ್ತಲೂ ಓಡಾಡುತ್ತಾ ನಾನಾ ಗುಂಪಿನಲ್ಲಿರುವ ವಿದ್ಯಾರ್ಥಿಗಳಿಗೆ ಅಗತ್ಯವಾದ ಹಲವು ರೀತಿಯ ಬೆಂಬಲವನ್ನು ನೀಡುತ್ತಾರೆ. ತರಗತಿಯಲ್ಲಿಯೇ ರಚಿಸಲಾದ ಕಲಿಕಾ ಪೆಂಡಾಲ್/ಚಾವಣಿಯಲ್ಲಿ ಮಕ್ಕಳು ಉತ್ಪಾದಿಸಿದ ಸಾಧನಗಳನ್ನು ಪ್ರದರ್ಶಿಸಲಾಗುತ್ತದೆ.

**ಪ್ರಗತಿ ಮತ್ತು ಸದ್ಯದ ಇತಿಹಾಸ**

ತನ್ನ 25 ವರ್ಷಗಳ ಪಯಣದಲ್ಲಿ ನಲಿ-ಕಲಿ ಕಾರ್ಯಕ್ರಮ ಕ್ರಮೇಣ ಎಚ್.ಡಿ.ಕೋಟೆಯ ಕೆಲವು ಬ್ಲಾಕ್‌ಗಳಲ್ಲಿ ಆರಂಭವಾಗಿ ಕರ್ನಾಟಕದ ಎಲ್ಲ 49 ಸಾವಿರ ಸರಕಾರಿ ಶಾಲೆಗಳಲ್ಲಿ ವಿಸ್ತರಣೆಗೊಂಡಿತು. 1995-96ರಲ್ಲಿ ಎಚ್.ಡಿ.ಕೋಟೆಯ ಕೆಲವು ಶಾಲೆಗಳಲ್ಲಿ ಯೂನಿಸೆಫ್‌ನ ನೆರವಿನೊಂದಿಗೆ ಆರಂಭವಾದ ಈ ಕಾರ್ಯಕ್ರಮವನ್ನು 1999-2000ರ ಅವಧಿಯ ಹೊತ್ತಿಗೆ ಜಿಲ್ಲೆಯ ಎಲ್ಲ ಶಾಲೆಗಳಲ್ಲಿ ಅಳವಡಿಸಿಕೊಳ್ಳಲಾಯಿತು ಹಾಗು ಮತ್ತೊಮ್ಮೆ ಯೂನಿಸೆಫ್ ಮತ್ತು ವಿಶ್ವ ಬ್ಯಾಂಕ್ ನೆರವು ನೀಡಿದವು. 2004-05ರಲ್ಲಿ ರಾಜ್ಯದ ಎಂಟು ಹೆಚ್ಚುವರಿ ಬ್ಲಾಕ್‌ಗಳಲ್ಲಿನ ಎಲ್ಲ ಸಣ್ಣ ಶಾಲೆಗಳಲ್ಲಿ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು. 2007-08ರ ಹೊತ್ತಿಗೆ ಒಂದು ಮತ್ತು ಎರಡನೇ ತರಗತಿಗಳು ಸೇರಿ 30ಕ್ಕಿಂತ ಕಡಿಮೆ ವಿದ್ಯಾರ್ಥಿಗಳಿರುವ ರಾಜ್ಯದ ಎಲ್ಲ ಶಾಲೆಗಳಲ್ಲಿ ನಲಿ-ಕಲಿ ಜಾರಿಗೆ ಬಂದಿತು. ಮುಂದೆ 2009-10ರಲ್ಲಿ ಒಂದು, ಎರಡು ಮತ್ತು ಮೂರನೇ ತರಗತಿಗಳನ್ನು ಒಳಗೊಂಡ ರಾಜ್ಯದ ಎಲ್ಲ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರಲಾಯಿತು. ಈಗ ಕರ್ನಾಟಕದ ಎಲ್ಲ ಶಾಲೆಗಳಲ್ಲಿ ನಲಿ-ಕಲಿ ಕಾರ್ಯಕ್ರಮ ಜಾರಿಗೆ ಬಂದಿದೆ. ಈಗ ರಾಜ್ಯದಲ್ಲಿ ಈ ಕಾರ್ಯಕ್ರಮದ ಬಗೆಗೆ ಅನೇಕ ಚಿಂತನೆಗಳು ನಡೆಯುತ್ತಿವೆ ಮತ್ತು ನಲಿ-ಕಲಿ ಅನೇಕ ಅಧ್ಯಯನಗಳಿಗೆ ದಾರಿ ಮಾಡಿಕೊಟ್ಟಿದೆ. ಕಲಿಕೆಯ ಪ್ರಕ್ರಿಯೆಯಲ್ಲಿ ಪ್ರತಿಯೊಂದು ಮಗುವು ಕೂಡ ಭಾಗಿಯಾಗಬೇಕು ಮತ್ತು ಕಲಿಕೆಯನ್ನು ಖುಷಿಯಿಂದ ಅನುಭವಿಸಬೇಕು ಎಂಬುದು ಈ ವಿಧಾನದ ಮುಖ್ಯ ಗುರಿಯಾಗಿದೆ.

**ಮುಂದಿನ ಹೆಜ್ಜೆ**

ಎಲ್ಲರನ್ನೂ ಒಳಗೊಳ್ಳುವ ಶಿಕ್ಷಣದಲ್ಲಿ ಶಿಕ್ಷಕನಾದವನು ಪ್ರತಿಯೊಂದು ಮಗುವನ್ನೂ ತಲುಪುವುದು ಅತ್ಯಂತ ಮಹತ್ವದ್ದಾಗಿದೆ. ಇದರಿಂದಾಗುವ ಪ್ರಯೋಜನಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ:

- ಮಕ್ಕಳು ಯಾವುದೇ ಭಯವಿಲ್ಲದೆ ಪ್ರಶ್ನೆಗಳನ್ನು ಕೇಳಬಹುದು ಮತ್ತು ಶಿಕ್ಷಕರು ಹಾಗೂ ಜೊತೆಗಾರರು ಸಂಯಮದಿಂದ ಉತ್ತರ ನೀಡಬೇಕಾಗುತ್ತದೆ.
- ಮಾರ್ಗದರ್ಶನ ಬೇಕಾಗಿರುವ ಪ್ರತಿಯೊಂದು ಮಗುವಿಗೂ ಅದರ ಶಿಕ್ಷಕರು ಅಥವಾ ಜೊತೆಗಾರರಿಂದ ಅದು ಲಭ್ಯವಾಗುತ್ತದೆ.
- ಮಕ್ಕಳ ಕೆಲಸವನ್ನು ವ್ಯವಸ್ಥೆಗೊಳಿಸಲಾದ ಕಲಿಕಾ ಚಾವಣಿಯಲ್ಲಿ ಪ್ರಮುಖವಾಗಿ ಪ್ರದರ್ಶನಕ್ಕೆ ಇಡಬೇಕು (ಮಕ್ಕಳು ಸಿದ್ಧಪಡಿಸಿದ ಎಲ್ಲ ಸಾಮಗ್ರಿಗಳು ಮತ್ತು ಇತರ ಕಲಿಕಾ ಸಾಧನಗಳನ್ನು ಎಲ್ಲರೂ ನೋಡಲು ಸಾಧ್ಯವಾಗುವಂತೆ ನೇತು ಹಾಕಲು ಅಥವಾ ಪ್ರದರ್ಶನ ಮಾಡಲು ತರಗತಿ ಕೊಠಡಿಯ ಒಳಗೆ ತಾತ್ಕಾಲಿಕ ಛಾವಣಿಯನ್ನು ನಿರ್ಮಿಸಬೇಕು).
- ಕಲಿಕಾ ಸಾಮಗ್ರಿಗಳು ತರಗತಿ ಕೊಠಡಿಯ ಒಳಗೇ ಲಭ್ಯವಿರುತ್ತವೆ.
- ವಿದ್ಯಾರ್ಥಿಗಳು ಭಯ-ಮುಕ್ತ ವಾತಾವರಣದಲ್ಲಿ ಕೆಲಸ ಮಾಡುವಂತಿರಬೇಕು.
- ಮಕ್ಕಳು ನೀಡುವ ಪ್ರತಿಕ್ರಿಯೆಗಳು ಅವರ ಶಿಕ್ಷಕರ ನೀಡಿದ ವಿವರಣೆಗಳು ಮತ್ತು ಬೋಧನೆಗಳನ್ನು ಅರ್ಥ ಮಾಡಿಕೊಂಡಿದ್ದಾರೆ ಎಂಬುದನ್ನು ತೋರಿಸುವಂತಿರಬೇಕು.
- ಮಕ್ಕಳ ಮನೆಯ ಭಾಷೆಯನ್ನೇ ಮುಕ್ತವಾಗಿ ಬಳಸಲಾಯಿತು.

**ಸಮಾರೋಪ**

ನಲಿ-ಕಲಿ ಕಾರ್ಯಕ್ರಮದ 25 ವರ್ಷಗಳ ಸುದೀರ್ಘ ಪಯಣದಲ್ಲಿ ಅನೇಕ ಏರಿಳಿತಗಳು ಇದ್ದರೂ ಕೂಡ ಇದೊಂದು ಯಶಸ್ವಿ ಕಾರ್ಯಕ್ರಮ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ನಾವು ನಮ್ಮ ಶಿಕ್ಷಕರನ್ನು ತರಬೇತುಗೊಳಿಸುವಲ್ಲಿ, ತರಬೇತಿ ಮಾದರಿಗಳನ್ನು, ಸಂಪನ್ಮೂಲ ವ್ಯಕ್ತಿಗಳನ್ನು ಸಿದ್ಧಪಡಿಸುವಲ್ಲಿ ಮತ್ತು ಸಾಧನಗಳನ್ನು ಸಿದ್ಧವಾಗಿಡುವಲ್ಲಿ ಸಮರ್ಥರಾಗಿದ್ದೇವೆ. ಈಗ ತಕ್ಷಣಕ್ಕೆ ಹೆಚ್ಚಿನ ಶಿಕ್ಷಕರನ್ನು ನೇಮಕಗೊಳಿಸಬೇಕಾದ ಅಗತ್ಯವಿದೆ ಎನ್ನುವುದು ಬೇರೆ ಮಾತು. ಸರ್ವರಿಗೂ ಶಿಕ್ಷಣ ಎನ್ನುವುದು ಕೇವಲ ತಟಸ್ಥವಾದ ಚಿಂತನೆಯಲ್ಲ ಬದಲಾಗಿ ಅದೊಂದು ಸಶಕ್ತವಾದ ಪರಿಕಲ್ಪನೆ. ಇನ್ನೊಂದು ವಿಧದಲ್ಲಿ ಹೇಳಬೇಕೆಂದರೆ ಇದು ಅತ್ಯಂತ ರಾಜಕೀಯವಾದ ಯೋಚನೆ. ಇಲ್ಲಿ ರಾಜಕೀಯ ಎಂದರೆ ಸಮಾಜದ ಕಟ್ಟಕಡೆಯ ವರ್ಗಗಳೂ ಸೇರಿದಂತೆ ಶಿಕ್ಷಣವನ್ನು ಎಲ್ಲರಿಗೂ ಲಭ್ಯವಾಗುವಂತೆ ಮಾಡುವ ಮೂಲಕ ಎಲ್ಲರನ್ನೂ ಸಬಲೀಕರಣಗೊಳಿಸುವ ಕೆಲಸ.

ಇದು ಸಾಕಾರಗೊಳ್ಳಬೇಕಾದರೆ ನಾವು ಇನ್ನಷ್ಟು ದೂರ ಕ್ರಮಿಸಲು ಸಿದ್ಧತೆ ಮಾಡಿಕೊಳ್ಳಬೇಕಾಗಿದೆ. ಯಾಕೆಂದರೆ ಪ್ರತಿಯೊಂದು ಮಗುವನ್ನೂ ತಲುಪಬೇಕು ಎನ್ನುವುದಷ್ಟೇ ನಮ್ಮ ಗುರಿಯಾಗ-ಬಾರದು. ನಾವು ಯಾವ ರೀತಿಯ ಶಿಕ್ಷಣವನ್ನು ನೀಡುತ್ತೇವೆ ಎಂಬುದು ಇಲ್ಲಿ ಅಷ್ಟೇ ಮುಖ್ಯವಾದ ಇನ್ನೊಂದು ಸಂಗತಿಯಾಗಿದೆ. ಎಲ್ಲರಿಗೂ ಶಿಕ್ಷಣ ಎಂಬುದರ ನಿಜಾರ್ಥ ಏನೆಂದರೆ ಗುಣಮಟ್ಟದ ಶಿಕ್ಷಣವನ್ನು ನೀಡುವುದು. ಅದಕ್ಕಾಗಿ ನಾವು ಬಹಳ ದೂರ ಕ್ರಮಿಸಬೇಕಾಗಿದೆ. ನಾವು ನಲಿ-ಕಲಿ ಮೂಲಕ ಸರಿಸುಮಾರು ಎಲ್ಲ ಮಕ್ಕಳನ್ನು ತಲುಪಿರಬಹುದು. ಆದರೆ ಎಲ್ಲ ಮಕ್ಕಳಿಗೂ ಗುಣಮಟ್ಟದ ಶಿಕ್ಷಣ ಸಿಗುತ್ತಿದೆಯೇ?

ಇವೆಲ್ಲಕ್ಕೆ ಉತ್ತರ ಕಂಡುಕೊಳ್ಳಲು ಎರಡು ಜಿಲ್ಲೆಗಳಲ್ಲಿ (ಒಂದು ಕರ್ನಾಟಕ ಮತ್ತು ಇನ್ನೊಂದು ಮಹಾರಾಷ್ಟ್ರದಲ್ಲಿ) ಅಜೀಂ ಪ್ರೇಮ್‌ಜಿ ಪ್ರತಿಷ್ಠಾನ ಮತ್ತು ಟಾಟಾ ಟ್ರಸ್ಟ್ LIRIL ಅಧ್ಯಯನವನ್ನು ನಡೆಸಿತು. ಈ ಅಧ್ಯಯನವು ಕೆಳ ತರಗತಿಗಳಲ್ಲಿ ಭಾಷಾ ಕಲಿಕೆಯನ್ನು ಸುಧಾರಿಸುವುದು ಹೇಗೆ ಎನ್ನುವುದರ ಬಗ್ಗೆ ನಮಗೆ ಕೆಲವು ಒಳನೋಟಗಳನ್ನು ಒದಗಿಸುತ್ತದೆ. ಈ ಎರಡು ಜಿಲ್ಲೆಗಳಲ್ಲಿ ಭಾಷಾ ಕಲಿಕೆಯ ಮಟ್ಟ ಸರಾಸರಿಗಿಂತ ಕೆಳಮಟ್ಟದಲ್ಲಿತ್ತು ಎಂಬುದನ್ನು ಈ ಅಧ್ಯಯನವು ಬಯಲು ಮಾಡಿತು. ನಲಿ-ಕಲಿ ವಿಧಾನಕ್ರಮವು ಮಗು-ಕೇಂದ್ರಿತವಾದುದು. ವ್ಯಕ್ತಿಗತವಾದ ಕಲಿಕಾ ಪ್ರಕ್ರಿಯೆಗಳು ಯಾವತ್ತೂ ಆಲಿಸುವ, ಮಾತನಾಡುವ, ಸಂವಹನ ನಡೆಸುವ, ಗುಂಪುಗಳಲ್ಲಿ ಕೆಲಸ ಮಾಡುವ ಅತ್ಯಗತ್ಯವಾದ ಕೌಶಲಗಳಿಗೆ ಅವಕಾಶ ನೀಡುವುದಿಲ್ಲ. ಮಗು ಗುಂಪಿನಲ್ಲಿ ಇದ್ದಾಗಲಷ್ಟೇ ಉತ್ತಮ ಸಂವಹನ ನಡೆಸುವ ಅವಕಾಶ ಪಡೆಯುತ್ತದೆ. ನಲಿ-ಕಲಿಯಲ್ಲಿ ಗುಂಪಿನ ನಡುವೆ ಕೆಲಸ ಮಾಡುವುದಾದರೂ ಅದು ಸೀಮಿತವಾಗಿರುತ್ತದೆ, ಯಾಕೆಂದರೆ ಮಗು ಗುಂಪಿನಲ್ಲಿದ್ದೂ ಸ್ವತಂತ್ರವಾಗಿ ಕೆಲಸ ಮಾಡುತ್ತಿರುತ್ತದೆ. ನನ್ನ ಪ್ರಕಾರ ಈ ಪರಿಕಲ್ಪನೆಯ ಕ್ಲಾಸ್‌ರೂಂ ಮತ್ತು ಅದರ ಪ್ರಕ್ರಿಯೆಯಲ್ಲಿ ಮಕ್ಕಳಿಗೆ ಸಾಕಷ್ಟು ಪೂರಕ ವಾತಾವರಣ ಲಭ್ಯವಾಗಲಿದೆ. ಉಳಿದವರ ಮಾತುಗಳನ್ನು ಕೇಳುವುದು, ತಾವಾಗಿಯೇ ಅನೇಕ ವಿಷಯಗಳ ಬಗೆಗೆ ಮಾತನಾಡಲು ಉತ್ತೇಜನ ದೊರೆಯುವುದು, ನಿರ್ದಿಷ್ಟವಾದ ಅನುಭವಗಳಿಂದ ಅಮೂರ್ತವಾದ ಯೋಚನೆಗಳ ತನಕ ಮಕ್ಕಳ ಮನಸ್ಸಿನ ಕ್ಷಿತಿಜ ವಿಸ್ತಾರವಾಗುತ್ತ ಹೋಗುವುದು ಮಹತ್ವದ ಸಂಗತಿಯಾಗಿದೆ. ಇದು ಕೇವಲ ನಾನಾ ಗುಂಪುಗಳಲ್ಲಿ, ಸಂದರ್ಭಗಳಲ್ಲಿ ಮತ್ತು ಪರಿಸ್ಥಿತಿಗಳಲ್ಲಿ ನಡೆಯುತ್ತದೆ, ಯಾಕೆಂದರೆ ಇಂತಹ ಸಂವಹನಗಳಲ್ಲಿ ಮಕ್ಕಳು ಸಂಪರ್ಕದ ಭಾಷೆಯನ್ನು ಬಳಸುತ್ತಾರೆ. ಇವೆಲ್ಲವನ್ನೂ ನಾವು ಗಂಭೀರವಾಗಿ ಪರಿಗಣಿಸಬೇಕು ಮತ್ತು ಅದನ್ನು ನಾವು ನಮ್ಮ ನಲಿ-ಕಲಿ ವಿಧಾನಕ್ರಮದಲ್ಲಿ ಅಳವಡಿಸಿಕೊಳ್ಳಬೇಕು ಮತ್ತು ಇದರಿಂದ ಮಾತ್ರ ಗುಣಮಟ್ಟದ ಶಿಕ್ಷಣವು ಪ್ರತಿಯೊಂದು ಮಗುವಿಗೂ ದಕ್ಕಲು ಸಾಧ್ಯ ಎಂಬುದು LIRIL ಅಧ್ಯಯನದಿಂದ ದೊರೆತ ಒಳನೋಟವಾಗಿದೆ.

1995ರಲ್ಲಿ ಎಚ್.ಡಿ.ಕೋಟೆಯಲ್ಲಿ ನಲಿ-ಕಲಿ ಪ್ರಯೋಗವನ್ನು ಆರಂಭಿಸಿದಾಗ ಇದ್ದ ಪರಿಸ್ಥಿತಿಗೆ ಹೋಲಿಸಿದರೆ ಇಂದಿನ ಪರಿಸ್ಥಿತಿ ನಿಜಕ್ಕೂ ಭಿನ್ನ. ಕಳೆದ ಇಷ್ಟೂ ವರ್ಷಗಳಲ್ಲಿ ನಲಿ-ಕಲಿ ವಿಧಾನಕ್ರಮವು ಕಲಿಕೆಯ ಕನಿಷ್ಠ ಮಟ್ಟದೊಂದಿಗೆ ಮಕ್ಕಳನ್ನು ತಲುಪುವ ವಿಶಾಲವಾದ ತಳಹದಿಯನ್ನು ಹೊಂದಿದೆ. ಈಗ ನಮ್ಮ ಮುಂದೆ ಇರುವ ಸವಾಲು ಏನೆಂದರೆ ಎಲ್ಲ ಮಕ್ಕಳಿಗೆ ಗುಣಮಟ್ಟದ ಕಲಿಕೆಯು ಲಭ್ಯವಾಗುವಂತೆ ಮಾಡಲು ಶಿಕ್ಷಕರು ತಮ್ಮ ಮೂಲ ಚೌಕಟ್ಟು ಮತ್ತು ಸ್ವರೂಪವನ್ನು ಮೀರುವಂತಾಗಬೇಕು ಮತ್ತು ಆ ನಿಟ್ಟಿನಲ್ಲಿ ತುರ್ತಾಗಿ ಶಿಕ್ಷಕರ ಸಬಲೀಕರಣ ಆಗಬೇಕಾಗಿದೆ.



**ಉಮಾಶಂಕರ್ ಪೆರಿಯೋಡಿ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್ ನ ಕರ್ನಾಟಕ ರಾಜ್ಯದ ಮುಖ್ಯಸ್ಥರು. ಅಭಿವೃದ್ಧಿ ಕ್ಷೇತ್ರದಲ್ಲಿ ಅವರಿಗೆ ೩೦ಕ್ಕೂ ಹೆಚ್ಚು ವರ್ಷಗಳ ಅನುಭವವಿದೆ. ರಾಷ್ಟ್ರೀಯ ಸಾಕ್ಷರತಾ ಪ್ರಚಾರಾಂದೋಲನದಲ್ಲಿ ಸಾಕಷ್ಟು ಕೆಲಸ ಮಾಡಿರುವ ಅವರು ಕರ್ನಾಟಕದ ಬಿ.ಆರ್.ಹಿಲ್ಸ್‌ನಲ್ಲಿ ಬುಡಕಟ್ಟು ವರ್ಗದವರ ಶಿಕ್ಷಣಕ್ಕಾಗಿಯೂ ದುಡಿದಿದ್ದಾರೆ. ಗ್ರಾಮೀಣ ಮಟ್ಟದ ಕ್ಷೇತ್ರ ಕಾರ್ಯಕರ್ತರು ಮತ್ತು ಪ್ರಾಥಮಿಕ ಶಾಲಾ ಶಿಕ್ಷಕರನ್ನು ತರಬೇತುಗೊಳಿಸುವಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಪೆರಿಯೋಡಿ ಅವರು ಇದನ್ನು 'ಬರಿಗಾಲಿನ ಸಂಶೋಧನೆ' ಎಂದು ಕರೆದಿದ್ದಾರೆ. ಅವರು ಕರ್ನಾಟಕ ರಾಜ್ಯ ತರಬೇತುದಾರರ ಸಂಚಿತದ ಸ್ಥಾಪಕ ಸದಸ್ಯರೂ ಹೌದು. ಅವರನ್ನು ಈ ಮುಂದಿನ ಮಿಂಚಂಚೆಯಲ್ಲಿ ಸಂಪರ್ಕಿಸಬಹುದು periodi@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಲತಾ ಕೆ ಸಿ**

# ಒಳಗೊಳ್ಳುವಿಕೆಯ ಶಿಕ್ಷಣವು ಎಲ್ಲರಿಗೂ ಶಾಲಾಶಿಕ್ಷಣವನ್ನು ಒದಗಿಸುವುದೇ?

ವಿ. ಶಾಂತಕುಮಾರ್

ಶಾಲಾ ಶಿಕ್ಷಣದಲ್ಲಿ ಕೌಶಲಗಳ ಅಸಮರ್ಪಕ ಸೇರ್ಪಡೆ ಅಪಾಯಕಾರಿ ಎಂಬ ತಪ್ಪು ಗ್ರಹಿಕೆ ಹೆಚ್ಚಿನ ಪೋಷಕರಿಗಿದೆ. ಏಕೆಂದರೆ ಅದರಿಂದ ಹಲವಾರು ಮಕ್ಕಳು (ಅಥವಾ ಅವರ ಪೋಷಕರು) ಶಾಲಾ ಶಿಕ್ಷಣದ ಬಗ್ಗೆ ಆಸಕ್ತಿಯನ್ನು ಕಳೆದುಕೊಳ್ಳುತ್ತಾರೆ, ಮಕ್ಕಳು ತಮ್ಮ ಪೋಷಕರು ಅಥವಾ ಸಮುದಾಯದ ಸಾಂಪ್ರದಾಯಿಕ ಕೌಶಲಗಳನ್ನು ಮರೆಯುವಂತೆ ಮಾಡುತ್ತದೆ, ಅಲ್ಲದೆ, ಭಾರತದಲ್ಲಿ ಶಿಕ್ಷಣ ಮುಗಿಸಿದ ವಯಸ್ಕರಿಗೆ ಬೃಹತ್ ಪ್ರಮಾಣದಲ್ಲಿ ನಿರುದ್ಯೋಗ ಸೃಷ್ಟಿಯಾಗಲು ಅದು ಕಾರಣವಾಗುತ್ತದೆ ಎಂದು ಅವರು ನಂಬಿದ್ದಾರೆ. ಇದೊಂದು ಸಂಕೀರ್ಣ ಸಮಸ್ಯೆಯಾಗಿದ್ದು, ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಐತಿಹಾಸಿಕ ಮತ್ತು ಭಾರತವನ್ನೂ ಒಳಗೊಂಡಂತೆ ಅಂತರರಾಷ್ಟ್ರೀಯ ಅನುಭವಗಳನ್ನು ನಾವು ಗಮನಿಸಬೇಕಾಗುತ್ತದೆ.

**ವಸಾಹತುಶಾಹಿ ಶಿಕ್ಷಣ**

ಭಾರತದಲ್ಲಿ ಬಗೆಬಗೆಯ ಕೌಶಲಗಳ ಕಲಿಕೆಯನ್ನು ಒಳಗೊಳ್ಳದ ಸಾಮಾನ್ಯ ಉದ್ದೇಶದ ಶಾಲಾ ಶಿಕ್ಷಣ ಪದ್ಧತಿ ಆರಂಭಿಸಿದ್ದರ ಬಗ್ಗೆ ಬ್ರಿಟಿಷ್ ವಸಾಹತುಶಾಹಿಯನ್ನು ಬಹಳ ಮಂದಿ ದೂರಿದ್ದರು. ವಸಾಹತುಶಾಹಿ ಆಡಳಿತದ ಈ ತೀರ್ಮಾನಕ್ಕೆ ಒಂದು ಬಲವಾದ ಕಾರಣವಿತ್ತು. ಭಾರತಕ್ಕಾಗಿ ಶಿಕ್ಷಣ ವ್ಯವಸ್ಥೆಯ ವಿನ್ಯಾಸ ರಚಿಸುವ ವೇಳೆ ಯುನೈಟೆಡ್ ಕಿಂಗ್‌ಡಮ್‌ನಲ್ಲಿ (ಬ್ರಿಟನ್/ಗ್ರೇಟರ್ ಬ್ರಿಟನ್) ಒಂದು ಚರ್ಚೆ ನಡೆದಿತ್ತು. ಅದುವರೆಗೂ ಎರಡು ಬಗೆಯ ಶಾಲಾ ವ್ಯವಸ್ಥೆಗಳಿದ್ದವು. ಒಂದು-ಶ್ರೀಮಂತರಿಂದ ಪೋಷಿಸಲ್ಪಟ್ಟ ಸಾಮಾನ್ಯ ವಿದ್ಯಾಭ್ಯಾಸ ವ್ಯವಸ್ಥೆ, ಎರಡು- ಬಡ ಕುಟುಂಬದ ಮಕ್ಕಳಿಗಾಗಿ 'ಅಭ್ಯಾಸಾವಧಿಗಳು' (ಅಪ್ರೆಂಟಿಸ್‌ಷಿಪ್). ಅಂತಹ ದ್ವಂದ್ವ ಶಿಕ್ಷಣ ವ್ಯವಸ್ಥೆಯ ಸಾಮಾಜಿಕ ತೊಡಕುಗಳ ಬಗ್ಗೆ ಕಳವಳಗಳಿದ್ದವು. ಈ ಅಸಮಾನತೆ ಬಗ್ಗೆ ಕಳವಳ ಹೊಂದಿದ್ದವರು, ಸಾರ್ವತ್ರಿಕ ಉದ್ದೇಶದ ವಿದ್ಯಾಭ್ಯಾಸವನ್ನು ಒಂದಷ್ಟು ವರ್ಷಗಳವರೆಗೆ ಎಲ್ಲಾ ಮಕ್ಕಳಿಗೂ ವಿಸ್ತರಿಸುವಂತೆ ವಾದಿಸುತ್ತಿದ್ದರು. ಯು.ಕೆ.ಯಲ್ಲಿ ಆದ ಈ ಬದಲಾವಣೆಯೇ ಭಾರತದಲ್ಲಿ ವಸಾಹತುಶಾಹಿ ಶಿಕ್ಷಣದ ಮೇಲೆ ಪ್ರಭಾವ ಬೀರಿತು.

**ಗಾಂಧೀಜಿಯ ವಿಧಾನ**

ವಸಾಹತುಶಾಹಿ ಶಿಕ್ಷಣಕ್ಕೆ ಮಹಾತ್ಮಾ ಗಾಂಧೀಜಿಯ ವಿರೋಧವಿತ್ತು ಮತ್ತು ಆಗಿನ ಕಾಲದಲ್ಲಿ ಬಹುಸಂಖ್ಯಾತ ಭಾರತೀಯರ ಜೀವನೋಪಾಯದ ಜೊತೆಗೆ ಆ ಶಿಕ್ಷಣ ಪದ್ಧತಿ ಸಂಪರ್ಕ ಕಡಿತಗೊಳಿಸುತ್ತಿತ್ತು ಎಂಬುದು ಅವರ ಒಂದು ಕಾರಣವಾಗಿತ್ತು ಹಾಗೂ ನಯೀ ತಾಲೀಮ್ ಎಂಬ, ಕೃಷಿ ಮತ್ತು ಕುಶಲಕರ್ಮಿ ಕೌಶಲಗಳನ್ನು ಶಿಕ್ಷಣದ ಭಾಗವಾಗಿ ಸೇರಿಸುವ ಪರಿಕಲ್ಪನೆ ಅವರಲ್ಲಿತ್ತು. ಆದರೆ ತಮಿಳುನಾಡಿನ ದ್ರಾವಿಡ ಕಳಗಮ್(ಡಿ.ಕೆ.)ನಂಥ ಕೆಲ ನಿರ್ದಿಷ್ಟ ವರ್ಗದ ನಾಯಕರು ಇದನ್ನು ವಿರೋಧಿಸಿದ್ದರು. ಅದರ ಜಾರಿಯು ಜಾತಿ ವ್ಯವಸ್ಥೆಯ ನಿರಂತರತೆಗೆ ಕಾರಣವಾದೀತು ಎಂಬುದು ಅವರ ಕಳವಳವಾಗಿತ್ತು.

ಜವಾಹರಲಾಲ್ ನೆಹರೂ ಅವರಂತಹ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ (ಇಂಡಿಯನ್ ನ್ಯಾಷನಲ್ ಕಾಂಗ್ರೆಸ್)ನ ಉದಾರ-ವಾದಿಗಳಿಗೆ ಗಾಂಧೀಜಿಯ ವಿಧಾನದ ಬಗ್ಗೆ ಮಹತ್ವಾಕಾಂಕ್ಷೆ ಇರಲಿಲ್ಲವಾದರೂ ಸ್ವಾತಂತ್ರ್ಯೋತ್ತರ ಭಾರತದ ಸರ್ಕಾರಗಳು ನಯೀ ತಾಲೀಮ್ ಪರಿಕಲ್ಪನೆಯ ಶಾಲೆಗಳನ್ನು ಬೆಂಬಲಿಸಿದ್ದವು. ಆದಾಗ್ಯೂ, ಕೆಲವು ದಶಕಗಳ ಬಳಿಕ ಈ ಪರಿಕಲ್ಪನೆಯ ಅನೇಕ ಶಾಲೆಗಳು ಮುಖ್ಯವಾಹಿನಿ ಶಿಕ್ಷಣವನ್ನು ಒದಗಿಸಿದ್ದವು.

ಇದಕ್ಕೆ ಒಂದು ಬಹುಮುಖ್ಯವಾದ ಕಾರಣವಿತ್ತು. ಬಹಳಷ್ಟು ರೈತರು ಮತ್ತು ಕುಶಲಕರ್ಮಿಗಳು, ಕೃಷಿ ಮತ್ತು ಕುಶಲಕರ್ಮಿ ಕೌಶಲಗಳನ್ನು ಹೇಳಿಕೊಡುತ್ತಿದ್ದ ಈ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸಲು ಇಚ್ಛಿಸಲಿಲ್ಲ. ತಮ್ಮ ಮಕ್ಕಳು ಹೆತ್ತವರ ಕೆಲಸದಲ್ಲಿ ಸಹಾಯ ಮಾಡುತ್ತಲೇ ಈ ಕೌಶಲಗಳನ್ನು ಚೆನ್ನಾಗಿ ಕಲಿಯ-ಬಲ್ಲರು. ಅಲ್ಲದೆ, ಅದಕ್ಕಾಗಿ ಶಾಲಾ ಕಲಿಕೆಗಾಗಿ ಪ್ರತ್ಯೇಕ ಸಮಯವನ್ನು ಮೀಸಲಿಡಬೇಕಾಗಿಲ್ಲ ಎಂದು ಅವರು ನಂಬಿದ್ದರು. ಒಂದಂತೂ ಸ್ಪಷ್ಟವಾಗಿತ್ತು, ಏನೆಂದರೆ, ಬಡವರು ಮಾತ್ರ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಒಲವು ತೋರುತ್ತಿದ್ದರು. ಅವರ ಪ್ರಕಾರ, ಶಿಕ್ಷಣದ ಮೂಲಕ ಉತ್ತಮ ಜೀವನ ಸಾಗಿಸಲು ಸಾಧ್ಯವಾಗಿತ್ತು.

**ಇತರ ದೇಶಗಳಲ್ಲಿ ವೃತ್ತಿಪರ ಕೌಶಲಗಳು**
**ಯುರೋಪ್**

ಜರ್ಮನಿಯಲ್ಲಿ ಮಾತ್ರ ಮಕ್ಕಳ ಪ್ರೌಢ ಶಾಲಾ ಶಿಕ್ಷಣವನ್ನು ವೃತ್ತಿಪರ ಶಿಕ್ಷಣ ವಿಭಾಗವನ್ನಾಗಿ ಮಾರ್ಪಾಡು ಮಾಡಲಾಗಿತ್ತು. ಬಹುತೇಕ ಜರ್ಮನ್ನರು, ಕಾರು ತಯಾರಿಕಾ ಕಾರ್ಖಾನೆ ಮತ್ತು ಅಂತಹ ಇಂಜಿನಿಯರಿಂಗ್ ಉತ್ಪನ್ನಗಳನ್ನು ತಯಾರಿಸುವ ಕಾರ್ಖಾನೆಗಳಲ್ಲಿ ನೌಕರಿ ಹೊಂದಿದವರೆಲ್ಲ ಇಂತಹ ವೃತ್ತಿಪರ ಶಿಕ್ಷಣ ಪಡೆದವರೇ ಆಗಿರುತ್ತಿದ್ದರು. ಜರ್ಮನಿಯ ವಿಚಾರದಲ್ಲಿ ಎರಡು ಪ್ರಮುಖ ಸಂಗತಿಗಳನ್ನು ಪರಿಗಣಿಸಬೇಕು – ಮೊದಲನೆಯದಾಗಿ ಕೈಗಾರಿಕೀಕರಣದಿಂದಾಗಿ ಯಾರು ಈ ವೃತ್ತಿಪರ ಶಿಕ್ಷಣ ಪಡೆದಿದ್ದರೋ ಅವರೆಲ್ಲರೂ ಉತ್ತಮ ವೇತನವುಳ್ಳ ಉದ್ಯೋಗ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಹೊಂದಿರುತ್ತಿದ್ದರು. ಎರಡನೆಯದಾಗಿ, ಶಾಲೆಗಳು ಮಕ್ಕಳನ್ನು ವೃತ್ತಿಪರ ಮತ್ತು ಸಾಮಾನ್ಯ ವರ್ಗಗಳು (ಇದರಲ್ಲಿ ಉನ್ನತ ವರ್ಗದ ಮಕ್ಕಳು ವಿಶ್ವವಿದ್ಯಾಲಯಗಳಿಗೆ ಸೇರುತ್ತಿದ್ದರು) ಎಂದು ವಿಂಗಡಿಸುತ್ತಿದ್ದರು. ಹಾಗಾಗಿ, ಪೋಷಕರ ಸಮಾಜೋ ಆರ್ಥಿಕ ಸ್ಥಿತಿಗತಿ ಈ ಆಯ್ಕೆಯನ್ನು ಪ್ರಭಾವಿಸುತ್ತಿರಲಿಲ್ಲ.

ಇಟಲಿಯಲ್ಲಿಯೂ ಮಕ್ಕಳು ಪ್ರೌಢ ಶಿಕ್ಷಣದ ಹಂತದಲ್ಲಿ ವೃತ್ತಿಪರ ಶಿಕ್ಷಣವನ್ನು ಆರಿಸಿಕೊಳ್ಳುವ ಅವಕಾಶವಿದ್ದರೂ ಪರಿಸ್ಥಿತಿ ಸಂಪೂರ್ಣ ಭಿನ್ನವಾಗಿತ್ತು. ಇಟಲಿಯಲ್ಲಿ, ಮಕ್ಕಳು ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು ಎಂದು ನಿರ್ಧರಿಸುವಲ್ಲಿ ಪೋಷಕರ ಪಾತ್ರ ಮಹತ್ವದ್ದಾಗಿತ್ತು. ದುಡಿಯುವ ವರ್ಗದ ಪೋಷಕರು ತಮ್ಮ

ಮಕ್ಕಳನ್ನು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಮೊದಲ ಆದ್ಯತೆಯಾಗಿ ವೃತ್ತಿಪರ ಶಿಕ್ಷಣಕ್ಕೆ ಸೇರಿಸುತ್ತಿದ್ದರು. ಅಲ್ಲದೆ, ತಮ್ಮ ಮಕ್ಕಳು ಸಾಮಾನ್ಯ ವಿಭಾಗಕ್ಕೆ ಸೇರಿ ಮುಂದೆ ವಿಶ್ವವಿದ್ಯಾಲಯದಲ್ಲಿ ಓದುವ ಆಸಕ್ತಿ, ಸಾಮರ್ಥ್ಯ ಹೊಂದಿದ್ದರೂ ಅದನ್ನು ಲೆಕ್ಕಿಸದೆ ಅವರು ವೃತ್ತಿಪರ ಶಿಕ್ಷಣವನ್ನೇ ತೆಗೆದುಕೊಳ್ಳುವಂತೆ ಪ್ರೋತ್ಸಾಹಿಸುತ್ತಿದ್ದರು. ಇಟಲಿಯಲ್ಲಿ ಅಸಮಾನತೆ ಮತ್ತು ವರ್ಗಭೇದ ಬೆಳೆಯಲು ಇದು ಪ್ರಮುಖ ಕಾರಣವಾಗಿರಬಹುದು.

**ಯು.ಕೆ. ಮತ್ತು ಅಮೆರಿಕ**

ಇನ್ನೊಂದೆಡೆ, ಯು.ಕೆ. ಮತ್ತು ಅದರ ಪ್ರಭಾವದಿಂದಾಗಿ ಅಮೆರಿಕದಲ್ಲಿಯೂ ಎಲ್ಲಾ ಮಕ್ಕಳಿಗೆ 12 ವರ್ಷಗಳ ಕಾಲ ಸಾಮಾನ್ಯ ವಿಭಾಗದ ಶಿಕ್ಷಣವನ್ನೇ ಒದಗಿಸಲಾಯಿತು. ಇದರಿಂದ ಅನುಕೂಲ ಮತ್ತು ಅನನುಕೂಲ ಎರಡೂ ಇವೆ. ಸಮಾಜೋ ಆರ್ಥಿಕ ಹಿನ್ನೆಲೆಯ ಭೇದವಿಲ್ಲದೆ ಎಲ್ಲಾ ಮಕ್ಕಳಿಗೂ ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣ ಪಡೆಯುವ ಆಯ್ಕೆಯನ್ನೇ ತಡೆಹಿಡಿದಂತಾಯಿತು. ಆದಾಗ್ಯೂ, ಎಷ್ಟೋ ವಿದ್ಯಾರ್ಥಿಗಳು ಆಸಕ್ತಿ ಇಲ್ಲದೆಯೋ ಅಥವಾ ಇತರ ಕಾರಣಗಳಿಂದಲೋ ಅಂತಹ ಶಿಕ್ಷಣ ಪಡೆಯದೇ ಇದ್ದರೆ ಉನ್ನತ ಶಿಕ್ಷಣಕ್ಕಾಗಿ ಒಂದಷ್ಟು ವರ್ಷಗಳನ್ನು ವ್ಯರ್ಥಮಾಡುವುದುಂಟು. ಅದಕ್ಕಿಂತ ಅವರು ಯಾವುದಾದರೂ ಉಪಯುಕ್ತವಾದ ವೃತ್ತಿ ಅಥವಾ ಕೌಶಲಕ್ಕಾಗಿ ಆ ಅವಧಿಯನ್ನು ವಿನಿಯೋಗಿಸಬಹುದಿತ್ತು. ಇಷ್ಟಾದರೂ 12 ವರ್ಷಗಳ ಸಾರ್ವತ್ರಿಕ ಉದ್ದೇಶದ ಶಾಲಾ ಕಲಿಕೆಯ ನಂತರ ಪಾಲಿಟೆಕ್ನಿಕ್ ಅಥವಾ ಸಮುದಾಯ ಕಾಲೇಜುಗಳಲ್ಲಿ ಕೌಶಲವು ಲಭ್ಯವಿದೆ.

**ಕೆಲವು ಪ್ರಯೋಗಗಳು**

ಇತರ ಕೆಲವು ಆಸಕ್ತಿದಾಯಕ ಪ್ರಯೋಗಗಳನ್ನು ಇಲ್ಲಿ ಪ್ರಸ್ತಾಪಿಸ-ಬೇಕು. 19ನೇ ಶತಮಾನದ ಕೊನೆಯ ವೇಳೆಗೆ ಟ್ರಾವಂಕೂರ್‌ನ ರಾಜಪ್ರಭುತ್ವವು ರೈತರ ಮಕ್ಕಳಿಗಾಗಿ ಒಂದು ಶಾಲೆಯನ್ನು ತೆರೆಯಲು ತೀರ್ಮಾನಿಸಿತು. ರೈತರೂ ಮಾಹಿತಿಯ ತಿಳುವಳಿಕೆ ಹೊಂದಬೇಕು ಎಂಬುದು ಅದರ ಉದ್ದೇಶವಾಗಿತ್ತು. ಆದರೆ, ಕೋರ್ಸ್ ಮುಗಿದ ಬಳಿಕ ಯಾವ ವಿದ್ಯಾರ್ಥಿಯೂ ಕೃಷಿಯತ್ತ ಮರಳಲು ಬಯಸಲಿಲ್ಲ. ಬದಲಿಗೆ ಅವರೆಲ್ಲ ಸರ್ಕಾರಿ ನೌಕರಿ ಬೇಕು ಎಂದು ಪಟ್ಟುಹಿಡಿದರು.

ಮೀನುಗಾರರ ಮಕ್ಕಳಿಗಾಗಿಯೇ ಶಾಲೆ ತೆರೆಯುವ ಪ್ರಯತ್ನಗಳು ಮುಖ್ಯವಾಗಿ ಕೇರಳ, ಬ್ರೆಜಿಲ್ ಮತ್ತು ಇಂಡೋನೇಷ್ಯಾದಲ್ಲಿ ಸೇರಿದಂತೆ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ನಡೆದಿದ್ದವು. ಮೀನುಗಾರ ಕುಟುಂಬಗಳಲ್ಲಿ ನಿಯಮಿತವಾದ ಮುಖ್ಯವಾಹಿನಿ ಶಿಕ್ಷಣಕ್ಕೆ ವಾತಾವರಣದ ಅನುಕೂಲಕರ ವಾತಾವರಣ ಇಲ್ಲದ ಕಾರಣಕ್ಕೆ ಕೆಲವು ಪ್ರಕರಣಗಳಲ್ಲಿ ಆ ಮಕ್ಕಳಿಗೆ ಮುಖ್ಯವಾಹಿನಿಯ ಶಿಕ್ಷಣ ದೊರಕಿದುದು ಉಪಯುಕ್ತವಾಯಿತು. ಆ ಪೈಕಿ ಕೆಲವರು ಮತ್ಸ್ಯೋದ್ಯಮ ಬಿಟ್ಟು ಬೇರೆ ನೌಕರಿ ಹಿಡಿದಿದ್ದುಂಟು. ಆದರೂ, ತರಬೇತಿ ಪಡೆದ ಮೀನುಗಾರರನ್ನು ರೂಪಿಸಬೇಕು ಎಂಬ, ಈ ಶಾಲೆಯ ಮೂಲ ಉದ್ದೇಶ ಹೆಚ್ಚಿನ ಸಂದರ್ಭಗಳಲ್ಲಿ ಈಡೇರಲೇ ಇಲ್ಲ. ಸಮುದ್ರ ಮೀನುಗಾರಿಕೆಯು ಸಣ್ಣ ಪ್ರಮಾಣದಲ್ಲಿ (ಜಗತ್ತಿನ ಬಹುತೇಕ ಭಾಗಗಳಲ್ಲಿ ಮೀನುಗಾರಿಕೆ ಇದೇ ರೀತಿ ಮುಂದುವರಿದಿದೆ) ಮುಂದುವರಿದರೆ, ಆಗ ಶಾಲೆಗೆ ಹೋಗುವ ವಯಸ್ಸಿನ ಹುಡುಗರು ಶಾಲೆಗೆ ಹೋಗುವುದನ್ನು ತಡೆದು ಬೇಗನೆ ಮೀನುಗಾರಿಕೆ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಬೇಕಾಗುತ್ತದೆ.

ನಾವು ಇನ್ನೊಂದು ಸನ್ನಿವೇಶವನ್ನು ಪರಿಗಣಿಸೋಣ. ಚೀನಾ, ವಿಯೆಟ್ನಾಂ, ಥಾಯ್ಲೆಂಡ್ ಹಾಗೂ ಸ್ವಲ್ಪಮಟ್ಟಿಗೆ ಇಂಡೋನೇಷ್ಯಾ-ದಂತಹ ದೇಶಗಳು ಉತ್ಪಾದನಾ ವಲಯದ ಕಾರ್ಖಾನೆಗಳಲ್ಲಿ ಉದ್ಯೋಗ ಸೃಷ್ಟಿ ಮಾಡುವ ನಿಟ್ಟಿನಲ್ಲಿ ಭಾರತಕ್ಕಿಂತ ಎಷ್ಟೋ ಪಾಲು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿವೆ. ಈ ದೇಶಗಳಲ್ಲಿ ಮಿಲಿಯಗಟ್ಟಲೆ ಕಾರ್ಖಾನೆ ಕಾರ್ಮಿಕರಿದ್ದಾರೆ. ಈ ಕೆಲಸಗಾರರು ಯಾರು? ಅವರೆಲ್ಲ ಶಾಲಾ ಶಿಕ್ಷಣದ ಭಾಗವಾಗಿ ನಿಗದಿತ ಕೌಶಲಗಳನ್ನು ಪಡೆದಿದ್ದಾರೆಯೇ? ಈ ಎಲ್ಲಾ ದೇಶಗಳಲ್ಲಿ, ನಿಯಮಿತ ಶಾಲಾ ಶಿಕ್ಷಣ ಮುಗಿಸಿದ ಹುಡುಗರು ಮತ್ತು ಹುಡುಗಿಯರು ನಗರಗಳಿಗೆ ಹೋಗಿ ಮೊಬೈಲ್ ಫೋನ್, ಆಟಿಕೆಗಳು, ಲ್ಯಾಪ್‌ಟಾಪ್ ಮುಂತಾದವುಗಳನ್ನು ಜೋಡಿಸುವ ಅಥವಾ ಉಡುಪುಗಳನ್ನು ತಯಾರಿಸುವ ಕಾರ್ಖಾನೆಗಳಲ್ಲಿ ಕೆಲಸ ಮಾಡತೊಡಗುತ್ತಾರೆ. ಆಯಾ ಕಾರ್ಖಾನೆಗಳಲ್ಲೇ ಅವರು ಮುಂದೆ ನಿರ್ವಹಿಸಬೇಕಾದ ಕೆಲಸಗಳಿಗೆ ತಕ್ಕಂತೆ ಕೆಲವು ತಿಂಗಳ ತರಬೇತಿಯನ್ನೂ ನೀಡಲಾಗುತ್ತದೆ.

ನಾವು ನೆರೆಯ ದೇಶ ಬಾಂಗ್ಲಾದೇಶವನ್ನು ನೋಡಿದರೆ, ಶೇಕಡಾ 60ರಷ್ಟು ವಯಸ್ಕ ಮಹಿಳೆಯರು ಉದ್ಯೋಗಸ್ಥರಾಗಿದ್ದಾರೆ. (ಭಾರತದಲ್ಲಿ ಈ ಪ್ರಮಾಣ ಕೇವಲ ಶೇಕಡಾ 30ಕ್ಕಿಂತಲೂ ಕಡಿಮೆ ಇದೆ). ಬಾಂಗ್ಲಾದೇಶದಲ್ಲಿನ ಈ ಉದ್ಯೋಗವು ಅಂತರರಾಷ್ಟ್ರೀಯ ಮಾರುಕಟ್ಟೆಗೆ ಸಿದ್ಧ ಉಡುಪನ್ನು ರಫ್ತು ಮಾಡುವ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಇದೆ ಎಂಬುವುದು ಗಮನಾರ್ಹ. ಈ ಕೆಲಸಗಾರರು ಶಾಲಾ ಶಿಕ್ಷಣ ಮುಗಿಸಿದ ಕೆಲವೇ ವರ್ಷಗಳಲ್ಲಿ ಕಾರ್ಖಾನೆಗೆ ಬಂದುಬಿಡುತ್ತಾರೆ, ಕೆಲವೊಮ್ಮೆ ಶಾಲಾ ಶಿಕ್ಷಣವನ್ನು ಮುಗಿಸುತ್ತಲೇ ಬರುತ್ತಾರೆ. ಆದರೆ ಆ ಶಾಲೆಗಳಲ್ಲಿ ಕಲಿಯುವ ಕೌಶಲಗಳು ಭಾರತದಲ್ಲಿ ಇರುವುದಕ್ಕಿಂತ ಹೆಚ್ಚು ಭಿನ್ನವಾಗಿಲ್ಲ.

**ವಿದ್ಯಾಭ್ಯಾಸ ಮತ್ತು ಕೌಶಲ**

ಹಾಗಾಗಿ, ಭಾರತದಲ್ಲಿ ಯುವಜನರು ನೌಕರಿ ಗಳಿಸಲು ವಿಫಲರಾಗುವುದಕ್ಕೆ ಶಾಲಾ ಶಿಕ್ಷಣದಲ್ಲಿ ವೃತ್ತಿಕೌಶಲ ಸೇರ್ಪಡೆಯಾಗದಿರುವುದೇ ಕಾರಣ ಎಂಬ ಟೀಕೆಯು ಪ್ರಾಯೋಗಿಕವಾಗಿ ಸರಿಯಾದುದಲ್ಲ. ಭಾರತದಲ್ಲಿನ ನಿರುದ್ಯೋಗ ಸಮಸ್ಯೆಗೆ ಬೇರೆಯೇ ಕಾರಣವಿರಬಹುದು. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಅನೇಕ ಸಂಘಟನೆಗಳು ಸಮಾಜದಲ್ಲಿನ ಅಸಮಾನತೆ ಕುರಿತು ಕಳವಳ ವ್ಯಕ್ತಪಡಿಸಿದ್ದು, ಎಲ್ಲಾ ಮಕ್ಕಳಿಗೂ ಒಂದೇ ಬಗೆಯ ಶಿಕ್ಷಣ ಕೊಡುವಂತೆ ವಾದಿಸುತ್ತಾರೆ. ಶಾಲೆಗಳಲ್ಲಿ ಕೌಶಲಕ್ಕೋ ಅಥವಾ ಕೆಲಸಕ್ಕೋ ಆದ್ಯತೆ ಸಿಗುವುದಾದರೆ ಎಲ್ಲಾ ಮಕ್ಕಳಿಗೂ ಅವರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಲೆಕ್ಕಿಸದೆ ಅದು ಸಿಗುವಂತಾಗಬೇಕು ಎಂದು ಅವರು ವಾದಿಸುತ್ತಾರೆ. ಸಣ್ಣ, ಸಾಂಪ್ರದಾಯಿಕ ಉದ್ಯಮಗಳಲ್ಲಿ ತೊಡಗಿಸಿಕೊಂಡಿರುವ ಕುಟುಂಬಗಳ ಮಕ್ಕಳು ವಿದ್ಯಾಭ್ಯಾಸವನ್ನು ಒಳ್ಳೆಯ ರೀತಿಯಲ್ಲಿ ಬಳಸಿಕೊಳ್ಳುತ್ತಿಲ್ಲ ಎಂಬ ಬಗ್ಗೆ ಕಳವಳ ಇದ್ದರೂ, ಆ ಮಕ್ಕಳನ್ನು ಶಾಲೆಗೆ ಕರೆತರುವ ನಿಟ್ಟಿನಲ್ಲಿ ಬೇರೆ ಮಾರ್ಗಗಳ ಬಗ್ಗೆಯೂ ಅವರು ಸಲಹೆ ನೀಡುತ್ತಾರೆ. ಕಡ್ಡಾಯ ಶಿಕ್ಷಣ ನೀತಿ ಅಥವಾ ಮಕ್ಕಳನ್ನು ಶಾಲೆಗೆ ಕಳುಹಿಸುವ ಸಂಬಂಧ ಹೆತ್ತವರಿಗೆ ವಿಭಿನ್ನ ಬಗೆಯ ಬೆಂಬಲ ನೀಡುವುದೂ ಕಾರ್ಯತಂತ್ರದ ಒಂದು ಭಾಗವಾಗಿರುತ್ತದೆ.

**ಪಾಠವನ್ನು ಬದುಕಿಗೆ ಜೋಡಿಸುವುದರ ಮಹತ್ವ**

ಪ್ರತಿ ಮಗುವೂ ಕಲಿಯಬೇಕು ಎಂದು ನಾವು ಬಯಸುವುದಾದರೆ ತರಗತಿಯಲ್ಲಿ ನಡೆಯುವುದೆಲ್ಲವನ್ನೂ ಮಕ್ಕಳಿಗೆ ಕುತೂಹಲಕಾರಿ-

ಯಾಗಿಸಬೇಕು. ಬೋಧನಾ ಕಲೆಯನ್ನು ಬದಲಾಯಿಸುವುದು ಮತ್ತು ಶಿಕ್ಷಕರ ಇತರ ಅಭ್ಯಾಸಗಳಲ್ಲಿ ಮಾರ್ಪಾಡು ಮಾಡಿ ಪ್ರತಿಯೊಂದು ಮಗುವಿಗೂ ಶಾಲಾ ಶಿಕ್ಷಣವನ್ನು ಆಸಕ್ತಿದಾಯಕ-ವಾಗಿಸಬೇಕು.

ಅಮೂರ್ತತೆಗಳನ್ನು (ಪಠ್ಯಗಳಲ್ಲಿ) ವಾಸ್ತವದೊಂದಿಗೆ (ಮಕ್ಕಳ ಜೀವನ) ಜೋಡಿಸುವುದು ಮುಖ್ಯವಾಗಿದ್ದು, ಇದು ವಿಶ್ವ-ವಿದ್ಯಾಲಯದಲ್ಲಿ ಶಿಕ್ಷಣ ಪಡೆಯಲು ಬಯಸುವವರೂ ಸೇರಿದಂತೆ ಎಲ್ಲಾ ಮಕ್ಕಳಿಗೂ ಅತಿ ಮುಖ್ಯ. ವಾಸ್ತವದ ಬದುಕಿನೊಂದಿಗೆ ನಂಟೇ ಇಲ್ಲದಿರುವುದು ಕಾಲೇಜು ಮತ್ತು ವಿಶ್ವವಿದ್ಯಾಲಯದ ಶಿಕ್ಷಣದಲ್ಲಿಯೂ ಕಂಡುಬರುವ ಬಹಳ ದೊಡ್ಡ ಕೊರತೆ. ಇದೇನೂ ಕಲಿಕೆಯನ್ನು ಬಹಳ ಪ್ರಯೋಜನಕಾರಿಯಾಗಿ ಮಾಡುವುದಿಲ್ಲ. ಅಲ್ಲದೆ ಪದವಿಗಳು ಕೆಲವು ವರ್ಗದ ವಿದ್ಯಾರ್ಥಿಗಳಿಗೆ ಮಾತ್ರ ನೌಕರಿ ಗಳಿಸಲು ಸಹಾಯಕವಾಗುತ್ತದೆ.

ಹಾಗಿದ್ದರೆ ಸಾಂಪ್ರದಾಯಿಕ ಕೌಶಲಗಳ ಬಗ್ಗೆ ಏನು ಹೇಳೋಣ? ಕೈಗಾರಿಕೆ ಅಥವಾ ಆರ್ಥಿಕ ಪ್ರಗತಿಯ ದೆಸೆಯಿಂದ ಪಾರಂಪರಿಕ ವೃತ್ತಿಗಳನ್ನು ಜನರು ಸಾಮೂಹಿಕವಾಗಿ ಕೈಬಿಡುತ್ತಿದ್ದಾರೆ. ಕೃಷಿಯು ಜೀವನಾವಶ್ಯಕವಲ್ಲವೇ? ಆಧುನೀಕರಣ ಅಥವಾ ಅಭಿವೃದ್ಧಿಯ ಕಾರಣದಿಂದಾಗಿ ನಾವು ಪಾರಂಪರಿಕ ಕೌಶಲಗಳನ್ನು ಕಳೆದು-ಕೊಳ್ಳುತ್ತಿಲ್ಲವೇ? ಇವೆಲ್ಲವೂ ಸಕಾರಣವಾದ ಕಳವಳಗಳು.

ಇಲ್ಲಿ ಎರಡು ಪ್ರಮುಖ ಅಂಶಗಳಿವೆ- ಒಂದು, ಕೃಷಿ ಅಥವಾ ಕುಶಲಕರ್ಮಿಗಳ ಅಥವಾ ಪಾರಂಪರಿಕ ಕೌಶಲಗಳಲ್ಲಿ ತೊಡಗಿಸಿಕೊಂಡ ನಿಗದಿತ ಸಮಾಜೋ-ಆರ್ಥಿಕ ಗುಂಪು ಅಥವಾ ಜನರಿಗೆ ಕೆಲವು ಸಮಸ್ಯೆಗಳಿರಬಹುದಾದರೂ ಅವರು ಅಸ್ತಿತ್ವಕ್ಕಾಗಿಯಷ್ಟೇ ಈ ವೃತ್ತಿಗಳನ್ನು ಮುಂದುವರಿಸುತ್ತಿರಬಹುದು. ಕೃಷಿಕರ ಮಕ್ಕಳು ಕೃಷಿ ಕೆಲಸದಲ್ಲೇ ತೊಡಗಿಸಿಕೊಂಡರೆ ಮಾತ್ರ ಇದು ಸಫಲವಾದೀತು ಎನ್ನುವುದು ಅಪೇಕ್ಷಣೀಯ ನಿರೀಕ್ಷೆ ಅಲ್ಲ. ಎರಡನೆಯದಾಗಿ, ಕೃಷಿ ಮತ್ತು ಕುಶಲಕರ್ಮಿಗಳ ಕೌಶಲಗಳಂತಹ ಕೆಲವು ವೃತ್ತಿಗಳಿಂದ ಬರುವ ಆದಾಯ ಇಳಿಮುಖವಾಗಿದ್ದು ಸಮಾಜೋ-ಆರ್ಥಿಕ ಅಭಿವೃದ್ಧಿಯ ದೆಸೆಯಿಂದ ಅದು ಹಾಗೇ ಮುಂದುವರಿಯಬಹುದು. ಅಲ್ಲದೆ, ಇದೇ ವೃತ್ತಿಗಳನ್ನು ನಂಬಿಕೊಂಡು ಜೀವನ ನಡೆಸಬೇಕಾದರೆ ಅವುಗಳನ್ನು ಮೇಲೆತ್ತುವ ಸಂಬಂಧ ಗಮನ ಕೊಡಲೇಬೇಕು.

**ಮುಖ್ಯವಾಹಿನಿ ಶಿಕ್ಷಣದಿಂದ ಪಾರಂಪರಿಕ ಕೌಶಲಕ್ಕೆ ಲಾಭ**

ಈ ಸಂಬಂಧ ಎರಡು ಅನುಭವಗಳ ಮೇಲೆ ಬೆಳಕು ಚೆಲ್ಲುತ್ತೇನೆ. ಸ್ಥಳೀಯ ಗುಂಪುಗಳ ಪ್ರದೇಶಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಶಾಲೆ ಅಥವಾ ಕಾಲೇಜು ಶಿಕ್ಷಣವನ್ನು ಕಲಿತೂ ಪಾರಂಪರಿಕ ವೃತ್ತಿಗಳಲ್ಲಿ ತೊಡಗಿಸಿಕೊಂಡು ಭೂಮಿ, ಅರಣ್ಯ ಮತ್ತು ನದಿಯನ್ನು ಅವಲಂಬಿಸಿ ತಮ್ಮ ಜೀವನ ನಡೆಸುತ್ತಿದ್ದ ಕುಟುಂಬಗಳನ್ನು ನಾನು ಭೇಟಿಯಾದೆ. ಅಂತಹ ನೆಲೆಗಳಲ್ಲಿ ಮರಗೆಣಸಿನಂತಹ ಆಹಾರ, ನದಿ ಮೀನು ಮತ್ತು ಹಲವು ಬಗೆಯ ಹಣ್ಣುಗಳನ್ನು ಒಳಗೊಂಡಂತೆ ಸಾಕಷ್ಟು ಆಹಾರದ ಲಭ್ಯತೆಯ ಪ್ರಮಾಣದಿಂದಾಗಿ ಬದುಕು ದುರ್ಬಲವಾಗಿರುವುದಿಲ್ಲ ಮತ್ತು ಇದರಿಂದ ಈ ವಿದ್ಯಾವಂತ ಜನರು ಕೈಗಾರಿಕೆಗಳಲ್ಲಿ ನೌಕರಿ ಗಳಿಸಲು ಅಥವಾ ನಗರಗಳಿಗೋ/ ಪಟ್ಟಣಗಳಿಗೋ ಹೋಗಿ ಕೊಳೆಗೇರಿಗಳಲ್ಲಿ ವಾಸಿಸಲು ಇಷ್ಟಪಡುತ್ತಿಲ್ಲ. ಆದರೆ, ವಿದ್ಯಾಭ್ಯಾಸವು ಅನೇಕ ಕಾರಣಗಳಿಗೆ ಇವರಿಗೆ ಮುಖ್ಯವಾಗಿದೆ: ಹೊರಗಿನವರ ಹಠಾತ್ ಆಕ್ರಮಣ ತಡೆಯಲು, ತಮ್ಮ ಗಡಿಯನ್ನು ಕಾನೂನಾತ್ಮಕವಾಗಿ ರಕ್ಷಿಸಿಕೊಳ್ಳಲು, ತಮ್ಮ ಉತ್ಪನ್ನಗಳನ್ನು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಮಾರಾಟ ಮಾಡಲು ಮತ್ತು ಜಗತ್ತಿನ ವಿವಿಧ ಭಾಗಗಳ ಇತರರೊಂದಿಗೆ ಸಂಪರ್ಕ ಸಾಧಿಸಲು ಶಿಕ್ಷಣ ಮುಖ್ಯ ಎನ್ನುತ್ತಾರೆ.

ಇತ್ತೀಚೆಗೆ, ಪಂಜಾಬ್‌ನಲ್ಲಿ 'ಸುಶಿಕ್ಷಿತ ರೈತರ ಗುಂಪನ್ನು ನಾನು ಭೇಟಿಯಾದೆ. ಅವರಲ್ಲಿ ದೆಹಲಿಯಿಂದ ಹಿಂತಿರುಗಿದ್ದ ಸಾಫ್ಟ್‌ವೇರ್ ಇಂಜಿನಿಯರ್‌ಗಳೂ, ಓರ್ವ ಮಾಜಿ ಶಾಲಾ ಶಿಕ್ಷಕ ಹಾಗೂ ಅಮೆರಿಕದಿಂದ ವಾಪಸಾಗಿದ್ದ ವ್ಯಕ್ತಿ ಇದ್ದರು. ಅವರು, ರಾಸಾಯನಿಕ ಮುಕ್ತವಾದ ಸಾವಯವ ಕೃಷಿಯನ್ನು ಮಾಡುತ್ತಿದ್ದು, ತಾವು ಪಂಜಾಬ್‌ನ ಪಾರಂಪರಿಕ ಕೃಷಿ ಪದ್ಧತಿಯನ್ನು ಅವರು ಪುನಶ್ಚೇತನಗೊಳಿಸುತ್ತಿರುವುದಾಗಿ ಹೇಳಿದರು. ಔಪಚಾರಿಕ ಶಿಕ್ಷಣದಿಂದಾಗಿ ರಾಸಾಯನಿಕಗಳನ್ನು ಬಳಸದೆ, ಜಿಲ್ಲೆಯಾದ್ಯಂತ ಜಾಲ ವಿಸ್ತರಿಸಿ ಮತ್ತು ಆ ಜಾಲದ ನೆರವಿನಿಂದ ತಮ್ಮ ಉತ್ಪನ್ನಗಳಿಗೆ ಮಾರುಕಟ್ಟೆ ಕಂಡುಕೊಳ್ಳುವಂತಹ ಕೃಷಿಯ ಹೊಸಹೊಸ ಮಾರ್ಗಗಳನ್ನು ತಿಳಿದುಕೊಂಡಿದ್ದಾರೆ. ತಾವು ಮಾಡುತ್ತಿರುವ ಕೆಲಸಗಳ ಪ್ರಾಮುಖ್ಯತೆ ಬಗ್ಗೆ ಅವರು ಪ್ರಜ್ಞಾವಂತರಾಗಿದ್ದು, ನನ್ನಂತಹ ಹೊರಗಿನವರಿಗೆ ಆ ಬಗ್ಗೆ ವಿವರಿಸಲೂ ಸಮರ್ಥರಾಗಿದ್ದಾರೆ.

ಈ ಎರಡೂ ಪ್ರಕರಣಗಳಲ್ಲಿ-ಸ್ಥಳೀಯ ವಸಾಹತು ಮತ್ತು ಪಂಜಾಬ್‌ನ ಸುಶಿಕ್ಷಿತ ರೈತರು- ಸಾಂಪ್ರದಾಯಿಕ ಕೌಶಲ ಅಥವಾ ಜೀವನಶೈಲಿಯ ಅಭ್ಯಾಸವನ್ನು ಪುನರುಜ್ಜೀವನ-ಗೊಳಿಸಲಾಗುತ್ತಿದೆ. ಇಲ್ಲಿ ಔಪಚಾರಿಕ ಶಿಕ್ಷಣವು ಇಂತಹ ಕೌಶಲಗಳನ್ನು ಅರಿತುಕೊಳ್ಳಲು ಸಾಧನವಾಗಿದ್ದು, ಸಮಾಜದ ಮುಖ್ಯವಾಹಿನಿಯೊಂದಿಗೆ ವ್ಯವಹರಿಸಲು ಮತ್ತು ಇತರರೊಂದಿಗೆ ಅರ್ಥಪೂರ್ಣ ಚರ್ಚೆ ನಡೆಸಲು ಸಹಾಯಕವಾಗಿದೆ.

**ಸಾರಾಂಶ**

ಶಾಲಾ ಶಿಕ್ಷಣದಲ್ಲಿ ಕೌಶಲ್ಯಾಧಾರಿತ ಕಲಿಕೆಯ ಕೊರತೆಯ ಬಗ್ಗೆ ಕಳವಳ ವ್ಯಕ್ತಪಡಿಸುವ ಮಂದಿಯ ಬಗ್ಗೆ ನನಗೆ ಅನುಕಂಪವಿದೆ. ಎಲ್ಲಾ ಮಕ್ಕಳನ್ನು ಶಾಲೆಗೆ ಕರೆತರುವಲ್ಲಿ ಮತ್ತು ಯಶಸ್ವಿಯಾಗಿ ವಿದ್ಯಾಭ್ಯಾಸ ಮುಗಿಸುವಲ್ಲಿ ಕೌಶಲಾಧಾರಿತ ಕಲಿಕೆಯ ಕೊರತೆಯೇ ಒಂದು ದೊಡ್ಡ ತೊಡಕಾಗಿದ್ದು, ಈ ನಿಟ್ಟಿನಲ್ಲಿ ಸಾಮಾಜಿಕ ಅಥವಾ ಆರ್ಥಿಕ ಏಳಿಗೆ ಕಂಡುಕೊಳ್ಳುವ ವೈಯಕ್ತಿಕ ಆಕಾಂಕ್ಷೆ ಅಥವಾ ಹೆಚ್ಚುತ್ತಿರುವ ಸಾಮಾಜಿಕ ಅಸಮಾನತೆ ಕುರಿತ ಸಮಾಜದ ಕಳವಳ - ಹೀಗೆ ಬೇರೆಬೇರೆ ಸಂಗತಿಗಳ ಬಗ್ಗೆ ಖಚಿತವಾದ ಪ್ರಯೋಗಗಳು ಪರಿಣಾಮಕಾರಿಯಾಗಿ ನಡೆಯಬೇಕು.

ಎಲ್ಲಕ್ಕಿಂತ ಹೆಚ್ಚಾಗಿ, ನಿಗದಿತ ವರ್ಷಗಳವರೆಗೆ ಸಾರ್ವತ್ರಿಕ ಶಿಕ್ಷಣ ಪಡೆಯುವ ಪ್ರತಿ ಮಗುವಿನಲ್ಲಿಯೂ ಪ್ರತಿಭೆ ಇರುತ್ತದೆ. ಭಾರತದಲ್ಲಿನ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಎದುರಿಸಲಾಗುತ್ತಿರುವ ಸಮಸ್ಯೆಗಳನ್ನು ತಪ್ಪಾಗಿ ಅಂದಾಜು ಮಾಡಿಕೊಂಡು ಈ ಮಾತನ್ನು ಹೇಳುತ್ತಿಲ್ಲ. ಶಾಲೆಗೆ ಹೋಗುವ ವಯಸ್ಸಿನವರಲ್ಲಿ ಅರ್ಧಕ್ಕಿಂತ ಹೆಚ್ಚಿನ ಮಕ್ಕಳು ಶಿಕ್ಷಣವನ್ನು ಪೂರ್ತಿಗೊಳಿಸುವುದೇ ಇಲ್ಲ, ಇಲ್ಲವೇ ಶಾಲೆಗೆ ಹೋದರೂ ಹೆಚ್ಚು ಕಲಿಯುವುದಿಲ್ಲ ಮತ್ತು ಶಿಕ್ಷಣ ಮುಗಿದ ಬಳಿಕ ಒಳ್ಳೆಯ ನೌಕರಿ ಪಡೆಯುವಲ್ಲಿ ವಿಫಲರಾಗುತ್ತಾರೆ. ಮತ್ತೊಂದು ಕಳವಳಕಾರಿ ಸಂಗತಿ ಎಂದರೆ, ಎಷ್ಟೋ ಹೆಣ್ಣು ಮಕ್ಕಳಿಗೆ ಸಂಬಳ ಪಡೆಯುವ ನೌಕರಿ ಸಿಗುವುದಿಲ್ಲ. ಇದಕ್ಕೆ ಬೇರೆಯೇ ಸಮಾಜೋ ಆರ್ಥಿಕ ಮತ್ತು ಸಾಂಸ್ಕೃತಿಕ ಕಾರಣಗಳಿರಬಹುದು. ಆದರೆ ಅವುಗಳನ್ನು ಪರಿಹರಿಸುವ ನಿಟ್ಟಿನಲ್ಲಿ ನಾವು ಕಾರ್ಯೋನ್ಮುಖರಾಗ-ಬೇಕಿದೆ.



**ವಿ. ಶಾಂತಕುಮಾರ್** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು. 1996–2011ರವರೆಗೆ ಅವರು ತಿರುವನಂತಪುರದ ಸೆಂಟರ್ ಫಾರ್ ಡೆವಲಪ್‌ಮೆಂಟ್ ಸ್ಟಡೀಸ್‌ನಲ್ಲಿ ಸೇವೆ ಸಲ್ಲಿಸಿದ್ದರು. ಪ್ರಸ್ತುತ ಅವರು, ಅಭಿವೃದ್ಧಿ ಮತ್ತು ಶಿಕ್ಷಣದ ನಡುವೆ ಸಂಪರ್ಕ ಏರ್ಪಡಿಸುವ, ಮತ್ತು ಜನಸಂಖ್ಯಾ ಗುಂಪುಗಳ ನಡುವಿನ 'ಅಂತರ'ವನ್ನು ಇಳಿಸಿ 'ಅಭಿವೃದ್ಧಿಯ ವ್ಯತ್ಯಾಸಗಳನ್ನೂ' ಕಡಿಮೆ ಮಾಡುವ ಸಂಬಂಧ ಕೆಲಸ ಮಾಡುತ್ತಿದ್ದಾರೆ. ಶಾಂತಕುಮಾರ್ ಅವರು ಪ್ರಾದೇಶಿಕ ಹಾಗೂ ಜಾಗತಿಕ ಸಮಸ್ಯೆಗಳ ಕುರಿತ ಅನೇಕ ಕನ್ಸಲ್ಟೆಂಟ್ ಅಥವಾ ಸಲಹೆಗಾರರ ಕಾರ್ಯನಿಯೋಜನೆಗಳು ಮತ್ತು ಸಂಶೋಧನಾ ಯೋಜನೆಗಳಲ್ಲಿ ದುಡಿದಿದ್ದಾರೆ. ಅವರ ಸಂಪರ್ಕಕ್ಕೆ: santhakumar@apu.edu.in

ಅನುವಾದ: **ರೋಹಿಣಿ ಮುಂಡಾಜೆ** । ಪರಿಶೀಲನೆ: **ಲತಾ ಕೆ ಸಿ**

# ಮಕ್ಕಳ ಸಾಹಿತ್ಯ ಮತ್ತು ಮಗು ಕೇಂದ್ರಿತ ಅಭ್ಯಾಸಗಳು

ವರ್ತುಲ್ ದೌಂಡಿಯಾಲ್

'ಮೇಡಮ್, ನಾನೂ ಕೂಡಾ ಬಯ್ಯಾ ಮತ್ತು ದೀದಿಯರು ಮಾಡುವ ಕೆಲಸಗಳನ್ನು ಮಾಡಬಹುದಾ?' ಎಂದು ದೀಕ್ಷಾ ಕೇಳಿದಳು. ಆಗ ಅವಳ ಶಿಕ್ಷಕಿ ಒಂದು ಹಿತವಾದ ಆಶ್ಚರ್ಯದ ಭಾವದಲ್ಲಿ ಹುಬ್ಬುಹಾರಿಸಿ ಅವಳನ್ನು ಕೇಳಿದರು, 'ಏನು ಕೆಲಸಗಳನ್ನು?' 'ಚಮಿಕ್ಷಾ', (Chamiksha) ಅವಳು ಹೇಳಿದಳು. 'ಓ! ಯಾಕೆ ಇಲ್ಲ ಖಂಡಿತವಾಗಿಯೂ, ಮಾಡಬಹುದು' ಅಂದರು ಅವರ ಶಿಕ್ಷಕಿ ಬಹಳ ಖುಷಿಯಿಂದ. ಆಗ ದೀಕ್ಷಾ ಸಂಕೋಚದಲ್ಲಿ, 'ಆಗ ನನ್ನ ವಿಡಿಯೋವನ್ನೂ ಕೂಡಾ ಕಳುಹಿಸಬಹುದಲ್ಲ?' ಎಂದು ಕೇಳಿದಳು. ಮಗುವಿನ ಆಕರ್ಷಕ ಮುಖಭಾವವನ್ನು ಕಂಡು ಶಿಕ್ಷಕಿ ನಸುನಕ್ಕರು. ಆಕೆ ಕಥೆಯೊಂದರ ಸಮೀಕ್ಷೆ ಮಾಡಿದರೆ, ಆಗ ಅವಳ ವಿಡಿಯೋವನ್ನು ಶಿಕ್ಷಕರ ಗುಂಪಿನಲ್ಲಿ ಹಂಚಿಕೊಳ್ಳುವುದಾಗಿ ಅವರು ಭರವಸೆ ಕೊಟ್ಟರು.

ದೀಕ್ಷಾ ಡೆಹ್ರಾಡೂನ್ ಜಿಲ್ಲೆಯ ವಿಕಾಸನಗರ ಬ್ಲಾಕ್‌ನ ದಂಡಾಜಂಗಲ್ ಪ್ರಾಥಮಿಕ ಶಾಲೆಯ ಒಂದನೇ ತರಗತಿಯ ವಿದ್ಯಾರ್ಥಿನಿಯಾಗಿದ್ದಾಳೆ. ಅವಳು ಜಾನ್ಸಾರಿ ಬುಡಕಟ್ಟು ಜನಾಂಗಕ್ಕೆ ಸೇರಿದ ಬಾಲಕಿಯಾಗಿದ್ದು, ಅವಳ ತಂದೆ ದಿನಗೂಲಿ ಕಾರ್ಮಿಕನಾಗಿದ್ದಾನೆ. ಈ ಸರ್ಕಾರಿ ಶಾಲೆಯ ಬಹುತೇಕ ಮಕ್ಕಳ ಸಾಮಾಜಿಕ ಆರ್ಥಿಕ ಹಿನ್ನೆಲೆ ಅಷ್ಟಕ್ಕಷ್ಟೇ ಇತ್ತು. ಅವರೆಲ್ಲಾ ಮೊದಲ ತಲೆಮಾರಿನ ಕಲಿಕಾರ್ಥಿಗಳಾಗಿದ್ದು, ಮನೆಯಲ್ಲಿ ಅವರ ಶಿಕ್ಷಣವನ್ನು ಬೆಂಬಲಿಸುವುದಕ್ಕೆ ಯಾರೂ ಇರಲಿಲ್ಲ. ಹಾಗಾಗಿ, ಅವರ ಕಲಿಕೆ ಮತ್ತು ಸಾಧನೆಗಳ ಎಲ್ಲಾ ಮನ್ನಣೆಯೂ ಅವರ ಶಿಕ್ಷಕಿಯರಿಗೇ ಸಲ್ಲಬೇಕು.

**ಶಿಕ್ಷಕ/ಕಿಯರ ಪಾತ್ರ**

ಸರಕಾರಿ ಶಾಲಾ ಶಿಕ್ಷಕ/ಕಿಯರ ಜೊತೆ ಕೆಲಸ ಮಾಡುತ್ತಾ, 'ಎಲ್ಲಾ ವಿದ್ಯಾರ್ಥಿಗಳೂ ಕಲಿಯುತ್ತಾರೆ ಎಂದು ನಂಬುವ ಶಿಕ್ಷಕ/ಕಿಯರು ಇದ್ದಾರೆ' ಎಂಬುದನ್ನು ನಾನು ಗಮನಿಸಿದ್ದೇನೆ. ಈ ಶಿಕ್ಷಕ/ಕಿಯರು ತಮ್ಮ ಬೋಧನಾ ವಿಧಾನಗಳಲ್ಲಿ ಸುಧಾರಣೆ ದಾಖಲಿಸಿದ್ದು, ವಿದ್ಯಾರ್ಥಿಗಳ ಆಸಕ್ತಿಯನ್ನು ಕಲಿಕೆಯಲ್ಲಿ ಹಿಡಿದಿಡುವುದಕ್ಕೆ ಅವರು ಹೊಸ ವಿಧಾನಗಳನ್ನು ಪ್ರಯತ್ನಿಸುತ್ತಾ ಇರುತ್ತಾರೆ. ಹಾಗೆಯೇ ಅವರು ತಮ್ಮ ವಿದ್ಯಾರ್ಥಿಗಳ ವಿವಿಧ ಅಗತ್ಯಗಳನ್ನೂ ಮನಸ್ಸಿನಲ್ಲಿಟ್ಟು ತಮ್ಮ ತರಗತಿ ಚಟುವಟಿಕೆಗಳನ್ನು ಅಥವಾ ಮೌಲ್ಯಮಾಪನ ಸಾಧನಗಳನ್ನು ರೂಪಿಸುತ್ತಾರೆ. ಆದರೆ ದುರದೃಷ್ಟವಶಾತ್ ಅಂತಹ ಶಿಕ್ಷಕ/ಕಿಯರ ಸಂಖ್ಯೆ ಬಹಳ ಕಡಿಮೆಯಿದೆ.

ಇನ್ನೊಂದೆಡೆ ಕೆಲವೇ ವಿದ್ಯಾರ್ಥಿಗಳು ಮಾತ್ರ ಚೆನ್ನಾಗಿ ಕಲಿಯಬಲ್ಲರು ಎಂಬ ನಂಬಿಕೆಗೆ ಜೋತುಬಿದ್ದ ಕೆಲವು ಶಿಕ್ಷಕರೂ ಇದ್ದಾರೆ. ಈ ಶಿಕ್ಷಕರು ತಮ್ಮ ಗ್ರಹಿಕೆಯನ್ನು ಅವರದೇ ಸ್ವಂತ ಬೋಧನಾ ಅನುಭವಗಳ ಆಧಾರದಲ್ಲಿ ಪ್ರತಿಪಾದಿಸುತ್ತಾರೆ. ಅಂತಹ ಶಿಕ್ಷಕರ ತರಗತಿ ಅಭ್ಯಾಸಗಳನ್ನು ಗಮನಿಸಿದರೆ ಅವರು ವಿವಿಧ ವಿಷಯಗಳ ಬೋಧನೆಗೆ ಸಾಂಪ್ರದಾಯಿಕ ವಿಧಾನಗಳನ್ನೇ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಅವರು ಪಠ್ಯಪುಸ್ತಕಗಳನ್ನೇ ಅವಲಂಬಿಸುತ್ತಾರೆ ಮತ್ತು ವಿದ್ಯಾರ್ಥಿಗಳ ಭಿನ್ನ ಕಲಿಕಾ ಅವಶ್ಯಕತೆಗಳನ್ನು ಬಿಟ್ಟು ಸಂಪೂರ್ಣ ತರಗತಿಗೆ ಏಕಮಾದರಿಯ ಸಾಮಾನ್ಯ ನಿರ್ದೇಶನಗಳನ್ನು ಅನುಸರಿಸುತ್ತಾರೆ.

**ಕಲ್ಪನಾಶೂನ್ಯ ಬೋಧನೆ**

ಪ್ರತಿ ವ್ಯಕ್ತಿಗೂ ಒಂದು ಭಿನ್ನವಾದ ಕಲಿಕಾ ಶೈಲಿ ಇದೆ ಎಂಬ ಅಂಶವನ್ನು ಅಂತಹ ತರಗತಿಗಳನ್ನು ಸಂಪೂರ್ಣವಾಗಿ ಕಡೆಗಣಿಸಿರುವುದನ್ನು ಗಮನಿಸಬಹುದು. ಅಂತಹ ಸಾಂಪ್ರದಾಯಿಕ ಸನ್ನಿವೇಶಗಳಲ್ಲಿಯೂ ಕಲಿಯಲು ಸಾಧ್ಯವಾಗುವವರು ಯಾರೆಂದರೆ ಪ್ರಧಾನವಾಗಿ ಉತ್ತಮ ಸಾಮಾಜಿಕ ಆರ್ಥಿಕ ಸ್ಥಾನಮಾನ ಉಳ್ಳವರು, ಈಗಾಗಲೇ ಒಂದಲ್ಲ ಒಂದು ಬಗೆಯ ಸಾಮಾಜಿಕ ಮತ್ತು ಶೈಕ್ಷಣಿಕ ಬಂಡವಾಳವನ್ನು ಹೊಂದಿರುವವರು, ಯಾರಾದರೂ ಒಬ್ಬ ಶಿಕ್ಷಿತನನ್ನು ಹೊಂದಿರುವ ಕುಟುಂಬದವರೇ ಆಗಿರುತ್ತಾರೆ. ಬಹುತೇಕ ಬಾರಿ ಆ ಮಕ್ಕಳು 'ನಾಗರೀಕ' (ನಗರ ಮೂಲದ) ಎಂದು ಪರಿಗಣಿತವಾದ ಭಾಷೆಯನ್ನೇ ಈಗಾಗಲೇ ಮಾತನಾಡುತ್ತಿರುತ್ತಾರೆ. ಅವರು ಅನುಸರಿಸುವ ಸಾಮಾಜಿಕ ಶಿಷ್ಟಾಚಾರಗಳು ಶಿಕ್ಷಕರಿಂದ 'ಸಭ್ಯ'ವಾದುದು ಎಂದು ಒಪ್ಪಿತವಾಗಿರುತ್ತದೆ.

ಸಾಂಪ್ರದಾಯಿಕವಾದ ವಿಧಾನವು ಗ್ರಹಿಸುವುದು ಮತ್ತು ಅರ್ಥೈಸುವುದರ ಕಡೆಗೆ ಕಡಿಮೆ ಒತ್ತು ನೀಡಿ ವಸ್ತು ವಿಷಯಗಳನ್ನು ನೆನಪಿಟ್ಟುಕೊಳ್ಳುವುದರತ್ತ ಹೆಚ್ಚಿನ ಮಹತ್ವಕೊಡುತ್ತದೆ. ಅಂತಹ ವಿಧಾನದಲ್ಲಿ ಮೌಲ್ಯಮಾಪನವು ವಿದ್ಯಾರ್ಥಿಗಳು ನೆನಪಿನಲ್ಲಿ ಇರಿಸಿಕೊಂಡ ವಿಷಯವನ್ನು ಮಾತ್ರ ಪರೀಕ್ಷೆಗೆ ಒಳಪಡಿಸುತ್ತದೆ. ಈ ಉತ್ತರಗಳು ಅಥವಾ ಸಮಸ್ಯೆ ಪರಿಹಾರದ ವಿಧಾನಗಳು ವ್ಯಕ್ತಿಗತ ಚಿಂತನೆಗೆ, ಸೃಜನಶೀಲತೆಗೆ ಮತ್ತು ಹೊಸತನಕ್ಕೆ ಅಥವಾ ನವೀನ ಪ್ರಯತ್ನಗಳಿಗೆ ಅವಕಾಶ ನೀಡುವುದಿಲ್ಲ. ಇಡೀ ವಿಧಾನವು ಪಠ್ಯಪುಸ್ತಕಗಳನ್ನು ಅವಲಂಬಿಸಿರುತ್ತದೆ ಮತ್ತು ಶಿಕ್ಷಕ ಕೇಂದ್ರಿತವಾಗಿರುತ್ತದೆ. ಅದರಲ್ಲಿ ವಿದ್ಯಾರ್ಥಿ ಜ್ಞಾನವನ್ನು ಸ್ವೀಕರಿಸಬೇಕು ಮತ್ತು ಆ ಬಗ್ಗೆ ಕೇಳಿದಾಗ ಅಥವಾ ಮೌಲ್ಯಮಾಪನ ಮಾಡುವಾಗ ಬಹಿರಂಗಪಡಿಸಬೇಕು ಎಂಬಂತೆ ವಿದ್ಯಾರ್ಥಿಯನ್ನು ತಟಸ್ಥ ಕಲಿಕಾರ್ಥಿಯಾಗಿ ಪರಿಗಣಿಸಲಾಗಿರುತ್ತದೆ. ಈ ಪ್ರಕ್ರಿಯೆ ನೀರಸವಾದುದಾಗಿರುತ್ತದೆ, ಬಳಲಿಸುವಂಥದ್ದು ಮತ್ತು ಅನಗತ್ಯವಾದ ಪುನರಾವರ್ತನೆಯಿದ್ದು, ಇದರಲ್ಲಿ ಎಲ್ಲಾ ಮಕ್ಕಳೂ ಆಸಕ್ತಿ ವಹಿಸಲಾರರು. ಹಲವು ಮಕ್ಕಳಿಗೆ ತರಗತಿ ಸನ್ನಿವೇಶವು ಪ್ರಪಂಚದ ಬಗೆಗಿನ ಅವರ ಪೂರ್ವಾನುಭವ, ಅವರ ಭಾಷೆ, ಅವರ ಹಿನ್ನೆಲೆ ಯಾವುದೇ ಪ್ರಸ್ತುತತೆಯನ್ನು ಹೊಂದಿರದೆ ಪರಕೀಯ ಭಾವ ಮೂಡಿಸುತ್ತದೆ ಮತ್ತು ನಿರೀಕ್ಷಿತ ವಸ್ತು ವಿಷಯವನ್ನು, ಅದರ ಅಭಿವ್ಯಕ್ತಿಯನ್ನು ಮತ್ತು ನೆನಪಿರಿಸಿಕೊಳ್ಳುವುದನ್ನು ಅವರು ಕಲಿಯಬೇಕಾಗುತ್ತದೆ. ಈ ವಿಧಾನದಲ್ಲಿ ಬಹುಸಂಖ್ಯೆಯ ಮಕ್ಕಳಿಗೆ ಕಲಿಯಲು ಆಗುವುದಿಲ್ಲ. ಅವರಿಗೆ ಬಹಳ ಬೇಗನೆ ಬುದ್ಧುಗಳೆಂದು ಹಣೆಪಟ್ಟಿ ಕಟ್ಟಲಾಗುತ್ತದೆ. ಅಂದರೆ ಕಲಿಕೆಯಲ್ಲಿ 'ಹಿಂದುಳಿದವರು' ಮತ್ತು 'ನಿಧಾನಗತಿಯಲ್ಲಿ ಕಲಿಯುವವರು' ಎಂದು ಅವರನ್ನು

ಪರಿಗಣಿಸಲಾಗುತ್ತದೆ. ಇದು ಅವರು ಶಿಕ್ಷಣದಿಂದ ಇನ್ನಷ್ಟು ದೂರ ಸರಿಯುವಂತೆ ಮಾಡುತ್ತದೆ. ಅವರು ಶಾಲೆಯಿಂದ ಮತ್ತು ಶಿಕ್ಷಣ ವ್ಯವಸ್ಥೆಯಿಂದಲೇ ಹೊರ ನಡೆಯುವುದಕ್ಕೆ ಸಿದ್ಧರಾಗುತ್ತಾರೆ.

**ವೈಯಕ್ತಿಕವಾಗಿ ಒಬ್ಬೊಬ್ಬರಿಗೆ ಕಲಿಸುವುದು**

ಇನ್ನೊಂದೆಡೆ, ಎಲ್ಲಾ ವಿದ್ಯಾರ್ಥಿಗಳೂ, ಅವರ ಸಾಮರ್ಥ್ಯದ ಮಟ್ಟದಲ್ಲಿಯ ಭಿನ್ನತೆಯ ಹೊರತಾಗಿಯೂ, ಕಲಿಯಬಲ್ಲರು ಎಂದು ನಂಬುವ ಶಿಕ್ಷಕರು, ಮಕ್ಕಳ ವ್ಯಕ್ತಿಗತ ಪ್ರತಿಭೆಯನ್ನು, ಇಷ್ಟಪಡುವುದನ್ನು ಮತ್ತು ಇಷ್ಟಪಡದೆ ಇರುವುದನ್ನು, ಕಲಿಕಾ ಶೈಲಿಗಳನ್ನು, ಸವಾಲುಗಳನ್ನು, ಸಾಮಾಜಿಕ ಆರ್ಥಿಕ ಹಿನ್ನೆಲೆಯನ್ನು ಮತ್ತು ತಮ್ಮ ತರಗತಿಯ ಪ್ರತಿ ವಿದ್ಯಾರ್ಥಿಯ ಕಲಿಕಾ ಅವಶ್ಯಕತೆಗಳನ್ನು ಗುರುತಿಸುವುದಕ್ಕೆ ಬಹಳ ಗಮನ ಕೊಡುತ್ತಾರೆ. ಈ ಶಿಕ್ಷಕರು ವಿದ್ಯಾರ್ಥಿಗಳ ಜೊತೆ ಉತ್ತಮ ಮತ್ತು ಆತ್ಮೀಯ ಸಂಬಂಧವನ್ನು ಹೊಂದಿರುವುದು ಕಾಣುತ್ತದೆ. ಅವರು ಪ್ರತಿ ವಿದ್ಯಾರ್ಥಿಯ ಭಿನ್ನ ದೃಷ್ಟಿಕೋನಗಳಿಗೆ ಮತ್ತು ಅಭಿಪ್ರಾಯಗಳಿಗೆ ಮುಕ್ತವಾಗಿರುತ್ತಾರೆ. ಈ ಶಿಕ್ಷಕರಿಗೆ ಕಲಿಕೆಯ ಅರ್ಥ ಎಂಬುದು ಪರಿಕಲ್ಪನೆಗಳನ್ನು ಕಂಠಪಾಠ ಮಾಡಿಕೊಳ್ಳುವುದಕ್ಕೆ ಸೀಮಿತವಾಗಿರುವುದಿಲ್ಲ. ಅವರಿಗೆ ಒಂದು ನಿರ್ದಿಷ್ಟ ತರಗತಿಗೆ ನಿಗದಿಯಾದ ಗರಿಷ್ಟ ಕಲಿಕಾ ಉದ್ದೇಶಗಳ ಬಗ್ಗೆ ಅರಿವಿರುತ್ತದೆ. ಅವರು ವಿದ್ಯಾರ್ಥಿಗಳ ಸಾಮರ್ಥ್ಯಗಳಿಗೆ ಒತ್ತು ಕೊಡುತ್ತಾರಲ್ಲದೆ ಪಠ್ಯದ ವಿಷಯಗಳಿಗೆ ಅಲ್ಲ.

ಈ ಶಿಕ್ಷಕರು ಸಾಮಾನ್ಯವಾಗಿ, ವಿಭಿನ್ನ ಸೂಚನೆಗಳನ್ನು, ವಿವಿಧ ಉದಾಹರಣೆಗಳನ್ನು, ವೈಯುಕ್ತಿಕ ವಿದ್ಯಾರ್ಥಿಗಳಿಗೆ ಅಥವಾ ವಿದ್ಯಾರ್ಥಿ ಗುಂಪುಗಳಿಗೆ ಚಟುವಟಿಕೆಗಳನ್ನು ವಿನ್ಯಾಸ ಮಾಡಿ ಬಳಸುತ್ತಾರೆ. ಅವರು ಇಡೀ ತರಗತಿಗೆ ಒಂದೇ ವಿಧಾನದಲ್ಲಿ ಕಲಿಸುವುದಿಲ್ಲ. ಒಂದು ಸಲ ನಡೆಸುವ ಸಂಕಲನಾತ್ಮಕ ಮೌಲ್ಯಮಾಪನವು ಒಬ್ಬ ವಿದ್ಯಾರ್ಥಿಯು ಒಂದು ಶೈಕ್ಷಣಿಕ ವರ್ಷದಲ್ಲಿ ಗಳಿಸಿರಬಹುದಾದ ಎಲ್ಲಾ ಸಾಮರ್ಥ್ಯಗಳನ್ನೂ ತೋರಿಸಿಕೊಡದು ಎಂಬುದನ್ನೂ ತಿಳಿದಿರುತ್ತಾರೆ. ಬದಲಾಗಿ ಅವರು, ಮೌಲ್ಯಮಾಪನವು ಶಿಕ್ಷಕರ i ಕಲಿಕೆಗಾಗಿ ಇರುವುದು ಎಂಬಂತೆ ನೋಡುತ್ತಾರೆ. ಅದು ವಿದ್ಯಾರ್ಥಿಗಳ ಕಲಿಕೆಯಲ್ಲಿ ಉಂಟಾಗಿರುವ ಅಂತರವನ್ನು ಗುರುತಿಸುವ ಕಡೆಗೆ ಗಮನ ನೀಡುವುದಕ್ಕೆ ಮತ್ತು ಮುಂದಿನ ಬೋಧನೆಗೆ ಹೊಸ ಯೋಜನೆ ತಯಾರಿಗೆ ಸಹಾಯ ಮಾಡುವುದಕ್ಕೆ ಇರುವುದು ಎಂದು ಶಿಕ್ಷಕರು ಭಾವಿಸುತ್ತಾರೆ. ಅದೇ ವೇಳೆ ಅವರು ತಾವು ಇನ್ನೂ ಕಲಿಯಬೇಕಿರುವ ಅಗತ್ಯವನ್ನು ತಿಳಿದುಕೊಳ್ಳಲು ನೆರವಾಗುವುದರಿಂದ ವಿದ್ಯಾರ್ಥಿಗಳಿಗೆ ಅದು ಸ್ವಮೌಲ್ಯಮಾನಕ್ಕೂ ಒಂದು ಸಾಧನವಾಗುತ್ತದೆ. ಅಂತಹ ಮೌಲ್ಯಮಾಪನವು ವಿದ್ಯಾರ್ಥಿಗಳ ಸಾಮರ್ಥ್ಯ ಮತ್ತು ಕಲಿಕೆಯ ಅಗತ್ಯಗಳನ್ನು ಗುರುತಿಸುವ ಅವಕಾಶಗಳನ್ನು ಒಳಗೊಂಡ ರೂಪಣಾತ್ಮಕ ಮೌಲ್ಯಮಾಪನದ ರೀತಿಯದ್ದಾಗಿರುತ್ತದೆ.

ಇಂತಹ ಹಲವು ಅಭ್ಯಾಸಗಳು ಡೆಹರಾಡೂನಿನ ವಿಕಾಸನಗರ ಬ್ಲಾಕಿನ ಸರಕಾರಿ ಶಾಲೆಗಳಲ್ಲಿ ನಡೆಯುತ್ತಿವೆ ಎಂಬುವುದನ್ನು 2018-19ರಲ್ಲಿ ನಡೆದ ಪೊತಾಲೀ ಗ್ರಂಥಾಲಯ ಕಾರ್ಯಕ್ರಮದ ವೇಳೆ 28 ಶಾಲೆಗಳ ಶಿಕ್ಷಕರು ಸ್ವಯಂಪ್ರೇರಣೆಯಿಂದ ಭಾಗವಹಿಸುವುದಕ್ಕೆ ಮುಂದೆ ಬಂದಾಗ ಗಮನಿಸಲಾಯಿತು. ಆ ಕಾರ್ಯಕ್ರಮದ ವೇಳೆ ಪುರಾವೆಯಾಗಿ ಹಲವಾರು ನಿರೂಪಣೆಗಳು ಕೇಳಿಬಂದವು. ಅವು, ವಿದ್ಯಾರ್ಥಿಗಳ ಕಲಿಕಾ ಮಟ್ಟದಲ್ಲಿ ಸುಧಾರಣೆ ಆಗಿದೆ, ಮತ್ತು ಅವರಿಗೆ ಓದುವುದು ಅಥವಾ ಬರೆಯುವುದು ಬಾರದ ವಿದ್ಯಾರ್ಥಿಗಳಲ್ಲಿ ಗಣನೀಯ ಬದಲಾವಣೆಗಳು ಆಗಿವೆ. ಅವರಲ್ಲಿ ಪುಸ್ತಕಗಳ ಕುರಿತು ಆಸಕ್ತಿ ಬೆಳೆದಿದೆ ಎಂಬಂತಹ ಕಥನಗಳಾಗಿದ್ದವು. ಆರಂಭದಲ್ಲಿ, ಅವರು ಪುಸ್ತಕದಲ್ಲಿರುವ ಚಿತ್ರಗಳನ್ನು ನೋಡುವುದರಲ್ಲಷ್ಟೇ ಖುಷಿ ಅನುಭವಿಸುತ್ತಿದ್ದವರು ಮುಂದೆ ಆ ಮಕ್ಕಳು ಓದುವುದನ್ನು ಮತ್ತು ಬರೆಯುವುದನ್ನು ಕಲಿಯುವ ಕಡೆಗೂ ಆಸಕ್ತಿ ತೋರಿದರು ಮತ್ತು ಇಂತಹ ಸಾಮರ್ಥ್ಯಗಳನ್ನು ಬೆಳೆಸಿಕೊಂಡಿದ್ದಾರೆ ಎಂಬುದು ಸಹ ಇಲ್ಲಿ ಸ್ಪಷ್ಟವಾಯಿತು. ಶಾಲೆಯಲ್ಲಿ ಶಿಕ್ಷಕರಿಗೆ ಮಗು ಕೇಂದ್ರಿತ ಅಭ್ಯಾಸಗಳ ಬಗ್ಗೆ ಶಿಕ್ಷಣಶಾಸ್ತ್ರದ ಪ್ರಾತ್ಯಕ್ಷಿಕೆಯ ಆಕರಗಳ ಬೆಂಬಲ ಸಿಕ್ಕರೆ ಮತ್ತು ಸಾಕಷ್ಟು ಉತ್ತಮವಾದ ಮಕ್ಕಳ ಸಾಹಿತ್ಯ ಲಭಿಸಿದರೆ ವಿದ್ಯಾರ್ಥಿಗಳ ಕಲಿಕಾ ಮಟ್ಟದಲ್ಲಿ ನಿರೀಕ್ಷಿತ ಬದಲಾವಣೆಯನ್ನು ತರಬಹುದು ಎಂಬ ಊಹೆಯ ಮೇಲೆ ಈ ಕಾರ್ಯಕ್ರಮವು ನಿಂತಿದೆ. ಒಂದು ತರಗತಿಯೊಳಗಿನ ಎಲ್ಲಾ ಮಕ್ಕಳೂ, ಅವರ ಕಲಿಯುವ ಸಾಮರ್ಥ್ಯದ ವೈವಿಧ್ಯತೆಯ ಹೊರತಾಗಿಯೂ, ಪರಿಣಾಮ-ಕಾರಿಯಾಗಿ ಕಲಿಯಬಲ್ಲರು ಎಂಬುದನ್ನು ಖಾತರಿಪಡಿಸುವುದೇ ಈ ಕಾರ್ಯಕ್ರಮದ ಕೇಂದ್ರ ಗಮನವಾದ 'ವೈಯಕ್ತಿಕ ಅವಶ್ಯಕ ಬೋಧನೆ iiಯನ್ನು (Differentiated instruction) ಉತ್ತೇಜಿಸುವುದಾಗಿತ್ತು. ಈ ಕಾರ್ಯಕ್ರಮದ ವಿನ್ಯಾಸವು ಶಿಕ್ಷಕರಿಗೆ ತಮ್ಮ ಅಭ್ಯಾಸಗಳನ್ನು ಅವಲೋಕಿಸಲು ಮತ್ತು ಪ್ರತಿಬಿಂಬಿಸಲು ಅವಕಾಶ ಕೊಡುವಂತೆ ಇತ್ತು.

**ಫಲಿತಾಂಶದ ವಿಶ್ಲೇಷಣೆ**

ಶಿಕ್ಷಕರ ಜೊತೆಗಿನ ಸಭೆಗಳಲ್ಲಿ ದಾಖಲಿಸಿಕೊಂಡ ಅವರ ಚಿಂತನೆಗಳನ್ನು, ಬೋಧನೆಯ ವಿವರಗಳನ್ನು ಮತ್ತು ಅಭಿಪ್ರಾಯಗಳನ್ನು ವಿಶ್ಲೇಷಿಸಿದಾಗ, ನಮಗೆ ಭಾಷಾ ಬೋಧನಾ ಕಾರ್ಯಕ್ರಮದ ಕೇಂದ್ರ ಗಮನ ಏನಿರಬೇಕು ಎಂಬ ಸ್ಪಷ್ಟವಾದ ಕಲ್ಪನೆ ಸಿಕ್ಕಿತು.

ಕಾಯಕ್ರಮಗಳ ಅನುಷ್ಠಾನದ ಅವಧಿಯಲ್ಲಿ ಎಲ್ಲಾ ಮಕ್ಕಳೂ ತಮ್ಮದೇ ಗತಿಯಲ್ಲಿ ಮತ್ತು ತಮ್ಮದೇ ಹಾದಿಯಲ್ಲಿ ಕಲಿಯುವ ಯೋಜನೆಗಳಿಗೆ ನೆರವಾಗಬಹುದಾದಂಥ ಒಳನೋಟಗಳುಳ್ಳ ಕೆಲವು ಆಧಾರ ಸ್ವರೂಪದ ತತ್ವಗಳು ಹೊರಹೊಮ್ಮಿದವು. ಈ ತತ್ವಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಬಹುದು:

1. ಇಂತಹ ಕಾರ್ಯಕ್ರಮಗಳು ಶಿಕ್ಷಕರಿಗೆ ಏನನ್ನು ಕಲಿಸಬೇಕು ಮತ್ತು ಅದನ್ನು ಏಕೆ ಕಲಿಸಬೇಕು ಎಂಬ ಅಂಶಗಳ ಕುರಿತು ಮಾರ್ಗದರ್ಶನ ಮಾಡಬೇಕು. ಶಿಕ್ಷಕರಿಗೆ ವಿದ್ಯಾರ್ಥಿಗಳ ಅವಶ್ಯಕತೆಗಳಿಗೆ ಸರಿಹೊಂದುವ ಅವರದೇ ಆದ ತರಗತಿ ಪ್ರಕ್ರಿಯೆಗಳನ್ನು ಬೆಳೆಸಿಕೊಳ್ಳಲು ಅವಶ್ಯಕ ಬೆಂಬಲ ಮತ್ತು ಮಾರ್ಗದರ್ಶನವನ್ನು ಒದಗಿಸಬೇಕು.

2. ಪ್ರತಿ ಮಗುವೂ ಕಲಿಯುತ್ತದೆ ಎಂಬ ವಿಷಯ ಬಹಳ ಸ್ಪಷ್ಟವಾಗಿದೆ. ಆದರೆ ಒಂದು ಸಾಮಾನ್ಯವಾದ ಬೋಧನಾ ವಿಧಾನ ಎಲ್ಲಾ ಮಕ್ಕಳ ವಿವಿಧ ಕಲಿಕಾ ಅವಶ್ಯಕತೆಗಳನ್ನು ಪೂರೈಸದು ಅಥವಾ ಅದು ಒಂದೇ ತರಗತಿಯ ವಿವಿಧ ವಿದ್ಯಾರ್ಥಿಗಳ ವಿವಿಧ ಕಲಿಕಾ ಶೈಲಿಗಳಿಗೆ ಮತ್ತು ಪ್ರಕ್ರಿಯೆಗಳಿಗೆ ಹೊಂದಿಕೊಳ್ಳಲಾರದು.

3. 'ವೈಯಕ್ತಿಕ ಅವಶ್ಯಕ ಬೋಧನಾ ವಿಧಾನ', ಗ್ರಾಮೀಣ ಪ್ರದೇಶಗಳ ಸರಕಾರೀ ಶಾಲೆಗಳಲ್ಲಿ ಸದ್ಯ ಇರುವ ಬಹುವರ್ಗ ಮತ್ತು ಬಹುಹಂತದ ಬೋಧನಾ ಪರಿಸ್ಥಿತಿಗಳಿಗೆ ಅತ್ಯುತ್ತಮವಾಗಿ ಹೊಂದಾಣಿಕೆ ಆಗುತ್ತದೆ.

4. ವಯೋಮಾನಕ್ಕೆ ಅನುಸಾರವಾದ ಮತ್ತು ಸಾಕಷ್ಟು ಸಂಖ್ಯೆಯ, ಬೇರೆಬೇರೆ ಪ್ರಕಾರದ ಪಠ್ಯಗಳು, ಉದಾಹರಣೆಗೆ ಕಥೆಗಳು, ಕವನಗಳು, ನಾಟಕಗಳು– ಓದುವುದು ಮತ್ತು ಬರೆಯುವುದರಲ್ಲಿ ಮಕ್ಕಳ ಆಸಕ್ತಿಯನ್ನು ಕುದುರಿಸುತ್ತವೆ. ಆದರೆ ಈ ಆಸಕ್ತಿಯನ್ನು ಹಿಂಬಾಲಿಸಿ ವಿದ್ಯಾರ್ಥಿಗಳಿಗೆ ವೈಯುಕ್ತಿಕವಾದ ಬೋಧನೆ ಮತ್ತು ಬೆಂಬಲ ಶಿಕ್ಷಕರ ಕಡೆಯಿಂದ ಒದಗಿ ಬರಬೇಕು. ಯಾಕೆಂದರೆ ಅವರ ಆಸಕ್ತಿಯಿಂದ ಮಾತ್ರ ಓದುವುದನ್ನು ಮತ್ತು ಬರೆಯುವುದನ್ನು ಕಲಿಯುವುದಕ್ಕೆ ಸಾಧ್ಯ ಆಗಲಾರದು.

5. ಶಿಕ್ಷಕರು ಹೊಸ ದೃಷ್ಟಿಕೋನ ಮತ್ತು ವಿಧಾನಗಳನ್ನು ಕಲಿಯುವುದಕ್ಕೆ ಸಿದ್ಧವಿದ್ದಾರೆ. ಆದರೆ ಅವರ ದಿನನಿತ್ಯದ ತರಗತಿ ಬೋಧನೆ ವೇಳೆ ಎದುರಾಗುವ ಸವಾಲುಗಳನ್ನು ಮತ್ತು ಸನ್ನಿವೇಶಗಳನ್ನು ನಿರ್ವಹಿಸಲು ತಾತ್ವಿಕ ಉಪನ್ಯಾಸಗಳು ಸಹಾಯ ಮಾಡಲಾರವು. ಸಂಪನ್ಮೂಲ ವ್ಯಕ್ತಿಗಳು ಕಡ್ಡಾಯವಾಗಿ ತರಗತಿಗಳಿಗೆ ಭೇಟಿ ಕೊಡಬೇಕು ಮತ್ತು ಶಿಕ್ಷಕರ ಜೊತೆ ಸಮಯ ಕಳೆಯಬೇಕು. ನಿಜವಾದ ತರಗತಿ ಸನ್ನಿವೇಶಗಳಲ್ಲಿ ಬಳಕೆಗೆ ಯೋಗ್ಯವಾದ ಪರಿಹಾರೋಪಾಯಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಶಿಕ್ಷಕರಿಗೆ ನೆರವಾಗಬೇಕು.

ದಂಡಾಜಂಗಲ್‌ನ ಪ್ರಾಥಮಿಕ ಶಾಲೆಯಲ್ಲಿ ಚುಟುಕು ಸಂಭಾಷಣೆ ನಡೆದ ಒಂದು ತಿಂಗಳ ನಂತರ, ದೀಕ್ಷಾಳ ಶಿಕ್ಷಕಿ ತಮ್ಮ ಗುಂಪಿನಲ್ಲಿ, ಒಂದು ವಿಡಿಯೋವನ್ನು ಹಂಚಿಕೊಂಡರು. ದೀಕ್ಷಾ ತನ್ನ ಪಾಠ ಪುಸ್ತಕದ ಒಂದು ಕಥೆಯನ್ನು ವಿಮರ್ಶಿಸಿದ್ದು ನೋಡಿ ನನಗೆ ರೋಮಾಂಚನವಾಯಿತು. ಆಕೆ ಕಥೆ ಮುಂದುವರೆದ ರೀತಿಯನ್ನು, ಪಾತ್ರಗಳನ್ನು ಮತ್ತು ಅವಳಿಗೆ ಏನು ಇಷ್ಟವಾಯಿತು ಮತ್ತು ಏನು ಇಷ್ಟ ಆಗಲಿಲ್ಲ ಎಂಬುದನ್ನು ಚರ್ಚಿಸಿದ್ದಳು. ಆ ಕಥೆಯ ನಾಯಕನಂತೆ ತಾನು ಮಾತ್ರ ಯಾರನ್ನೂ ನೋಯಿಸುವುದಿಲ್ಲ ಎಂದೂ ಹೇಳಿದ್ದಳು. ಇದು ನಾವು ಸಾಮಾನ್ಯವಾಗಿ ಓದುವ ವಿಮರ್ಶೆಗಳ ರೀತಿಯಲ್ಲಿ ಇಲ್ಲದೆ ಇರಬಹುದು. ಆದರೂ ಅದು ಕಥೆಯ ಬಗ್ಗೆ ಯೋಚನೆ ಮಾಡಿದ ವಿದ್ಯಾರ್ಥಿನಿಯೊಬ್ಬಳ ಚಿಂತನೆಗಳನ್ನು ತೋರಿಸಿಕೊಡುತ್ತದೆ. ಅದು ಅವಳದೇ ದೃಷ್ಟಿಕೋನಗಳನ್ನು ಹೊಂದಿದೆ ಮತ್ತು ಅದನ್ನು ಅವಳು ಅವಳದೇ ರೀತಿಯಲ್ಲಿ (ಇದನ್ನು 'ಸ್ವಂತಿಕೆಯ ಮತ್ತು ಹೊರಗಿನ ಒತ್ತಡಗಳಿಂದ ಭ್ರಷ್ಟವಾಗದಿರುವ' ಎಂದು ನೋಡಬೇಕು) ವ್ಯಕ್ತಪಡಿಸಿದ್ದಾಳೆ.

ಅಂತಹ ಅನುಭವಗಳು ಮತ್ತು ಉದಾಹರಣೆಗಳು ಪ್ರತಿ ಮಗುವೂ ಕಲಿಯಬಲ್ಲದು ಎಂಬ ಶಿಕ್ಷಕರ ಮತ್ತು ಶಿಕ್ಷಕ ಶಿಕ್ಷಕರ ನಂಬಿಕೆ ಮತ್ತು ಬದ್ಧತೆಗಳನ್ನು ಹೆಚ್ಚಿಸುತ್ತವೆ. ಅಂತಹ ಸಾಧನೆಗೆ ಶಿಕ್ಷಕರ ಕಡೆಯಿಂದ ಬೇಕಾಗಿರುವುದು ಪ್ರತಿ ಮಗುವನ್ನೂ ಒಬ್ಬ ವ್ಯಕ್ತಿಯಾಗಿ ಆದರಿಸುವುದು ಮತ್ತು ಕಲಿಕಾರ್ಥಿಯ ಅವಶ್ಯಕತೆಗಳಿಗೆ ಅನುಗುಣವಾಗಿ ವ್ಯಕ್ತಿಗತ ಬೆಂಬಲಗಳನ್ನು ಒದಗಿಸುವುದೇ ಆಗಿದೆ.

**ಆಕರಗಳು ಮತ್ತು ಹೆಚ್ಚಿನ ಓದಿಗಾಗಿ**


1 *The Learning, Teaching and Assessment Guide*, Chapter 3, http://www.ltag.education.tas.gov.au

2 *The Differentiated Classroom*: Carol Ann Tomlinson





**ವರ್ತುಲ್ ದೌಂಡಿಯಾಲ್** ಅವರು ಡೆಹ್ರಾಡೂನ್‌ನಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ, ಹಿಂದಿ ಭಾಷೆಯ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಅವರು ಪ್ರಥಮ್ ಮತ್ತು 'ರೂಮ್ ಟು ರೀಡ್'ನಂತಹ ಸಂಸ್ಥೆಗಳಲ್ಲೂ ಕೆಲಸ ಮಾಡಿದ್ದಾರೆ. ಹಿಸ್ಟರಿ ಚಾನಲ್‌ನ ವಿಷಯ ಸಂಪಾದಕರಾಗಿಯೂ ಕರ್ತವ್ಯ ನಿರ್ವಹಿಸಿದ್ದು, ತತ್ವಶಾಸ್ತ್ರ ಮತ್ತು ಸಂಶೋಧನೆಯಲ್ಲೂ ಆಸಕ್ತರಾಗಿದ್ದಾರೆ. ಅವರನ್ನು ಮುಂದಿನ ಮೇಲ್ ಐಡಿಯಲ್ಲಿ ಸಂಪರ್ಕಿಸಬಹುದು: vartul.dhaundiyal@azimpremjifoundation.org

ಅನುವಾದ: **ರಾಮಕೃಷ್ಣ ಭಟ್** । ಪರಿಶೀಲನೆ: **ಲತಾ ಕೆ ಸಿ**

# ಸಂಪಾದಕರಿಗೆ ಪತ್ರಗಳು



**‘ಒಂದು ಮೃದು, ಮಮತೆಯ ಸ್ಪರ್ಶ’**..... ನೀವು ಈ ಲೇಖನವನ್ನು ಹೆಣೆದ ರೀತಿ ನನಗೆ ನಿಜಕ್ಕೂ ಇಷ್ಟವಾಯಿತು. ಇದರ ಜೊತೆಗೆ ಮಗುವಿನ ಕಲಿಕೆಯಲ್ಲಿ ಸಮಗ್ರ ಶಿಕ್ಷಣದ ಮೇಲೆ ಪ್ರಭಾವ ಬೀರುವಂತಹ ಅನೇಕ ಅಂಶಗಳಿವೆ. ಈ ಲೇಖನದಲ್ಲಿ ನೀವು ಕೇವಲ ಭಾವನಾತ್ಮಕ ಅಂಶಗಳನ್ನು ಮಾತ್ರ ಪ್ರಸ್ತಾಪ ಮಾಡಿಲ್ಲ, ಬದಲಾಗಿ, ಶಿಕ್ಷಣಕ್ಕೆ ಇರುವ ಹಕ್ಕು ಜೀವನಕ್ಕಿರುವ ಹಕ್ಕಿನಷ್ಟೇ ಸಮಾನವಾದುದು ಎಂದು ಪ್ರತಿಪಾದಿಸಲು ದಾಖಲೆಗಳ ಉಲ್ಲೇಖವನ್ನೂ ಮಾಡಿದ್ದೀರಿ. ಸಣ್ಣ ಸಣ್ಣ ಸಂಗತಿಗಳಲ್ಲಿಯೂ ಕಲಿಯುವುದು ಸಾಕಷ್ಟಿರುತ್ತದೆ ಎಂಬುದನ್ನು ಕೂಡ ಈ ಲೇಖನದಲ್ಲಿ ಒತ್ತು ನೀಡಲಾಗಿದೆ. ಶಾಲಾ ಮಟ್ಟದಲ್ಲಿ ನಾವು ನಡೆಸುವ ಚರ್ಚೆ, ಮಾತುಕತೆಗಳಿಂದ ನಮ್ಮ ಅನುಭವಗಳ ಮೇಲೆ ಬೆಳಕು ಚೆಲ್ಲುವಂತಹ ಅತ್ಯಗತ್ಯವಾದ ಒಳನೋಟಗಳು ದೊರೆಯುತ್ತವೆ ಎಂಬ ಅರಿವು ಮೂಡಲೂ ಕಾರಣವಾಯಿತು. ಮೇಡಂ, ಮತ್ತೊಮ್ಮೆ ನಿಮಗೆ ಧನ್ಯವಾದಗಳು. ನಿಮ್ಮ ಅವಲೋಕನ ಮತ್ತು ಲೇಖನ ನನಗೆ ಬರೆಯಲು ಉತ್ತೇಜನವನ್ನು ನೀಡಿತು.

**ಸ್ವೀಟಿ**, ಶ್ರೀನಗರ, ಗರ್ವಾಲ್.

**‘ಎಲ್ಲರಿಗೂ ಶಿಕ್ಷಣ: ಒಂದು ಸಂಭವನೀಯ ಸುಂದರ ಚಿತ್ರಣ’** ಎಂಬ ಈ ಲೇಖನವನ್ನು ಓದಿ ನಾನು ನಿಜಕ್ಕೂ ಖುಷಿಪಟ್ಟೆ. ಈ ಲೇಖನವನ್ನು ಅಷ್ಟೇ ಸೊಗಸಾಗಿ ಮತ್ತು ಸರಳವಾಗಿ ಬರೆಯಲಾಗಿದೆ. ಇದರಲ್ಲಿ ನೀಡಲಾದ ಸಂದೇಶವು ವ್ಯಕ್ತವಾಗಿದೆ ಮತ್ತು ಸ್ಪಷ್ಟವಾಗಿದೆ. ಶಿಕ್ಷಣದಲ್ಲಿ ನಿಮಗಿರುವಷ್ಟು ಜ್ಞಾನ ಅಥವಾ ಅನುಭವ ನನಗೆ ಇಲ್ಲದೇ ಹೋದರೂ ಕೂಡ, ಕಳೆದ ಒಂದೂವರೆ ವರ್ಷಗಳಿಂದ ಈ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವ ನಾನೂ ಇದೇ ಕಳಕಳಿಯನ್ನು ಹೊಂದಿದ್ದೇನೆ. ಶಿಕ್ಷಣ ಮತ್ತು ಆರೋಗ್ಯ ಪ್ರಯೋಗಗಳಿಗೆ ಒಳಗಾಗಬಾರದ ಕ್ಷೇತ್ರಗಳಾಗಿದ್ದು, ಅದರಿಂದ ಲಕ್ಷಾಂತರ ಜನರ ಬದುಕಿನ ಮೇಲೆ, ಇಡೀ ತಲೆಮಾರಿನ ಮೇಲೆ ಪರಿಣಾಮ ಬೀರುವ ಸಾಧ್ಯತೆಯಿದೆ. ಶಿಕ್ಷಕರು ಜವಾಬ್ದಾರಿಗಳಿಗೆ ಹೆಗಲು ಕೊಡದೇ ಇರುವುದು, ಪಾಲಕರ ನಿರ್ಲಕ್ಷ್ಯ, ತೀರ್ಪಿಗಿಳಿಯುವ ಸಮಾಜ ಮತ್ತು ಮಕ್ಕಳ ಅಸಹಾಯಕತೆ ಇವೆಲ್ಲವೂ ಸಂಭವಿಸುತ್ತಿರುವುದನ್ನು ನೋಡಿದಾಗ ನನ್ನಲ್ಲಿ ಮರುಕ ಹುಟ್ಟಿಸುವಂತೆ ಮಾಡಿವೆ. ಅಷ್ಟಕ್ಕೂ ನಾವು ಎತ್ತ ಸಾಗುತ್ತಿದ್ದೇವೆ? ವ್ಯಕ್ತಿ ಕನಿಷ್ಠ ಮೂಲಭೂತ ಸಂಗತಿಗಳನ್ನಾದರೂ ಅರಿತುಕೊಳ್ಳುವುದರಿಂದ ಕಂಠಪಾಠ ಮಾಡುವುದೇ ಉತ್ತಮ ಎಂದು– ಕೆಲವೊಮ್ಮೆ ನನಗೂ ಅನ್ನಿಸುತ್ತದೆ.

**ಬಿನ್ನಿ ಠಾಕೂರ್,**
ಸಹಾಯಕ ವ್ಯವಸ್ಥಾಪಕ,
ಜಾನಕಿ ದೇವಿ ಬಜಾಜ್ ಗ್ರಾಮ ವಿಕಾಸ ಸಂಸ್ಥಾ,
ಕಂಗ್ರಾ, ಹಿಮಾಚಲ ಪ್ರದೇಶ.

---

ಲರ್ನಿಂಗ್ ಕರ್ವ್‌ನಲ್ಲಿರುವ ಲೇಖನಗಳು ವಿಶಿಷ್ಟವಾದವುಗಳಾಗಿವೆ ಎಂದು ನಾನು ಹೇಳಲೇಬೇಕು. ನನ್ನಂತಹ ಓದುಗನಿಗೆ ಇದು ಖ್ಯಾತ ಶಿಕ್ಷಣ ತಜ್ಞರು ಮತ್ತು ವೃತ್ತಿನಿರತರ ಅಪಾರ ಅನುಭವಗಳನ್ನು ಹೊತ್ತು ತರುವ ಮಾರ್ಗಪರಿವರ್ತಕ. ಈ ಕ್ಷೇತ್ರದಲ್ಲಿಯೇ ತೊಡಗಿಸಿಕೊಂಡಿರುವ ನನಗೆ ಈ ಸಂಚಿಕೆಯು (**ಪ್ರತಿಯೊಂದು ಮಗುವೂ ಕಲಿಯಬಲ್ಲದು –ಭಾಗ–1**) ತರಗತಿ ಕೊಠಡಿಯ ವಿಶ್ವಾಸಾರ್ಹವಾದ ಚಿತ್ರಣವನ್ನು ನನ್ನ ಮುಂದೆ ಇರಿಸಿತು ಮತ್ತು ಕೆಲವು ನಿರ್ದಿಷ್ಟ ಪರಿಸ್ಥಿತಿಗಳನ್ನು ನಿಭಾಯಿಸಲು ಬೇಕಾದ ದೃಷ್ಟಿಕೋನಗಳನ್ನೂ ಒದಗಿಸಿದೆ ಎಂದು ನಾನು ಭಾವಿಸಿದ್ದೇನೆ. ಸ್ವಾತಿ ಸರ್ಕಾರ್ ಅವರು ಬರೆದ **‘ಪ್ರತಿ ಮಗುವಿಗೂ ನಾಲ್ಕು ಕಾರ್ಯಾಚರಣೆಗಳು’** ಲೇಖನ ಗಣಿತ ತರಗತಿಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಾಕಷ್ಟು ಸಹಾಯವಾಯಿತು. ಕಮಲೇಶ್‌ಚಂದ್ರ ಜೋಷಿ ಅವರು ಬರೆದ **ಓದಲು ಕಷ್ಟಪಡುವ ಮಕ್ಕಳು** ಕುರಿತ ಲೇಖನ ಮತ್ತು ಚಂದ್ರಿಕಾ ಸೋನಿ ಅವರ **‘ವಿಷಯಗಳ ರೈಲಿನ ಮೇಲೆ ಒಂದು ಪತ್ರದ ಪ್ರಯಾಣ’** ಲೇಖನದಲ್ಲಿ ಮಕ್ಕಳ ಬರಹಗಳ ಚಿತ್ರಗಳನ್ನು ಬಳಸಿರುವುದನ್ನು ಶಿಕ್ಷಕರ ಕಾರ್ಯಾಗಾರದಲ್ಲಿ ಪ್ರಸ್ತುತಪಡಿಸಿದರೆ ಸದಸ್ಯರಿಗೆ ಸಹಕಾರಿಯಾಗಲಿದೆ. ಅಂಕಿ–ಅಂಶಗಳು ಮತ್ತು ಅನುಭವಗಳನ್ನು ಹೊಂದಿದ ತರಗತಿಕೊಠಡಿ ಆಧಾರಿತ ಇನ್ನಷ್ಟು ಲೇಖನಗಳನ್ನು ಪ್ರಕಟಿಸುವುದರಿಂದ ಹೆಚ್ಚು ಉಪಯೋಗವಾದೀತು. ಪುಸ್ತಕಗಳ ವಿಮರ್ಶೆ ಪ್ರಕಟಿಸುವುದರಿಂದ ಪುಸ್ತಕಗಳನ್ನು ಆಯ್ಕೆಮಾಡಿ ಓದಲು ಅನುಕೂಲವಾಗಲಿದೆ.

**ರವೀಂದ್ರ ಜೈನ್**, ಸಂಪನ್ಮೂಲ ವ್ಯಕ್ತಿ, ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಮಂಡ್ಯ.

# ಸಂಪಾದಕರಿಗೆ ಪತ್ರಗಳು



ರಾಜಶ್ರೀ ಶ್ರೀನಿವಾಸನ್ ಅವರು ಬರೆದ **'ಸಮನ್ವಯ ತರಗತಿಗಳಿಗೆ ಶಿಕ್ಷಕರನ್ನು ಸಜ್ಜುಗೊಳಿಸುವುದು'** ಲೇಖನ ವಿದ್ಯಾರ್ಥಿಗಳಿಗೆ ಸವಾಲಾಗಿರುವ ಕಾರ್ಯಕ್ರಮದ ಕುರಿತಾದುದರಿಂದ ನನಗೆ ಅತ್ಯಂತ ಆಸಕ್ತಿ ಮೂಡಿಸಿತು. ಹಾಗಾಗಿ, ಒಬ್ಬ ವಿದ್ಯಾರ್ಥಿಯು ಶಿಕ್ಷಕರ ಜೊತೆಗೆ ಅನಾಥಾಶ್ರಮ ಅಥವಾ ನಗರದ ಕೊಳೆಗೇರಿಗಳಿಗೆ ಭೇಟಿ ನೀಡಿದಾಗ ಎದುರಿಸುವ ಸವಾಲು ಹಾಗೂ ಒಬ್ಬ ಶಿಕ್ಷಕಿಯು ತನ್ನ ತರಗತಿಯಲ್ಲಿ ಮೊದಲ ಬಾರಿಗೆ ಒಂದು ಕಥೆಯ ಬಗ್ಗೆ ತನ್ನ ಮಕ್ಕಳಿಂದ ಮಾತನಾಡಿಸಲು ಪ್ರಯತ್ನಿಸಿದಾಗ ಎದುರಿಸುವ ಅಂತಹುದೇ ಸವಾಲನ್ನು ತುಲನೆ ಮಾಡಿದರೆ ಏನಾಗುತ್ತದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಇಬ್ಬರೂ ಹೊಸ ಅನುಭವಗಳಿಗೆ ಮುಖಾಮುಖಿಯಾಗಿರುತ್ತಾರೆ, ತಮಗೆ ಪರಿಚಿತವಲ್ಲದ ಕ್ಷೇತ್ರವನ್ನು ಅವರು ಪ್ರವೇಶ ಮಾಡಿರುತ್ತಾರೆ ಮತ್ತು ಆ ಮೂಲಕ ಒಂದಲ್ಲ ಒಂದು ವಿಧದಲ್ಲಿ ಅಸಮರ್ಪಕ (ಅನುಭವ, ದೃಷ್ಟಿಕೋನ ಅಥವಾ ಸಿದ್ಧತೆ) ಎನ್ನುವಂತಹ ಅನುಭವಗಳು ಅವರದಾಗಿರುತ್ತವೆ. ಆದರೆ, ಈ ಅಸಮರ್ಪಕತೆಯನ್ನೇ ಸಕಾರಾತ್ಮಕ ಅನುಭವವನ್ನಾಗಿ, ಹದವರಿತ ಚರ್ಚೆಯ ಮೂಲಕ ಅಭಿವೃದ್ಧಿಗೆ ಪೂರಕವಾಗಿ ಮಾಡಿಕೊಳ್ಳಲು ಸಾಧ್ಯವಿದೆ. ಶಿಕ್ಷಕರಿಗೆ ತಮ್ಮದೇ ತರಗತಿಯಲ್ಲಿ, ತಮ್ಮದೇ ಮಕ್ಕಳ ಸಮ್ಮುಖದಲ್ಲಿ ಇಂತಹ 'ಅಸಮರ್ಪಕತೆ' ಎದುರಾದಾಗ ಇದನ್ನೇ ಬದಲಾವಣೆಗೆ ಅಥವಾ ಕಲಿಕೆಗೆ ಅತ್ಯಂತ ಶಕ್ತವಾದ ಕ್ಷಣ ಎಂದು ಭಾವಿಸಬೇಕು ಎಂಬುದು ನನ್ನ ಅಭಿಪ್ರಾಯವಾಗಿದೆ. ಇದರ ಅರ್ಥ ಅವರು ಏನೋ ಹೊಸ ಪ್ರಯೋಗದ ಪ್ರಯತ್ನ ನಡೆಸಿದ್ದಾರೆ ಎಂಬುದೇ ಆಗಿದೆ ಮತ್ತು ಈ ಅಸಮರ್ಪಕತೆಯನ್ನು ಮೀರಲು ಬದಲಾವಣೆಯನ್ನೂ ಅವರು ಆಯ್ಕೆ ಮಾಡಿಕೊಳ್ಳಬಹುದಾಗಿದೆ.

**ಅರ್ಚನಾ,** ಸಹಾಯಕರು, ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಯಾದಗಿರಿ, ಕರ್ನಾಟಕ.

ಲರ್ನಿಂಗ್ ಕರ್ವ್‌ನಲ್ಲಿ ಅತ್ಯಂತ ಆಸಕ್ತಿಯ ಮತ್ತು ಸ್ಫೂರ್ತಿದಾಯಕ ಲೇಖನಗಳನ್ನು ಓದುವುದು ಹರ್ಷದ ಸಂಗತಿಯಾಗಿದ್ದು, ವಿಶೇಷವಾಗಿ ಇತ್ತೀಚಿನ ಸಂಚಿಕೆಯಲ್ಲಿರುವ **'ಮಕ್ಕಳು ವಿಭಿನ್ನ ರೀತಿಯಲ್ಲಿ ಕಲಿಯುತ್ತವೆ'** ಲೇಖನ ತುಂಬ ಮುದನೀಡಿದೆ. ಎಲ್ಲ ಉತ್ಸಾಹಿ ವೃತ್ತಿನಿರತರ ಚಿಂತನೆಗಳು, ಅನುಭವಗಳು, ಕೆಲಸಗಳನ್ನು ಹಂಚಿಕೊಳ್ಳಲು ನೀವು ಕಲ್ಪಿಸಿರುವ ವೇದಿಕೆ ಶಿಕ್ಷಣ ಕ್ಷೇತ್ರದಲ್ಲಿರುವ ಎಲ್ಲರಿಗೂ ಉಪಯುಕ್ತವಾಗಿವೆ. ಭಿನ್ನ ಹಿನ್ನೆಲೆಯಿರುವ ಮಕ್ಕಳು ವಿಭಿನ್ನವಾದ ಆಸಕ್ತಿಗಳನ್ನು ಹೊಂದಿರುತ್ತಾರೆ ಎಂಬುದು ನನ್ನ ವೈಯಕ್ತಿಕ ಅನುಭವವಾಗಿದೆ. ಕೇವಲ ಭಾಷೆಯ ಕಾರಣದಿಂದ ಒಂದು ಮಗು ಅಂಗನವಾಡಿಯಲ್ಲಿ ಜಡವಾಗಿರುತ್ತದೆ. ಆ ಮಗುವಿಗಿರುವ ಆಸಕ್ತಿಗಳು ಮತ್ತು ಹಿನ್ನೆಲೆಯನ್ನು ಅರ್ಥ ಮಾಡಿಕೊಂಡು ವಿಶೇಷ ಗಮನ ನೀಡಿದಾಗ ಅತ್ಯಂತ ಕ್ರಿಯಾಶೀಲ ಮಗುವಾಗಿ ಬದಲಾಗುತ್ತದೆ. ನಾವೀಗ ಲರ್ನಿಂಗ್ ಕರ್ವ್‌ನ ಮುಂದಿನ ಸಂಚಿಕೆಗಾಗಿ ಕಾಯುತ್ತಿದ್ದೇವೆ!

**ಮಚ್ಚೇಂದರ್ ಜುಕಂತಿ,**
ಆರಂಭಿಕ ಬಾಲ್ಯ ಶಿಕ್ಷಣ ಉಪಕ್ರಮ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಸಂಗಾರೆಡ್ಡಿ.

# ಸಂಪಾದಕರಿಗೆ ಪತ್ರಗಳು



ಬ್ಯೂಟಿಪಾರ್ಲರ್ ಮುಂದೆ ಹುಡುಗಿಯೊಬ್ಬಳು ಓದುತ್ತಿರುವ ಚಿತ್ರವಿರುವ ಮುಖಪುಟ ಚೆನ್ನಾಗಿದೆ. ಸಂಪಾದಕರಿಂದ ಸಕಾರಾತ್ಮಕ ಮತ್ತು ಸ್ವಾಗತದ ಟಿಪ್ಪಣಿಯನ್ನು ಒಳಗೊಂಡ ಸಂಪಾದಕೀಯ ಇಡೀ ನಿಯತಕಾಲಿಕದ ಚಿತ್ರಣವನ್ನು ನೀಡುತ್ತದೆ. ಅನಂತ ಗಂಗೋಲಾ ಅವರು ಬರೆದ **'ಎಲ್ಲರಿಗೂ ಶಿಕ್ಷಣ: ಒಂದು ಸಂಭವನೀಯ ಸುಂದರ ಚಿತ್ರಣ'** ಎಂಬ ಲೇಖನದಲ್ಲಿ ಭಾರತದಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲ ನೀತಿಗಳ ವಿಶ್ಲೇಷಣೆ ಮಾಡಲಾಗಿದೆ; ಈ ನೀತಿಯಿಂದಾಗಿ ಮೊದಲ ತಲೆಮಾರಿನ ಶಿಕ್ಷಣಾರ್ಥಿಗಳನ್ನು ನಿಭಾಯಿಸಲು ಪೂರ್ವತಯಾರಿ ಇಲ್ಲದ ಶಿಕ್ಷಕರಿಂದ ಶಾಲೆಗಳು ಹೇಗೆ ತುಂಬಿ ಹೋಗಿವೆ ಎಂಬುದನ್ನು ಇದರಲ್ಲಿ ವಿವರಿಸಲಾಗಿದೆ. ನಮ್ಮ ಸಮಾಜದ ತಳಸ್ತರದ ಜನರು, ಅದರಲ್ಲೂ ಮುಖ್ಯವಾಗಿ ಈ ವ್ಯವಸ್ಥೆಗೆ ಒಗ್ಗಿಕೊಳ್ಳಲಾಗದೇ ಅದರಿಂದಲೇ ತಮ್ಮ ಮುಗ್ಧತೆ, ಸ್ವಂತಿಕೆಯನ್ನು ಕಳೆದುಕೊಂಡಿರುವ ದಲಿತರು ಮತ್ತು ಬುಡಕಟ್ಟು ಜನಾಂಗದ ಮಕ್ಕಳನ್ನು ತಲುಪುವಲ್ಲಿ ಸರ್ವರಿಗೂ ಶಿಕ್ಷಣ ಕಾರ್ಯಕ್ರಮ ವಿಫಲವಾಗಿರುವ ಬಗ್ಗೆ ಅವರು ತಮ್ಮ ಲೇಖನದಲ್ಲಿ ವಿಶದಪಡಿಸಿದ್ದಾರೆ. ಇಂತಹ ಬುಡಕಟ್ಟು ಸಮುದಾಯದ ಜೊತೆ ಕೆಲಸ ಮಾಡಿದ ಅನುಭವವಿರುವ ನನಗೆ ಲೇಖಕರ ಭಾವನೆಗಳು ಅರ್ಥವಾಗುತ್ತವೆ. ಒಂದು ಸಿದ್ಧ ಮಾದರಿ ಎಲ್ಲರಿಗೂ ಅನ್ವಯಿಸುವ ಧೋರಣೆ ಶಿಕ್ಷಣ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ. ಇದು ಶಿಕ್ಷಣ ವ್ಯವಸ್ಥೆಗೆ ಒಳಿತಿಗಿಂತ ಹೆಚ್ಚು ಹಾನಿಯೇ ಮಾಡುತ್ತದೆ. 'ನನ್ನ ಪ್ರಕಾರ, ಕಾರಣಗಳು ಇಚ್ಛಾಶಕ್ತಿಯ ಕೊರತೆಯೋ ಅಥವಾ ಸಂಪನ್ಮೂಲಗಳ ಕೊರತೆಯೋ ಎಂಬುದು ಸ್ಪಷ್ಟವಾಗದೇ ಇದ್ದರೂ ಕೂಡ ಸರ್ವರಿಗೂ ಶಿಕ್ಷಣದ ಹಿನ್ನೆಲೆಯಲ್ಲಿ ಒಬ್ಬ ಶಿಕ್ಷಕಿ ಮಾಡಿಕೊಳ್ಳಬೇಕಾದ ಸಿದ್ಧತೆಯನ್ನು ಒಂದು ಸರ್ಕಾರವಾಗಲೀ ಅಥವಾ ಸಮಾಜವಾಗಲೀ ನೀಡುವಂತಹುದ್ದಲ್ಲ.' ಇದು ಇಡೀ ಚಿಂತನೆಯ ಸಾರಾಂಶವನ್ನು ಹೇಳುತ್ತದೆ ಮತ್ತು ಸರ್ವರಿಗೂ ಶಿಕ್ಷಣ ಎಂಬ ಹಿನ್ನೆಲೆಯಲ್ಲಿ ಕಾರ್ಯನಿರ್ವಹಿಸಲು ನಮ್ಮ ಶಿಕ್ಷಕರನ್ನು ಸಿದ್ಧಗೊಳಿಸಲು ನಾವು ಕೆಲಸ ಮಾಡಬೇಕು ಎನ್ನುವ ಮಹತ್ವದ ಅಂಶದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ.

**'ಮಕ್ಕಳ ಸಾಮರ್ಥ್ಯದ ಮೇಲೆ ಶಿಕ್ಷಕರ ನಂಬಿಕೆಯ ಮಹತ್ವ'** ಎಂಬ ವಿಮಲಾ ರಾಮಚಂದ್ರ ಅವರ ಲೇಖನ, ಶಿಕ್ಷಕರು ತಮ್ಮ ಪೂರ್ವಗ್ರಹಗಳ ವಿಚಾರದಲ್ಲಿ ಎಚ್ಚರಿಕೆಯಿಂದ ಇರುವ ಬಗ್ಗೆ ಅವರ ಜೊತೆ ಕೆಲಸ ಮಾಡಬೇಕಾದ ಮಹತ್ವ ಮತ್ತು ಅವರ ಪರ್ಯಾಲೋಚನೆಯಲ್ಲಿ ಸಹಾಯ ಮಾಡುವ ಬಗ್ಗೆ ಮರುಚಿಂತನೆ ನಡೆಸುವಂತೆ ಮಾಡಿದೆ. ಅಮೃತಾ ಮಾಸಿಹ್ ಅವರು ತಮ್ಮ ಲೇಖನದಲ್ಲಿ **(ಕಥೆ ಹೇಳುವ ಮೂಲಕ ಮಕ್ಕಳನ್ನು ತೊಡಗಿಸಿಕೊಳ್ಳುವುದು)** ಮಕ್ಕಳು ತಮ್ಮ ಸ್ವಂತ ಕಲಿಕೆಗೆ ತಾವೇ ಮಾಲೀಕರು ಎಂಬ ವ್ಯಾಖ್ಯಾನ ನೀಡಿರುವುದು ಹೇಗೆ ಎಂಬುದು ಕುತೂಹಲಕಾರಿ. **'ಪೂರಕ ಕಲಿಕಾ ವಾತಾವರಣ ರೂಪಿಸುವುದು'** ಎಂಬ ಲೇಖನದಲ್ಲಿ ಅರುಣಾ ಜ್ಯೋತಿ ಅವರು ನಾನಾ ವಿಧದ ಕಲಿಕಾರ್ಥಿಗಳನ್ನು ತೊಡಗಿಸಿಕೊಳ್ಳುವ ಅನೇಕ ಕಾರ್ಯಸಾಧ್ಯತೆಗಳ ಮಾರ್ಗಗಳನ್ನು ವಿವರಿಸಿದ್ದಾರೆ. ಪಾಲಕರನ್ನೂ ತೊಡಗಿಸಿಕೊಳ್ಳುವ ಮಾರ್ಗಗಳ ಬಗ್ಗೆ ಹೇಳುವ ಈ ಲೇಖನ, ಇದರಿಂದ ಪಾಲಕರಿಗೂ ತಮ್ಮ ಮಗುವಿನ ಶಿಕ್ಷಣದ ಜವಾಬ್ದಾರಿ ಬರುವಂತೆ ಮಾಡುತ್ತದೆ ಎಂಬುದನ್ನು ವಿವರಿಸಿದ್ದಾರೆ.

**'ವಿಷಯಗಳ ರೈಲಿನ ಮೇಲೆ ಒಂದು ಪತ್ರದ ಪ್ರಯಾಣ'** ಎಂಬ ಚಂದ್ರಿಕಾ ಸೋನಿ ಅವರ ಲೇಖನವು, ವಿದ್ಯಾರ್ಥಿಗಳಲ್ಲಿ ಬರೆಯುವ ಕಲೆಯನ್ನು ಕರಗತಗೊಳಿಸುವಲ್ಲಿ ಸಮರ್ಥರಾದ ಶಿಕ್ಷಕಿಯ ಅನುಭವವನ್ನು ದಾಖಲಿಸಿದೆ. ಗಜೇಂದ್ರ ದೇವಾಂಗನ್ ಅವರು ಬರೆದಿರುವ **'ಪರ್ಯಾಲೋಚನೆಯ ದಾಖಲೀಕರಣ: ಶಿಕ್ಷಕರೊಬ್ಬರ ದಿನಚರಿ'** ಎಂಬ ಲೇಖನ, ಅತ್ಯಂತ ಕಡಿಮೆ ಗಮನವನ್ನು ಹೊಂದಿರುವ ಒಬ್ಬ ಪುಟ್ಟ ಹುಡುಗನನ್ನು ಹೇಗೆ ತೊಡಗಿಸಿಕೊಳ್ಳುವಲ್ಲಿ ಸಮರ್ಥರಾದರು ಎಂಬ ತುಂಬಾ ಪ್ರಾಯೋಗಿಕವಾಗಿದ್ದ ವಿಚಾರಗಳನ್ನು ವಿವರಿಸುತ್ತದೆ. ಕಾರ್ಯಸಾಧುವಾದ ಇಂಥವನ್ನು ಈ ಕ್ಷೇತ್ರದಲ್ಲಿರುವ ಶಿಕ್ಷಕರೊಂದಿಗೆ ಕಾರ್ಯನಿರ್ವಹಿಸುವ ಸಂದರ್ಭದಲ್ಲಿ ನಾವು ಖಂಡಿತವಾಗಿ ಬಳಸಿಕೊಳ್ಳಬಹುದಾಗಿದೆ. ಡೈರಿಗಳನ್ನು ಬರೆಯುವಂತೆ ಶಿಕ್ಷಕರಿಗೆ ಉತ್ತೇಜನ ನೀಡುವ ಸಂದರ್ಭದಲ್ಲಿ ನಾನು ಈ ಲೇಖನವನ್ನು ಒಂದು ಉದಾಹರಣೆಯಾಗಿ ಬಳಸಲು ಬಯಸುತ್ತೇನೆ. ಬೋಧನಾ ಕಲಿಕಾ ಸಾಮಗ್ರಿ **(ಟಿಎಲ್‌ಎಂ): ಕಲಿಕೆಯ ಗೆಳೆಯ ಮತ್ತು ಗಣಿತದ ಅರ್ಥೈಸುವಿಕೆ** ಎಂಬ ಬರಹದಲ್ಲಿ ಇಬ್ಬರು ಶಿಕ್ಷಕರಾದ ಜನಕ್‌ರಾಮ್ ಮತ್ತು ಮುನ್ನಿಲಾಲ್ ಬರ್ಸೆ ಅವರು ತಮ್ಮ ಅನುಭವವನ್ನು ದಾಖಲಿಸಿದ್ದಾರೆ. ಆರಂಭಿಕ ದರ್ಜೆಯಲ್ಲಿರುವ ಶಿಕ್ಷಣಾರ್ಥಿಗಳು ನಿರ್ದಿಷ್ಟವಸ್ತುಗಳ ಮೂಲಕ ಕಲಿಯುವಂತೆ ಮಾಡುವಲ್ಲಿ ಅನೇಕ ಕಲಿಕಾ ಸಲಕರಣೆಗಳು ಹೇಗೆ ಪರಿಣಾಮಕಾರಿಯಾಗಿವೆ ಎಂಬುದನ್ನು ಈ ಶಿಕ್ಷಕರು ಲೇಖನದಲ್ಲಿ ತಿಳಿಸಿದ್ದಾರೆ. 'ಮಕ್ಕಳು ತಾವಾಗಿಯೇ ಒಂದು ಅರ್ಥ ನಿರೂಪಣೆ ಮಾಡಿದರೆ, ಆ ಮೂಲಕ ಅವರು ತಿಳಿದುಕೊಂಡಿರುವ ಸಂಗತಿಗಳು ಅವರೊಂದಿಗೆ ಶಾಶ್ವತವಾಗಿ ಉಳಿದುಬಿಡುತ್ತವೆ' ಎಂಬ ಅವರ ವಾದ ಸಮಂಜಸವಾದುದಾಗಿದೆ. ಕಮಲೇಶ್ ಚಂದ್ರ ಜೋಷಿ ಅವರು ಬರೆದ **'ಓದಲು ಕಷ್ಟಪಡುವ ಮಕ್ಕಳು'** ಲೇಖನ, ಪ್ರೌಢಶಾಲೆ ಶಿಕ್ಷಕರ ಜೊತೆ ಕಾರ್ಯನಿರ್ವಹಿಸುವ ನಮಗೆ ಹೆಚ್ಚು ಹತ್ತಿರವಾಗುತ್ತದೆ. ಮಕ್ಕಳು ಓದುವ ಸಂಗತಿಗಳು ಅವರ ಜೀವನದ ಸುತ್ತಮುತ್ತಲೇ ಇರಬೇಕು ಎಂಬ ಬಹುಮುಖ್ಯವಾದ ಅಂಶವನ್ನು ಲೇಖಕರು ಮಂಡಿಸುತ್ತಾರೆ ಮತ್ತು ಅವರ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಸಂಬಂಧಿಸಿದ ಕೆಲಸಗಳು ವ್ಯವಸ್ಥಿತವಾಗಿ ಯೋಜಿಸಿದ್ದಾಗಿದ್ದರೆ ಮಾತ್ರ ಅಪೇಕ್ಷಿತ ಯಶಸ್ಸು ದೊರೆಯುತ್ತದೆ ಎಂಬ ಅಂಶವನ್ನು ಪ್ರತಿಪಾದಿಸುತ್ತಾರೆ. ಈ ಸಂಚಿಕೆಯಲ್ಲಿ ಇನ್ನೂ ಹಲವು ಕುತೂಹಲದ ಲೇಖನಗಳಿದ್ದು, – ಸಂಗಾರೆಡ್ಡಿಯ ಇಸಿಇ ತಂಡದ **'ಮಕ್ಕಳು ವಿಭಿನ್ನ ರೀತಿಯಲ್ಲಿ ಕಲಿಯುತ್ತವೆ: ಸಂಗಾರೆಡ್ಡಿಯ ಅನುಭವ'** ಲೇಖನ, ಕಮಲಾ ಭಂಡಾರಿ ಬರೆದ, 'ಭಾಷಾ ಬೋಧನೆ: ವಸ್ತು ವಿಷಯವನ್ನು ಸಂದರ್ಭದೊಡನೆ ಸಮೀಕರಿಸುವುದು' ಇವುಗಳಲ್ಲಿ ಪ್ರಮುಖವಾದವು.

**ಅಕ್ಷತಾ ಎಸ್. ಬೆಲ್ಲುಡಿ,**
ಸಂಪನ್ಮೂಲ ವ್ಯಕ್ತಿ, ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಕೊಪ್ಪಳ, ಕರ್ನಾಟಕ.

# ಸಂಪಾದಕರಿಗೆ ಪತ್ರಗಳು



ನನ್ನ ತಿಳುವಳಿಕೆಯ ಪ್ರಕಾರ ಇಸಿಎಂಎಲ್ ಕಾರ್ಯಕ್ರಮ ತಳಸಮುದಾಯದ ಮಕ್ಕಳನ್ನು ತಲುಪುತ್ತಿದೆ. ಇಂತಹ ಮಕ್ಕಳಿಗೆ ಕಾರ್ಯಕ್ರಮದ ಪ್ರಯೋಜನಗಳು ಲಭ್ಯವಾಗದೇ ಹೋದರೆ ಮತ್ತು ಸೂಕ್ತ ಶಾಲಾ ಆಯ್ಕೆಗಳು ಸಿಗದೇ ಹೋದರೆ ಶಾಲೆಯನ್ನೇ ತ್ಯಜಿಸುವ ಸಾಧ್ಯತೆಗಳು ಹೆಚ್ಚಿರುತ್ತವೆ ಮತ್ತು ಅವರೇ ಬಾಲ ಕಾರ್ಮಿಕರಾಗಿ ದುಡಿಮೆಗೆ ಇಳಿಯುವ ಸಂಭವ ಇರುತ್ತದೆ. ಸುಮತಿ, ಭೀಮಾ ಮತ್ತು ವಿಷ್ಣು ಅವರ ಬಗ್ಗೆ ಓದಿ ಕೆಲವು ಮಕ್ಕಳಾದರೂ ಆರಂಭದಲ್ಲೇ ಶಾಲೆ ತ್ಯಜಿಸುವುದರಿಂದ ಪಾರಾದರಲ್ಲ ಮತ್ತು ಉನ್ನತ ಶಿಕ್ಷಣವನ್ನೂ ಪಡೆಯಲು ಸಮರ್ಥರಾದರಲ್ಲ ಎಂಬುದನ್ನು ತಿಳಿದು ನಿಜಕ್ಕೂ ಆನಂದವಾಯಿತು. ಇದೇ ಸಮಯಕ್ಕೆ ಇಂತಹ ಕಾರ್ಯಕ್ರಮಗಳ ಪ್ರಯೋಜನವನ್ನು ಪಡೆದುಕೊಳ್ಳಲು ಸಾಧ್ಯವಾಗದೇ ಶ್ರೇಣೀಕೃತ ಸಮಾಜಕ್ಕೆ ಬಲಿಯಾದ ಮಕ್ಕಳ ಬಗ್ಗೆ ಯೋಚಿಸುವಂತೆಯೂ ಮಾಡಿತು.

**ಸುಪ್ರಿಯಾ ನಾರಾಯಣಕರ್,**
ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಬೆಂಗಳೂರು.

ವಲಸೆ ಕಾರ್ಮಿಕರ ಮಕ್ಕಳಿಗೆ ಅವಕಾಶಗಳು ಎಂಬ ಶೀರ್ಷಿಕೆಯನ್ನು ಹೊಂದಿರುವ ಪ್ರಯೋಗಾತ್ಮಕ ಲೇಖನದಲ್ಲಿ ಶೋಭಾ ಮತ್ತು ಶುಭಾ ಅವರ ಯೋಚನೆಗಳು ಮತ್ತು ಈಗ ಮಾಡುತ್ತಿರುವ ಕೆಲಸದ ಬಗ್ಗೆ ಪ್ರಸ್ತಾಪ ಮಾಡಿರುವುದು ನಿಜಕ್ಕೂ ಗಮನಾರ್ಹ. ಉದ್ಯೋಗಕ್ಕಾಗಿ ಮಹಾನಗರಗಳತ್ತ, ದೇಶದ ನಾನಾ ಭಾಗಗಳಿಗೆ ವಲಸೆ ಹೋಗುತ್ತಿರುವ ವಲಸೆ ಕಾರ್ಮಿಕರ ಚಿತ್ರಗಳು ನಮ್ಮ ಕಣ್ಣ ಮುಂದೆ ಹಾದು ಹೋದವು. ಈ ಲೇಖನವನ್ನು ಓದುತ್ತಿರುವಾಗಲೇ, ಮಕ್ಕಳ ಅಭಿವೃದ್ಧಿ ಮತ್ತು ಕಲಿಕೆಯ ಮೇಲಿನ ಸಮಾಜೋ–ಆರ್ಥಿಕ ಪರಿಸ್ಥಿತಿಗಳ ಪ್ರಭಾವವನ್ನು ನಾವು ಶ್ಲಾಘಿಸಲೇಬೇಕು. ವಲಸೆ ಕಾರ್ಮಿಕರ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಪ್ರಾಮಾಣಿಕ ಪ್ರಯತ್ನಗಳು ಮತ್ತು ವಿನೂತನ ನಿಲುವುಗಳನ್ನು ಕೂಡ ನಾವು ಗಮನಿಸಬಹುದಾಗಿದೆ. ಇದು ಶಿಕ್ಷಣದ ನವೀನ ಸಿದ್ಧಾಂತದ ಸಾಧ್ಯತೆಗಳನ್ನೂ ಮನದಟ್ಟು ಮಾಡುತ್ತದೆ. ವಲಸೆ ಕಾರ್ಮಿಕರ ಶಿಕ್ಷಣಕ್ಕಾಗಿ ಕಾರ್ಯಕ್ರಮದ ಪೂರ್ಣ ಚಿತ್ರಣವನ್ನು ಹಂಚಿಕೊಂಡಿದ್ದಕ್ಕಾಗಿ ಧನ್ಯವಾದಗಳು.

**ಹನುಮಂತ ರಾಜು,**
ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಬೆಂಗಳೂರು.

---

ಈ ಕಾರ್ಯಕ್ಷೇತ್ರದಲ್ಲಿ ನಾವು ಆಗಾಗ, ನಮ್ಮದೇ ಸಾಮರ್ಥ್ಯ ವೃದ್ಧಿಗಾಗಿ ಮತ್ತು ಶಿಕ್ಷಕರೊಂದಿಗೆ ಕಾರ್ಯನಿರ್ವಹಿಸುವ ಸಂದರ್ಭದಲ್ಲಿ ಲರ್ನಿಂಗ್ ಕರ್ವ್‌ನ ಲೇಖನಗಳನ್ನು ಉಲ್ಲೇಖಿಸುತ್ತಿರುತ್ತೇವೆ. ನಾನು ಇತ್ತೀಚೆಗೆ ವಲಸೆ ಕಾರ್ಮಿಕರ ಮಕ್ಕಳಿಗೆ ಅವಕಾಶಗಳು (ಏಪ್ರಿಲ್ 2020) ಕುರಿತ ಲೇಖನವನ್ನು ಓದಿದೆ. ಇದು ನನಗೆ ಸಿದ್ಧಾಂತ, ಪ್ರಕ್ರಿಯೆ, ಬೋಧನ ಶಾಸ್ತ್ರ ಮತ್ತು ಭಾಗೀದಾರರ ಸಹಭಾಗಿತ್ವದ ಬಗೆಗೆ ಉಪಯುಕ್ತವಾದ ಒಳನೋಟವನ್ನು ಒದಗಿಸಿತು. ದೈಹಿಕ ಮತ್ತು ಸಾಮಾಜಿಕ ನಿರ್ಬಂಧಗಳು ಎರಡನ್ನೂ ಒಳಗೊಂಡ ನಾನಾ ಅನನುಕೂಲಗಳನ್ನು ಹೊಂದಿರುವ 'ಮುಖ್ಯವಾಹಿನಿ' ಮಕ್ಕಳಿಗೆ 'ಸಂಪರ್ಕ ಶಾಲೆ'ಯ ಉದ್ದೇಶದ ಬಗ್ಗೆ ಈ ಲೇಖನ ಬೆಳಕು ಚೆಲ್ಲಿದೆ. ಇದಕ್ಕೂ ಮುನ್ನ ಈ ಕೇಂದ್ರದ ಒಂದು ಭಾಗವೇ ಆಗಿರುವ ಪಾಲಕರು ಮತ್ತು ಮಕ್ಕಳನ್ನು ಒಳಗೊಂಡ ಸಮುದಾಯ ಮತ್ತು ಶಿಕ್ಷಕರ ಪಾತ್ರವನ್ನು ಈ ಲೇಖನದಲ್ಲಿ ಸೊಗಸಾಗಿ ವಿವರಿಸಲಾಗಿದೆ. ಮುಖ್ಯವಾಹಿನಿಗೆ ಬಂದಿರುವ ಅನೇಕ ಮಕ್ಕಳ ಯಶಸ್ಸು ಓದುಗರಿಗೆ ಸಂಪೂರ್ಣ ಚಿತ್ರಣವನ್ನು ಕೊಡಲು ಸಹಾಯ ಮಾಡಬಲ್ಲದು. ಸಮಾನವಾದ ಕಲಿಕಾ ವಾತಾವರಣವನ್ನು ಬೆಳೆಸಲು ಮತ್ತು ಬೆಂಬಲಿಸಲು ವಿಷಯಗಳ ಮಹತ್ವ ಮತ್ತು ಸಂಕೀರ್ಣತೆಯ ಬಗ್ಗೆ ತಿಳಿಸಲು ಒಂದು ನಗರಕ್ಕೆ 12 ವರ್ಷಗಳೇ ಬೇಕಾದವು. ಶೈಕ್ಷಣಿಕವಾಗಿ ಹಾಗೂ ಸಾಮಾಜಿಕವಾಗಿ ಪ್ರಸ್ತುತವಾಗಿರುವ ಇಂತಹ ಲೇಖನಗಳನ್ನು ಬರೆಸಿದ ಇಡೀ ತಂಡಕ್ಕೆ, ಬರೆದ ಲೇಖಕರಿಗೆ ಶ್ಲಾಘನೆಯ ಮಾತು ಸಲ್ಲಲೇಬೇಕು. ಕ್ಷೇತ್ರದಲ್ಲಿ ಕೆಲಸ ಮಾಡುವ ಸದಸ್ಯರು ಯಾವತ್ತೂ ಲರ್ನಿಂಗ್ ಕರ್ವ್‌ನ ಆಗಮನಕ್ಕಾಗಿ ಕಾಯುತ್ತಿರುತ್ತಾರೆ. ಇಂತಹ ಒಂದು ಅದ್ಭುತ ಓದಿಗಾಗಿ ಧನ್ಯವಾದಗಳು.

**ರಾಮಚಂದರ್ ಗಿರಿ,** ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಬೆಂಗಳೂರು.

---

ಆರಂಭಿಕ ಬಾಲ್ಯ ಶಿಕ್ಷಣಕ್ಕೆ (ಇಸಿಇ) ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸಿದ್ದಕ್ಕೆ ಧನ್ಯವಾದಗಳು. ಇಸಿಇ ಕ್ಷೇತ್ರದಲ್ಲಿ ಶಿಕ್ಷಕ ಬೋಧಕ ವೃತ್ತಿಯನ್ನು ಮಾಡುತ್ತಿರುವ ನನಗೆ ಈ ಅಧ್ಯಯನಗಳು ವಾಸ್ತವ ಚಿತ್ರಣವನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ. ನಾನು ಗಮನಿಸಿದ ವಿಷಯಗಳಿಗೆ ಈ ಅಧ್ಯಯನಗಳನ್ನು ತುಲನೆ ಮಾಡಿ ನೋಡಲು ಸಾಧ್ಯವಾಗಿದೆ. ಲಭ್ಯವಿರುವ ಸಂಪನ್ಮೂಲಗಳು ಮತ್ತು ಜ್ಞಾನದೊಂದಿಗೆ ಇಸಿಇಯನ್ನು ನಡೆಸುವಲ್ಲಿ ಅಂಗನವಾಡಿ ಶಿಕ್ಷಕರ ಹೋರಾಟ ಮತ್ತು ಆಸಕ್ತಿ ನಿಜಕ್ಕೂ ಸ್ಫೂರ್ತಿದಾಯಕವಾಗಿದೆ. ಪಠ್ಯಕ್ರಮ ಮತ್ತು ಬೋಧನಾ ವಿಧಾನಗಳ ಬಗ್ಗೆ ಅರ್ಥ ಮಾಡಿಕೊಳ್ಳುವಲ್ಲಿ ಅಂಗನವಾಡಿ ಶಿಕ್ಷಕರಿಗೆ ಇನ್ನೂ ಹೆಚ್ಚಿನ ಬೆಂಬಲದ ಅಗತ್ಯವಿದೆ ಎಂಬ ಹೇಳಿಕೆಯನ್ನು ನಾನು ಒಪ್ಪುತ್ತೇನೆ. ಇಸಿಇ ಕಾರ್ಯಕ್ರಮದ ಮಹತ್ವ ಏನು ಎಂಬುದನ್ನು ಕೆಲವರು ಅರಿತಿದ್ದರೂ, ನೀತಿಯಿಂದ ಹಿಡಿದು ಪಾಲಕರ ವರೆಗೆ ಇದಕ್ಕೆ ಇನ್ನೂ ಹೆಚ್ಚಿನ ಮಾನ್ಯತೆ ದೊರೆಯಬೇಕಾಗಿದೆ ಮತ್ತು ಇನ್ನಷ್ಟು ವೃತ್ತಿಪರರು ಈ ಕ್ಷೇತ್ರವನ್ನು ಪ್ರವೇಶ ಮಾಡಬೇಕಾದ ಅಗತ್ಯವಿದೆ ಎಂಬುದು ನನ್ನ ಭಾವನೆಯಾಗಿದೆ.

**ಚಿನ್ನಬ್ರಹ್ಮಯ್ಯ,** ಜಿಲ್ಲಾ ಸಂಸ್ಥೆ, ಅಜೀಂ ಪ್ರೇಮ್‌ಜಿ ಫೌಂಡೇಷನ್, ಸಂಗಾರೆಡ್ಡಿ.

learningcurve@apu.edu.in ಗೆ ಬರೆಯಿರಿ

**ಲರ್ನಿಂಗ್ ಕರ್ವ್‌ನ ಹಿಂದಿನ ಸಂಚಿಕೆಗಳನ್ನು ಈ ಕೆಳಗಿನ ಲಿಂಕ್‌ಗಳಲ್ಲಿ ಡೌನ್‌ಲೋಡ್ ಮಾಡಬಹುದು**
https://azimpremjiuniversity.edu.in/learning-curve

**ಸಲಹೆಗಳು ಅಥವಾ ಅನಿಸಿಕೆ ಮತ್ತು ನಿಮ್ಮ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳಲು, ನಮಗೆ ಬರೆಯಿರಿ**
**learningcurve@apu.edu.in**

**ಮುದ್ರಣ ಮತ್ತು ಪ್ರಕಟಣೆ: ಮನೋಜ್ ಪಿ, ಅಜೀಂ ಪ್ರೇಮ್‌ಜಿ ಫೌಂಡೇಷನ್ ಫಾರ್ ಡೆವಲಪ್‌ಮೆಂಟ್ ಪರವಾಗಿ**
**ಮುದ್ರಣ**: ರಮ್ಯಾ ರಿಪ್ರೋಗ್ರಾಫಿಕ್ ಪ್ರೈ ಲಿಮಿಟೆಡ್, ಸರ್ವೇ ನಂ. 16/2ಬಿ, ಸಿಂಗಸಂದ್ರ ಗ್ರಾಮ, ಎಇಸಿಎಸ್ ಲೇಔಟ್,
ದಕ್ಷಿಣ್ ಹೋಂಡಾ ಹಿಂಭಾಗ, ಹೊಸೂರು ರಸ್ತೆ, ಬೆಂಗಳೂರು – 560068 ಕರ್ನಾಟಕ
**ಪ್ರಕಟಣೆ:** ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ, ಸರ್ವೇ ನಂ. 66, ಬುರುಗುಂಟೆ ಗ್ರಾಮ,
ಬಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ, ಬೆಂಗಳೂರು – 562125

**ಪ್ರೇಮಾ ರಘುನಾಥ್**, ಮುಖ್ಯ ಸಂಪಾದಕಿ, ಲರ್ನಿಂಗ್ ಕರ್ವ್

ನಮ್ಮೊಡನೆ ಕೆಲಸ ಮಾಡಿ!




# ಶಿಕ್ಷಣದಲ್ಲಿ ಬೋಧಕ ಹುದ್ದೆಗಳು

ನಾವು ಶಿಕ್ಷಣದ ಎಲ್ಲಾ ಕ್ಷೇತ್ರಗಳಿಂದಲೂ ಅರ್ಜಿಗಳನ್ನು ಆಹ್ವಾನಿಸುತ್ತಿದ್ದೇವೆ, ಅದರಲ್ಲೂ ಪ್ರಮುಖವಾಗಿ

**ಗಣಿತ ಶಿಕ್ಷಣ**

**ವಿಜ್ಞಾನ ಶಿಕ್ಷಣ**

**ಸಮಾಜ ವಿಜ್ಞಾನ ಶಿಕ್ಷಣ**

**ಭಾಷಾ ಶಿಕ್ಷಣ**

**ಆರಂಭಿಕ ಬಾಲ್ಯ ಶಿಕ್ಷಣ**

**ಸಮನ್ವಯ ಶಿಕ್ಷಣ**

**ಶಿಕ್ಷಕ ಶಿಕ್ಷಣ**




ಈ ಮೇಲಿನ ಕ್ಷೇತ್ರಗಳಿಂದ ಅರ್ಜಿಗಳನ್ನು ಆಹ್ವಾನಿಸುತ್ತಿದ್ದೇವೆ,

**ಹೆಚ್ಚಿನ ವಿವರಗಳಿಗಾಗಿ :**

Visit: https://azimpremjiuniversity.edu.in/jobs




ಕೋವಿಡ್ 19 ರ ಸಾಂಕ್ರಾಮಿಕವು ನಮ್ಮ ದೇಶವೂ ಸೇರಿದಂತೆ ವಿಶ್ವದ ಅನೇಕ ದೇಶಗಳಲ್ಲಿ, ಹಿಂದೆಂದೂ ಕಾಣದಂತಹ ಬೃಹತ್ ಆರೋಗ್ಯ ಮತ್ತು ಜೀವನೋಪಾಯಕ್ಕೆ ಸಂಬಂಧಿಸಿದ ಬಿಕ್ಕಟ್ಟನ್ನು ಸೃಷ್ಟಿಸಿದೆ.

ಮುಂದುವರೆದಿರುವ ಈ ಬಿಕ್ಕಟ್ಟಿನಿಂದ ಅತ್ಯಂತ ಬಡಜನರು ಮತ್ತು ಕಡೆಗಣಿಸಲ್ಪಟ್ಟವರು ಊಹಿಸಲಾಗದ ಸಂಕಷ್ಟಕ್ಕೆ ಒಳಗಾಗಿದ್ದಾರೆ.

ಅಜೀಂ ಪ್ರೇಮ್ ಜಿ ಫೌಂಡೇಷನ್ ಈ ಮಹಾ ಪಿಡುಗಿನಿಂದ ಉಂಟಾದ ಪರಸ್ಪರ ಸಂಬಂಧ ಹೊಂದಿರುವ ಆರೋಗ್ಯ ಮತ್ತು ಜೀವನೋಪಾಯವನ್ನು ಕುರಿತ ಆಯಾಮಗಳಲ್ಲಿ ತನ್ನ ಸಹಾಯಹಸ್ತವನ್ನು ಚಾಚಿದೆ.

ಈ ಕುರಿತು ಇನ್ನೂ ಹೆಚ್ಚಿನ ಮಾಹಿತಿಗಾಗಿ https://www.azimpremjifoundation.org ಗೆ ಭೇಟಿ ನೀಡಿ.

